# ಜೈನಯುವಕಸಂಘ, ಪುತ್ತೂರು, ದ. ಕ.

ಇಲ್ಲಿ ದೊರೆಯುವ ಗ್ರಂಥಗಳು.

## ಭರತೇಶವೈಭವ ಪ್ರಥಮಭಾಗ (ಭೋಗವಿಜಯ)

| | | |
|---|---|---|
| ಪೂರ್ಣ ಕ್ಯಾಲಿಕೊ ಪ್ರತಿ—ಟಪ್ಪಾಲು ಹಾಸಲು ಸಹಿತ . . | ರೂ. | ೩—೦—೦ |
| ರಟ್ಟಿ ಬೈಂಡ್ ಪ್ರತಿ—ಟಪ್ಪಾಲು ಹಾಸಲು ಹೊರತು . . | ,, | ೨—೦—೦ |

## ಭರತೇಶವೈಭವ ದ್ವಿತೀಯಭಾಗ (ದಿಗ್ವಿಜಯ)

| | | |
|---|---|---|
| ಪೂರ್ಣ ಕ್ಯಾಲಿಕೊ ಆರ್ಟ್‌ಪೇಪರ್ ಪ್ರತಿ—ಟಪ್ಪಾಲು ಹಾಸಲು ಸಹಿತ | ರೂ. | ೩—೮—೦ |
| ,, ಊಚು ಕಾಗದದ ಪ್ರತಿ ,, | ,, | ೩—೦—೦ |
| ರಟ್ಟಿ ಬೈಂಡ್ ,, ಟಪ್ಪಾಲು ಹಾಸಲು ಹೊರತು | ,, | ೨—೦—೦ |

## ಭರತೇಶವೈಭವ ತೃತೀಯಭಾಗ

## (ಯೋಗವಿಜಯ—ಮೋಕ್ಷವಿಜಯ—ಅರ್ಕಕೀರ್ತಿವಿಜಯ)

ಅಚ್ಚಿನಲ್ಲಿ ತ್ವರ್ಯ ತಯಾರಿಯಲ್ಲಿ ಇದೆ.

**ಶ್ರೀನಿರಂಜನಸ್ತುತಿ** (ಭರತೇಶವೈಭವಾಂತರ್ಗತ ಸ್ತುತಿಪದ್ಯಗಳು)

| | |
|---|---|
| ಇಮಿಟೇಶನ್ ಕ್ಯಾಲಿಕೊ ಆರ್ಟ್‌ಪೇಪರ್ ಪ್ರತಿ-ಟಪ್ಪಾಲು ಹಾಸಲು ಹೊರತು | ೦—೮—೦ |
| ರಟ್ಟಿ ಬೈಂಡ್ ಊಚುಕಾಗದದ ಪ್ರತಿ— ,, ,, | ೦—೬—೦ |
| ,, ಸಾಧಾರಣ ಕಾಗದದ ಪ್ರತಿ— ,, ,, | ೦—೪—೦ |
| **ಜೈನರು ಯಾರನ್ನು ಪೂಜಿಸುತ್ತಾರೆ?** . . | ೦—೧—೬ |
| ಡಜನು ಪ್ರತಿಗಳಿಗೆ ಒಟ್ಟಿಗೆ . . . . | ೧—೦—೦ |
| **ಅಹಿಂಸೆ—ಮಹಾತ್ಮಾಗಾಂಧಿಯವರ ಒಂದು ಭಾಷಣದ ಅನುವಾದ** | ೦—೧—೩ |
| ಡಜನು ಪ್ರತಿಗಳಿಗೆ ಒಟ್ಟಿಗೆ . . . . | ೦-೧೨—೦ |



ರತ್ನಾಕರಕವಿಕೃತ

# ಭರತೇಶವೈಭವ

## ದ್ವಿತೀಯಭಾಗ

## ದಿಗ್ವಿಜಯ



**ಉಗ್ರಾಣ ಮಂಗೇಶರಾವ್,**

ಅಧ್ಯಾಪಕ, ಬೋರ್ಡ್ ಹೈಸ್ಕೂಲ್, ಪುತ್ತೂರು

ಇವರಿಂದ ಪರಿಶೋಧಿಸಲ್ಪಟ್ಟು

ಮಂಗಳೂರು ಕೆನರಾ ಛಾಪಖಾನೆಯಲ್ಲಿ ಮುದ್ರಿತವಾಗಿ

**ಜೈನಯುವಕಸಂಘದವರಿಂದ ಪ್ರಕಟಿಸಲ್ಪಟ್ಟಿತು.**

ಜಗದೊಳ್ಸನ್ನಿದಮಾದ ನಾಳ್ನುಡಿಗಳಂ ಛಂದಕ್ಕೆ ಬರ್ಪಂತೆ ನೆ।
ಟ್ಟಗೆ ಮಾತಾಡುವ ಬಲ್ಮೆ ಚಿತ್ರದೊಳೊರಲ್ಪಿರ್ದರ್ಥಮುಂ ಕೂಡೆ ನಾ।
ಲಗೆಯುಂ ರಂಜಿಸುವೊಂದು ಬಿನ್ನಣಮದಿನ್ನಾವಂಗೆ ಪುಣ್ಯೈಕಭಾ।
ಗಿಗೆ ಸೈಪಿಂ ದೊರೆಕೊಳ್ಗುಮಾತನೆ ವಲಂ ಶೃಂಗಾರರತ್ನಾಕರಂ ॥

—ಕವಿಕಾಮ

ದಾಗಿರುವುದಲ್ಲದೆ ಕವಿತಾದೃಷ್ಟಿಯಿಂದ ಅದಕ್ಕಿಂತಲೂ ಚಮತ್ಕೃತಿಯನ್ನುಂಟುಮಾಡತಕ್ಕದೆಂಬುದನ್ನು ವಿಚಾರಶೀಲರಾದ ವಾಚಕರು ಗಮನಿಸದೆ ಇರಲಾರರು. ಈ ಉತ್ಕೃಷ್ಟಕಾವ್ಯವನ್ನು ಕನ್ನಡಿಗರಿಗೆ ಆದಷ್ಟು ಕಡಮೆ ಕ್ರಯಕ್ಕೆ ಒದಗಿಸಿ ಕೊಡಬೇಕೆಂಬ ಉದ್ದೇಶವು, ಸಂಘದ ಸಾಹಿತ್ಯನಿಧಿಗೆ ಉದಾರಬುದ್ಧಿಯಿಂದ ೧೦೦೦ ರೂಪಾಯಿಗಳನ್ನು ದಾನ ಮಾಡಿದ ಧರ್ಮಶೀಲರಾದ ಶ್ರೀಮಾನ್ ಕೋಡಿಂಬಾಡಿ ಮಂಜಪ್ಪ ಶೆಟ್ಟರವರು ಮುಂತಾದವರಿಂದ, ನೆರವೇರಿದುದಕ್ಕೆ ಸಂಘವು ಸಂತೋಷಪಡುವುದಲ್ಲದೆ ಅವರ ಉಪಕಾರವನ್ನು ಸದಾ ಸ್ಮರಿಸುತ್ತಿರುವುದು. ಪ್ರಥಮಭಾಗಕ್ಕಿಂತ ಈ ಭಾಗದಲ್ಲಿ ನೂರಾರು ಪುಟಗಳು ಹೆಚ್ಚಿದ್ದು ಮುದ್ರಣಕ್ಕೆ ಆ ವಾಸಿಯಲ್ಲಿ ಹಣವು ಹೆಚ್ಚು ತಗಲಿದರೂ ಈ ಭಾಗವನ್ನೂ ಅಷ್ಟೆ ಖರೀದಿಗೆ ಒದಗಿಸಿ ಕೊಡಲು ಸಾಧ್ಯವಾಯಿತು. ಭಾಷಾಭಿಮಾನಿಗಳು ಗ್ರಂಥಕ್ಕೆ ಉದಾರಾಶ್ರಯವನ್ನೀಯುವರೆಂಬ ಸಂಪೂರ್ಣ ಭರವಸೆಯಿಂದ ನಾವು ಈ ಗ್ರಂಥದ ತೃತೀಯ ಭಾಗದ ಮುದ್ರಣವನ್ನು ಪ್ರಾರಂಭಿಸಿರುತ್ತೇವೆ.

ದಿಗ್ವಿಜಯಕಲ್ಯಾಣದ ಸ್ತ್ರೀರತ್ನಸಂಭೋಗಸಂಧಿಯಲ್ಲಿ ಔಚಿತ್ಯದ ಮೇರೆಯನ್ನು ಮೀರಿದ ಶೃಂಗಾರವರ್ಣನೆಯ ಸುಮಾರು ೧೦೦ ಪದ್ಯಗಳನ್ನು—ಕವಿತಾದೃಷ್ಟಿಯಿಂದ ನಾವು

## ಭರತೇಶವೈಭವದ ಪ್ರಥಮಭಾಗವಾದ ಭೋಗವಿಜಯವನ್ನು ಕುರಿತು ದೊರೆತ ಕೆಲವು ಅಭಿಪ್ರಾಯಗಳು.

---

ಕನ್ನಡ ಕಾವ್ಯರಚನೆಯಲ್ಲಿ ಜೈನರು ಅಗ್ರತಾಂಬೂಲಕ್ಕೆ ಅಧಿಕಾರಿಗಳಾದ್ದರಿಂದ ಈ ಗ್ರಂಥದ ಉತ್ಕೃಷ್ಟತೆಯ ವಿಷಯಕ್ಕೆ ಹೆಚ್ಚಾಗಿ ಹೇಳಬೇಕಾಗಿಲ್ಲ . . . ಇದು ಹೊಸಗನ್ನಡವೂ ಹಳಗನ್ನಡವೂ ಕೂಡಿ ಸಾಗುವ ಸಾಂಗತ್ಯರೂಪವಾದ ಹಾಡುಗಬ್ಬವಾದುದರಿಂದ ಸಾಧಾರಣವಾಗಿ ಎಲ್ಲರೂ ಓದುವುದಕ್ಕೆ ಬರುವಂತಿದೆ. ಕಥಾನಾಯಕನಾದ ಭರತೇಶನು ಎರಡು ಕೈಯಲ್ಲಿಯೂ ಕತ್ತಿಯನ್ನು ತಿರುಹುವನಂತೆ ಪ್ರಪಂಚವನ್ನೂ ಪರಮಾರ್ಥವನ್ನೂ ಕೂಡಿ ನಾಗಿಸುವಂಥವನಾಗಿರುವುದೂ ಅವನ ತಮ್ಮನಾದ ಭುಜಬಲಿಯ ಮೇಲೆ ಭ್ರಾತೃಪ್ರೇಮವನ್ನು ತೋರಿಸಿರುವುದೂ ಆ ತಮ್ಮನು ಅಣ್ಣನ ನಡವಳಿಕೆಯಿಂದಲೇ ಗುಣಗ್ರಹಣ ಮಾಡಿ ವಿರಕ್ತನಾದದ್ದೂ ತನ್ನ ಮಕ್ಕಳೆಲ್ಲರೂ ಪರಮಾರ್ಥದ ದಾರಿಯನ್ನು ಹಿಡಿದದ್ದಕ್ಕೂ ಒತ್ತಾಸೆಯನ್ನು ಕೊಟ್ಟದ್ದೂ ಕೊನೆಗೆ ತಾನು ಒಂದು ನರೇ ಕೂದಲನ್ನು ಕಾಣುತ್ತಲೇ ವಿರಕ್ತನಾಗಿ ಕೈವಲ್ಯದ ದಾರಿಯನ್ನು ಹಿಡಿದದ್ದೂ ಸ್ತುತ್ಯವಾಗಿವೆ.

ಇದರ ಮೇಲೆ ಶ್ರೀಯುತ ಮಂಗೇಶರಾಯರು ಪದ್ಯಗಳನ್ನು ಬೇರೆಬೇರೆ ಗುಂಪುಗಳನ್ನಾಗಿ ಮಾಡುವುದರಲ್ಲಿಯೂ ಈ ಕಾವ್ಯದ ವಿಷಯದಲ್ಲಿ ಜನರಿಗೆ ಬಾಯಿನೀರು ಕರೆವಂತೆ ಪೀಠಿಕೆಯಲ್ಲಿ ಅನೇಕ ಉಪಯುಕ್ತವಿಷಯಗಳನ್ನು ಹೇಳುವುದರಲ್ಲಿಯೂ ತಮ್ಮ ಸಂಪಾದಕತ್ವದ ಕೌಶಲವನ್ನು ಚೆನ್ನಾಗಿ ನೆರವೇರಿಸಿದ್ದಾರೆ. ಮುದ್ರಣವೂ ರಕ್ಷಾಪತ್ರವೂ ಅಂದವಾಗಿ, ಕರ್ಣಾಟಕಪುಸ್ತಕಭಂಡಾರಕ್ಕೆ ಈ ಪುಸ್ತಕವು ಭೂಷಣವಾಗುವಂತೆ ಪ್ರಕಾಶಕರಾದ ಜೈನಯುವಕಸಂಘದವರು ತಮ್ಮ ಶ್ರದ್ಧಾತಿಶಯವನ್ನು ಚೆನ್ನಾಗಿ ತೋರಿಸಿದ್ದಾರೆ.

ಸ್ವಧರ್ಮ,
ಧಾರವಾಡ.

---

ಪುಸ್ತಕವನ್ನು ಬಹು ಸೊಗಸಾಗಿ ಮುದ್ರಿಸಿ ಪ್ರಕಟಿಸಿದ್ದಾರೆ. ಹೊರಗಿನ ಅಚ್ಚುಕಟ್ಟನ್ನಾಗಲಿ ಒಳಗಣ ಮುದ್ರಣದ ಕ್ರಮವನ್ನಾಗಲಿ ಪೀಠಿಕೆಯಲ್ಲಿ ಕವಿಗೂ ಕವಿತೆಗೂ ಸಂಬಂಧಿಸಿ ಬರೆದಿರುವ ಚರಿತ್ರೆ, ವಿಮರ್ಶೆ ಇತ್ಯಾದಿಗಳ ಚಮತ್ಕಾರವನ್ನಾಗಲಿ ನೋಡಿದರೆ ಇಂಗ್ಲಿಷ್ ಪುಸ್ತಕಗಳನ್ನೇ ಹೆಚ್ಚಾಗಿ ದೃಷ್ಟಿಸಿ, ಸ್ಪರ್ಶಿಸಿ, ಅನುಭವಿಸಿ ನೋಡಿದವರಿಗೆ ಇದೂ ಇಂಗ್ಲಿಷ್ ಪುಸ್ತಕಗಳೋಪಾದಿಯಲ್ಲಿಯೇ ತಯಾರಾಗಿದೆಯೆಂದು ಅಭಿಪ್ರಾಯವಾಗಿ ಪರಮಾನಂದವಾಗುವುದು. ಮುದ್ರಣದ ಕೆಲಸವನ್ನಾಗಲಿ ಪರಿಶೋಧನೆಯ

ಕೆಲಸವನ್ನಾಗಲಿ ತುಲನಾತ್ಮಕವಾದ ವಿಮರ್ಶೆಯ ಕೆಲಸವನ್ನಾಗಲಿ ಇಷ್ಟು ಸೊಗಸಾಗಿ ಮಾಡಿಸಿ ಇದುವರೆಗೆ ಕರ್ಣಾಟಕಸಾಹಿತ್ಯಮಂಡಲದಲ್ಲಿ ಒಂದು ಪೂರ್ವಗ್ರಂಥವನ್ನಾದರೂ ಪ್ರಕಟಿಸಿದ್ದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು . . . . . . . . . .

ಈ ಕವಿಯ ವರ್ಣನೆಗಳು ಕೇವಲ ನೈಸರ್ಗಿಕವೇ ಆಗಿವೆ . . . . ಸಾಧಾರಣ ಮಟ್ಟಿಗೆ ಅವರ್ಣನೀಯವೆಂದೇ ಹೇಳಬಹುದಾದ ಸಂಗೀತಚಾತುರ್ಯ, ಅಧ್ಯಾತ್ಮವಿಚಾರ ಮುಂತಾದ ವಿಷಯಗಳನ್ನು ಸಹ ಈತನು ಅಸದೃಶವಾದ ರೀತಿಯಿಂದ ವರ್ಣಿಸಿರುವನು . . . . . . ಕನ್ನಡ ಕಾವ್ಯದಲ್ಲಿ ಈಗಿನವರಿಗೆ ಅಭಿರುಚಿಯುಂಟಾಗಬೇಕಾದರೆ ನಿಜವಾಗಿಯೂ ಇಂತಹ ಕಾವ್ಯಗಳಿಂದಲೇ ಆಗಬೇಕು. ಅಷ್ಟದಿಕ್ಕುಗಳಲ್ಲಿಯೂ ಕೀರ್ತಿಭೇರಿಯನ್ನು ಮೊಳಗಿಸಿದ ಆಧುನಿಕ ಕವಿವರ್ಯರಾದ ರವೀಂದ್ರನಾಥ ಠಾಕೂರರವರ ಕಲೆಯು ಕೂಡ ಈತನ ಕಾವ್ಯದಲ್ಲಿ ಅಲ್ಲಲ್ಲಿ ತುಂಬಿತುಳುಕುತ್ತಲಿದೆ. ಹೊಸ ಬೆಡಗುಗಳ ಪುರಾತನ ಕಾವ್ಯವೆಂದರೆ ಇದೇ ಎನ್ನ ಬಹುದು. ಕರ್ಣಾಟಕ ಸಿಂಹಾಸನಾಧೀಶ್ವರರಲ್ಲಿ ಗೌರವವು ದೊರೆತಂತೆ, ಈ ಗ್ರಂಥಕ್ಕೆ ಕರ್ಣಾಟಕದ ಪ್ರಜಾಜನರಲ್ಲಿಯೂ ತಕ್ಕ ಆದರವು ತಪ್ಪದೆ ದೊರೆಯಲೆಂದು ನಾವು ಮನಃಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

**ಕನ್ನಡ ಸಹಕಾರಿ,**

ಪುತ್ತೂರು, ದ. ಕ.

---

ಶೈಲಿಯು ಪ್ರೌಢವಾಗಿಯೂ ಸರಳವಾಗಿಯೂ ರಸವತ್ತಾಗಿಯೂ ಇದೆ. ಪುಸ್ತಕದ ಮುದ್ರಣವೂ ಕಾಗದವೂ ಆಕಾರವೂ ಸುಲಕ್ಷಣವಾಗಿವೆ . . . . . . ಕನ್ನಡ ಪುಸ್ತಕಗಳಿಗೆ ಸಾಮಾನ್ಯವಾಗಿರುವ ನ್ಯೂನತೆಗಳನ್ನು ದೂರಮಾಡಲು ಪ್ರಕಾಶಕರು ಬಹಳ ಪ್ರಯತ್ನಪಟ್ಟಿರುತ್ತಾರೆ . . . . . . ಪುತ್ತೂರು ಹೈಸ್ಕೂಲಿನ ಅಧ್ಯಾಪಕರಾದ ಉಗ್ರಾಣ ಮಂಗೇಶರಾಯರು ಈ ಗ್ರಂಥವನ್ನು ಎಂಟು ಪ್ರತಿಗಳ ಸಹಾಯದಿಂದ ಪರಿಶೋಧಿಸಿ ವಿಸ್ತಾರವಾದ ಪೀಠಿಕೆಯನ್ನು (೩೨ ಪುಟ) ಬರೆದಿರುವುದು ವಾಚಕರಿಗೆ ಬಹಳ ಅನುಕೂಲವಾಗಿದೆ.

"ಭಾಷಾಭಿಮಾನಿಗಳಾದ ಕನ್ನಡಿಗರು ಈ ಗ್ರಂಥಕ್ಕೆ ತಕ್ಕ ಪ್ರೋತ್ಸಾಹವನ್ನಿತ್ತು ಈ ಗ್ರಂಥದ ಉಳಿದ ಭಾಗಗಳನ್ನೂ ಇತರ ಉತ್ಕೃಷ್ಟ ಪುರಾತನಗ್ರಂಥಗಳನ್ನೂ ಶೀಘ್ರದಲ್ಲೇ ಪ್ರಕಟಿಸುವಂತೆ ಅನುಕೂಲಿಸಿ ಕೊಡುವರೆಂದು" ಹೇಳುವ ಪ್ರಕಾಶಕರ ಅಭಿಪ್ರಾಯವನ್ನು ನಾವು ಸಂಪೂರ್ಣವಾಗಿ ಅನುಮೋದಿಸುತ್ತೇವೆ.

**ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ,**

ಬೆಂಗಳೂರು.

---

ಕವಿಚರಿತ್ರೆಯಿಂದಲೂ ಕಾವ್ಯವಿಮರ್ಶೆಯಿಂದಲೂ ಕೂಡಿದ ಒಂದು ವಿಸ್ತಾರವಾದ ಪೀಠಿಕೆಯನ್ನು ಮ। ರಾ। ಉಗ್ರಾಣ ಮಂಗೇಶರಾಯರು ಬರೆದಿರುತ್ತಾರೆ. ಕಾವ್ಯವೂ ಪೀಠಿಕೆಯೂ ಪ್ರತಿಯೊಬ್ಬ ಕನ್ನಡಿಗನೂ ಓದತಕ್ಕವಾಗಿವೆ. ಮುದ್ರಣಾದಿಗಳ ವಿಷಯದಲ್ಲಿ ಈ ಗ್ರಂಥವು ಅತ್ಯುತ್ತಮವಾಗಿದೆ. ಜೈನಯುವಕಸಂಘದವರ ಉತ್ಸಾಹವೂ ಪ್ರಯತ್ನವೂ ಸ್ತೋತ್ರಾರ್ಹವಾಗಿವೆ.

**ಪ್ರಬುದ್ಧ ಕರ್ಣಾಟಕ,**

ಬೆಂಗಳೂರು.

---

ತಾವು ಪ್ರೀತಿಯಿಂದ ಕಳುಹಿಸಿದ ಭರತೇಶವೈಭವದ ಪ್ರಥಮಭಾಗವನ್ನು ಪಠನಮಾಡಿ ನೋಡಿದೆನು.................................ಈ ಗ್ರಂಥವನ್ನು ಆಮೂಲಾಗ್ರವಾಗಿ ಪಠನಮಾಡಿ ವಿಷಯಗ್ರಹಣಮಾಡಿಕೊಳ್ಳುವವನು ಜೈನಸಿದ್ಧಾಂತದಲ್ಲಿ ಪಂಡಿತನಾಗುವನು ಎಂಬ ವಾಡಿಕೆಯ ಮಾತು ಅತಿಶಯೋಕ್ತಿಯಲ್ಲ. ಕೆಲವು ಶ್ರೀಮಂತರು ೪೦–೫೦ ರೂಪಾಯಿಗಳನ್ನು ಖರ್ಚುಮಾಡಿ ಈ ಗ್ರಂಥವನ್ನು ಬರೆಯಿಸಿ ತಮ್ಮಲ್ಲಿಟ್ಟುಕೊಂಡು ಪಠನಮಾಡುತ್ತಿದ್ದರು. ಇನ್ನೂ ಅನೇಕರಿಗೆ ಇದನ್ನು ಪಠನಮಾಡಬೇಕೆಂಬ ಕೌತುಕವಿರುತ್ತಿದ್ದಿತಾದರೂ ಗ್ರಂಥವು ದೊರಕದಿರುತ್ತಿದ್ದುದರಿಂದಲೂ ಬರೆಯಿಸುವುದಕ್ಕೆ ದ್ರವ್ಯಾಭಾವದಿಂದಲೂ ಭಗ್ನಮನೋರಥರಾಗುತ್ತಿದ್ದರು. ಕೆಲವರು ದ್ರವ್ಯವನ್ನು ವ್ಯಯಮಾಡಿ ಬರೆಯಿಸಿದರಾದರೂ ಅವ್ಯುತ್ಪನ್ನರಾದ ಕೆಲವರು ಲೇಖಕರ ಲೇಖಣಿಯ ಸಂಪರ್ಕವು ಗ್ರಂಥದ ಗೌರವವನ್ನು ಕಡಮೆ ಮಾಡಿದ್ದಿತು........................... ಈಗ ಯುವಕಸಂಘದವರು ಉತ್ಸಾಹದಿಂದಲೂ ಧೈರ್ಯದಿಂದಲೂ ಈ ಗ್ರಂಥದ ಪ್ರಕಾಶನಕಾರ್ಯವನ್ನು ಕೈಕೊಂಡು ಸ್ವಲ್ಪಕಾಲದಲ್ಲೇ ಈ ಸರ್ವಾಂಗಸುಂದರವಾದ ಪ್ರಥಮಭಾಗವನ್ನು ವಾಚಕರ ಮುಂದಿಟ್ಟಿರುವುದು ಬಹಳ ಸಂತೋಷಪ್ರದವೂ ಪ್ರಶಂಸನೀಯವೂ ಆಗಿದೆ.......................... ಎಲ್ಲಕ್ಕೂ ಕೊನೆಯ ಮುದ್ರೆಯಂತಿರುವ ಇನ್ನೊಂದು ನವೀನಸುಂದರತೆಯು ಈ ಗ್ರಂಥಕ್ಕೆ ಪ್ರಾಪ್ತವಾದುದೇನೆಂದರೆ, ವಿದ್ಯಾನಿಧಿಗಳೂ ಆಧ್ಯಾತ್ಮರಸಿಕರೂ ದಯಾಮೂರ್ತಿಗಳೂ ಗುಣೈಕಪಕ್ಷಪಾತಿಗಳೂ ಆದ ಮೈಸೂರು ಶ್ರೀಮನ್ಮಹಾಪ್ರಭುಗಳವರು ಈ ಗ್ರಂಥಸಮರ್ಪಣೆಗೆ ಅಪ್ಪಣೆಯನ್ನು ದಯಪಾಲಿಸಿರುವುದು. ಗ್ರಂಥವು ಬಹಳ ಮಹತ್ತ್ವವುಳ್ಳುದೆಂಬುದನ್ನು ಸೂಚಿಸುವುದಕ್ಕೆ ಇದಕ್ಕಿಂತಲೂ ಪ್ರಬಲವಾದ ಪ್ರಮಾಣವು ಬೇಕೆ?

**ಎತ್ತೂರು ಶಾಂತಿರಾಜ ಶಾಸ್ತ್ರಿ,**

ಸಂಪಾದಕ, ವಿಶ್ವಬಂಧು, ಮೈಸೂರು.

---

ಪುತ್ತೂರು ಜೈನಯುವಕಸಂಘದ ಕಾರ್ಯದರ್ಶಿಗಳಾದ ಶ್ರೀಯುತ ಪದ್ಮರಾಜ ಅರಿಗರವರು, ಆ ಸಂಘದವರಿಂದ ಪ್ರಚಾರಗೊಳಿಸಲ್ಪಟ್ಟ ಅಭಿಪ್ರಾಯಕ್ಕೆಂದು ನನಗೆ ಕಳುಹಿಸಿರುವ "ಭರತೇಶವೈಭವ"ವೆಂಬ ಕನ್ನಡ ಸಾಂಗತ್ಯಗ್ರಂಥದ ಮೊದಲನೆಯ ಭಾಗವನ್ನು

ಅತ್ಯಾದರದೊಡನೆ ಸ್ವೀಕರಿಸಿರುವೆನು. ಕನ್ನಡ ಜಿಲ್ಲೆಯ ಕವಿಗಳಿಂದ ಬರೆಯಲಾದ ಗ್ರಂಥಗಳೊಳಗೆ ಇದು ಬಹು ಪ್ರೌಢವಾದ ಒಂದು ಕಾವ್ಯವಾಗಿದೆ. ವಿದ್ವತ್ತಾಪ್ರಚುರವಾದ ಪೀಠಿಕೆಯಿಂದಲೂ ನೀತಿಬೋಧಕವೂ ಮನೋಹರವೂ ಆದ ಕಥೆಯಿಂದಲೂ ಕೂಡಿದುದಾಗಿ ಒಳ್ಳೆಯ ಕಾಗದದಲ್ಲಿ ಮುದ್ದಾದ ಮೊಳೆಗಳಿಂದ ಮುದ್ರಿಸಲ್ಪಟ್ಟ ಸರ್ವಾಂಗಸುಂದರವಾದ ಈ ಗ್ರಂಥವು ಸಕಲಜನಸಮಾದರಣೀಯವಾಗಲೆಂದು ಆಶಿಸುವೆನು.

**ಬೆನಗಲ್ ರಾಮರಾವ್, ಎಮ್. ಎ., ಎಲ್ಎಲ್. ಬಿ.,**
ಸೀನಿಯರ್ ಟ್ರಾನ್ಸ್ಲೇಟರ್, ಮದರಾಸು.

---

ಕಾವ್ಯದ ಕೆಲವು ಭಾಗಗಳನ್ನೂ ಮುನ್ನುಡಿಯನ್ನೂ ಓದಿ ನೋಡಿದೆನು. ಕಾವ್ಯವು ಅತ್ಯುತ್ಕೃಷ್ಟವಾದದ್ದೆಂಬುದು ಕೊಂಚ ಓದಿದರೂ ತಿಳಿಯುವುದು. ಮುನ್ನುಡಿಯು ಮ. ರಾ. ಮಂಗೇಶರಾಯರವರ ಸರಸತೆಯನ್ನೂ ವಿಮರ್ಶೆಯನ್ನೂ ಚೆನ್ನಾಗಿ ತೋರಿಸುತ್ತದೆ. ಇಂಥ ವಿಮರ್ಶೆಯಿಂದ ಜನರಲ್ಲಿ ಕಾವ್ಯಾಭಿರುಚಿಯು ಹೆಚ್ಚುವುದರಲ್ಲಿ ಸಂದೇಹವಿಲ್ಲ. ಜೈನಯುವಕಸಂಘದವರು ಇಂಥ ಪುಸ್ತಕಗಳನ್ನು ಅಚ್ಚುಹಾಕಿಸಬೇಕೆಂದು ಕೈಕೊಂಡಿರುವ ಕಾರ್ಯವು ಬಹಳ ಆವಶ್ಯಕವೂ ಶ್ಲಾಘನೀಯವೂ ಆದದ್ದು........................ಈ ಉತ್ತಮ ಕಾವ್ಯದ ಅತ್ಯುತ್ತಮವಾದ ಮುದ್ರಣವನ್ನು ಕನ್ನಡ ನಾಡಿನ ಸಕಲಸಂಪತ್ತಿಗೆ ಆಶ್ರಯರಾದ ನಮ್ಮ ಶ್ರೀಮನ್ಮಹಾರಾಜರವರಿಗೆ ಅರ್ಪಿಸಿರುವುದರಿಂದ ಕನ್ನಡಿಗರು ಕರ್ಣಾಟಕದ ಯಾವ ಭಾಗದಲ್ಲಿ ವಾಸಮಾಡುವರಾದರೂ ತಾವೆಲ್ಲ ಒಂದು ಮನೆತನದವರೆಂದು ಗಣಿಸುವರೆಂಬುದು ಸ್ಪಷ್ಟನಾಗುತ್ತದೆ.

**ಎಮ್. ವೆಂಕಟೇಶ ಅಯ್ಯಂಗಾರ್, ಎಮ್. ಎ.,**
ಅಸಿಸ್ಟಾಂಟ್ ಕಮಿಶನರ್, ಮದ್ದಗಿರಿ, ತುಮ್ಕೂರು ಡಿಸ್ಟ್ರಿಕ್ಟ್.

---

From a cursory reading of it here and there. I have formed the impression that it must be a most interesting work; and I have promised myself a great deal of both pleasure and profit from a more serious study before long. The entire Kannada country will, I have no doubt, be very thankful to you for having brought out this ancient work in such a neat and presentable style.

**D. V. Gundappa,**
*Editor, Janajeevana and Arthasadhaka Patrika,*
BANGALORE.

---

It is a source of immense pleasure to me..............The undertaking is a laudable one and I wish you every success.

PRAKTANA VIMARSHA VICHAKSHANA
**Rao Bahadur R. Narasimhachar,**
M. A., M. R. A. S.

# ವಿಷಯಾನುಕ್ರಮಣಿಕೆ.

## ಶುದ್ಧಾಶುದ್ಧ ಪತ್ರಿಕೆ.

| ಪುಟ | ಪದ್ಯಸಂಖ್ಯೆ | ಅಶುದ್ಧ | ಶುದ್ಧ. |
|---|---|---|---|
| ೨ | ೨೩ | ಭಯಸಿದ್ಧಿ | ಜಯಸಿದ್ಧಿ |
| ೧೪ | ೪೦ | ಪಂಚಾಗ | ಪಂಚಾಂಗ |
| ೨೨ | ೩೫ | ಕಸ್ಮಲ | ಕಶ್ಮಲ |
| ,, | ,, | ಭೂಭೂಜ | ಭೂಭುಜ |
| [illegible] | ೩೬ | ನಿಷ್ಪುರ | ನಿಷ್ಠುರ |
| ೨೮ | ೨೦ | ನೂಕಿರಿದೊಬೊಬ್ಬ | ನೂಕಿರಿದೊಬ್ಬೊಬ್ಬ |
| ೧೦೬ | ೪೨ | ಕುದರೆ | ಕುದುರೆ |
| ೧೩೪ | ೧೨ | ತಿರ್ಥ | ತೀರ್ಥ |



# ಭರತೇಶವೈಭವ.

## ನವರಾತ್ರಿಸಂಧಿ.

ಪರಮಪರಂಜ್ಯೋತಿ ಕೋಟಿಚಂದ್ರಾದಿತ್ಯ । ಕಿರಣ ಸುಜ್ಞಾನಪ್ರಕಾಶಾ ॥
ಸುರರ ಮಕುಟಮಣಿರಂಜಿತಚರಣಾಬ್ಜ । ಶರಣಾಗು ಪ್ರಥಮಜಿನೇಶಾ ॥ ೧ ॥

ಸುಜನಮನೋಹರ ಸುಜ್ಞಾನಭಾಸ್ಕರ । ತ್ರಿಜಗದಾಶ್ಚರ್ಯಸೌಂದರ್ಯಾ ॥
ನಿಜಮತಿದೋರೊಲವಿಂದಷ್ಟಕರ್ಮಾದಿ । ಗ್ವಿಜಯ ನಿರಂಜನಸಿದ್ಧಾ ॥ ೨ ॥

ಕೃತಯುಗದಾದಿಯೊಳಾದಿವಸ್ತುವಿನಾದಿ । ಸುತನಾದಿಚಕ್ರನಾಯಕನು ॥
ಕ್ಷಿತಿಯ ಪಾಲಿಸುತಿರ್ದನೇನೆಂಬೆ ಜಿನ ಜಿನ । ಸತತ ಜೋಗುಳಿವಾಡಿತವನಿ ॥ ೩ ॥

ಭೂಮಿಭಾರವ ತಾಳ್ದ ಚಿಂತೆಯಿಲ್ಲೊಂದರ । ಕಾಮವಿಲ್ಲಾಲಸ್ಯವಿಲ್ಲ ॥
ಕ್ಷೇಮದೊಳಾಳುತಿರ್ದನು ದೀರ್ಘಧರೆಯ ಸು । ತ್ರಾಮ ಸ್ವರ್ಗವನಾಳುವಂತೆ ॥ ೪ ॥

ಲೀಲೆಯೊಳಿಂತು ರಾಜ್ಯವನಾಳುತಿರ್ದ ಭೂ । ಪಾಲನೊತ್ತಿಗೆ ಮಂತ್ರಿ ಬಂದು ॥
ಆಲೋಚನೆಗೆಯ್ವನರಸನ ಲೀಲೆ ವಿ । ಶಾಲವಪ್ಪಂತೇನನೆಂಬೆ ॥ ೫ ॥

ಮಳೆಗಾಲ ಹೋದುದು ಬೆಳುಗಾಲ ಬಂದುದು । ದಳ ನಡೆವುದಕಿನ್ನು ಚೆನ್ನು ॥
ಆಲಸಿಕೆ ಪರಿಹಾರವಾಗಿ ದಿಗ್ವಿಜಯಕೆ । ನ್ನೆಳಸುವುದೊಳ್ಳಿತು ನೃಪತಿ ॥ ೬ ॥

ಬಾಲಾರ್ಕನಂತುದಯಿಸಿ ಚಕ್ರರತ್ನ ಶ । ಸ್ತ್ರಾಲಯದೊಳಗಿರುತಿರ್ದು ॥
ಆಲಸ್ಯವೇತಕೆ ಧರೆಯ ಸಾಧಿಸುವರೆ । ನ್ನೇಳರಿತಿವಿುರಮಾರ್ತಾಂಡಾ ॥ ೭ ॥

ಸುಪ್ರದಕ್ಷಿಣವಾಗಿ ಹೋಗಿ ಸಮಸ್ತಭೂ । ಮಿಪ್ರಭುಗಳ ವಶಮಾಳ್ಪ ॥
ಭೂಪ್ರದಕ್ಷಿಣಕೇಳು ದುಷ್ಟಮರ್ದನ ಶಿಷ್ಟ । ವಿಪ್ರತಾಪಸಧರ್ಮರಕ್ಷಾ ॥ ೮ ॥

ದ್ವೀಪದ್ವೀಪದೊಳುಕ್ಕಿ ಸೊಕ್ಕಿದ್ದ ದಿಂಡೆಯ । ಭೂಪತಿಗಳ *ಹಿಂಡ ನಿನ್ನ ॥
ಶ್ರೀಪಾದಕೆರಗಿಸಿಕೊಳಲಡಿಯಿಡು ಜಂಬೂ । ದ್ವೀಪದಕ್ಷಿಣಲೋಕಸೂರ್ಯಾ ॥ ೯ ॥

---

*ಬಾಧೆಬಡಿಸಿ.

ಗಿರಿದುರ್ಗಜಲದುರ್ಗವನದುರ್ಗದೊಳಗಿರ್ದ । ನರಪತಿಗಳ ಸೊಕ್ಕ ಮುರಿದು ॥
ಭರತಷಟ್ಖಂಡದ ಧರೆಯ ಸಾಧಿಸಿ ತೋರು । ಭರತೇಶನೆಂಬ ಬೀರವನು ॥ ೧೦ ॥

ಎಲ್ಲೆಲ್ಲಿಯುತ್ತಮವಸ್ತುವಾಹನಗಳುಂ । ಟಲ್ಲಲ್ಲಿ ಕಪ್ಪವ ಕೊಳುತ ॥
ಮೆಲ್ಲಮೆಲ್ಲನೆ ನಾಡ ನೋಡಿಯೆಯ್ತುಹವಿದು । ಸಲ್ಲೀಲೆಯಲ್ತೆಯೇಳರಸಾ ॥ ೧೧ ॥

ದೂರದೇಶದ ರಾಯರೊಳು ಪುಟ್ಟಿದುತ್ತಮ । ಸ್ತ್ರೀರತ್ನಗಳ ನಿನ್ನ ಕೈಗೆ ॥
ಧಾರೆಯೆರೆಸಿಕೊಂಡು ಲೀಲೆಯೊಳೆಯ್ತರ । ಬಾರದೆ ಹೊಲ್ಲವೇನೆಂದಾ ॥ ೧೨ ॥

ಆರುಖಂಡದ ಪ್ರಜೆಗಳಿಗೆ ನಿನ್ನಯ ರೂಪ । ತೋರಿ ಕೃತಾರ್ಥರ ಮಾಡಿ ॥
ಮೂರುಚೋಟೆಂದಾರುಖಂಡವ ಕಂಡು ಬ । ಲ್ಗಾರಿಕೆಯೊಳು ಬಹವೇಳು ॥ ೧೩ ॥

ವನದೊಳು ಚರಿಸಿ ವಸಂತನಾ ವನವ ಭೋಂ । ಕನೆ ಚಿಗುರೇರಿಸುವಂತೆ ॥
ವನಧಿಮಧ್ಯದ ಧರಣಿಯ ನಿನ್ನ ಸುಳುಹಿಂದ । ನನೆಕೊನೆವೋಗಿಸು ನೃಪತಿ ॥ ೧೪ ॥

ಎಂದು ನುಡಿದ ಬುದ್ಧಿಸಾಗರಮಂತ್ರಿಗಾ । ನಂದದಿಂದುಡುಗೊರೆಯಿತ್ತು ॥
ಮಂದಿಗೆ ಹೇಳಿ ಸುಪಯಣಕುಜ್ಜುಗಿಸು ಹೋ । ಗೆಂದು ಬೀಳ್ಕೊಟ್ಟನಾ ರಾಯಾ ॥ ೧೫ ॥

ನವರಾತ್ರಿ ಜಿನಮಹಿಮೆಯ ಮಾಡಿ ದಶಮಿಯ । ದಿವಸದೊಳ್ ಪಯಣವಪ್ಪುದಕೆ ॥
ಹವಣಿಸಿ ಜೋಕೆಮಾಡುವೆನೆಂದು ಮಂತ್ರಿ ಬಿ । ನ್ನವಿಸಿ ಬೀಳ್ಕೊಂಡು ನಡೆದನು ॥ ೧೬ ॥

ಕಟ್ಟಿದುವಾಗಳೆ ಗುಡಿತೋರಣಂಗಳು । ಪಟ್ಟಣದೊಳಗಲ್ಲಿಗಲ್ಲಿ ॥
ಬೆಟ್ಟದಂದದ ತೇರು ಸಿಂಗರಿಸಿದುವಹೊ । ಹುಟ್ಟಿತು ದಂಡಿನ ಸುದ್ದಿ ॥ ೧೭ ॥

ಆಕಾಶಕೆದ್ದ ಪತಾಕೆಗಳಿರೆ ನೋಡಿ । ಸಾಕೇತಪುರವೆಂಬರದನು ॥
ಶ್ರೀಕೌಶಲಾಯೋಧ್ಯಾಪುರವೆಂಬ ಜಿನರಾಗ । ರಾ ಕೀರ್ತಿಪುರ ಶೋಭೆಯಾಯ್ತು ॥ ೧೮ ॥

ಗುಡಿಸಿ ಮಿಂಚಿಕ್ಕಲು ಬೀದಿಯಿದ್ದುವು ಪೋಪ । ರಡಿಗಳ ಜುಮ್ಮುದಟ್ಟೈಸುತ ॥
ಬಿಡೆ ಕೆದರಿದ ಪುಷ್ಪದಿಂದ ಕಂಪಿನದೊಂದು । ಕಡಲಂತೆ ಮೆರೆದುದಾ ನಗರಾ ॥ ೧೯ ॥

ಸಾದಿನ ಸಾರಣೆ ಪನ್ನೀರ ಚಳೆಯ ಜ । ವಾದಿಕುಂಕುಮುಮಿಶ್ರದಿಂದ ॥
ಬೀದಿಬೀದಿಗಳಲ್ಲಿ ಘಮ್ಮೆಂಬ ತುಂಬಿಯ । ನಾದ ಹೆಚ್ಚಿತು ಹೊಸತೆನಿಸಿ ॥ ೨೦ ॥

ಮುಗಿಲ ಮುಟ್ಟುವ ಧ್ವಜವೆತ್ತಿತಯೋಧ್ಯಾ । ನಗರಮಧ್ಯದ ಬಸದಿಯೊಳು ॥
ಅಗಣಿತಜಿನಗೃಹವಿದ್ದುವಲ್ಲಲ್ಲಿ ಕೇ । ರಿಗಳೊಳು ಸಿಂಗರವಾಗಿ ॥ ೨೧ ॥

ಹೋಮುಗಳಲ್ಲಲ್ಲಿ ಪೂಜೆಗಳಲ್ಲಲ್ಲಿ । ಸ್ತೋಮಾಭಿಷೇಕವಲ್ಲಲ್ಲಿ ॥
ಶ್ರೀಮುನಿಭುಕ್ತಿಯಲ್ಲಲ್ಲಿ ಮೆರೆಯೆ ಪುಣ್ಯ । ಧಾಮುವಾಗಿರ್ದುದಾ ನಗರಾ ॥ ೨೨ ॥

ಕಲಿಕುಂಡ ವಜ್ರಪಂಜರ ಯಜ್ಞಗಣಧರ । ವಲಯ ಮೃತ್ಯುಂಜಯಯಜ್ಞಾ ॥
ಬಲಸಿದ್ಧಿ ಜಯಸಿದ್ಧಿ ಸರ್ವರಕ್ಷೆಗಳೆಂಬ । ಹಲವು ಯಜ್ಞಗಳು ನಡೆದುವು ॥ ೨೩ ॥

ನಿತ್ಯಪ್ರಭಾವನೆ ನಿತ್ಯರಥೋತ್ಸವ । ನಿತ್ಯಾಭಿಷೇಕಪೂಜೆಗಳು ॥
ನಿತ್ಯಚತುಸ್ಸಂಗತೃಪ್ತಿಗಳಸೆದುವ । ಮಾತ್ಯನ ಪ್ರೇರಣೆಯಿಂದ ॥ ೨೪ ॥
ಜಿನಪೂಜಾಪೂರ್ವಕವಾಗಿ ಕೂಡೊಂಭತ್ತು । ದಿನ ನಡೆದುದು ಚಕ್ರಪೂಜೆ ॥
ಅನುಚರರೆಲ್ಲರು ತಂತಮ್ಮ ಖಡ್ಗವ । ನನುರಾಗ ಮಿಗೆ ಪೂಜಿಸಿದರು ॥ ೨೫ ॥
ಯಕ್ಷಗೋಮುಖಗೆ ಚಕ್ರೇಶ್ವರಿಯಕ್ಷಿಣಿ । ಗಕ್ಷುಣ್ಣಪೂಜೆಯ ಮಾಡಿ ॥
ರಕ್ಷೆಗಟ್ಟಿತು ತೇಜಿಗಾಶ್ವೀಜದೊಳು ಶುಕ್ಲ । ಪಕ್ಷದ ಪಾಡ್ಯದಿನದೊಳು ॥ ೨೬ ॥
ಯಕ್ಷದೇವತೆಯೆಂಬರೇಕೆ ತೇಜಿಯನವು । ಯಕ್ಷರಕ್ಷಿತವದರಿಂದ ॥
ಯಕ್ಷಯಕ್ಷಿಣಿಯರ ಪೂಜಾಪೂರ್ವಕವಾಗಿ । ರಕ್ಷೆಗಟ್ಟಿಸಿದನಾ ಮಂತ್ರಿ ॥ ೨೭ ॥
ಆನೆಗಳನು ರಥಗಳನು ಸಿಂಗರಗೈಸಿ । ಪೀನವೈಭವಗಾಣಿಸಿದನು ॥
ಈ ನರಲೋಕಕಚ್ಚರಿಯೆನೆ ಮಂತ್ರಿ ಮ । ಹಾನವಮಿಯ ನಡೆಸಿದನು ॥ ೨೮ ॥

ನಗರಮಧ್ಯದ ಜಿನವಾಸಕಾ ರಾಜೇಂದ್ರ । ಹಗಲೆಯ್ದಿ ಪೂಜೆಯ ನೋಡಿ ॥
ಮಗುಳ್ದರಮನೆಗೆಯ್ದಿ ಮತ್ತೆ ರಾತ್ರಿಯೊಳೋ । ಲಗವಾದನೇನ ಬಣ್ಣಿಪೆನು ॥ ೨೯ ॥
ಕಾರಿರುಳನು ತನ್ನ ರತ್ನಕಿರೀಟ ಕ । ಣ್ಣಾರೆ ಹಗಲುಮಾಡುವಂತೆ ॥
ವಾರಣವೈರಿಪೀಠವನೇರಿ ಕಡೆಯು ಹ । ಜಾರದೊಳೋಲಗವಾದಾ ॥ ೩೦ ॥
ಇರ್ದರು ರಾಜಾಧಿರಾಜರು ಸಚಿವರು । ನಿರ್ದೋಷಕವಿಗಮಕಿಗಳು ॥
ಬರ್ದಿನ ಕೆಳೆಯರು ವಾರನಾರಿಯರಾಗ । ಸಾರ್ದು ರಾಜೇಂದ್ರನ ಸುತ್ತ ॥ ೩೧ ॥
ದಿಟ್ಟಿ ಸಲ್ವಷ್ಟಕೆ ಮುಂದೆ ಭರಾಭರಿ । ಗೊಟ್ಟಿರ್ದುದುರೆ ಪರಿವಾರಾ ॥
ತೆಟ್ಟಿತೆಟ್ಟಿಯೊಳು ನಿಂದಿರ್ದುದು ಬಹುಪ್ರಜೆ । ನಿಟ್ಟಿಸುತಾ ಚಕ್ರಧರನಾ ॥ ೩೨ ॥
ಕಾಕಿಣಿರತ್ನವ ದೀಪಮಾಲೆಯ ಕಂಭ । ದಾಕೆಯೊಳೊತ್ತಿ ನಿಲ್ಲಿಸಲು ॥
ಕಾಕಾಯ್ತು ಕತ್ತಲೆ ಸುತ್ತಗಾವುದಕೆ ದಿ । ವಾಕರಪ್ರಭೆ ತೋರಿತಾಗ ॥ ೩೩ ॥
ನಗರಿ ಪನ್ನೆರಡುಗಾವುದವದು ಸಾಲುದೀ । ಮಿಗೆ ಪಂಜಿನಿಂದ ಥಾಳಿಸಿತು ॥
ನಗರಿಗೊಡೆಯನ ಗೃಹದ ಮುಂದೆ ಗಾವುದ । ಹಗಲಾಯ್ತು ಕಾಕಿಣಿಯಿಂದ ॥ ೩೪ ॥

ಬೊಂಬೆಗಳಾಟಗಳಲ್ಲಲ್ಲಿ ಪಾತ್ರನಿ । ತಂಬಿನಿಜನಗಳಲ್ಲಲ್ಲಿ ॥
ಡೊಂಬರ ಗಳೆಯ ಸಂಗತಿಗರು ಕೋಡಿಗ । ರಿಂಬುಗೊಂಡಿರ್ದರಲ್ಲಲ್ಲಿ ॥ ೩೫ ॥
ಇಂದ್ರಜಾಲಿಗರು ಗೋವಿಂದಗತಿಗಳು ಮ । ಹೇಂದ್ರಜಾಲಿಗರು ವಿಸ್ಮಯರು ॥
ಖೇಂದ್ರನಾಟಕರಿದ್ದರನುವಾಗಿ ಭರತರಾ । ಜೇಂದ್ರಗಾಟವ ತೋರ್ಪೆವೆಂದು ॥ ೩೬ ॥
ಭಾವಿಸಿ ಭಾಸ್ಕರ ನಡೆದತ್ತ ಮುಗಿದಿರ್ದ । ತಾವರೆ ಮಿಡಿದಲರ್ವಂತೆ ॥
ಆವ ಕಡೆಗೆ ರಾಯ ಮೊಗವಿತ್ತನತ್ತ ನಾ । ನಾವಿದ್ಯೆಗಳ ತೋರುತಿಹರು ॥ ೩೭ ॥

ಸೂತ್ರವ ಮಿಡಿದರೆ ಬೊಂಬೆಗಳೆಲ್ಲ ತ । ನ್ಮಾತ್ರದಿ ಕುಣಿವಂತೆ ನೃಪನ ॥
ನೇತ್ರಗಳೊಲಿದತ್ತ ತವತವಗಾಗಳೆ । ಪಾತ್ರದ ಪೆಂಗಳಾಡುವರು ॥ ೩೮ ॥

ಅಂಬರ ತುಡುಕೆ ಗಳೆಯನೇರಿ ನೃಪನ ಮು । ಖಾಂಬುಜವನೆ ನೋಡುತಿರ್ದು ॥
ಕಂಬೆಳಗೊಲೆಯಲೊಡನೆ ತಟಪುಟನುಬ್ಬಿ । ಡೊಂಬರು ಲಾಗುದೋರುವರು ॥ ೩೯ ॥

ಜಟ್ಟಿಗಳುಬ್ಬಿ ಕೋಯೆಂದಾಲ್ದು ಭುಜಗಳ । ತಟ್ಟಿಕೊಂಡೊಡೆಯ ಜೀಯೆಂದು ॥
ಥಟ್ಟಿಘಟ್ಟನೆ ತಿವಿದೊಬ್ಬರೊಬ್ಬರ ತೆಗೆ । ದಿಟ್ಟಾಡಿ ಕೆಡೆದರತ್ತಿತ್ತ ॥ ೪೦ ॥

ರಾಜ ಚಿತ್ತೈಸೆಂದು ವಿಸ್ಮಯಕಾರನು । ಬೀಜವಮಾತ್ರವನೊಂದ ನೆಟ್ಟಾ ॥
ಭೂಜವಾಯ್ತಾಗಳೆ ಕಾಯಾಯ್ತು ಹಣ್ಣಾಯ್ತು । ಸೋಜಿಗವಟ್ಟಿದಾಸ್ಥಾನಾ ॥ ೪೧ ॥

ಲಾಲಿಸೊಡೆಯಯೆಂದು ಗೋವಿಂದಗತಿಕಾರ । ಬಾಲತೃಣವ ಮಂತ್ರಿಸಿಟ್ಟಾ ॥
ಓಲೆಯ ಮರ ಕೆಡೆದಂತೆ ಹೆಬ್ಬಾವುಗ । ಳೀಳುತುರುಳುತಿದ್ದುವಾಗ ॥ ೪೨ ॥

ಇಂದ್ರಾವತಾರ ಚಿತ್ತೈಸೆಂದು ಕೈಮುಗಿ । ದಿಂದ್ರಜಾಲಿಗನು ಮಂತ್ರಿಸಿದಾ ॥
ಇಂದ್ರನೀಲದೊಳು ಮಾಡವನೊಡ್ಡಿ ತಂದು ದೇ । ವೇಂದ್ರನ ತೋರಿದನಲ್ಲಿ ॥ ೪೩ ॥

ಊರ್ವಶಿರಂಭೆಮೇನಕಿಯರ ಶೃಂಗಾರ । ಪೂರ್ವಕವಾಗಿ ತೋರಿದೊಡೆ ॥
ಉರ್ವಿಯ ಜನವರೆಬಾಯ್ದೆರೆದೀಕ್ಷಿಸೆ । ಸಾರ್ವಭೌಮನು ನಸು ನಕ್ಕಾ ॥ ೪೪ ॥

ತಂದ್ರ ತೊಲಗು ತೊಲಗೆಂದು ಬಂದೊಡನೆ ಮ । ಹೇಂದ್ರಜಾಲಿಗನು ಕೈಮುಗಿದು ॥
ಸಾಂದ್ರಸಮುದ್ರವ ತೋರಿದ ಹೊರಗೋಟೆ । ಇಂದ್ರಾದಿದಶದಿಕ್ಕತುಂಬಿ ॥ ೪೫ ॥

ಕೋಟೆಗಡ್ಡಾಗಿ ಬಾನದೊಳೂರ ನಿರ್ಮಿಸಿ । ಕೋಟಿಪಾತ್ರವನಲ್ಲಿ ನೆರಹಿ ॥
ಸಾಟಿಯಿಲ್ಲೆನಿಸಿ ಗಂಧರ್ವನೃತ್ಯವ ಖೇಂದ್ರ । ನಾಟಕ ತೋರಿದನೊಡನೆ ॥ ೪೬ ॥

ಅವರವರಂಗವನರಿದು ವಿದ್ಯಾಧಿಕ । ನಿವಹಕೆ ಸೂರೆಚಾಗವನು ॥
ನವನಿಧಿಯಾಗಿ ಕೊಟ್ಟನು ಕೊಡುವಾಗ ಮ । ತ್ತವನ ಕೈಗೆಡೆತಡೆಯುಂಟೆ ॥ ೪೭ ॥

ಪಟ್ಟಣದೊಳು ಕೇರಿಕೇರಿಗಳೊಳು ರಕ್ಷೆ । ಗಟ್ಟಿದ ತೇಜಿಗಳ್ನೆರೆದು ॥
ಬೆಟ್ಟಬಿರಿವ ವಾದ್ಯವೆಸೆಯೆ ಹಜಾರಕೆ । ಮುಟ್ಟಲೆಯ್ತರುತಿರ್ದುವಾಗ ॥ ೪೮ ॥

ಮುಂದೆ ಪುಷ್ಪಕದಲ್ಲಿ ಗೋಮುಖಯಕ್ಷನು । ಸಂದಣಿವೆತ್ತ ಪತಾಕೆ ॥
ಹಿಂದೆ ತೇಜಿಗಳು ಸಾಲಾಗಿ ಕಡಲ ತೆರೆ । ಯಂದದಿ ಕುಣಿದು ನಡೆದುವು ॥ ೪೯ ॥

ಆಡುವ ನೃತ್ಯವಲ್ಲಲ್ಲಿಗಾರತಿ ಕೂಡೆ । ಕೂಡೆ ಪುಷ್ಪಾಂಜಲಿಯೆಸೆಯೆ ॥
ಪಾಡಿಂದ ನಡೆಸಿ ಪುಷ್ಪಕವನು ನೃಪನೊಳು । ನೋಡಲೆಯ್ದಿದನು ಸನ್ನಿಧಿಗೆ ॥ ೫೦ ॥

ನಿಂದುದು ಪುಷ್ಪಕ ನೃಪನಿದಿರೊಳು ಕೂಡೆ । ನಿಂದುವು ತೇಜಿಗಳ್ಬಳಸಿ ॥
ನಿಂದಲ್ಲಿ ನಿಲ್ಲದೆ ಕುಣಿವುತಿದ್ದುವು ಮಝು । ಚಂದಚಂದದ ವಾದ್ಯಗತಿಗೆ ॥ ೫೧ ॥

ರನ್ನದ ಗಗ್ಗರ ಬಣ್ಣಬಗೆಯ ಜೋಲಿ । ಹೊನ್ನ ಹೂವೆಸೆವ ಬಾಸಿಗದಿ ॥
ಮನ್ನೆಯರೊಡೆಯನ ತೇಜಿಯಿದ್ದುವು ಬೀರ । ಕನ್ನೆಯ ಮದುವೆಯಹಂತೆ ॥ ೫೨ ॥
ಮಂಜು ಮುಸುಕಿದಂತೆ ಝಲ್ಲಿ ಕಡೆಯ ರತ್ನ । ಪುಂಜದ ಬಾಸಿಗದಿಂದ ॥
ರಂಜಿಸುತಿದ್ದುದು ರಾಯನೇರುವ ಪವ । ನಂಜಯವೆಂಬಶ್ವರತ್ನಾ ॥ ೫೩ ॥
ಮಂಗಲ ನೀಲ ಕನ್ನೀಲ ಶ್ರೀವತ್ಸ ಸಾ । ರಂಗ ಕುಂಕುಮ ಬೋರ ಚೀರ ॥
ಕೊಂಗ ಕತ್ತಳ ಮುಂಜ ಮೊದಲಾದ ವರ್ಣಕು । ದ್ಧಾಂಗದಶ್ವಗಳು ಮೆರೆದುವು ॥ ೫೪ ॥
ಮಾಣಿಕ್ಯ ಜಂಬನಿಂದ್ರಾಯುಧ ಪಂಚಕ । ಲ್ಯಾಣ ತಿಲಕ ಮಲ್ಲಿಕಾಕ್ಷ ॥
ಶೋಣ ಮಾದಲ ಗಂಗವಾಣಿ ಮುಂತಾದ ಸಾ । ವ್ರಾಣಿಗಳೆಸೆದುವವರೊಳು ॥ ೫೫ ॥
ಖುರದಿಂದ ನೆಲನ ಹೊಯ್ಯುವು ಘಲಘಲನುಲಿ । ದೆರಡುಕಾಲೆತ್ತಿ ನಿಲ್ಲುವುವು ॥
ಸರಳಿಸಿ ಹತ್ತೆಂಟ ಹಾರಿ ತೇಜಿಗಳು ಭೂ । ವರನಿದಿರರ್ತಿದೋರಿದುವು ॥ ೫೬ ॥
ಸಿಂಗರವಡೆದರಮನೆಯಿಂದ ನೃಪನ ಗಾ । ನಾಂಗನೆಯರು ನಡೆತಂದು ॥
ರಂಗು ಥಾಳಿಪ ರತ್ನದಾರತಿಗಳನು ಯ । ಕ್ಷಂಗೆತ್ತಿದರು ಲೀಲೆಯಿಂದ ॥ ೫೭ ॥
ಘಳಿಲನೆ ಪುಷ್ಪಕ ನಡೆದುದು ಮುಂದಕೆ । ಮೊಳಗುವ ವಾದ್ಯಘೋಷದಲಿ ॥
ಘಲಿಘಲಿಯೆಂಬ ಗಗ್ಗರದಿಂದ ತೇಜಿಗ । ಳ್ಬಳೆದುವದರ ಬಳಿವಿಡಿದು ॥ ೫೮ ॥
ಕುದುರೆಗಳತ್ತ ಲಾಯಕೆ ಸಾರಲೊಡನಿತ್ತ । ಸದೆವ ವಾದ್ಯದ ಗಲಭೆಯೊಳು ॥
ಮದದಾನೆಯೊಡ್ಡು ಸಾರ್ತರುತಿದ್ದುದಾ ರಾಯ । ನಿದಿರಾಗಿ ದೂರದೊಳಾಗ ॥ ೫೯ ॥
ಬೆಟ್ಟಗಳಿಗೆ ಕಾಲು ಬಾಲ ಸೊಂಡಿಲು ದಂತ । ಹುಟ್ಟಿ ನಡೆದು ಬಪ್ಪ ತೆರದಿ ॥
ಕಟ್ಟಾನೆಗಳು ಬರುತಿರ್ದುವು ನಡೆಸೇತು । ಗಟ್ಟಿದರೆಂಬ ರೀತಿಯೊಳು ॥ ೬೦ ॥
ಪಟ್ಟದಾನೆಯ ಮೇಲೆ ಜಿನಬಿಂಬ ಸುತ್ತಣ । ಪುಟ್ಟಪುಟ್ಟಾನೆಯ ಮೇಲೆ ॥
ನೆಟ್ಟನೆತ್ತಿದ ಧ್ವಜ ಚಾಮರ ಛತ್ರ ಸಂ । ಘಟ್ಟದೊಳೊಯ್ಯನೆಯ್ದಿದುವು ॥ ೬೧ ॥
ಪ್ರತಿಮೆಯ ಪಿಡಿದನ್ಯರೇರಬಾರದು ಪ್ರೌಢ । ಕ್ಷಿತಿಪನ ಪಟ್ಟದಾನೆಯನು ॥
ಚತುರಿಂದ ರಂಚಿಕೆಯೊಳು ಜಾರದಂತೆ ನಿ । ರ್ಮಿತಮಾಡಿ ನಡೆಸಿದ ಮಯನು ॥ ೬೨ ॥
ನೊಸಲಗನ್ನಡಿ ಥಣರೆಂಬ ಹೊಕ್ಕುಳ ಘಂಟೆ । ಮಿಸುನಿಬರಹದ ಹಾವರಣಾ ॥
ಬಸಿವ ಗಲ್ಲದ ಮದಧಾರೆಯಿಂದಾನೆಗ । ಳ್ಮಸಗಿ ಬಂದುವು ರಾಯನೆಡೆಗೆ ॥ ೬೩ ॥
ವಿಜಯಪರ್ವತವೆಂಬ ಪಟ್ಟದಾನೆಯ ಮೇಲೆ । ರಜತಾದ್ರಿಯೊಡೆಯನ ಪ್ರತಿಮೆ ॥
ಬಿಜಯಂಗೈಸಿರೆ ಕಾಣಲೊಡನೆ ರಾಯ । ನಿಜಭಕ್ತಿಯಿಂದೆದ್ದು ನಿಂದಾ ॥ ೬೪ ॥
ಕರಿಗಳೆಲ್ಲವು ತಮ್ಮ ಸೊಂಡಿಲನೆತ್ತಿ ಶ್ರೀ । ಕರದಿಂದ ಸೇಸೆಯ ಸೂಸಿ ॥
ಸ್ವರದೋರಿ ಬಲಗಾಲ ದಂತದ ಮೇಲಿಟ್ಟು । ಶಿರಬಾಗಿದುವು ಚಕ್ರಧರಗೆ ॥ ೬೫ ॥

ಅರಸಿಯರೆಲ್ಲರು ಬಾಗಿಲೊಳಗೆ ನಿಂದು । ಪುರುಜಿನಬಿಂಬವ ನೋಡಿ ॥
ಕರಗಳ ಮುಗಿದು ಕಳುಹಿದರಾರತಿಯ ಸೌಂ । ದರಿಯರೆತ್ತಿದರರ್ತಿಯಿಂದ ॥ ೬೬ ॥

ಬೊಗ್ಗನೆ ಗಜಘಟೆ ನೂಂಕಿ ನಡೆದುವತ್ತ । ದಿಗ್ಗಜಘಟೆ ನಡೆವಂತೆ ॥
ಲಗ್ಗೆದೋರಿತು ವಾದ್ಯ ಜಿನನಿಳಯದ ಮುಂದೆ । ಜಗ್ಗಿಸಿ ತೇರೆಳೆವಾಗ ॥ ೬೭ ॥

ತಾರಗೆ ಮುಸುಕಿದ ನಾಲ್ಕುಮೇರುಗಳು ಸಂ । ಚಾರದೋರ್ಪಂತೆ ನಾಲ್ದೆಸೆಗೆ ॥
ಭೂರಿದೀಪಗಳಿಡಿಕಿರಿದಿರ್ದ ನಾಲ್ಕುಹೊಂ । ದೇರು ನಾಲ್ದೆಸೆಗೆ ಹರಿದುವು ॥ ೬೮ ॥

ಸೋಮವೀಥಿಗಳಲ್ಲಿ ಸೂರ್ಯವೀಥಿಗಳಲ್ಲಿ । ಸ್ವಾಮಿಯ ಪ್ರತಿಮೆಯ ಧರಿಸಿ ॥
ಭೂಮಿಯಿಂದಮರಲೋಕವ ಮುಟ್ಟಿ ನಾಲ್ಕುಮ । ಹಾಮೇರುರಥ ಚರಿಸಿದುವು ॥ ೬೯ ॥

ಪಲ್ಲವ ಸತ್ತಿಗೆ ಸುತ್ತ ತೂಗುವ ನಿಡು । ಝುಲ್ಲಿ ಮಾಣಿಕ್ಯದ ಕಲಶಾ ॥
ಅಲ್ಲಾಡಿ ದನಿಮಾಳ್ಪ ಘಂಟೆಪತಾಕೆಯ । ಗೆಲ್ಲದಿ ನಡೆದುವಾ ತೇರು ॥ ೭೦ ॥

ಹರಿದುವು ಮೂರುದಿಕ್ಕಿಗೆ ಮೂರುತೇರುಗ । ಳರರೆ ಮತ್ತೊಂದು ತೇರಾಗ ॥
ಅರಮನೆಯತ್ತ ಹರಿದುದವನೀಶನ । ಹರಸಲರುಹನೆಯ್ದುವಂತೆ ॥ ೭೧ ॥

ಉರಿಬಾಣಚೇಳುಬಾಣಗಳ ಬಿಡುತ ಪಂ । ಪರಿಯಲ್ಲಿ ಪುಷ್ಪಬಾಣಗಳಾ ॥
ಸುರಿವುತ ಬರುತಿರ್ದರರ್ತಿಕಾರರು ತರ । ತರವಿಡಿದಾ ತೇರ ಬಳಸಿ ॥ ೭೨ ॥

ವಾರನಾರಿಯರ ಪಾತ್ರಗಳಿಂದ ಪಾಡಿಂದ । ಭೇರಿಶಂಖದ ಘೋಷದಿಂದ ॥
ತೇರು ತೆರಳಿ ಬಂದು ನಿಂದುದು ಕಡೆಯ ಹ । ಜಾರದ ಮುಂದೆ ಬಿಂಕದೊಳು ॥ ೭೩ ॥

ಮೇಲೆ ಮೆರೆವ ಪಳುಕಿನ ಸಿದ್ಧಬಿಂಬಕೆ । ಭೂಲಲನೇಶ ಕೈಮುಗಿದಾ ॥
ಮೇಲುಮೆಚ್ಚಿನೊಳು ಯಶಸ್ವತಿದೇವಿಯಿ । ರ್ದಾಲಿಸಿ ಭಕ್ತಿಮಾಡಿದಳು ॥ ೭೪ ॥

ಸೊಸೆಯರು ರಚಿಸಿದ ರತ್ನದಾರತಿಗಳ । ಹಸನಾದುವೆಂದೊಲ್ದು ನೋಡಿ ॥
ಒಸೆದು ಕಳುಹಿದಳು ತೇರ ಮೇಲಣ ದೇವ । ಗೆಸಗಿದರುಚಿತದರ್ಚನೆಯಾ ॥ ೭೫ ॥

ತಿರುಗಿತು ತೇರು ಜಿನಾಲಯದತ್ತ ಕೇ । ಸರಿಪೀಠದೊಳು ರಾಯ ಕುಳಿತಾ ॥
ಪುರೆಯಿಟ್ಟುದೊಂದುರಾತ್ರಿಯ ಜಿನಮಹಿಮೆಯೀ । ಪರಿ ನಡೆಯಿತು ನವರಾತ್ರಿ ॥ ೭೬ ॥

ಪಾಡ್ಯದ ದಿನವೊದಲಾಗಿ ನವಮಿ ಮುಟ್ಟ । ಕುಡ್ಯಲಂಘನದಶ್ವ ಮೆರೆದು ॥
ತಾಡ್ಯಮಾನದ ವಾದ್ಯರವ ಮುಣ್ಮೆ ನಡೆದುದು । ಜಾಡ್ಯವಳಿದು ನವರಾತ್ರಿ ॥ ೭೭ ॥

ಒಂದೊಂದು ದಿನಕೆ ಬೇರೊಂದೊಂದು ಪರಿಯ ತೇ । ರೊಂದೊಂದು ಪರಿಯ ವಿದ್ಯಾರ್ಥಾ ॥
ಒಂದೊಂದು ಪರಿಯ ಪ್ರಭಾವನೆಯಿಂದರ್ತಿ । ಸಂದೆಸಗಿತು ಮಹಾನವಮಿ ॥ ೭೮ ॥

ಶಾಂತಿಕದಿಂದ ದಾನಗಳಿಂದ ತ್ಯಾಗ ಭೋ । ಗಾಂತರಾಳದ ಲೀಲೆಯಿಂದ ॥
ಅಂತರಾಯವ ರಾಯನರೆಯಟ್ಟಿ ಮಂತ್ರಿ ಸೇ । ಳ್ದಂತೆ ವರ್ತಿಸಿದನುತ್ಸವವಾ ॥ ೭೯ ॥

ರಾಜರ ರಾಜಮಾನ್ಯಗಳಿಂದ ಸಕಲವಿ । ದ್ಯಾಜನಗಳ ಗೋಷ್ಠಿಯಿಂದ ॥
ಭೂಜನಪುರಜನಪರಿಜನಲಾಲನೆ । ರಾಜಿಸಲರ್ತಿಮಾಡಿದನು ॥ ೮೦ ॥

ನವಮಿಯ ರಾತ್ರಿಯೊಳೋಲಗ ಹರಿವುದೆಂ । ಬವಸರಕೊಂದಿಷ್ಟು ಮುಂಚೆ ॥
ಯುವರಾಜನಾಪ್ತ ಕಂಡನು ಬಂದು ಸಾಷ್ಟಾಂಗ । ದವನತಿಯೊಳು ಕಾಣ್ಕೆಯಿಕ್ಕಿ ॥ ೮೧ ॥

ಕಾಮದೇವನ ಮಂತ್ರಿ ಪ್ರಣಯಚಂದ್ರಮನೆಂಬ । ನಾಮಕೊಪ್ಪುವನು ವಿವೇಕಿ ॥
ಭೂಮೀಶನನುಮತದಿಂದ ಕುಳಿತನು ರಾ । ಜಾಮಾತ್ಯನೊತ್ತಿನೊಳಾಗ ॥ ೮೨ ॥

ಕಿರಿದು ಪ್ರಸಂಗವನತ್ತಿತ್ತ ನುಡಿದಾಡಿ । ಕಿರಿದು ವೇಳೆಯ ನೂಂಕಿ ತನ್ನ ॥
ಕಿರಿಯನ ಸ್ಥಿತಿಯ ಕೇಳುವೆನೆಂದು ರಾಯ ಮ । ತ್ತುರೆ ಮಂತ್ರಿಯತ್ತ ನೋಡಿದನು ॥ ೮೩ ॥

ಏನೈ ಪ್ರಣಯಚಂದ್ರಮ ಬಾಹುಬಲಿ ನಿಚ್ಚ । ಲೇನು ಲೀಲೆಯೊಳಿರುತಿಹನು ॥
ಈ ನಮ್ಮ ಪಯಣವ ಕೇಳ್ದೀನ ನುಡಿದನೆಂ । ದಾ ನರಪತಿ ಕೇಳ್ದನವನಾ ॥ ೮೪ ॥

ಎಂದರಾ ಕ್ಷಣ ಸ್ವಾಮಿ ಮತ್ತೆ ಬಿನ್ನವಿಸುವೆ । ನೆಂದು ಕೈಮುಗಿದೆದ್ದು ನಿಂದಾ ॥
ಕಂದರ್ಪನಿರವನಾ ಚಕ್ರೇಶನಿದಿರೊಳಿಂ । ತೆಂದು ಸೂಚಿಸಿದನಾ ಸಚಿವಾ ॥ ೮೫ ॥

ದೇವರ ಕೃಪೆಯಿಂದ ದೇವರ ಸೋದರ । ಗಾವ ಚಿಂತೆಯು ತೊಡಕಿಲ್ಲ ॥
ಆವಾಗ ಸುಖದೊಳೋಲಾಡುತಿಹನು ಪುರು । ದೇವನಾತ್ಮಜನಲ್ತೆಯೆಂದಾ ॥ ೮೬ ॥

ಕಾವ್ಯನಾಟಕಕಾಮಶಾಸ್ತ್ರದೊಳೊಮ್ಮೊಮ್ಮೆ । ದಿವ್ಯನಾಟ್ಯಾಂಗದೊಳೊಮ್ಮೆ ॥
ನವ್ಯ ಯೌವನೆಯರೋಲಗದೊಳು ನಿಚ್ಚ ಕಾ । ಲವ್ಯಯಗಳ ಮಾಡುತಿಹನು ॥ ೮೭ ॥

ಶೃಂಗಾರವನದಲ್ಲಿ ಕೊಳದಲ್ಲಿ ಹೊನ್ನಮಾ । ಡಂಗಳೊಳರಮನೆಯಲ್ಲಿ ॥
ತಂಗಾಳಿ ತುಂಬಿ ಕೋಗಿಲೆ ಗಿಳಿ ಕೊಳರ್ವಕ್ಕಿ । ಹೆಂಗಳೊಪ್ಪಿರೆ ಹೊತ್ತುಗಳೆವಾ ॥ ೮೮ ॥

ಭೋಗವ ಭೋಗಿಸುತಿಹನಲ್ಲಿ ನೆರೆ ಮಗ್ನ । ನಾಗದೊಂದಿನಿಸಡಿಗಡಿಗೆ ॥
ಯೋಗವನುಜ್ಜುಗಿಸುವನಾತ ಚಕ್ರಿಯೊಂ । ದಾಗಿ ಹುಟ್ಟಿದನಲ್ತೆ ಸ್ವಾಮಿ ॥ ೮೯ ॥

ಇದು ನಮ್ಮ ನೃಪನ ವರ್ತನೆಯದಂತಿರಲಿ ಸಂ । ಪದಿಸೆ ದೇವರ ಪ್ರಯಾಣವನು ॥
ಮದನ ಕೇಳಿದನದು ಸಲುವುದಣ್ಣಾಜಿಯ । ಗಿದಿರಿಲ್ಲ ಧರೆ ಕಾಣ್ಬುದೆಂದಾ ॥ ೯೦ ॥

ದೇವರೊಳಪ್ಪಾಜಿಗರಸರೊಳಣ್ಣಾಜಿ । ಗಾವನ ಸರಿಗಾಣಬಹುದು ॥
ನಾವೆಲ್ಲರವರ ನೆನೆದು ಬಾಳ್ವವೆಂಬನು । ದೇವ ನಿನ್ನನುಜನೆಮ್ಮೊಡನೆ ॥ ೯೧ ॥

ಬಂದು ದೇವರ ಕಂಡು ಬುದ್ಧಿಗಲಿಸಿಕೊಂಬೆ । ನೆಂದೆಮ್ಮ ನೃಪನೊಮ್ಮೆ ಬಗೆದಾ ॥
ಒಂದು ಶಾಸ್ತ್ರವ ಕೇಳ ತೊಡಗಿದ್ದ ಮೊದಲದ । ರಿಂದೆನ್ನನಿಲ್ಲಿಗಟ್ಟಿದನು ॥ ೯೨ ॥

ಹೇಳುವರಾತ್ಮಪ್ರವಾದವ ಮುನಿಗಳು । ಕೇಳುವನೆಮ್ಮವನೀಶಾ ॥
ನಾಳೆನಾಡಿದಿನೊಳು ಮುಗಿವುದಾ ಗ್ರಂಥ ಭೂ । ಪಾಲನಂಶಾಂಬರಭಾನು ॥ ೯೩ ॥

ಇನ್ನೊಂದು ಗೂಢಾರ್ಥವುಂಟೆಂದು ನೃಪತಿಗೆ । ಸನ್ನೆಗಾಣಿಸಿದನಾ ಮಂತ್ರಿ ॥
ಚೆನ್ನಾಯ್ತು ಸಾಕಿನ್ನು ಕುಳಿತುಸುರೆಂದು ರಾ । ಜೋನ್ನತ ಪೇಳೆ ಕುಳಿತನು ॥ ೯೪ ॥

ಗೂಢಾರ್ಥವುಂಟೆಂದು ಮಂತ್ರಿ ಕುಳ್ಳಿರಲಲ್ಲಿ । ಪ್ರೌಢರಿಹರು ಮೂಢರಿಹರೆ ॥
ಪ್ರೌಢಚಕ್ರಿಗೆ ಕೈಯ ಮುಗಿದರೆಲ್ಲರು ತಮ್ಮ । ಪ್ರೌಢಿಗಾಣಿಸಿ ತೊಲಗಿದರು ॥ ೯೫ ॥

ಪ್ರಜೆ ಪರಿವಾರ ಮಂಡಳಿಕ ಸಾಮಂತ ಬ । ಲ್ಯಜದ ಸೂಳೆಯರು ಕೆಳೆಯರು ॥
ಗಜಬಜಿಸುತ ಹರಿದರು ಕಂಡ ಕಡೆಗೆ ಭಾ । ವಜನಣ್ಣನೋಲಗದಿಂದ ॥ ೯೬ ॥

ಆಟಕಾರರು ಕರಣಿಕರು ವಿದ್ವಾಂಸರು । ಕೋಟಿಭಟರು ಲಕ್ಷಭಟರು ॥
ನೋಟಕರೆಲ್ಲರು ಹರಿದರು ನೃಪನ ಸ । ಘಾಟದೋಲಗವ ಕೀರ್ತಿಸುತ ॥ ೯೭ ॥

ಸಾಗಿ ದೂರದೊಳು ಸೇವಕರು ನಿಂದರು ಬುದ್ಧಿ । ಸಾಗರನಿದ್ದನೊತ್ತಿನೊಳು ॥
ಆಗ ರಾಯನ ಕೂಡೆ ಪ್ರಣಯಚಂದ್ರಮಮಂತ್ರಿ । ಕೂಗದೊಯ್ಯೊಯ್ಯನೆ ನುಡಿದಾ ॥ ೯೮ ॥

ಮಾತೇನು ಪೆರತಲ್ಲ ಸ್ವಾಮಿ ಸ್ವಾಮಿಯ ನಿಜ । ಮಾತೆಯ ಲೋಕಮಾತೆಯನು ॥
ತಾತನರ್ಧಾಂಗಿಯ ತಾ ತನ್ನ ಪುರಕಂಗ । ಜಾತನೆಯ್ತಂದೊಯ್ವೆನೆಂದಾ ॥ ೯೯ ॥

ರಾಯ ನೀನಿಳೆಯ ಸಾಧಿಸಿ ಮಗುಳ್ವನ್ನಕ । ಶ್ರೀಯಶಸ್ವತಿಮಹಾಂಬಿಕೆಯಾ ॥
ಕಾಯಜ ತನ್ನ ನಗರಿಗೊಯ್ವೆನೆಂದನು । ತಾಯ ಬಿಟ್ಟಿಹನೆ ಸುಪುತ್ರ ॥ ೧೦೦ ॥

ಘನವಿಲ್ಲ ಶಾಸ್ತ್ರ ನಾಡಿದು ಮುಗಿವುದು ಮರು । ದಿನದೊಳಂಗಜ ತಾನೆ ಬಂದು ॥
ಜನನಿಯ ಬಿಜಯಂಗೈಸುವೆನೆಂಬ ಸೂ । ಚನೆಗೆನ್ನ ಕಳುಹಿದನೆಂದಾ ॥ ೧೦೧ ॥

ಮಗನ ಮನೆಗೆ ತಾಯಿ ಹೋಹರೆ ತಾಯನಾ । ಮಗ ತಾನೆ ಕರೆದೊಯ್ವರಿದಕೆ ॥
ತೆಗೆ ಬಿಗಿಯೇನೆಮ್ಮನೇನ ಕೇಳ್ವುದು ತಾನು । ಮಗ ನಾನು ಮಗನಮ್ಮಗಲ್ತೆ ॥ ೧೦೨ ॥

ಅಮ್ಮಾಜಿ ನನಗೋಜೆ ಕಲಿಸುವರಲ್ಲದೆ । ಅಮ್ಮಗಾನೊಂದ ಸೊಲ್ಲಿಪೆನೆ ॥
ತಮ್ಮಗೇಕೆಣಿಕೆ ತನ್ನಮ್ಮನ ತನ್ನೂರ್ಗೆ । ಸುಮ್ಮನೈದಿಸಲಿ ಹೋಗೆಂದಾ ॥ ೧೦೩ ॥

ಮೊದಲೆ ದೇವರ ತಮ್ಮ ದೇವರಂತಾಡಿದ । ನಿದಕಾರ ಕೇಳಬೇಕೆಂಪು ॥
ಅದು ಮತವಲ್ಲ ಸೂಚಿಸಬೇಕು ವಿಭುವಿಗೆಂ । ದಿದ ಕೂರ್ತು ಬಂದೆ ನಾನೆಂದಾ ॥ ೧೦೪ ॥

ಉತ್ತಮನೈ ನೀನು ಬಿಡದೆಮ್ಮ ಭುಜಬಲಿ । ಯೊತ್ತಿನೊಳಿರು ಮಂತ್ರಿಯೆಂದು ॥
ಉತ್ತಮುದುಡುಗೊರೆಯಿತ್ತು ಬೀಳ್ಕೊಡಲು ಕೈ । ಯೆತ್ತಿ ಮುಗಿದು ಹೋದನವನು ॥ ೧೦೫ ॥

ಅವನತ್ತ ಸಾಗಿದನಾ ರಾಯನೊಡನಿತ್ತ । ಯುವರಾಜನಂತರಂಗವನು ॥
ತವೆ ತನ್ನ ಮನದೊಳಾಲೋಚಿಸಿ ನಸುನಗೆ । ಚವಚವಿಸುತ ಮತ್ತೆ ನುಡಿದಾ ॥ ೧೦೬ ॥

ಬುದ್ಧಿಸಾಗರ ಮಂತ್ರಿ ಕಂಡೆಯ ಭುಜಬಲಿ । ಯುದ್ಧತಿಕೆಯನೆಮ್ಮ ಬಳಿಗೆ ॥
ಶುದ್ಧಚಿತ್ತದೊಳೆಯ್ದಲೊಲ್ಲದೆ ಶಾಸ್ತ್ರದ । ಶುದ್ಧಿಗಾಣಿಸಿ ಬಿಟ್ಟನೆಂದಾ ॥ ೧೦೭ ॥

ದರ್ಪವೈ ಭುಜಬಲಿಗದರ ಮೇಲಿಷ್ಟು ಕಂ । ದರ್ಪನೆಂಬುದು ಹೆಮ್ಮೆ ತನಗೆ ॥
ಆರ್ಪಾಟಿ ತನಗೆಂಬ ಪರಿಯಿದು ಹುಂಡಾವ । ಸರ್ಪಿಣಿಯಲ್ತೆ ಈ ಕಾಲಾ ॥ ೧೦೮ ॥
ಬಣ್ಣಿಸಿ ಪ್ರಣಯಚಂದ್ರಮ ಪೇಳಿದೆಲ್ಲವು । ಬಣ್ಣಗಾರಿಕೆಯ ಪ್ರೇಮೋಕ್ತಿ ॥
ಅಣ್ಣನೆಂದೆನಗೆ ದೋರ್ಬಲಿ ಭಕ್ತಿಮಾಡನು । ತಣ್ಣಗಿರಲಿ ನನಗೇನು ॥ ೧೦೯ ॥
ಇವನಿಷ್ಟು ಯುವರಾಜನೆಂಬ ಗರ್ವದೊಳಿರ । ಲಿವನಿಂದ ನೇರ್ಗಿರಿಯುವರು ॥
ರವಿಯ ಕಂಡುತ್ಪಲದಂತೋರೆಯಾಗಿಹ । ರಿವರಿಗೂ ದುಗುಡವೆಮ್ಮೊಡನೆ ॥ ೧೧೦ ॥
ಅವಮ್ಮಾಜಿಯರೊಳಗಪ್ಪಾಜಿಯರೊಳಗೆಮ್ಮ । ತಮ್ಮಂದಿರಿಗೆ ಮಹಾಭಕ್ತಿ ॥
ನಮ್ಮ ಕಂಡರೆ ತಮಗರಸ ವಿರಸ ಪರ । ಬೊಮ್ಮಸುತರ್ಗಿದು ನಡೆಯೆ ॥ ೧೧೧ ॥
ನಾನಿವರೊಳಗೆ ವಿನಯವ ನೆನೆವೆನು ತಾ । ವೇನೂ ನನ್ನೊಳು ಪೆರತಿಹರು ॥
ಏನ ಮಾಡಿದೆನು ನಾನಿವರ್ಗಿಷ್ಟು ನೋವಾಗ । ನೀನರಿಯೆಯ ಹೇಳು ಮಂತ್ರಿ ॥ ೧೧೨ ॥
ಜಿನನಾಣೆ ಗಡ ನಿನ್ನೊಳಿಂದು ನುಡಿದೆನ್ನೈಸೆ । ಇನಿಬರ ಚೇಷ್ಟೆಯನೆನ್ನ ॥
ಜನನಿಯರಿದರೆ ನೊಂದಹಳೆಂದು ಮಾಜಿಕೊಂ । ಡನುಜರೊಳ್ಪಿದರೆನುತಿಹೆನು ॥ ೧೧೩ ॥
ಮುನಿಗಳಾದರುವರೆನಗೆ ತಕ್ಕ ಸೋದರ । ರೆನಗೀಗ ಗುರುವಾದರವರು ॥
ಅನುಮಾನವದು ಸಾಕು ನೋಡುನೋಡಿವರು ನ । ನ್ನನುಜರೊ ದನುಜರೊಯೆಂದಾ ॥ ೧೧೪ ॥
ಕಿರಿಯರವರು ಸ್ವಾಮಿ ಸೈರಿಸು ನಿನಗಾದ । ಕೊರತೆಯೇನಿದರಿಂದ ಚಕ್ರಿ ॥
ಅರಿಯರವರು ದೇವ ನಿನ್ನೊಳು ಪುದುವಾಳ್ದು । ಮೆರೆವವರ್ಗತಿಪುಣ್ಯ ಬೇಕು ॥ ೧೧೫ ॥
ಮೂರುಲೋಕದ ಜಾಣರೆಲ್ಲರು ನಿನ್ನ ಬ । ಲ್ಗಾರಿಕೆಗರ್ತಿಮಾಡುವರು ॥
ಆರುಕಡಮೆನೂರುಮಂದಿ ಸೋದರರಡ್ಡ । ಮೋರೆಯೊಳಿರಲಿದ್ದರೇನು ॥ ೧೧೬ ॥
ನಿನ್ನ ನುಡಿಯೆ ಸಾಕು ಜಗವೆಲ್ಲ ಭಾಸ್ಕರ । ನುನ್ನತಿಗರ್ತಿಮಾಡುವುದು ॥
ಕನ್ನೈದಿಲಡ್ಡಮೋರೆಯೊಳಿರುವುದರಿಂದ । ಬನ್ನವುಂಟೆ ಪ್ರಭಾಕರಗೆ ॥ ೧೧೭ ॥
ಅದು ತಾಸುವಲ್ಲ ನಿನ್ನನುಜರಾ ಪಾಟಿಯು । ಮದಮುಖರಲ್ಲಾನು ಬಲ್ಲೆ ॥
ಬೆದರುವರರಸ ನಿನ್ನೊತ್ತಿಗೆ ಬಹುದಕೆ । ಸದರವೆ ನಿನ್ನ ಗಂಭೀರಾ ॥ ೧೧೮ ॥
ನೀನೊಬ್ಬನೀ ಸಿರಿಯಿಾ ಪ್ರಾಯದೊಳು ಜಯ । ಮಾನಗಂಭೀರದೊಳ್ನಡೆದೆ ॥
ಈ ನಡೆ ನಿನ್ನನುಜರಿಗಿನ್ನು ಬಂದುದಿ । ಲ್ಲಾ ನೃಪರದಕೆ ನಾಣ್ಚಿಹರು ॥ ೧೧೯ ॥
ಚಿಕ್ಕವರಲ್ಲವೆ ನಿನ್ನನುಜರಿಗಿನ್ನು । ಮಕ್ಕಳಾಟಿಕೆ ಕಿರಿದುಂಟು ॥
ಚಿಕ್ಕಣ್ಣಗಂಜದೆಯ್ದುವರು ದೊಡ್ಡಣ್ಣನ । ದಿಕ್ಕೆಂದರಿಷ್ಟು ಯೋಚಿಪರು ॥ ೧೨೦ ॥
ಚಚ್ಚಹುಚ್ಚಗೆ ನಡೆದರು ಭುಜಬಲಿರಾಜ । ಮೆಚ್ಚುವನದಕಂಜರವರು ॥
ಹುಚ್ಚುನಡೆಗೆ ನೀನು ಮೆಚ್ಚೆಯೆಂದವರೆಲ್ಲ । ಬೆಚ್ಚಿ ದೂರದೊಳಿರುತಿಹರು ॥ ೧೨೧ ॥

ತಮ್ಮ ನಡೆಗೆ ತಾವು ನಾಣ್ಚಿಹರಲ್ಲದೆ । ಹೆಮ್ಮೆಯೊಳಿದ್ದವರಲ್ಲ ॥
ತಮ್ಮ ತಾವೇ ನಾಳೆ ಬಂದೆರಗುವರೆಂದು । ಕಮ್ಮನೆ ನುಡಿದನಾ ಮಂತ್ರಿ ॥ ೧೨ ॥
ತೊಡಹಗಾರಿಕೆಯೊಳಾ ಮಂತ್ರಿಯಾಡಿದ ಮಾತಿ । ಗೊಡನಹುದಹುದೆಂದ ನಗುತ ॥
ಒಡಹುಹುಟ್ಟಿಸದ ಬಾಂಧವ ತಂತ್ರಿಯೆಂದದ । ನುಡಿಯದೆ ಮೆಚ್ಚಿದನೊಳಗೆ ॥ ೧೩ ॥

ಅರೆಯಿರುಳಿನ ಸನ್ನೆಯಾಯ್ತಾಗ ಜಿನಸಿದ್ಧ । ಶರಣೆನುತವನೀಶನೆದ್ದಾ ॥
ವರಮಂತ್ರಿ ಸೇವಕರೊಡಗೂಡಿ ಶಸ್ತ್ರಮಂ । ದಿರಕೆ ಬಂದನು ಗಮಕದೊಳು ॥ ೧೪ ॥
ಬಲು ತೆರಪಿನ ಶಸ್ತ್ರಶಾಲೆಯೊಳೊರೆಯುಚ್ಚಿ । ದಲಗುಗಳೆಲ್ಲ ಸಾಲಾಗಿ ॥
ಬಲಿಪುಷ್ಪಗಂಧ ಮುಂತಾದ ಪೂಜೆಯೊಳು ವೆ । ಗ್ಗಳಿಸುತಿದ್ದುವು ವೀರರಸವಾ ॥ ೧೫ ॥
ರಕ್ತಚಂದನದಲ್ಲಿ ಸಾರಣೆ ಕಾರಣೆ । ರಕ್ತಚಂದ್ರಿಕೆಯ ಮೇಲ್ಗಟ್ಟು ॥
ರಕ್ತವರ್ಣದ ಪುಷ್ಪಮಾಲೆಯಿಂದಾ ಶಾಲೆ । ಯುಕ್ತಿಗೊಪ್ಪಿತು ಸಂಜೆಯಾಯ್ತು ॥ ೧೬ ॥
ಪಂಚವರ್ಣದ ಕೂಳರಾಶಿ ಖಜ್ಜಾಯದ । ಕೆಂಚಕರಿಕಿನಿಡುಗುಡ್ಡೆ ॥
ಅಂಚಿನೊಳುರಿವ ತುಪ್ಪಗಳ ಹೆಜ್ಜೊಡರಿಂದ । ಸಂಚಿಸಿದ್ದುದು ಶಸ್ತ್ರಪೂಜೆ ॥ ೧೭ ॥
ಹುಗ್ಗಿ ಕಿಚ್ಚಡಿಯೆರೆಯುಪ್ಪ ಸೇವಗೆ ಹಿಂಡಿ । ಗುಗ್ಗರಿ ಸೂಸಲುಂಡಲಿಗೆ ॥
ಬೊಗ್ಗದ್ದ ರೊಟ್ಟಿಯಿಡ್ಡಲಿಗೆ ದೋಸೆಯ ಸಬ್ಬ । ಲಗ್ಗೆಯಾಹುತಿಯೊಪ್ಪಿತಲ್ಲಿ ॥ ೧೮ ॥
ಚುರಚುರನುರಿವ ಹೆಜ್ಜೊಡರು ಚೀರ್ಚಿಟಲೆಂಬ । ತರಿಗೆಂಡಗಳ ಹೋಮಕುಂಡಾ ॥
ತರಿದೊಡೆದೊಟ್ಟಿದ ಕಬ್ಬು ತೆಂಗಾಯಿಂದ । ಮೆರೆವುತಿದ್ದುದು ಖಡ್ಗಪೂಜೆ ॥ ೧೯ ॥
ಹೊಗೆಯೇಳ್ವ ಧೂಪ ಹೊಂಗಿಡಿಗೆದರುವ ದೀಪ । ಬಗೆಬಗೆವಣ್ಣದ ಪುಷ್ಪಾ ॥
ಚಿಗುರೆಲೆ ಕೆಂಗೂಳು ಪಣ್ಕಾಯ ಮೆದೆಯಿಂದ । ದಿಗುಬಲಿಗೊಟ್ಟಿರ್ದುದಲ್ಲಿ ॥ ೨೦ ॥
ಅಲತಿಗೆರಸದಲ್ಲಿ ಕಲಸುಗೊಳ್ಗಟ್ಟಿ ಗೂ । ಳೊಲೆದುರಿ ನಿಮಿರ್ವ ಧೂಪಘಟಾ ॥
ಮಿಳಿಮಿಳಿಸುವ ಸಾಲುಗೈದಿಂದ ರಕ್ಕಸ । ವೊಳಲಂತೆ ಮೆರೆದುದಾ ಸದನಾ ॥ ೨೧ ॥
ಭಲ್ಲೆಯ ಕತ್ತಿ ಕಠಾರಿ ಮುಷ್ಟಿಡಿ ವಂಕಿ । ಸಲ್ಲೆಹ ಗದೆ ಲೌಡಿ ಸಬಳಾ ॥
ಬಿಲ್ಲಂಬು ಜವದಾಡೆ ಕಿರಿಸೆಗಳಾ ಗೃಹ । ದಲ್ಲಿದ್ದವುರಿಮಾರಿಯಂತೆ ॥ ೨೨ ॥
ಖಂಡೆಯ ಪೆಟಲಿಟ್ಟ ಗದೆ ಚಂದ್ರಹಾಸ ವಿ । ಚಂಡಿ ಮೊಗ್ಗರಣೆ ಕೃಪಾಣಾ ॥
ದಂಡರತ್ನಾಯುಧಾವಳಿಗಳಿದ್ದುವು ಸರ್ಪ । ಮಂಡಲವೆನೆ ಭುಗಿಲಿಡುತ ॥ ೨೩ ॥
ಸುರಗಿ ಕರಾಚೂರಿ ಕಡಿತಲೆ ಪಟ್ಟಿಸ । ಪರಶು ಕೊಡಲಿ ಶಕ್ತಿ ಡಾಣೆ ॥
ಸಿರಿಮುರಿ ಕಕ್ಕಡೆ ಚುಂಚುಲೆ ರವಿಹಾಸ । ಉರಿಯುನುಗುಳುತಿರ್ದುವಲ್ಲಿ ॥ ೨೪ ॥
ಎಂದಿಗೀ ದೊರೆ ದಂಡುನಡೆವನೊ ರಿಪುಗಳ । ತಿಂದು ತೇಗುವೆನೆಂದು ಮೃತ್ಯು ॥
ಇಂದೆ ನಾಲಗೆ ನೀಡಿದಂತಿರ್ದುದಲ್ಲಿ ಸಾ । ನಂದಕವೆಂಬಸಿರತ್ನಾ ॥ ೨೫ ॥

ಕಾಲನ ದಾಡೆಗಳಂತೆ ಕರಾಳಖ । ಡ್ಗಾಳಿಗಳಿರೆ ಮತ್ತೆ ನಡುವೆ ॥
ಜ್ವಾಲಾರ್ಕನಂತೆಸೆದುದು ಚಕ್ರರತ್ನ ಭೂ । ಪಾಲ ನೋಡಿದನದ ನಿಂದು ॥ ೧೩೬ ॥
ಚಕ್ರಿ ಬಿನ್ನಹವಿಂದು ಮುಟ್ಟಿ ಸಂಭ್ರಮದಲ್ಲಿ । ಚಕ್ರರತ್ನದ ಪೂಜೆಯಾಯ್ತು ॥
ವಿಕ್ರಾಂತಲಗ್ನದೊಳಗೆ ನಾಳೆ ಪಯಣ ಯ । ಥಾಕ್ರಮವೆಂದನಾ ಮಂತ್ರಿ ॥ ೧೩೭ ॥
ಆ ನುಡಿಗೇಳುತ ನೃಪತಿ ಚಕ್ರದ ಮೇಲೆ । ತಾನೊಂದು ಕಮಲವನಿಟ್ಟಾ ॥
ಭಾನುವಿಗಬ್ಜ ಸಾರ್ದುದು ದೇವ ನಿನಗಿದು । ತಾನೆ ಲೇಸಿಹ ಚಿಹ್ನವೆಂದಾ ॥ ೧೩೮ ॥
ಧಾತ್ರೀಶನಲ್ಲಿಂದ ಮುಗುಳ್ದನಾ ಮಂತ್ರಿಯು । ನೇತ್ರಲೀಲೆಯೊಳು ಬೀಳ್ಕೊಟ್ಟಾ ॥
ಸೂತ್ರಿಸಿ ತನ್ನರಮನೆವೊಕ್ಕನಿದು **ನವ** । **ರಾತ್ರಿಯ ಸಂಧಿ** ಸುಗಂಧಿ ॥ ೧೩೯ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜ ನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೪೦ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವ್ವೆದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೪೧ ॥
ಅಧಿಕಕಧಿಕನೆ ಮತ್ತಮುಲತ್ವಕಮಲನೆ । ಮಧುರಕತ್ಯಂತಮಧುರನೆ ॥
ಸುಧೆಯ ಸೂಸುತ ನನ್ನ ಹೃದಯದೊಳಿರು ಸುಖ । ನಿಧಿಯೆ ಚಿದಂಬರಪುರುಷಾ ॥ ೧೪೨ ॥

ನವರಾತ್ರಿಸಂಧಿ ಸಂಪೂರ್ಣಂ

## ಪಟ್ಟಣಪಯಣದ ಸಂಧಿ.

ಕಾಣುತರಿವುತ ಮೃಗವಸಣಿಗೆಯೊಳಿಹ । ಮಾಣಿಕ್ಯಮುಕುರವೆ ಸ್ವಾಮಿ ॥
ಕಾಣಿಸು ನನಗೆ ಸನ್ಮತಿದೋರು ನಿತ್ಯ ಕ । ಲ್ಯಾಣಾ ನಿರಂಜನಸಿದ್ಧಾ ॥ ೧ ॥

ಉತ್ತಮಲಗ್ನದೊಳಗೆ ದಶಮಿಯೊಳು ರಾ । ಜೋತ್ತಮ ಶೃಂಗಾರವಾಗಿ ॥
ಉತ್ತುಂಗದಿಗ್ವಿಜಯಕೆ ಪೊರಮಟ್ಟ ಸಂ । ಪತ್ತನವೇನ ಬಣ್ಣಿಪೆನು ॥ ೨ ॥
ರಾಯವಿಬಾಡ ರಾಜಾದಿತ್ಯ ಮಲೆವರಿ । ರಾಯದಲ್ಲಣ ರಿಪುಮಥನಾ ॥
ಪಾಯವಧಾರು ಜತನ ಜಯಯೆನೆ ತನ್ನ । ತಾಯರಮನೆಗೆ ನಡೆದನು ॥ ೩ ॥
ಬರುತಿಹ ಮಗನ ಸೌಭಾಗ್ಯವ ತಾಯಿ ತ । ನ್ನೆರಡುಕಣ್ತಣಿವಂತೆ ನೋಡಿ ॥
ಹರುಷವೇರಿದಳು ಸಂಪೂರ್ಣಚಂದ್ರನ ಕಂಡು । ಶರನಿಧಿ ಹೆಚ್ಚುವಂದದೊಳು ॥ ೪ ॥
ಸಕಲವಿಲಾಸಿನಿಯರ ನಟ್ಟನಡುವೆ ಮಾ । ಣಿಕದ ದೇವತೆಯಂತೆ ಮೆರೆವ ॥
ಅಕಳಂಕಚರಿತೆಗಂಬಿಕೆಗೆ ಷಟ್ಖಂಡನಾ । ಯಕನೆರಗಿದ ಕಾಣ್ಕೆಯಿಕ್ಕಿ ॥ ೫ ॥
ಘನದ ಸಮುದ್ರಾಂತಧರೆಯ ಲೀಲಾಮಾತ್ರ । ದನುವಿಂದ ಜಯಿಸೆನ್ನ ಕಂದಾ ॥
ಜಿನಭಕ್ತಿಯಲ್ಲಿ ಭೋಗದೊಳಿಂದ್ರನಾಗೆಂದು । ಜನನಿ ಹರಸಿದಳು ಮಗನಾ ॥ ೬ ॥
ಪಯಣವೆ ದೊಡ್ಡಣ್ಣಗಿಂದೆಂದು ಕೇಳ್ದಳೋ । ಜೆಯೊಳಾತ್ಮಸುತನನಾ ತಾಯಿ ॥
ನಯನಲೀಲಾರ್ಥ ರಾಜ್ಯದೋಳಾಡಿ ಬಂದು ನಿ । ಮ್ಮಯ ಪಾದಗಳ ಕಾಣ್ಬೆನೆಂದಾ ॥ ೭ ॥
ಭುಜಬಲಿ ನಾಡಿದಿಲ್ಲಿಗೆ ಬಂದು ದೇವರ । ಬಿಜಯಂಗೈಸುವೆನೆಂದು ॥
ರಜನಿಯೊಳೆನಗೆ ಸೂಚಿಸಿ ಕಳುಹಿದನದು । ಸುಜನತ್ವ ಲೇಸೆಂದೆ ತಾಯೆ ॥ ೮ ॥
ಅಮ್ಮ ನೋಡಂಗಜನೊಂದು ವಿವೇಕವ । ಸುಮ್ಮನೆ ನಾನಯ್ದೆ ನೀವು ॥
ಬಿಮ್ಮನಿಲ್ಲಿರಬಾರದೆಂದೊಯ್ವೆನೆಂದನು । ತಮ್ಮನೇನೆನಗಣ್ಣನೆಂದಾ ॥ ೯ ॥
ನಾನಿಲ್ಲದಾಗ ನೀವಿಲ್ಲಿಹುದುಚಿತವೆ । ಮೀನಾಂಕನಾಲಯದಲ್ಲಿ ॥
ಆನಂದದಲ್ಲಿರಿ ಧರೆಯ ಸಾಧಿಸಿ ಬೇಗ । ನಾನೆಯ್ದಲೊಡನೆ ಚಿತ್ತೈಸಿ ॥ ೧೦ ॥
ಅದು ಸಾಕು ಮುಂದಣುಪಾಯವನೆನಗೆ ಭಾ । ವದಿ ಬುದ್ಧಿಗಲಿಸಬೇಕೆಂದಾ ॥
ಅದ ಕೇಳುತಾ ದೇವಿ ನಸುನಕ್ಕು ನುಡಿದಳು । ಮುದದಿಂದ ತನ್ನ ಪುತ್ರನೊಳು ॥ ೧೧ ॥
ಮಗನೆ ನಿನಗೆ ನಾನು ಬುದ್ಧಿವೇಳ್ವವಳೆ ನೀ । ನೊಗುಮಿಗೆ ಕೇಳಿ ನಡೆವನೆ ॥
ಜಗಕೆ ನೀನುರೆ ಬುದ್ಧಿಗಲಿಸುವೆ ಸಾಕು ಸು । ಮ್ಮಗೆ ಹೋಗು ಜಯಿಸು ಧಾರಿಣಿಯಾ ॥ ೧೨ ॥
ಹೇಳಬೇಕಹುದಣ್ಣ ಮಗಗೆ ಬುದ್ಧಿಯ ತಾಯಿ । ಖೂಳತನದಿ ನಡೆವವಗೆ ॥
ಪಾಲ ಹಿಡಿವ ಹಂಸದಂತೆ ನಡೆವಗೇನ । ಹೇಳುವೆನಿನ್ನು ಬುದ್ಧಿಯನು ॥ ೧೩ ॥

ಹೆತ್ತ ತಾಯೆಂಬುದಕಾಗಿ ಕೇಳಿದೆಯಹು । ದುತ್ತಮಿಕೆಯ ನೀನು ಮೆರೆದೆ ॥
ಮುತ್ತಯ್ಯಗೋಜೆದೋರ್ಪುದು ನಿನ್ನ ನಡೆ ನನ್ನ । ಚಿತ್ತ ಮೆಚ್ಚಿಹುದು ದೊಡ್ಡಣ್ಣಾ ॥ ೧೪ ॥
ಅರಸಣ್ಣ ನೀನದರಿಂದೆನ್ನ ಕೇಳದಿ । ರರಿಗಳ ಗೆಲು ಚಕ್ರದಣ್ಣಾ ॥
ಭರತಣ್ಣ ಸುಖದಲ್ಲಿ ತನ್ನೂರ್ಗೆ ಬಾರೆಂದು । ವರವಾತೆ ನುಡಿದಳಾತ್ಮಜಗೆ ॥ ೧೫ ॥
ಅಹುದೆ ದೇವರ ಚಿತ್ತದೊಳಗೆನ್ನ ಮನದಲ್ಲಿ । ಸಹಜಸುಬುದ್ಧಿಯುಂಟೆಂದು ॥
ಬಹಳನಿಶ್ಚಯವುಂಟೆ ಉಂಟುಂಟು ಮಗನೆ ಸ । ನ್ನಹವೆತ್ತು ನಡೆಯೆಂದಳೊಸೆದು ॥ ೧೬ ॥
ಎಂದರೆ ಲೇಸೆಂದು ಜನನಿಯ ಚರಣಾರ । ವಿಂದಗಳಿಗೆ ನಮಿಸಿದನು ॥
ಚಂದದಿಂದೆದ್ದಾಕೆ ಮುತ್ತಿನಕ್ಷತೆಯನಾ । ನಂದದಿಂದಿಟ್ಟಳಾತ್ಮಜಗೆ ॥ ೧೭ ॥
ತಕ್ಕೈಸಿಕೊಂಡು ತೂಪಿರಿದಳು ಹರಸಿದ । ಳಕ್ಕರಿಂ ಮೊಗವ ನೋಡಿದಳು ॥
ನಕ್ಕಳು ಮಗನೆ ತಾಮಸವಾಡಬೇಡ ನ । ನ್ನಿಕ್ಕೆಗೆಯ್ದೆಂದಳು ಬೇಗ ॥ ೧೮ ॥
ಆನೆಕುದುರೆಯ ಕಾಲಿಗೆ ಮುಳ್ಳು ತಾಗದೆ । ಮಾನವೇಂದ್ರರ ನಿನ್ನ ಕಾಲ್ಗೆ ॥
ಆನತಗೈಸಿಕೊಂಡೆನ್ನೂರ್ಗೆ ಬಾರೆಂದು । ಸೂನುವ ಬೀಳ್ಕೊಟ್ಟಳೊಡನೆ ॥ ೧೯ ॥

ಜನನಿಯ ಹರಕೆಯ ಕೈಕೊಂಡು ಜಿನಸಿದ್ಧ । ಎನುತ ರಾಜೇಂದ್ರ ನಡೆದನು ॥
ಅನಿತರೊಳಗೆ ಸೊಸೆಯರು ಬಂದರತ್ತೆಗೆ । ವಿನಮಿಸಿ ಬೀಳ್ಕೊಂಬೆವೆಂದು ॥ ೨೦ ॥
ಶೃಂಗಾರವಡೆದು ಮಹಾನಂದದಿಂದ ರಾ । ಜಾಂಗನೆಯರು ನಡೆತಂದು ॥
ಪಂಗಪಂಗಡದಲ್ಲಿ ಪತಿಯ ಪೆತ್ತಳ ಚರ । ಣಂಗಳಿಗೆರಗಿದರೆಲ್ಲ ॥ ೨೧ ॥
ಬನ್ನವೆಂಬುದ ನಿಮ್ಮ ಕನಸಿನೊಳಗೆ ಕಾಣ । ದೆನ್ನನುಜನ ಸುತೆಯರಿರ ॥
ನನ್ನಣುಗನ ಕೂಡೆ ಲೀಲೆಯೊಳೋಲಾಡಿ । ಬನ್ನಿರೆಂದುರೆ ಹರಸಿದಳು ॥ ೨೨ ॥
ಬುದ್ಧಿಯೇನತ್ತ್ಯಮ್ಮ ನವಗೆಂದರವರು ಸು । ಬುದ್ಧಿಕಾರನ ಸತಿಯರಿಗೆ ॥
ಬುದ್ಧಿಯು ಬೇರೇನ ಪೇಳ್ವೆನೆಂದಾಕೆ ವಿ । ಶುದ್ಧ ಚಿತ್ತದೊಳು ನುಡಿದಳು ॥ ೨೩ ॥
ನಿಮ್ಮರಸನ ಜಾಣ್ಮೆ ತೊಳೆದು ಲೋಕದ ಜಿಡ್ಡ । ಕವ್ಮನೆ ಮಾಡುತಿದ್ದಪುದು ॥
ನಮ್ಮನಿನ್ನೇನ ಕೇಳ್ವುದು ನಿಮ್ಮ ಪತಿವೇಳ್ದ । ಸೊಮ್ಮಿನೊಳಿಹುದದೆ ಬುದ್ಧಿ ॥ ೨೪ ॥
ನೀವು ಜಾಡ್ಯೆಯರಲ್ಲ ಮತ್ಸರ ನಿಮ್ಮೊಳಿ । ಲ್ಲಾವುದಿನ್ನುಸುರುವ ಬುದ್ಧಿ ॥
ಆವ ಚಿಂತೆಯು ನನಗಿಲ್ಲಡಿಯಿಡಿಯೆಂದ । ಳಾ ವನಿತೆಯರರ್ತಿವಡಲು ॥ ೨೫ ॥
ಅತ್ತ್ಯಮ್ಮನಡಿಗಳ ಕಾಣ್ಬತನಕ ವ್ರತ । ಕೃತ್ಯವೊಂದೊಂದು ಬೇಕೆಂದು ॥
ಸತ್ಯಕಾಂತೆಯರೆಲ್ಲ ತವೊಮ್ಮೊಳಾಲೋಚಿಸಿ । ವೃತ್ತ್ಯನುಮತದಿ ಮಾಡಿದರು ॥ ೨೬ ॥
ಉಂಬ ರಸಗಳಲ್ಲಿ ಮುಡಿವ ಪುಷ್ಪಗಳಲ್ಲಿ । ತಂಬುಲದುಗುಲಗಳಲ್ಲಿ ॥
ಇಂಬರಿದೊಬ್ಬೊಬ್ಬರೊಂದೊಂದ ತೊರೆದರೇ । ನೆಂಬೆನವರ ಭಕ್ತಿರಸವಾ ॥ ೨೭ ॥

ಮಲ್ಲಿಗೆಯನು ಸೂಡೆನೆಂದಳೊಬ್ಬಳು ಜಾಜಿ । ಯೊಲ್ಲೆನೆಂದೊರ್ವಳಾಡಿದಳು ॥
ಮೊಲ್ಲೆ ಬೇಡೆನಗೆಂದಳೊರ್ವಳತ್ತ್ಯವ್ಮನ । ಮೆಲ್ಲಡಿಗಳ ಕಾಣ್ಬ ತನಕ ॥ ೨೮ ॥
ಚಿಲುಪಾಲು ವ್ರತವೆಂದಳೊರ್ವಳು ಪೇಣಿಯು । ಮೆಲಲೊಲ್ಲೆನೆಂದಳೊರ್ವಬಲೆ ॥
ಎಳೆಯೆಲ್ಲ ವ್ರತವೆಂದಳೊರ್ವಳತ್ತ್ಯವ್ಮನ । ತಳಿರಡಿಗಳ ಕಾಣ್ಬತನಕ ॥ ೨೯ ॥
ಗೋರೋಚನವ ತೊರೆದಳೊರ್ವ ರಮಣಿ ಕ । ಸ್ತೂರಿಯ ತೊರೆದಳೊರ್ವರಸಿ ॥
ದೋರಿಯ ಪಟ್ಟೆಯ ತೊರೆದಳೊರ್ವಳು ಹೊಸ । ಸೀರೆಯ ತೊರೆದಳೊರ್ವಬಲೆ ॥ ೩೦ ॥
ಕೈರಗುಳಿಗೆ ನೊರೆಯಡಕೆ ಮುತ್ತಿನ ಸುಣ್ಣ । ನೇರದ ಚವರಿ ಮುಂತಾದ ॥
ಭೂರಿಯೊಳೆನಗಿದು ತನಗಿದೆಂದೆಲ್ಲರು । ಕೋರಿಟ್ಟು ವ್ರತವ ಮಾಡಿದರು ॥ ೩೧ ॥
ಪರರಾಜ್ಯಕೆಯ್ದುತಿದ್ದಪಿರಿ ಪೆಂಗಳಿರ ಸಂ । ಚರವ್ರತ ಬೇಡೆಂದಳತ್ತೆ ॥
ಭರತೋರ್ವಿ ನಮ್ಮದು ಪರರಾಜ್ಯಕೆಯ್ದೆವೆಂ । ದೊರೆದೆಲ್ಲ ವ್ರತವ ತಾಳಿದರು ॥ ೩೨ ॥
ಬಗೆ ಮೆಚ್ಚಿ ಮತ್ತೆ ತಮ್ಮತ್ತೆಗೆರಗಿಯಾಕೆ । ತೆಗೆದಿಟ್ಟ ಸೇಸೆಯನಾಂತು ॥
ದುಗುಡದಿ ಬಾಳ್ವ ಗೃಹಸ್ಥರ ಬಾಳ್ಕೆಯ । ನಗುವಂತೆ ನಗುತ ನಡೆದರು ॥ ೩೩ ॥
ಹೋರಿ ಶಪಿಸಿ ನಿಚ್ಚ ಸವತಿಮತ್ಸರದಿ ಕ । ಣ್ಣೀರಿಕ್ಕಿ ಬಾಳ್ವರ ಬದುಕು ॥
ನಾರಕರಿರವೆಂದು ತೋರಿ ನಡೆದರು ಮ । ಹಾರಾಜಲಲನೆಯರೊಸೆದು ॥ ೩೪ ॥
ಕನಕಪಲ್ಲಕ್ಕಿಯ ಪನ್ನಂಗದೊಳು ರಾಜ । ವನಿತೆಯರೆಲ್ಲರೆಯ್ದಿದರು ॥
ಕನಕದಂಡಿಗೆಯಲ್ಲಿ ದೊರೆಪಾಟಿಯೂಳಿಗ । ದನುಭವಾಂಗಿಯರು ಸಾಗಿದರು ॥ ೩೫ ॥
ಸಾಮಾನ್ಯಸೇವಕಿಯರು ಬೆಳ್ಳಿಯಣಸಿನ । ನಾಮದಂಡಿಗೆಯೊಳೆಯ್ದಿದರು ॥
ಏ ಮಾತೊ ಹೊಳೆವ ಗೋಳಿಗೆಯನಡರಿ ಮಿಕ್ಕ । ಸ್ತ್ರೀಮಸೇವಕಿಯರೆಯ್ದಿದರು ॥ ೩೬ ॥
ಇಟ್ಟಣಿಸಿದ ಸತಿಯರ ಬಳಸಿನೊಳಳ । ವಟ್ಟೊಂದು ಹೊನ್ನರಥದೊಳು ॥
ಕಟ್ಟುಮೆಚ್ಚಿನೊಳರ್ಕಕೀರ್ತಿಕುಮಾರನ । ತೊಟ್ಟಲೆಯ್ತರುತಿರ್ದುದಾಗ ॥ ೩೭ ॥
ಕೂಪ ನಂಬುಗೆವಂದರೆನಲಣ್ಣಗಳ ನಾಮ । ಕಾಪುಗೊಂಡವರು ರಾಣಿಯರಾ ॥
ಆ ಪುರದ್ವಾರದತ್ತೆಯ್ದುಸುತಿರಲಿತ್ತ । ಭೂಪ ನಡೆದ ಜಿನಗೃಹಕೆ ॥ ೩೮ ॥

ಅನುಕೂಲನಾಗರದಕ್ಷಿಣ ಮೊದಲಾದ । ಬಿನದದ ಕೆಳೆಯರೊಗ್ಗಿನೊಳು ॥
ಜಿನಗೇಹಕಡಿಯಿಟ್ಟ ಮಂತ್ರಿವೆರಸು ಮಣಿ । ಕನಕದ ಹಾವುಗೆಮೆಟ್ಟಿ ॥ ೩೯ ॥
ಜೋಯಿಸರೋದುವ ಪಂಚಾಂಗ ಶುದ್ಧಲ । ಗ್ನಾಯತಾರ್ಥಗಳ ಲಾಲಿಸುತ ॥
ಶ್ರೀಯಶೋಜಯಸಿದ್ಧಿರಸ್ತೆಂಬ ಶಾಸ್ತ್ರೋಪಾ । ಧ್ಯಾಯರ ನೋಡುತೆಯ್ದಿದನು ॥ ೪೦ ॥
ಶ್ರೀರಾಗದೊಳು ಮಧುಮಾಧವಿಯೊಳಗಾತ್ಮ । ಸಾರವ ಹಾಡೆ ಲಾಲಿಸುತ ॥
ಭೂರಿವಾದ್ಯಗಳೆಲ್ಲ ಧವಳಶಂಖಗಳು ಭುಂ । ಭೋರೆನೆ ನಡೆದನೋಜೆಯೊಳು ॥ ೪೧ ॥

ತಾಯರಮನೆಯಿಂದ ತೆರಳಲೊಡನೆ ಮುಂದೆ । ವಾಯುಸ ತಿದ್ದಿದುವೆರಡು ॥
ಬಾಯುಬ್ಬಿ ಕಣಿಕಣಿಯೆಡದಲ್ಲಿ ಕರೆದುವಾ । ರಾಯ ಪೋಪಲ್ಲಿ ಪಲ್ಲಿಗಳು ॥ ೪೨ ॥
ಗಗನದೊಳಗೆ ತನ್ನ ಮುಂದು ಮುಂದುರೆ ಹಾದಿ । ದೆಗೆದೆಯ್ದುತಿದ್ದುದು ಗರುಡಾ ॥
ಬಗೆದನುಕೂಲನಾಯಕನದ ಸನ್ನೆಯೊ । ಳಗೆ ಧರಣಿಪಗೆ ಕಾಣಿಸಿದಾ ॥ ೪೩ ॥
ಸಲಹಿದೆರಳೆ ನಾಲ್ಕು ಘಂಟೆ ಸಹಿತ ಗಲ । ಗಲ ನೋಡುತಿದ್ದುವು ಬೆದರಿ ॥
ಎಲೆ ಸ್ವಾಮಿ ವೈರಿದಲ್ಲಣದ ಸೂಚನೆಯ ನೀ । ನೊಲಿದೀಕ್ಷಿಸೆಂದ ನಾಗರನು ॥ ೪೪ ॥
ಧೂಳ ಚೆಲ್ಲುತ ಗುಟುರಿಕ್ಕುತ ಕೆರೆವುತ । ಗೂಳಿ ಬಂದುದು ಬಲಕಡೆಯ ॥
ಧಾಳಿ ವಿಕ್ರಮದ ಸೂಚನೆಯು ಚಿತ್ತೈಸೆಂದು । ಹೇಳಿ ಕಾಣಿಸಿದ ದಕ್ಷಿಣನು ॥ ೪೫ ॥
ಕೆಳೆಯರು ತೋರುವ ಶುಭಶಕುನವ ನೋಡು । ತೊಳನಗೆ ನಗುತ ತನ್ನೊಳಗೆ ॥
ಗೆಲವಿಂದ ಹಂಸನಾಥನ ಸ್ಮರಿಸುತ ಬಂದ । ಪೊಳಲ ಮಧ್ಯದ ಜಿನಗೃಹಕೆ ॥ ೪೬ ॥
ಹೊರಗಣ ಪೌಳಿಗಾಣುತ ಪಾವುಗೆಯ ಮಾಣ್ದು । ಸೆರಗುಡೆಸುತ್ತಿ ನಡೆದನು ॥
ಮಿರುಪ್ಪೈದುಹೊನ್ನಕೋಟೆಯ ದಾಟಿ ಕಂಡನು । ಮೆರೆವಾದಿಜಿನನ ಬಿಂಬವನು ॥ ೪೭ ॥
ಭದ್ರಮಂಟಪದಲ್ಲಿ ನಿಂದು ಕಾಣಿಕೆಯಿಕ್ಕಿ । ಭದ್ರಭಾವದೊಳೆರಗಿದನು ॥
ಚಿದ್ರೂಪಭಾವನೆಯುಳ್ಳ ಯೋಗಿಗಳ ಸ । ಮುದ್ರವಿದ್ದುದು ನಮಿಸಿದನು ॥ ೪೮ ॥
ಸಿದ್ಧದಿಗ್ವಿಜಯಕಾರ್ಯೋ ಭವ ಭೂಪ ಸ । ಮೃದ್ಧಸುಖೀ ಭವಯೆಂದು ॥
ಸಿದ್ಧಾಂತಘೋಷದೋರಿದರು ನಿರಂಜನ । ಸಿದ್ಧಭಾವನೆಯ ಯೋಗಿಗಳು ॥ ೪೯ ॥
ಸಿದ್ಧಸೇಸೆಯ ಮಂಡೆಗಿಟ್ಟು ಮೃತ್ಯುಂಜಯ । ಸಿದ್ಧಚಕ್ರಾದಿಯಜ್ಞಗಳ ॥
ಶುದ್ಧವಿಭೂತಿಯ ಮುಟ್ಟಿ ಕೊರಳಿಗಿಟ್ಟ । ಪದ್ಧತಿಕಾರನಾ ನೀರಾ ॥ ೫೦ ॥
ಹೋಮಕರ್ಮಗಳು ಚೆನ್ನಾಗಿ ನಡೆದುವು ಮ । ಹಾಮುನಿಭುಕ್ತಿ ನಡೆದುದು ॥
ಸ್ವಾಮಿಯ ಪೂಜೆ ಲೇಸಾಗಿ ನಡೆದುದೆಂದು । ಭೂಮೀಶಗೊರೆದನಾ ಮಂತ್ರಿ ॥ ೫೧ ॥
ಪಾಡಿವ ಮೊದಲಾಗಿ ದಶಮಿ ತನಕ ದೇವ । ರಾಡಂಬರ ಮಿಗೆ ನಮಿಸಿ ॥
ಮಾಡಿದ ಜಿನಪೂಜೆ ನಿನಗಿನ್ನು ಪೂಜೆಯ । ಮಾಡಿಸದಿಹುದೆ ಲೋಕದೊಳು ॥ ೫೨ ॥
ಧರ್ಮಪೂರ್ವಕವಾಗಿ ರಾಜ್ಯವನಾಳುವ । ಧರ್ಮಾಂಗವರಿದು ಭೋಗಿಸುವ ॥
ಮರ್ಮವ ನೀನಲ್ಲದಾರ್ಬಲ್ಲರಿನ್ನೆಂದು । ನರ್ಮಮಂತ್ರೀಶನಾಡಿದನು ॥ ೫೩ ॥
ಧರಿಸಿಲ್ಲಿ ಸ್ವಾಮಿ ಕಿರೀಟವನೆಂದನಾ । ದರದಿಂದ ಮಂತ್ರಿ ಮತ್ತದಕೆ ॥
ದರಹಸಿತಾನನನಾರಾಯನೊಡಬಟ್ಟು । ಧರಿಸಿದನುತ್ತಮಾಂಗದೊಳು ॥ ೫೪ ॥
ಜಿನಗೆ ಕೈಮುಗಿದನು ಸ್ವಾಮಿ ಪುನರ್ದ । ರ್ಶನವಾಗಲೆಂದು ಕಿರೀಟ ॥
ಮುನಿಗಳ್ಗೆ ನಮಿಸಿದ ಜಯಜಯವೆಂಬ ಘೋ । ಷಣೆಯೊಳು ಮಗುಳ್ದನಲ್ಲಿಂದ ॥ ೫೫ ॥

ಕುಲವೃದ್ಧ ಜನದ ಪರಕೆಯಿಂದ ವಿಬುಧರು । ತಳಿವ ಮಂತ್ರಾಕ್ಷತೆಯಿಂದ ॥
ಗಳಬಳಿಸುವ ಮಂಗಳಾಷ್ಟಕದಿಂದ ಭೂ । ತಳಪತಿ ನಡೆದನೋಜೆಯೊಳು ॥ ೫೬ ॥
ಅಡಿಗಡಿಗಿದಿರ್ವಂದು ಪುಷ್ಪಫಲವ ಕಾಣ್ಕೆ । ಗೊಡುತ ಕೈಮುಗಿವವರಿಂದ ॥
ಕಡುಲೇಸು ಜಯವೊಳ್ಳಿತುತ್ತಮವೆಂದು ಬಾ । ಳ್ಪಡಿಯ ಸೂಚನೆಯೊಳಿಯ್ದಿದನು ॥ ೫೭ ॥
ವಿಲಸಿತಾನಂದದೊಳಾ ರಾಯ ಪುರುಜಿನ । ನಿಳಯದಿಂದಡಿಯಿಡುವಾಗ ॥
ಬಲದ ತೋಳ್ತೊಡೆಕಣ್ಣಾಕೆತ್ತುತಿದ್ದುವು ಮುಂದ । ಣಲಘುಸಂಪದದ ಸೂಚನೆಗೆ ॥ ೫೮ ॥
ಸರ್ವಸಂಭ್ರಮದಿಂದ ಪಂಚಕೋಟೆಯ ದಾಟಿ । ಸಾರ್ವಭೌಮನು ನಡೆತಂದು ॥
ಪರ್ವತದಂತಿದ್ದ ಪಟ್ಟದಾನೆಯನೇರಿ । ಸರ್ವಜ್ಞ ಶರಣೆನುತಡರ್ದಾ ॥ ೫೯ ॥
ಎತ್ತಿತು ಮುತ್ತಿನ ಸತ್ತಿಗೆ ಚಾಮರ । ವತ್ತಿತ್ತ ಚಿವ್ಮಿದುವಾಗ ॥
ಸುತ್ತ ಪತಾಕೆಯೆದ್ದುವು ವಾದ್ಯಕೋಟಿ ದಿ । ಗ್ಭಿತ್ತಿ ಬಿರಿಯೆ ಮೊಳಗಿದುವು ॥ ೬೦ ॥
ಮೊತ್ತದ ರಿಪುಗಳ ಗಂಡ ವೈರಿಗಳೆಂಬ । ಕತ್ತಲೆಗುದಯಮಾರ್ತಾಂಡಾ ॥
ಮತ್ತೆ ಜಯಾಂಗನಾಮಿಂಡ ಚಾಂಗೆಂದು ಕೈ । ಯೆತ್ತಿ ಭಟರು ಹೊಗಳಿದರು ॥ ೬೧ ॥
ಇಟ್ಟ ಕಿರೀಟ ಮೂಡುವ ಸೂರ್ಯನಂತೆ ವ್ಯೆ । ಗಟ್ಟ ಹೊಂಬೊಂಬೆಯಂತೆಸೆಯೆ ॥
ಬೆಟ್ಟವ ನಡೆಸುವಂತಾ ರಾಯ ಮುಂದಕೆ । ಪಟ್ಟದಾನೆಯ ನಡೆಸಿದನು ॥ ೬೨ ॥
ತಾರಗೆಯೊಡಗೂಡಿ ಪೂರ್ಣಚಂದ್ರಮ ಬಂದು । ಸೇರಿ ಮೇಲೋಲೈಸುವಂತೆ ॥
ಭೂರಾಮಗೆತ್ತಿದ ಮುತ್ತಿನ ಸತ್ತಿಗೆ । ರಾರಾಜಿಸುತಿರ್ದುದಾಗ ॥ ೬೩ ॥
ಸೂಳರಿದಿಕ್ಕುವ ಮೂವತ್ತೆರಡು ವಿ । ಶಾಲಚಾಮರ ವಿರಾಜಿಸಲು ॥
ಹಾಲ ಸಮುದ್ರದೊಳಾನೆಯ ನಡೆಸುವಂ । ತಾ ಲಲಿತಾಂಗ ತೋರಿದನು ॥ ೬೪ ॥
ಚಂದ್ರಸೂರ್ಯರು ಬಂದು ದಿಗ್ವಿಜಯಕೆ ಮನು । ಜೇಂದ್ರನ ಕರೆದೊಯ್ವರೆನಲು ॥
ಚಂದ್ರಸೂರ್ಯರ ಧ್ವಜವೆರಡೆತ್ತಿದುವು ಮುಂದೆ । ರುಂದ್ರಪತಾಕೆಯ ನಡುವೆ ॥ ೬೫ ॥
ಪುರುಷೋತ್ತಮನಿಂದು ಪುರದಿಂದ ಮುಂದಕೆ । ತೆರಳುತಿದ್ದಪನೆಂಬುದರಿದು ॥
ಪುರದೊಳಗಿದ್ದ ಪೆಣ್ಗಂಡೆಲ್ಲರೊಲವಿಂದ । ನೆರೆದು ನಿಟ್ಟಿಸಿದರೇನೆಂಬೆ ॥ ೬೬ ॥
ಕರುಮಾಡವೇರಿ ಮಾಳಿಗೆಯ ಮೇಲ್ಕೆಚ್ಚೇರಿ । ಕುರುಜೇರಿ ಗೋಪುರವೇರಿ ॥
ತರುಣಿಯರೆಲ್ಲರು ರಾಜಮನ್ಮಥನ ಕ । ವ್ವರೆಗೊಂಡು ನೋಡಿದರೊಸೆದು ॥ ೬೭ ॥
ಬರಬಾರದೆಮ್ಮ ತಮ್ಮಯ ಪೆಂಡಿರಾತನ । ಪರಿಕಿಸಬಾರದೆಂದೆಂಬ ॥
ಹುರುಡಿಲ್ಲದಾ ಪರದಾರಸೋದರನ ಸೌಂ । ದರವ ನೋಡಿದರೆಲ್ಲರೊಸೆದು ॥ ೬೮ ॥
ಗಂಡಪೆಂಡಿರು ನಿಂದು ನೋಡುವರಲ್ಲಲ್ಲಿ । ಪೆಂಡಿರೆ ನೋಳ್ಪರಲ್ಲಲ್ಲಿ ॥
ತಂಡತಂಡದ ಸೂಳೆಯರು ನೋಳ್ಪರಾ ಷ । ಟ್ಖಂಡಾಧಿಪತಿಯ ಚೆಲ್ವಿಕೆಯಾ ॥ ೬೯ ॥

ಕಾಸುವ ಪಾಲನಿಳುಹದೆ ಮುಂದಳುವೆಳೆ । ಗೂಸ ನಿಟ್ಟಿಸದ್ಯೆದೆ ಬಂದು ॥
ಕಾಸಿ ತೊಳೆದ ಹೊನ್ನ ಪುತ್ತಳಿಯಂತೆಸೆ । ವಾ ಸೊಬಗನ ನಿಟ್ಟಿಸಿದರು ॥ ೭೦ ॥

ಆಡುವ ನೆತ್ತವನರ್ಧದೊಳಗೆ ಬಿಟ್ಟು । ಹಾಡುವ ರಾಗವ ನಿಲಿಸಿ ॥
ಮಾಡವನೇರಿ ಮದಿಲನೇರಿ ರಾಯನ । ನೋಡಿದರೊಸೆದು ನೀರೆಯರು ॥ ೭೧ ॥

ಗಿಳಿಯನೋದಿಸುತಿರ್ದು ರಾಯ ಪೋಪುದ ಕೇಳ್ದು । ಪೊಳಗೆಯ್ದಿ ಪಂಜರಕಿಡಲು ॥
ತಳುವಹುದೆಂದೆಯ್ದಿ ತಲೆವಾಗಿಲೊಳು ನಿಂದು । ಗಿಳಿಸಹಿತೊಲ್ದು ನೋಡಿದರು ॥ ೭೨ ॥

ಕನ್ನಡಿವಿಡಿದು ಬೊಟ್ಟಿಡುತಿರ್ದು ನೃಪತಿಯ । ಸನ್ನೆಯ ಕೇಳಲಾ ಕ್ಷಣವೆ ॥
ಕನ್ನೆಯರೆಯ್ತಂದು ಕನ್ನೆಮಾಡಿವನೇರಿ । ಕನ್ನಡಿಸಹಿತ ನೋಡಿದರು ॥ ೭೩ ॥

ಮುಡಿ ಸಡಿಲಲು ಬಲಗೈಯಿಂದ ಬಲಿವುತ । ಎಡಗೈಯೊಳೊತ್ತುತ ನಿರಿಯಾ ॥
ದುಡುದುಡನೆಯ್ತಂದು ದುಂಡಿಯರಾ ಚೆಲ್ವ । ರೊಡೆಯನ ಚೆಲ್ವ ನೋಡಿದರು ॥ ೭೪ ॥

ಗದಗದಿಸುವ ಬಲುವೊಲೆಯಿಂದ ಜಗುಳ್ವ ಮೇ । ಲುದರ ಸೆರಗನು ಸಾಗಿಸುತ ॥
ಮದಗಜಗಮನೆಯರಡಿಯಿಟ್ಟು ನೂರ್ಮಡಿ । ಮದನನ ನೋಡಿದರೊಸೆದು ॥ ೭೫ ॥

ಕೇಳಿಗೆಂದೊಡಬಟ್ಟು ವಿಟನ ಕೈವಿಡಿದೊಳ । ಶಾಲೆಗೆ ಪೋಗುವಪ್ಪರೊಳು ॥
ಕೇಳಿ ಸನ್ನೆಯ ವಿಟನೊತ್ತೆಯ ಬೀಸಾಡಿ । ಸೂಳೆಯರೆಯ್ದಿ ನೋಡಿದರು ॥ ೭೬ ॥

ಬಹುದಿನ ಬೇಟವ ಬಳಸಿದ ವಿಟರೊಲ್ದು । ಗೃಹಕೆಯ್ದೆ ಕಂಡರ್ತಿವಾಗ ॥
ಮಹಿಪನ ಪಯಣಸನ್ನೆಯ ಕೇಳಿ ವಿಟರ ನಿ । ಸ್ಪೃಹವಾಡಿ ಬಂದು ನೋಡಿದರು ॥ ೭೭ ॥

ಮುನಿದ ನಲ್ಲರ ದೈನ್ಯದಿಂದ ತಿಳುಹುತಿದ್ದು । ಮುನಿಸಿನ್ನು ತಿಳುವುದೆಂಬಾಗ ॥
ಜನಪನ ಪಯಣಸನ್ನೆಯ ಕೇಳಿ ನಲ್ಲರ । ನೆನೆಯದೆಯ್ತಂದು ನೋಡಿದರು ॥ ೭೮ ॥

ವೀಳೆಯಗೊಂಬುದ ಮರೆದು ಜಾರಿದ ತಮ್ಮ । ಸೇಲೆಯ ಸೆರಗನರಿಯದೆ ॥
ಬೇಳಾಗಿ ಬಾಯ್ಬಿಟ್ಟು ಬಯಸಿ ನೋಡಿದರಾಗ । ಸೂಳೆಯರಾ ಚಕ್ರಧರನಾ ॥ ೭೯ ॥

ಆಡಲಳವೆ ಚಕ್ರನಾಥನ ಸೊಬಗನು । ನೋಡಿದ ಪೆಣ್ಗಳಲ್ಲಲ್ಲಿ ॥
ನೋಡುತ ಸ್ವೈವೆರಗಾಗಿದ್ದರುಸುರದ । ಲ್ಲಾಡದ ಪುತ್ತಳಿಯಂತೆ ॥ ೮೦ ॥

ನರೆ ಬಂದ ಮುದುಕಿಯರರೆಬಾಯದೆರೆದುಕೊಂ । ಡಿರದಲ್ಲಿ ಗೋಡೆಯ ನೆಮ್ಮಿ ॥
ಭರತರಾಜನ ನೋಡಿ ಭ್ರಮಿಸಿದರೆಂದರೆ । ತರುಣಿಯರೆದೆ ಸುಮ್ಮನಿಹುದೆ ॥ ೮೧ ॥

ಹೆಂಗಳು ಸೋಲ್ವುದೇನಚ್ಚರಿ ಪುರದ ಜ । ನಂಗಳು ರಾಜಮನ್ಮಥನ ॥
ಶೃಂಗಾರಕೆದೆಸೋತು ನೋಡುತ ಭ್ರಾಂತಸಾ । ರಂಗದಂತಡಿಯಿಟ್ಟರೊಡನೆ ॥ ೮೨ ॥

ಮಾನಿನಿಯರು ತನ್ನ ನೋಡುತಿದ್ದರು ರಾಯ । ತಾನವರನು ನೋಡುತಿಲ್ಲ ॥
ಆನೆಯ ಕುಂಭದತ್ತೀಕ್ಷಿಸುತೆಯ್ತಂದ । ಯೇನ ಕಲಿತನೊ ಗೌರವವಾ ॥ ೮೩ ॥

ತ್ರಿಭುವನಸಾರಚಿದಂಬರಪುರುಷನ । ವಿಭವವ ಕಂಡಾತ್ಮಸುಖಿಗೆ ॥
ಕ್ಷುಭಿತವಹುದೆ ಚಿತ್ತ ಮತ್ತಗಜವನೇರಿ । ಪ್ರಭು ಸಾರುತಿರ್ದನೋಜೆಯೊಳು ॥ ೮೪ ॥

ಕೋಟಿಪಾತ್ರಗಳು ಸಿಂಗರವಾಗಿ ಮುಂದೆ ಸ । ಘಾಟಿಸಿ ನೃತ್ಯವನಾಡೆ ॥
ಚಾಟುಪಾಠಕರು ಕೈಯೆತ್ತಿ ಕೀರ್ತಿಸೆ ನಡೆ । ನಾಟಕದೊಳಗೆಯ್ದುತಿರ್ದಾ ॥ ೮೫ ॥
ಪುರುಜಿನಸೂನು ಪುಷ್ಪಾಯುಧನಗ್ರಜ । ಭರತಷಟ್ಖಂಡಾಧಿನಾಥಾ ॥
ಗುರುಹಂಸನಾಥಭಾವಕ ಜಯಯೆಂಬರ । ಕ್ಕರಿಗರಲ್ಲಲ್ಲಿ ಕೈಯೆತ್ತಿ ॥ ೮೬ ॥
ಮೇದಿನೀಶರ ಗಂಡ ಮಲೆವ ವಿರೋಧಿರಾ । ಜೋದಯಯಾಟವಿಗುರಿಗೆಂಡ ॥
ಕಾದಲೊಡ್ಡುವ ರಾಜಗಿರಿವಜ್ರದಂಡನೆಂ । ದೋದುತಿಹರು ಭಟ್ಟರಲ್ಲಿ ॥ ೮೭ ॥
ಇರಿಯದ ಪಂಥವ ಮೆರೆಯದ ಮೋಡಿಯ । ಅರಿಯದ ಕಲೆಯ ಜಾಣ್ಮೆಯನು ॥
ಹೊರರಚನೆಯೊಳು ಹೊಗಳಿಸಿಕೊಂಬರ ಗಂಡ । ನೆರೆ ಚಾಂಗು ಬಲರೆಂಬರಲ್ಲಿ ॥ ೮೮ ॥
ಸಿರಿಯೊಳು ಶೀಲದೊಳೋಜೆಯೊಳಾಜ್ಞೆಯೊ । ಳರಸುತನದೊಳು ವೀರದೊಳು ॥
ಧರೆಯೊಳು ತ್ಯಾಗದೊಳ್ಭೋಗದೊಳ್ನರಲೋಕ । ಸುರಪತಿ ಜಯಯೆಂಬರೊಡನೆ ॥ ೮೯ ॥
ರಂಜಿಸಿ ಪಾತ್ರವಾಡುವರಲ್ಲಿಗಲ್ಲಿ ಪು । ಷ್ಪಾಂಜಲಿ ಮಾಳ್ಪರಲ್ಲಲ್ಲಿ ॥
ಜಂಜಡವಿಲ್ಲದಿಡುವರು ನಿವಾಳಿಯ । ಕುಂಜರನಿದಿರೊಳಾ ನೃಪಗೆ ॥ ೯೦ ॥
ಅಡಿಗಡಿಗಿದಿರೊಳಾರತಿಯನೆತ್ತುವರು ಮ । ತ್ತೆಡಬಲದೊಳು ಪುರಜನವು ॥
ಮುಡಿವಾಳ ಮೊಲ್ಲೆ ಮಲ್ಲಿಗೆಯನಾನೆಯ ಮೇಲ । ಕೆಡುತುಬ್ಬಿ ಜಯಯೆಂಬರೊಸೆದು॥ ೯೧ ॥
ವೀರಾವಳಿಯನು ನೋಡುವರೊಂದುದೆಸೆಯೊಳು । ದಾರಾವಳಿಯನು ನೋಡುವರು ॥
ಚಾರುಗುಣಾವಳಿಯೊಂದುದೆಸೆಯೊಳು ಶೃಂ । ಗಾರಾವಳಿಯನು ನೋಡುವರು ॥ ೯೨ ॥
ಕರಿಕರಿಗೊಂಡು ಬಾಜಿಪ ವಾದ್ಯರಭಸದೊ । ಳುರುಜಯಜಯರಭಸದೊಳು ॥
ಕುರುಕುರುಮೆಟ್ಟಲಾನೆಯ ಮೇಲೆ ಬಂದನು । ಮೆರೆವ ದೇಹಾರದಂದದೊಳು ॥ ೯೩ ॥
ಮುಂದೆ ನರ್ತಿಪರಿಗೆ ಹೊಗಳುವರಿಗೆ ಲೀಲೆ । ಯಿಂದುಡುಗೊರೆಗಳನಿಡುತ ॥
ಮಂದರಾದ್ರಿಯನೇರಿ ಸೂರ್ಯನೆಯ್ತಪ್ಪಂತೆ । ಬಂದನು ಮದಗಜವೇರಿ ॥ ೯೪ ॥
ದುಗುಲದ ತೋರಣ ಪುಷ್ಪತೋರಣ ತಳಿ । ರುಗಳ ಸತ್ಫಲದ ತೋರಣವಾ ।
ನುಗುಳುತೆಯ್ತಂದನು ಹಲವು ಬಣ್ಣದ ಸಾಲು । ಮುಗಿಲ ನುಸುಳುವರ್ಕನಂತೆ ॥ ೯೫ ॥
ಕಂಚಿನ ತೋರಣ ಕನಕತೋರಣ ರತ್ನ । ಸಂಚಯತೋರಣಗಳನು ॥
ಮಿಂಚಿನ ಮಾಲೆಯ ನುಗುಳ್ವ ಚಂದ್ರಮನಂತೆ । ಹಿಂಚಿಸಿ ನುಗುಳುತೆಯ್ದಿದನು ॥ ೯೬ ॥
ತೋರಣಗಳ ರಾಯ ನುಸುಳ್ವಾಗ ಮೇಲೊಡ್ಡಿ । ಸೇರಿಸಿರ್ದಲರ ಪೊಟ್ಟಣವಾ ॥
ದೂರದೊಳಿದ್ದು ಸೂತ್ರವ ಮಿಡಿದುರೆ ಪುಷ್ಪ । ಸಾರಾಭಿಷೇಕಮಾಡಿದರು ॥ ೯೭ ॥

ಸಿರಿಬನದೊಳಗೆ ಮನ್ಮಥರಾಜ ಬಪ್ಪಂತೆ । ಪುರದ ಬೀದಿಯೊಳಿಂತು ಬಂದು ॥
*ಸಿರಿ ನೆಲಸಿಪ್ಪ ಹೊತ್ತಿನೊಳು ವಿನೀತಾ । ಪುರದ ಕೋಟೆಯನು ದಾಟಿದನು ॥ ೯೮ ॥

ಪಟ್ಟಣವನು ದಾಟಿ ಪೌಜ ನೋಡುವ ಬಲು । ಬಟ್ಟಬಯಲಿಗಾಗಿ ನೃಪತಿ ॥
ಪಟ್ಟದಾನೆಯನೇರಿ ಬರುತಿರ್ದನಿಲ್ಲಿಗೆ । **ಪಟ್ಟಣಪಯಣದಸಂಧಿ** ॥ ೯೯ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜ ನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೦ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೧ ॥

ಅತ್ಯಂತಭೋಗವನಧಿಕಸೌಭಾಗ್ಯವ । ಸತ್ಯಾತ್ಮರಿಗೆ ಮಾಳ್ಪ ಶಾಂತಾ ॥
ಸ್ತುತ್ಯಾ ನೀನೆನ್ನೊಳಗಿರು ಭವ್ಯಕಮಲಾ । ದಿತ್ಯಾ ಚಿದಂಬರಪುರುಷಾ ॥ ೧೦೨ ॥

ಪಟ್ಟಣಪಯಣದಸಂಧಿ ಸಂಪೂರ್ಣಂ

---

* ಸಿರಿನೆಣ್ಣು ನೆರೆವ ಪೊತ್ತಿನೊಳು ವಿರಾಜಿತಾ ।

## ದಶಮಿಪ್ರಸ್ಥಾನಸಂಧಿ.

ಮೂಜಗತುಂಬಿದ ಜೀವರಾಶಿಯ ಪೌಜ । ಮೂಜದಾವಾಗ ಕಾಣ್ಬಭವಾ ॥
ರಾಜಿತಮತಿದೋರು ಕೈವಲ್ಯಲೋಕಾಧಿ । ರಾಜ ನಿರಂಜನಸಿದ್ಧಾ ॥ ೧ ॥

ಇಭವನಡರಿ ಭರತೇಶ ನಾನಾವಾದ್ಯ । ರಭಸದೊಳೆಯ್ತುರುವಾಗ ॥
ಅಭಿಮುಖದೊಳು ಮುಂದೆ ಬನ್ನಿಯ ಮರದಲ್ಲಿ । ಪ್ರಭೆದೋರಿದುದು ಚಕ್ರರತ್ನಾ ॥ ೨ ॥

ಸಿಂಹಲಗ್ನದೊಳರಮನೆಯಿಂದ ತೆರಳ್ವಾಗ । ಸಿಂಹಾಸನೇಶನಾಜ್ಞೆಯೊಳು ॥
ರಂಹದಿ ದಂಡನಾಯಕ ನಡೆಸಿದ ಚಕ್ರ । ತಾಂ ಹೊಳೆದೊಪ್ಪಿತಿದಿರೊಳು ॥ ೩ ॥

ಫಲಪುಷ್ಪಝಲ್ಲಿಪಟ್ಟೆಗಳಿಂದ ಶೃಂಗಾರ । ವಳವಟ್ಟ ವಿಜಯವೃಕ್ಷದೊಳು ॥
ತೊಳಗುತಿದ್ದುದು ಚಕ್ರರತ್ನ ರಾಯನ ಮಹಾ । ಬಲ ನೋಡಲಚ್ಚರಿವಟ್ಟು ॥ ೪ ॥

ಉನ್ನತದೆಳೆಗೊನೆಗಳು ಫಾಳಿಯಿಂದ ಕೈ । ಸನ್ನೆಗೈವಂದದಿ ತೂಗೆ ॥
ಬನ್ನಿಯೆಂದೆಲ್ಲರನೊತ್ತಿಗೆ ಕರೆವಂತೆ । ಬನ್ನಿಯ ಮರ ವಿರಾಜಿಸಿತು ॥ ೫ ॥

ಮುಟ್ಟಲೂದುವ ಶಂಖವಿಪ್ಪತ್ತನಾಲ್ಕೆತ್ತಿ । ಕುಟ್ಟುವ ಭೇರಿ ಪನ್ನೆರಡು ॥
ಮುಟ್ಟುವ ಪಟಹ ಪನ್ನೆರಡರೊಳ್ಬನ್ನಿಯ । ಕಟ್ಟಿಯ ಸಾರ್ದನಾ ರಾಯಾ ॥ ೬ ॥

ಅಂಕೆಗೊಟ್ಟಾನೆಯ ನಿಲಿಸಿ ಮೇಲೂರಿದೊಂ । ದಂಕುಶದೊಳ ಹಸ್ತವಿಟ್ಟು ॥
ಬಿಂಕದೊಳೊಲಿದು ನೋಡಿದನು ಶೃಂಗಾರದ । ಸೋಂಕಿನೊಳೆಸೆವ ಪಾಯ್ದಳವಾ ॥ ೭ ॥

ಕಣ್ಣೆಟ್ಟುವಷ್ಟರೊಳೆತ್ತ ನೋಡಿದರತ್ತ । ಹಣ್ಣಿದಾನೆಗಳು ತೇಜಿಗಳು ॥
ಬಣ್ಣಬಗೆಯ ರಥ ವೀರಭಟರ ವೊತ್ತ । ಪಣ್ಣಿಪಣ್ಣಿಯೊಳಿದುದಾಗ ॥ ೮ ॥

ಬೇರೆಬೇರಲ್ಲಲ್ಲಿ ಪೌಜಿಕ್ಕಿ ತಮ್ಮೆಳೆ । ದೋರುವ ಟಿಕ್ಕೆಯನೆತ್ತಿ ॥
ಚೀರುವ ಕಹಳೆಕೊಂಬಿನೊಳಿದ್ದರೈವ । ತ್ತಾರುದೇಶದ ಧರಣಿಪರು ॥ ೯ ॥

ಜಯರಾಜನೆಂದಯೋಧ್ಯಾಂಕನೆಂದಿಂತು ಚ । ತ್ರಿಯ ದಳಪತಿ ಸಿರಳ್ಪಿಸರು ॥
ಜಯವಂತನವನತಿವೀರ ವಿವೇಕಿ ಕ್ಷ । ತ್ರಿಯನಿರ್ದನರಸನೊತ್ತಿನೊಳು ॥ ೧೦ ॥

ಮಧ್ಯಾಹ್ನ ತಿರುಗಿ ಮೂರನೆಯ ಜಾವದೊಳಗ । ಯೋಧ್ಯನ ಕೈಸನ್ನೆಯರಿದು ॥
ಅಧ್ಯಕ್ಷರಾಜರು ಸಾರ್ತಂದು ಕಂಡರ । ಯೋಧ್ಯಾಧಿಪತಿಯನೇನೆಂಬೆ ॥ ೧೧ ॥

ಸಿಂಗಾಡಿಬಿಲ್ಲ ಮೋಹರದಲ್ಲಿ ಹಿರಿಯತು । ರಂಗವನೇರಿ ಕುಣಿಸುತ ॥
ಅಂಗದೇಶದ ರಾಯ ಮುಂಗಡೆಗೆಯ್ದಿ ರಾ । ಯಂಗೆ ಕೈಮುಗಿದು ಸಾಗಿದನು ॥ ೧೨ ॥

ಝಲ್ಲಿಯ ಬಿಲ್ಲ ಮೋಹರದ ನಡುವೆ ದೊಡ್ಡ । ಬೊಲ್ಲನನೇರಿ ಕುಣಿಸುತ ॥
ಪಲ್ಲವದೇಶದ ನೃಪ ಬಂದು ನೃಪನಿದಿ । ರಲ್ಲಿ ಕೈಮುಗಿದು ಸಾಗಿದನು ॥ ೧೩ ॥

ಬೆಳ್ಳಿಯ ಕಟ್ಟಿನ ಬಿಲ್ಲ ಮೋಹರದಲ್ಲಿ । ಸಲ್ಲೀಲೆಯೊಳು ತೇಜಿಯೇರಿ ॥
ಬಲ್ಲಿದನಿದಿರೊಳು ಬಂದು ಕೈಮುಗಿದೋರೆ । ಯಲ್ಲಿ ಕೇರಳರಾಯನೊಲಿದಾ ॥ ೧೪ ॥
ಚಿನ್ನದ ಕಟ್ಟಿನ ಬಿಲ್ಲ ಮೋಹರದಲ್ಲಿ । ಕನ್ನೀಲನೇರಿ ಕುಣಿಸುತ ॥
ಸನ್ನಿಧಿಗೆಯ್ತಂದು ಕೈಮುಗಿದೊಲಿದನು । ಕಾನ್ನೋಜರಾಜನೋಜೆಯೊಳು ॥ ೧೫ ॥
ಕರಿಯ ಕಟ್ಟಿನ ಹರಿಗೆಯ ಬೆಳುವರಿಗೆ ಕೆಂ । ಬರಿಗೆಯ ಮೋಹರದಲ್ಲಿ ॥
ತುರಗವಡರಿ ಬಂದು ಕೈಮುಗಿದೊಲಿದನು । ಕರಹಾಟದೇಶದ ರಾಯೂ ॥ ೧೬ ॥
ಚಿನ್ನದ ಕಾಸೆ ಬೆಳ್ಳಿಯ ಕಾಸೆ ನಿಡುರ್ಝಲ್ಲಿ । ಕನ್ನಡಿ ನಟ್ಟ ಹರಿಗೆಯ ॥
ಸನ್ನಾಹದೊಳು ಬಂದು ಸೌರಾಷ್ಟ್ರದೇಶದ । ಮನ್ನೆಯ ಮಣಿದು ಸಾಗಿದನು ॥ ೧೭ ॥
ಅರಿದ ತಲೆಯ ಕೀರ್ತಿಮುಖದ ಪೇರಾನೆಯ । ಪಿರಿಯ ಸಿಂಹದ ಹರಿಗೆಗಳ ॥
ನೆಗವಿನೊಳೆಯ್ದಿ ಕೈಮುಗಿದು ಕಾಶಿಯ ದೇಶ । ದರಸನೊಲಿದನೊಂದು ದೆಸೆಗೆ ॥ ೧೮ ॥
ಹೊಗೆಯಂತೆ ಪೆಟಲು ತುಪಾಕಿಯ ಬಲಗೂಡಿ । ಧಿಗಿಧಿಗಿನಿದಿರಿಗೆ ಬಂದು ॥
ನಗೆಮೊಗದರಸಗೆ ಕೈಮುಗಿದೊಲಿದನು । ತಿಗುಳರರಸನೊಂದು ಕಡೆಗೆ ॥ ೧೯ ॥
ಗಡೆಯೊಟಿ ಕೈಗತ್ತಿ ಸಬಳ ಪಯಂತಾದ ಪ । ರ್ವಡೆಗೂಡಿ ಘುಡುಘುಡನೆಯ್ದಿ
ಒಡೆಯಗೆ ಕೈಮುಗಿದೊಯ್ಯನೆ ತೆಲುಗುನಾ । ಡೊಡೆಯ ಸಾಗಿದನೊಂದು ಬಳಿಗೆ ॥ ೨೦ ॥
ಸಂಜೋಗದಶ್ವಗಳತ್ತಿತ್ತ ಕೇಳಿಯ । ಹುಂಜನಂದದಿ ಪಾರಿಹರಿಯೆ ॥
ಕಂಜಗದಗ್ರದೊಳೆಸೆವ ರಾಯನ ಹುರು । ಮುಂಜಿಯರಸ ಬಂದು ಕಂಡಾ ॥ ೨೧ ॥
ಹಾರೈಸುತೆರಡುಕಾಲೆತ್ತಿ ನಿಂದುಲಿದೇಳ್ವ । ವಾರುವಗಳ ಬಳಸಿನೊಳು ॥
ಸಾರಲೆಯ್ತಂದು ಚಕ್ರಿಗೆ ಕೈಯ ಮುಗಿದನು । ಪಾರಸಿನಾಡ ಬಲ್ಲಹನು ॥ ೨೨ ॥
ಧಾರಿಣಿಯೊಳು ನಿಂದು ನಿಲ್ಲದೆ ಕುಣಿದೇಳ್ವ । ಕಾರುರಗನು ಕಣೆವಟ್ಟಾ ॥
ಚೇರ ಚೋಳನು ಕೈರ ತೇಜಿಗಳೊಡಗೂಡಿ । ಚೇರದೇಶದ ರಾಯ ಕಂಡಾ ॥ ೨೩ ॥
ಗಂಧವಾಹನ ಶೀಘ್ರಗತಿ ತಮ್ಮ ಮುಂದೆ ಜಾ । ತ್ಯಂಧದ ಗತಿಯೆಂದು ನಗುತ ॥
ಬಂಧುರವಾಜಿಗಳೊಗ್ಗಿನೊಳೆಯ್ತಂದು । ಸಿಂಧುದೇಶದ ರಾಯ ಕಂಡಾ ॥ ೨೪ ॥
ಹೊಳೆವ ಕುದುರೆಯ ಹಿಂಡಿನೊಳು ತಾನೊಂದು ಕ । ತ್ತಳನ ದುವ್ವಾಳಿಸಿ ಬಂದು ॥
ಕಲಹರಿದೇಶದ ರಾಯ ಕೈಮುಗಿದೊಯ್ಯ । ನೊಲಿದೊಂದು ದೆಸೆಯೊಳು ನಿಂದಾ ॥ ೨೫ ॥
ಗುಡ್ಡೆಗಳನು ಬಲುಬೆಟ್ಟಗಳನು ತೆಗೆ । ದೊಡ್ಡೋಡ್ಡಿ ನಡೆಸುವಂದದೊಳು ॥
ದೊಡ್ಡಾನೆ ಚಿಕ್ಕಾನೆಯೊಡ್ಡಿನೊಳಡ್ಡ ಬಂ । ದೊಡ್ಡಿಯ ರಾಯ ಕೈಮುಗಿದಾ ॥ ೨೬ ॥
ಕುಂಡ್ಯುಪಮಾನಕುಂಭಸ್ಥಳಗಳ ಪರಿ । ಚಂಡ್ಯಮತ್ತೇಭಘಟೆಯೊಳು ॥
ಪಾಂಡ್ಯದೇಶದ ರಾಯ ಬಂದು ಕಂಡನು ವೈರಿ । ದಂಡ್ಯಮಾನನ ಧರಣಿಪನಾ ॥ ೨೭ ॥

ಸಿಂಹನಾದಕೆ ಸೆಡೆದತ್ತಿತ್ತ ಕದಲುತ । ಬೃಂಹಿಸುವಾನೆಯೊಡ್ಡಿನೊಳು ॥
ಸಿಂಹಪರಾಕ್ರಮನಿದಿರೆಯ್ದಿ ಕಂಡನು । ಸಿಂಹಳದೇಶದ ರಾಯಾ ॥ ೨೮ ॥

ಆರ್ಜಿಸಿದೊಂದೊಂದು ದುರ್ಗಗಳಂತೆ ಸ । ಮ್ಮಾರ್ಜಿಸಿ ಚೌಕದೊಳೆಸೆವ ॥
ಊರ್ಜಿತರಥದೊಡ್ಡಿನೊಳು ಬಂದು ಕಂಡನು । ಗುರ್ಜರದೇಶದ ರಾಯಾ ॥ ೨೯ ॥

ಚಾಪಬಾಣಗಳಿಗೆ ಭಟರಿಗೆ ತೆರಪಿನ । ರೂಪಿಂದ ನೋಡಲೊಂದೊಂದು ॥
ದ್ವೀಪದಂತೆಸೆವ ರಥದೊಳೆಯ್ದಿ ಕಂಡನು । ನೇಪಾಳದೇಶದ ರಾಯಾ ॥ ೩೦ ॥

ಚಿರ್ಬೊಕು ಗಿಕುಗಿರ್‍ರೆಂದುರುಳುವ ಗಾಲಿಯು । ಆರ್ಭಟಿಯುಖಿಲ ರಥದೊಳು ॥
ಬೋರ್ಭುಗಿಲೆಂಬ ವಾದ್ಯದೊಳೊತ್ತಿ ಬಂದು ವಿ । ದರ್ಭದೇಶದ ರಾಯ ಕಂಡಾ ॥ ೩೧ ॥

ಆನೆ ಕುದುರೆ ರಥ ಕಾಲಾಳ ಮೊತ್ತ ಸ । ಮಾನವಾಗಿರಲೊತ್ತಿ ಬಂದು ॥
ಚೀನಮಹಾಚೀನದರಸುಗಳಿಬ್ಬರು । ಭೂನಾಥಗೆರಗಿ ಸಾಗಿದರು ॥ ೩೨ ॥

ತಾಟಿಸೆ ಠಣಠಣನುಲಿವ ತಂಬಟ ಮುಂದೆ । ಕೋಟಿಭಟರ ಮೊತ್ತ ಹಿಂದೆ ॥
ಭೋಟುಮಹಾಭೋಟುದೇಶಪತಿಗಳು ಕಿ । ರೀಟಿಯ ಕಂಡರುಬ್ಬಿನೊಳು ॥ ೩೩ ॥

ಖೇಟಕ ಖಡ್ಗ ಕವಚದ ಭಟರು ನಡೆ । ಗೋಟೆಯಂತೋಲೈಸಿ ಬರಲು ॥
ಲಾಟಮಹಾಲಾಟದೇಶದ ನೃಪರು ಸ । ಘಾಟಿಕೆ ಮಿಗೆ ಕಂಡರಾಗ ॥ ೩೪ ॥

ಕಶ್ಮಲವಳಿದು ಕುಂಕುಮದ ಧೂಳಿಯ ಶೋಣ । ರಶ್ಮಿ ರಂಜಿಸೆ ದೇಹತುಂಬಿ ॥
ಕಾಶ್ಮೀರದರಸು ಕೈಮುಗಿದನು ಬಂದು ಮಂ । ದಸ್ಮಿತಮುಖದ ಭೂಭುಜಗೆ ॥ ೩೫ ॥

ತುರುಕಸಿಂಗಾಡಿ ಖೇಡೆಯ ಲಾಳಿ ಕೋಲ ನಿ । ಷ್ಠುರವಾಕ್ಯದಾಳ್ಗಳೊಗ್ಗಿನೊಳು ॥
ಚುರುಚುರನೆಯ್ದಿ ಕೈಮುಗಿದು ಗಡ್ಡದ ದೊಡ್ಡ । ತುರುಕರರಸು ತೊಲಗಿದನು ॥ ೩೬ ॥

ಕರ್ಣದ ಚೌಕುಳಿ ಗೇಣುದ್ದ ಚುಂಗು ವಿ । ಕೀರ್ಣಿಪ ಚಮರಪತಾಕೆ ॥
ಘೂರ್ಣಿಪ ವಾದ್ಯದೊಳೆಯ್ತಂದು ಕಂಡನು । ಕರ್ಣಾಟದರಸನಾ ನೃಪನಾ ॥ ೩೭ ॥

ಕುಂಭಿಯ ಕುಂಭದೊಳಂಕುಶವಿಟ್ಟತಿ । ಗಂಭೀರ ಮಿಗೆ ನೋಡುತಿಪ್ಪ ॥
ಕುಂಭಿನೀಪತಿಗೆ ಕೈಮುಗಿದೊಯ್ಯನೊಲಿದನು । ಕಾಂಬೋಜದೇಶದ ಕರ್ತಾ ॥ ೩೮ ॥

ತಿಂಗಳ ಬೆಳಗಿನ ತೆನೆಯಂತೆ ಚವರದ । ದಾಂಗುಡಿ ಢಾಳಿಸೆ ಮೆರೆವ ॥
ಸಂಗರಮಲ್ಲನ ಕಂಡು ಕೈಮುಗಿದಾಗ । ವಂಗದೇಶದ ರಾಯನೊಲಿದಾ ॥ ೩೯ ॥

ಕಿತ್ತ ಕಠಾರಿಯು ರಾಜಪುತ್ರರುಗೂಡಿ । ವೃತ್ತದೇಶದ ರಾಯ ಬಂದು ॥
ಮುತ್ತಿನ ಸತ್ತಿಗೆ ನೆಳಲೊಳಗೆಸೆವ ರಾ । ಜೋತ್ತುಂಗಗೆರಗಿದನಾಗ ॥ ೪೦ ॥

ವೇತ್ರಧರರು ಮುಂದೆ ನಿಂದವನಿವನೆಂದು । ಧಾತ್ರೀಪಾಲರ ತೋರೆ ನೋಳ್ಪ ॥
ಕ್ಷತ್ರಿಯರೊಡೆಯಗೆ ಕೈಮುಗಿದನು ಬಂದು । ಚಿತ್ರಕೂಟದ ದೇಶದರಸು ॥ ೪೧ ॥

ಪಂಚಸರದ ಪದಕದ ಮಕುಟದ ನವ । ಪಂಚರತ್ನದ ಕಾಂತಿ ಹೊಳೆವ ॥
ಪಂಚಬಾಣನ ಹಿರಿಯಣ್ಣನ ಕಂಡನು । ಪಾಂಚಾಳದೇಶದ ರಾಯಾ ॥ ೪೨ ॥

ಗೌಳಸಾರಂಬೊಲು ಚಕ್ರಿಯ ಗುಣಗಳ । ಗೌಳರಾಗದೊಳು ಪಾಡಿಸುತ ॥
ಗೌಳಿ ಫಲದೊಳುಲಿಯುಲು ಬಂದು ಕಂಡನು । ಗೌಳದೇಶದ ರಾಯ ನೃಪನಾ ॥ ೪೩ ॥

ಕಾಳಗದಾಳ್ಗಳೊಗ್ಗಿನೊಳು ಜೇಜೇಯೆಂದು । ಕಾಳೆಯನೂದಿಸಿಕೊಳುತ ॥
ಕಾಳಿಂಗದೇಶದ ರಾಯ ಬಂದಾ ಪೂರ್ವ । ಕಾಲದ ಚಕ್ರಿಯ ಕಂಡಾ ॥ ೪೪ ॥

ಆಳುಕುದುರೆಗಳ ಹರಹಿ ಭೂವರಗೆ ತ । ಮ್ಮಾಳವ ತೋರಬೇಕೆಂದು ॥
ಮಾಳವಪತಿ ಬಂದು ಕಂಡನು ಪಡೆ ನಿಡು । ಮಾಳವ ಮುತ್ತಿ ಮೂವಳಸಿ ॥ ೪೫ ॥

ಜವದಾಡೆವಿಡಿದು ಲಾಗಿಸುತ ನಡೆವ ಭಟ । ನಿವಹದ ಪೌಜಿನೊಳೆಯ್ದಿ ॥
ಧವಲದೇಶದ ರಾಯ ಬಂದು ಚಕ್ರೇಶ್ವರ । ಗವನತನಾಗಿ ಸಾಗಿದನು ॥ ೪೬ ॥

ಲೆಕ್ಕವಿಲ್ಲದ ಮಂದಿಗೂಡಿ ನೆಗಳದೊಂದು । ಟಕ್ಕೆಯನೆತ್ತಿ ಗಾಡಿಯೊಳು ॥
ಮಕ್ಕದೇಶದ ರಾಯ ಬಂದು ಕೈಮುಗಿದೊಂದು । ದಿಕ್ಕಿನೊಳಗೆ ಸಾರ್ದು ನಿಂದಾ ॥ ೪೭ ॥

ಮುಂಗಾರ ಮಿಂಚಿನಂದದಿ ಕಿತ್ತ ಖಡ್ಗದ । ಸಂಗರವೀರರೊಗ್ಗಿನೊಳು ॥
ಬಂಗಾಳದೇಶದ ರಾಯ ಬಂದಾ ರಣ । ರಂಗಮಲ್ಲಗೆ ಕೈಯ ಮುಗಿದಾ ॥ ೪೮ ॥

ಆಮ್ರಮುಟ್ಟಲು ಕಿಲುಬಳಿದು ಹೊಳೆವ ಹೊಸ । ತಾಮ್ರದ ವರ್ಣದೊಳೆಸೆವ ॥
ಸಾಮ್ರಾಣಿಯನೇರಿ ಬಂದು ಕೈಮುಗಿದನು । ಸಾಮ್ರಾಣಿದೇಶದ ರಾಯಾ ॥ ೪೯ ॥

ಕುಂತುಕೊರತೆ ಹೊದ್ದದರಸುಮಕ್ಕಳುಗೂಡಿ । ಕೊಂತ ತೋಮರದ ಸೇನೆಯೊಳು ॥
ಕುಂತಳದೇಶದರಸ ಬಂದು ಕಂಡನು । ದಂತಿಯ ಮೇಲಣ ನೃಪನಾ ॥ ೫೦ ॥

ಚಿಮ್ಮುವ ಕಾಲಾಳ ಚವರದ ಸೇನೆಯ । ಸಮ್ಮುಖದೊಳು ತೋರಿ ನಡೆಸಿ ॥
ದಿಮ್ಮದಿಮ್ಮೆಂಬ ವಾದ್ಯದೊಳೆಯ್ದಿ ಕಂಡನು । ಹಮ್ಮೀರದೇಶದ ರಾಯಾ ॥ ೫೧ ॥

ಚೌಡನನೇರಿ ಪಾಯ್ವಾಳಗೂಡಿ ಗಗನಕೆ । ಲೌಡಿಯನಿಡುತಾನುತ್ತೈದಿ ॥
ತೌಡೆಳೆಬಡಿವೆನೆನ್ನೊಡೆಯಗಾಂತರನೆಂದು । ಗೌಡದೇಶದ ರಾಯ ಕಂಡಾ ॥ ೫೨ ॥

ನೂಂಕಿ ನಡೆಸಿ ವೀರಭಟರ ನಾನಾವಾದ್ಯ । ದಿಂಕಿಡಲಿದಿರಿಗೆ ಬಂದು ॥
ಕಂಕಣವೆಸೆವ ಕೈಯೆತ್ತಿ ರಾಜೇಂದ್ರಗೆ । ಕೊಂಕಣಪತಿ ಪೊಡವಟ್ಟಾ ॥ ೫೩ ॥

ಹೊಳೆವ ಭೂಷಣ ಬಣ್ಣವಸ್ತ್ರ ಡೊಂಕಿನ ಕಡಿ । ತಲೆಯ ಕೂರಾಳ್ಗಳೊಗ್ಗಿನೊಳು ॥
ತುಳುನಾಡಿನರಸು ದೊಡ್ಡೆಗರ ತುಳಿಸುತೆಯ್ದಿ । ತುಳಿಲುಗೈದನು ಚಕ್ರಧರಗೆ ॥ ೫೪ ॥

ಕೊರ್ಬಿದೊಡಲು ಕೆದರಿದ ಮೀಸೆ ಕೆಂಗಣ್ಣು । ಪೆರ್ಬುಲಿ ಟಕ್ಕೆಯವೆಸೆಯೆ ॥
ಕೂರ್ಬಾಳ ಜಡಿವುತಶ್ವದೊಳೆಯ್ದಿ ಕಂಡನು । ಬರ್ಬರದೇಶದ ರಾಯಾ ॥ ೫೫ ॥

ಮಲಯ ಮಗಧ ಹೈವ ಮಾರಾಷ್ಟ್ರ ದೂಪಾರಿ । ಮಲೆಯಾಳ ಕೊಡಗು ಬಾಹ್ಲೀಕಾ ॥
ಮಳೆಯ ಮಧುರ ಚೋಳದೇಶದ ರಾಯರು । ಬಲದೋರಿದರು ಚಕ್ರಧರಗೆ ॥ ೫೬ ॥

ಕುರುಜಾಂಗಣದೇಶದವಂತಿದೇಶ ಮ । ಘುರದೇಶ ಮೊದಲಾದ ನೃಪರು ॥
ಪರಮಕೋಸಲದೇಶಮಧ್ಯದ ಕೌಶಲ । ಪುರದರಸನ ಕಂಡರೆಲ್ಲ ॥ ೫೭ ॥

ಆರುಖಂಡದೊಳೈದುಖಂಡದ ನೃಪರಲ್ಲಿ । ತೋರುತಿಲ್ಲೊಂದುಖಂಡದೊಳು ॥
ತೋರುವ ನೃಪರೆಲ್ಲ ಬಂದು ಕಂಡರು ಪಂಥ । ಕಾರನನಾ ಚಕ್ರಧರನಾ ॥ ೫೮ ॥

ಆರ್ಯಾಖಂಡದ ನೃಪರೆಲ್ಲ ಕಂಡರು । ಶೌರ್ಯದಿಂದೈದುಮ್ಲೇಚ್ಛದೊಳು ॥
ಕಾರ್ಯಕೆ ಬಾರದ ನೃಪರ ಕೈವಶ ಮಾಳ್ಪ । ಕಾರ್ಯಕೀ ಬಲವ ಕೂಡಿದನು ॥ ೫೯ ॥

ಜಲಧಿಯೊಳಿದ್ದ ಮೂವರು ವ್ಯಂತರೇಂದ್ರರ । ಗೆಲಿದೈದುಮ್ಲೇಚ್ಛಕೆ ನಡೆವಾ ॥
ಬಲುತಂತ್ರಕಾ ಚಕ್ರಿ ಬಲವ ಕೂಡಿದನಿನ್ನು । ಬಲದ ಲೆಕ್ಕವನೇನನೆಂಬೆ ॥ ೬೦ ॥

ದಂಭದ ಕೀಲಾನೆ ಲೆಕ್ಕವಲ್ಲನುದಿನ । ಸಂಭೂತ ಮದಧಾರೆಯಿಂದ ॥
ಜೃಂಭಿಪ ಭದ್ರಹಸ್ತಿಗಳೊಪ್ಪುತಿರುವಲ್ಲಿ । ಯೆಂಭತ್ತನಾಲ್ಕುಲಕ್ಷದೊಳು ॥ ೬೧ ॥

ಗ್ರಥಿಸಿ ಚೀತ್ಕಾರದಿ ನಡೆವ ಭರಕೆ ಶೈಲ । ಶಿಥಿಲವ ಮಾಳ್ಪ ಪೆಂಪುಳ್ಳ ॥
ರಥಗಳೆಂಭತ್ತನಾಲ್ಕೆಂಬ ಲಕ್ಷದೊಳಿ । ಮಥನಗೊಪ್ಪಿಹುವೇನನೆಂಬೆ ॥ ೬೨ ॥

ಕೂಟದ ನಾಡಾಡಿಕುದುರೆಗಳೆಣಿಕೆಯಿ । ಲ್ಲಾಟನಡೆಯೊಳು ಲಕ್ಷಣದಿ ॥
ಮಿಾಟಗೆ ಮಿಾಟೆನಲೆಸೆದುವು ಹದಿನೆಂಟು । ಕೋಟಿಸಾಂಬ್ರಾಣಿಯಾ ನೃಪಗೆ ॥ ೬೩ ॥

ಮಾತಾಳಿಬಂಟರು ಲೆಕ್ಕವಲ್ಲಿರಲಿನ್ನು । ಜಾತಿವೀರರು ರಣಜಿತರು ॥
ಖ್ಯಾತಿಯೊಳೆಂಭತ್ತನಾಲ್ಕೆಂಬ ಕೋಟಿಪ । ದಾತಿಯೊಪ್ಪಿಹುದು ಕಾಲಾಳು ॥ ೬೪ ॥

ರಣರಂಗಜಜ್ಝಾರ ಚಕ್ರೇಶನಂಗರ । ಕ್ಷಣೆಗೆ ವ್ಯಂತರಕುಲೋತ್ತಮರು ॥
ಗಣಬದ್ಧದೇವರ್ಕಳೀರೆಂಟುಸಾವಿರ । ದೆಣಿಕೆಯೊಳಿಹರು ಘೂರ್ಣಿಸುತ ॥ ೬೫ ॥

ಪಡೆಯನೆಲ್ಲವ ಕೂಡಿ ಭರತರಾಜೇಂದ್ರನು । ತೊಡೆಸನ್ನೆಯಿಂದ ಹಸ್ತಿಯನು ॥
ನಡೆಸಿದನೆಲ್ಲರು ಜಯಜಯ ಚಾಂಗೆಂದು । ಕಡಲಂತೆ ಕೂಗಿ ಬೊಬ್ಬಿರಿಯೆ ॥ ೬೬ ॥

ಛಟಿಛಟಿ ಸುರುಬುರು ಬುಸ್ಸುಬುಸ್ಸೆಂದು ಚೀ । ಚಿಟಿಟಿ ಠೊಪ್ಪುಠೊಪ್ಪು ಥಪ್ಪೆಂದು ॥
ಪೆಟಲು ಕೋಟಾಕೋಟಿ ಸುಟ್ಟವು ವೀರರಾ । ಭಟಿಸಿದರೊಂದೆ ಲಗ್ಗೆಯೊಳು ॥ ೬೭ ॥

ಭೇರಿ ನಿಸ್ಸಾಳ ಪಟಹ ಶಂಖ ಹೆಗ್ಗಾಳೆ । ವೀರಕಂಬಟ ತುಡುಮುಗಳಾ ॥
ಘೋರನೊಂದೇ ಬಾರಿ ಸದೆದರು ಪ್ರಳಯದ । ಭೈರವಾರ್ಭಟಿ ತೋರಿತೆನಿಸಿ ॥ ೬೮ ॥

ವಿಜಯವೃಕ್ಷವ ಬಲಕಿಕ್ಕಿ ನಡೆಸಿದನು । ವಿಜಯಪರ್ವತವನಾ ಚಕ್ರಿ ॥
ಧ್ವಜದೊಗ್ಗಿನೊಳು ಹೊಳೆವುತ ತೆರಳಿದುದು ಸಾ । ಮಜದ ಮುಂಗಡೆಯೊಳು ಚಕ್ರಾ ॥ ೬೯ ॥

ಎಡಬಲ ಹಿಂದುಮುಂದೆಲ್ಲಿಯು ತುಂಬಿ ಪ । ರ್ವಡೆ ನಡೆದುದು ಕಡಲಂತೆ ॥
ನಡುವೆ ಮಂದರದಂತೆ ರಾಜೇಂದ್ರ ಮುತ್ತಿನ । ಕೊಡೆಯು ನೆಳಲೊಳೆಯ್ದುತಿರ್ದಾ ॥ ೨೦ ॥
ದೊರೆದೊರೆಗಳು ತಮ್ಮ ಪೌಜಿನೊಳೂದುವ । ಬಿರುದಿನ ಕಹಳೆವಾದ್ಯದೊಳು ॥
ಬರುತಿದ್ದರೋಲೈಸಿ ಭರತರಾಜೇಂದ್ರನ । ಸಿರಿಗೆಣೆಯುಹ ಸಿರಿಯುಂಟೆ ॥ ೨೧ ॥
ಭಾನುವ ಬೆನ್ನಿಕ್ಕಿ ಹೆಚ್ಚುವ ಚಂದ್ರನ । ತಾನಿದಿರೊಳಗೆ ನಿಟ್ಟಿಸುತ ॥
ಸೇನಾಸಹಿತ ಭುಗುಭೋರೆಂಬ ವಾದ್ಯವು । ಹಾನಾದದೊಳು ಮುಂದೆ ನಡೆದಾ ॥ ೨೨ ॥
ಜಯಘೋಷದೊಳು ಪುರಕತಿದೂರವಾಗದೋ । ಜೆಯೊಳು ಕಿರಿದು ದೂರ ಗಮಿಸಿ ॥
ಮಯ ರಚಿಸಿದ ಬೀಡುದಾಣದ ಕೆಲದೊಳಾ । ನೆಯ ನಿಲಿಸಿದನವನೀಶಾ ॥ ೨೩ ॥
ತೇರ ಮೇಲಾನೆಯ ಮೇಲೆ ತೇಜಿಯ ಮೇಲೆ । ಸಾರೆ ನಿಂದಖಿಲಭೂಮಿಪರಾ ॥
ತೋರಹಸ್ತದ ಸನ್ನೆ ಕಣ್ಸನ್ನೆಯಿಂದ ಬೀ । ಡಾರಕೆ ಬೀಳ್ಕೊಟ್ಟನೊಡನೆ ॥ ೨೪ ॥
ಮೋಡಿಯುರಿದು ದೊರೆದೊರೆಗಳ್ಗೆ ಮನೆಗಳ । ರೂಡಿಸಿರ್ದನು ವಿಶ್ವಕರ್ಮಾ ॥
ಗೂಡಾರಗುಡಿಗಳ ಹಂಗಿಲ್ಲದೆಲ್ಲರು । ಬೀಡಾರಗಳ ಹೊಕ್ಕರೊಸೆದು ॥ ೨೫ ॥
ಬೆಟ್ಟದಿಂದಿಳಿವಂತೆ ಗಜವನಿಳಿದು ಬೀ । ಳ್ಕೊಟ್ಟನು ಬುಧರ ವೇಶ್ಯೆಯರಾ ॥
ಕಟ್ಟಿಗೆಕಾರರುಗ್ಗಡಿಸೆ ಪಾವುಗೆಗಳ । ಮೆಟ್ಟಿ ಬೀಡಿಗೆ ಪಜ್ಜೆಯಿಟ್ಟಾ ॥ ೨೬ ॥
ಪಾಗರವೊಂದೆರಡನು ದಾಟಿ ಮುಂದೊಂದು । ಬಾಗಿಲೊಳ್ನಿಂದನಾ ರಾಯಾ ॥
ಹೋಗಿ ಹೋಸದ ವೇಳೆಯಾಯ್ತೆಂದು ಬೆಂಬಳಿ । ಯಾಗಿ ಬಂದವರ ಬೀಳ್ಕೊಟ್ಟಾ ॥ ೨೭ ॥
ಬುದ್ಧಿಸಾಗರನ ಸೇನಾಧಿಪತಿಯ ಗಣ । ಬದ್ಧರ ಕೆಳೆಯರ ಕಳುಹಿ ॥
ಶುದ್ಧಾಂತರಂಗ ಹೊಕ್ಕನು ಭದ್ರಮುಖನೆಂಬ । ವಿದ್ಧಿ ಮಾಡಿದ ಶಿಬಿರವನು ॥ ೨೮ ॥

ಒಳಗೊಂದು ಮದುವೆಯ ಜಗಲಿ ಸಿಂಗರಿಸಿರ । ಲೊಲೆದು ರಾಜೇಂದ್ರ ನೋಡುತಿರೆ ।
ಕೆಲದಲ್ಲಿ ಕುಸುಮಾಜಿ ನುಡಿದಳು ಮುಂದೆ ಮಂ । ಗಲದ ಸೂಚನೆ ನಿವಗೆಂದು ॥ ೨೯ ॥
ಇದು ತನ್ನ ತಂಗಿಯ ಮದುವೆಗಿಂದವಳಿಸ । ಗಿದ ತಿಟ್ಟವೆಂದದನರಿದಾ ॥
ಸುದತಿಯ ಕಾರ್ಯವ ಪುರದೊಳಿದ್ದಾಗ ಸಂ । ಪದಿಸುವುದೇನಾದುದೆಂದಾ ॥ ೩೦ ॥
ಕಳುಹಿದೆನಹುದಿಲ್ಲಿಗಪ್ಪಾಜಿ ಬಹುದಿಷ್ಟು । ತಳುವಾದುದದರಿಂದ ಮುಂದೆ ॥
ತಳರ್ದಾಗ ವೇಳೆ ಸಂಘಡಿಸದೆಂದಿಲ್ಲಿ ಸಂ । ಗಳಿಸಿದೆನೆಂದಳಾ ಕುಶಲೆ ॥ ೩೧ ॥
ಇರುಳಿಗೆ ಲಗ್ನ ಲೇಸೆಂದೆಮ್ಮ ಜನಕ ನಿ । ರ್ಧರಿಸಿ ಬಂದಿದ್ದನೆನ್ನನುಜೆ ॥
ಪರಿಪೂರ್ಣಶೃಂಗಾರವಡೆದಿರ್ದಳೆನುತಾಕೆ । ಪುರುಷನೊಳ್ನುಡಿವುತೆಯ್ದಿದಳು ॥ ೩೨ ॥
ಒಂದುಪಂತಿಯೊಳಂತರಾಯವಿಲ್ಲದೆ ಪೆಂಡಿ । ರೊಂದಾಗಿ ಭೋಜಿಸಿ ನೃಪತಿ ॥
ಮುಂದಣ ಜಯದ ಸೂಚನೆಯಿದು ನವಗೆಂದು । ಸೌಂದರಿಯರ ಕೂಡೆ ನುಡಿದಾ ॥ ೩೩ ॥

ಅರ್ಕನಸ್ತಮಿಸೆ ಸಂಧ್ಯಾಚರಣೆಯ ಮಾಡಿ । ಅರ್ಕಕೀರ್ತಿಯನು ಮುದ್ದಾಡಿ ॥
ತೋರ್ಕೆಯೊಳೊಡನೆ ಸಿಂಗರಿಸಿ ಕಾಂತೆಯರ ಸಂ । ಪರ್ಕದೊಳಿರ್ದನಿರ್ಪಾಗ ॥ ೮೪ ॥
ಮುಟ್ಟಲಾದುದು ಲಗ್ನವೆನೆ ರಾಯ ನಡೆತಂದು । ಮೆಟ್ಟಕ್ಕಿಗಳ ಮೆಟ್ಟಿ ನಿಂದು ॥
ನಿಟ್ಟಿಸಿ ಮಾವನೊತ್ತಿನೊಳಿದ್ದ ಮೈದುನ । ಗಟ್ಟಹಾಸದೊಳಿಂತು ನುಡಿದಾ ॥ ೮೫ ॥
ಕುಸುಮಾಜಿಯಂತಲ್ಲ ಕಮಲಾಂಕ ಕೇಳು ಕೋ । ಪಿಸಿ ನನ್ನ ಜರೆದಿರ್ದಳವಳು ॥
ಅಸಮಾನದವಳ ನೀನೆನಗೀವೆನೆಂಬುದು । ರಸಿಕರ ಮಾರ್ಗವೆಯೆಂದಾ ॥ ೮೬ ॥
ವಸುಧೆಯೊಳ್ನಿನಗೆ ಸಮಾನವಿಲ್ಲಾಗಿ ನೀ । ನಸಮಾನದವನದರಿಂದ ॥
ಅಸಮಾನದವನೀಶಗಸಮಾನದಬಲೆಯು । ರಸಿಕರೀಯುಕ್ತಿಯೆಂದನವನು ॥ ೮೭ ॥
ಪಯಣದ ವೇಳೆಯಾದುದು ಬಹುವಾಕ್ಯಕಾ । ಶ್ರಯವಿಲ್ಲ ಸೈರಿಸೆಂದೊರೆದು ॥
ನಿಯತಶೋಭನಮಂಗಲಾಷ್ಟಕಗೇಳುತೋ । ಜೆಯೊಳಿರ್ದನಾ ಮೋಡಿಕಾರಾ ॥ ೮೮ ॥
ನಿಕಟದ ತೆರೆ ಜಾರೆ ವಾದ್ಯ ಘೂರ್ಣಿಸೆ ಗಜಾ । ನಕರಾಜನು ಧಾರೆಯೆರೆಯೆ ॥
ಮಕರಂದಾಜಿಯನಾ ರಾಯ ಹೋಮಸಾ । ಕ್ಷಿಕದಲ್ಲಿ ಹಸ್ತವಿಡಿದನು ॥ ೮೯ ॥
ರಾಜೇಂದ್ರನರಮನೆಗವಳನೊಯ್ದನು ಕುಸು । ಮಾಜಿ ಬೀಳ್ಕೊಟ್ಟಳಯ್ಯನನು ॥
ಸೌಜನ್ಯಕಾಂತೆಯರೆಲ್ಲರೊಳಾ ಮಹಾ । ರಾಜನಿದ್ದನು ಸುಖಾಂಗದೊಳು ॥ ೯೦ ॥
ವಶವಹುದೀತಗುರ್ವರೆ ನಾಳೆಯೇಕಾ । ದಶಿ ಮುಂದೆ ನಡೆವವೆಂದೆನುತ ॥
ಕುಶಲವೃತ್ತಿಯೊಳು ಪಾಯ್ದಳವಿದ್ದುದಿಲ್ಲಿಗೆ । **ದಶಮಿಪ್ರಸ್ಥಾನದ ಸಂಧಿ** ॥ ೯೧ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜ ನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೨ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೩ ॥
ಅರಿವು ನೋಟವೆ ನಿಜರೂಪಾಗಿ ಕಾಂತಿಯ । ಕರೆವ ಜ್ಯೋತಿರ್ಮಯರೂಪಾ ॥
ಮರೆಯಾಗದೆನ್ನ ಮೈಮರೆಯೊಳಗಿರು ಭವ್ಯ । ರೆರೆಯಾ ಚಿದಂಬರಪುರುಷಾ ॥ ೯೪ ॥

ದಶಮಿಪ್ರಸ್ಥಾನಸಂಧಿ ಸಂಪೂರ್ಣಂ

# ಪೂರ್ವಸಾಗರದರ್ಶನಸಂಧಿ.

---

ಭವದುಃಖಭಂಜನ ಭವ್ಯಾನುರಂಜನ । ಅವಧೂತಕರ್ಮ ಸುಶರ್ಮಾ ॥
ಸವಿನುಡಿಡೋರು ಸನ್ಮುನಿಮನೋಹರ ಸದಾ । ಶಿವನೆ ನಿರಂಜನಸಿದ್ಧಾ ॥ ೧ ॥

ಏಕಾದಶಿಯುದಯದೊಳೆದ್ದು ಭರತೇಶ । ಸಾಕೇತಪುರದ ರಕ್ಷಣೆಗೆ ॥
ಮಾಕಾಳನೆಂಬನ ಬೀಳ್ಕೊಟ್ಟು ಮುಂದೆಸೆ । ವಾ ಕೋಟಿ ನಡೆಯ ಹೇಳಿದನು ॥ ೨ ॥
ಬೆಟ್ಟವ ತೋಡಿ ತೊಗಲ ಕಟ್ಟಿದಂತಳ । ವಟ್ಟ ಪನ್ನೆರಡುಭೇರಿಗಳಾ ॥
ಕುಟ್ಟಿದರಾಗಳೆ ಜಗವೆಲ್ಲ *ಮೊಳಗಿನ । ಮೊಟ್ಟೆಯ ಕಟ್ಟಿದಂತಾಯ್ತು ॥ ೩ ॥
ಟಿಕ್ಕೆಯ ನೇಜಯವೆದ್ದುವು ತಿಳಿವೆಳ । ಗುಕ್ಕುತ ತೆರಳಿತು ಚಕ್ರಾ ॥
ಕಿಕ್ಕಿರಿದನುಪಮರತ್ನಮಯದ ಪ । ಲ್ಲಕ್ಕಿಯೊಳಿರ್ದನಾ ರಾಯಾ ॥ ೪ ॥
ಬಿಳಿಯ ತಾವರೆಯಂತೆ ನೆಗೆದ ಸತ್ತಿಗೆ ಹಂಸೆ । ಸುಳಿಹಂತೆ ಬೀಸುವ ಚವರಾ ॥
ಕೆಳೆಯರು ಮಧುವಿಂದು ಮರುತನಂತೆಯ್ತರೆ । ತಳರ್ದನಾ ರಾಜಮನೋಜಾ ॥ ೫ ॥
ಸಯ್ಯರಿದುತ್ತಮರೂದಿ ಕೊಳಲು ತಪ್ಪ । ಕೈಯ್ಯೊಳುದಯರಾಗದೊಡನೆ ॥
ಮೆಯ್ಯೊಳಿದ್ದಾತ್ಮಕಲೆಯ ಹಾಡುತಿರೆ ಕೇಳು । ತೊಯ್ಯನೆಯ್ದಿದನಾತ್ಮರಸಿಕಾ ॥ ೬ ॥
ಮಣಿಮಯಖೇಟಕ ಜಡೆ ವೀರಗಾಸೆ ಚ । ಲ್ಲಣ ಕಿತ್ತ ಖಡ್ಗಗಳಿಂದ ॥
ಗಣಬದ್ಧದೇವರ್ಕಳೆಯ್ತಂದರಾಗ ಸಂ । ದಣಿಸಿ ಪಲ್ಲಕ್ಕಿಯ ಸುತ್ತ ॥ ೭ ॥
ಪೊಡವಿಪನಂಗರಕ್ಷಣೆಯೊಳಿರ್ಚ್ಪಾಸಿರ । ನಡೆದುದು ಗಣಬದ್ಧನಿವಹಾ ॥
ನಡೆಗೋಟೆಯೆನೆ ಬಂದುದರಸಿಯರೊಡನೆ ಪಿಂ । ಗಡೆಯೊಳೀರೇಳುಸಹಸ್ರಾ ॥ ೮ ॥
ದಂಡಿಗೆಕುದುರೆಯೊಳೂಳಿಗವೆಂಗಳು । ಪೆಂಡಿರು ಪಲ್ಲಕ್ಕಿಗಳೊಳು ॥
ಮಂಡಿತರಥದೊಳು ಕುವರನ ತೊಟ್ಟಿಲು । ದಂಡಿಗೆಯ್ತರುತಿರ್ದರಾಗ ॥ ೯ ॥
ಸಾರ್ತಂದ ಪೌಜು ತನ್ನದು ಪೆಣ್ಣ ಪೌಜರ್ಕ । ಕೀರ್ತಿಯ ಪೌಜೆಂದು ಜಗಕೆ ॥
ವಾರ್ತೆಯ ಪುಟ್ಟಿಸಿ ನಡೆತಂದನಾ ಚಕ್ರ । ವರ್ತಿ ಮುಂದಧಿಕಲೀಲೆಯೊಳು ॥ ೧೦ ॥
ತರಳನ ಪೌಜಿನ ಹಿಂದಿಪ್ಪ ದೂರವಾ । ಗಿರೆ ಕೋಟಿಭಟರೊಡಗೂಡಿ ॥
ಭರತಪಾದುಕರೆಂಬ ಗೊಲ್ಲನಾಯಕರಿಬ್ಬ । ರರಿವಿಜಯರು ಬರುತಿಹರು ॥ ೧೧ ॥

ಪೂರ್ವಾಹ್ಣಕಾಲದೊಳಗೆ ಪುರುಜಿನಪುತ್ರ । ಪೂರ್ವಯುಗದ ಚಕ್ರವರ್ತಿ ॥
ಪೂರ್ವಾಭಿಮುಖನಾಗಿ ದಂಡು ನಡೆದುದೊಂದ । ಪೂರ್ವಸಂಭ್ರಮವನೇನೆಂಬೆ ॥ ೧೨ ॥

---

*ಶಬ್ದದ

ಕರಿಘಟೆ ತೇಜಿಯು ತಟ್ಟು ತೇರೊಡ್ಡು ಸಂ । ಗರವೀರಭಟರ ಸಮೂಹಾ ॥
ಬರುತಿದ್ದುದೆಡಬಲ ಹಿಂದುಮುಂದೆನ್ನದೆ । ಶರಧಿ ಮೇರೆಯ ಮೀರಿದಂತೆ ॥ ೧೩ ॥
ಪರಿಪರಿ ಟೆಕ್ಕೆಯ ಪರಿಪರಿ ಸತ್ತಿಗೆ । ಪರಿಪರಿ ವಾಹನ ವಾದ್ಯ ॥
ಪರಿಪರಿ ಶೃಂಗಾರವೆಸೆಯೆ ನಡೆದರಾತ್ಮ । ಪರಿವಾರಗೂಡಿ ಭೂಭುಜರು ॥ ೧೪ ॥
ಆನೆಗಳ್ಹಿಗಳು ಮತ್ತಾರಥ ಪಡಗು ನ । ವೀನತುರಂಗ ತರಂಗಾ ॥
ಆ ನೆಲದಗಲದೊಳಾದಿಚಕ್ರೇಶನ । ಸೇನೆ ನಡೆದುದಬ್ಧಿಯಂತೆ ॥ ೧೫ ॥
ಘುಡುಘುಡಿಸುವ ವಾದ್ಯ ಗುಡುಗು ಚೀರ್ಚಿಟಿಲೆಂದು । ಸಿಡಿವ ಪೆಟಲು ತಾನೆ ಸಿಡಿಲು ॥
ಕುಡುಮಿಂಚಿನಂತೆ ಕೂರಲಗು ಪೂಳೆಯೆ ಪಡೆ । ನಡೆದುದು ಕಾರ್ಗಾಲದಂತೆ ॥ ೧೬ ॥
ಬುರುಬುರಿಸುವ ಬಹುವಾದ್ಯಕೆ ಕಾಲ್ತ್ತರ । ಹರಿಸದೆ ರಾಯನಿದಿರೊಳು ॥
ಹರಿಗೆಕಾರರು ತೇಜಿಯಂತಡ್ಡ ರಥದೊಳು । ಹರಿದಾಡುತೆಯ್ತಂದರಾಗ ॥ ೧೭ ॥
ಸಾಲಾಗಿ ತೆರೆಯಂತೆ ಹರಿವರು ಮುಗುಳ್ನರು । ಗಾಲಿಗಳುರುಳುವಂದದೊಳು ॥
ಕಾಳಗದೊಳಗೊಮ್ಮೆ ಬಿಟ್ಟು ನೋಡೊಡೆಯ ನಿ । ನ್ನಾಳನೆಂದಿದಿರೊಳುಲಿವರು ॥ ೧೮ ॥
ತೊಡೆಚಾಚಿ ಹರಿಗೆಬೆರಸಿ ನೆಗೆವರು ಬಾಳ । ಜಡಿವರಾಲುವರು ತೇಲುವರು ॥
ಒಡೆಯನೆಂದಿಗೆ ಬಿಟ್ಟು ನೋಳ್ಪನೆಂದುರೆ ಕೈಯ । ಕಡಿದುಕೊಂಬರು ರಾಯ ನಗಲು ॥ ೧೯ ॥
ನೂಕಿಂದೊಬ್ಬೊಬ್ಬರರ್ತಿಗೆ ಹರಿಗೆಯ । ತಾಕಿಸುವರು ತಗರಂತೆ ॥
ಜೋಕೆಯೊಳೊಲಿವುತೋಲೈಸಿ ಬಂದರು ಚಕ್ರ । ವಾಕದ ಪಕ್ಷಿಗಳಂತೆ ॥ ೨೦ ॥
ಬಿಲ್ಲಂಬನೊಕ್ಕೈಯಗೊಂಡು ಬಿಲ್ಗಾರರು । ಹುಲ್ಲೆವಾರುವರು ಹೊಳೆವರು ॥
ಗೆಲ್ಲವರೆಯ ಗತಿಗೋಡಾಡಿ ಬಂದರು । ಜಲ್ಲಿಯ ಮೃಗ ಬೆಚ್ಚಿದಂತೆ ॥ ೨೧ ॥
ಬಾಣವ ತುಂಬ ತೆಗೆವರು ಪಲ್ಗಡಿದಿದಿ । ಗರ್ಾಣದೆ ಕೂಡಿಳುಹುವರು ॥
ಚೂಣಿಯೊಳಗೆ ನಮ್ಮ ಬಿಟ್ಬೊಮ್ಮೆ ನೋಡೆಲೆ । ಕ್ಷೋಣೀಶನೆಂಬರಿದಿರೊಳು ॥ ೨೨ ॥
ತಲೆಯ ಮೇಲೆತ್ತಿ ಬಿಲ್ದಿರುಹುವರೆಡಬಲ । ಕೊಲೆವರು ಕುಪ್ಪಿ ನಡೆವರು ॥
ಕಲಹ ಸಿಕ್ಕಿದರೆಮ್ಮ ಭಾಗ್ಯವೆನುತ ತಮ್ಮೊ । ಳುಲಿವುತೆಯ್ದುವರು ಬಿಲ್ಲವರು ॥ ೨೩ ॥
ಗಡೆಯ ಭಟರು ಗಗನವ ತಿವಿವಂತೆ ಪೆ । ರ್ಗಡೆಯೆತ್ತಿ ಪೆರ್ಗಡೆಗೂಡಿ ॥
ಗಡಬಡಿಸುವ ವಾದ್ಯಗತಿಗೆ ಭೂಭುಜನ ಮುಂ । ಗಡೆಯೊಳು ಕುಣಿವುತೆಯ್ದುವರು ॥ ೨೪ ॥
ಗಡೆಯನುಬ್ಬಿನೊಳುದ್ಧಕಿಡುವರಾನುವರೊಂದು । ಕಡೆಯ ಹಿಡಿದು ಝಳಪಿಪರು ॥
ನಡುಗುವ ಗಡೆಯ ಕೈದುಡುಕಿ ನಡೆವರು ಹಾ । ವಡಿಗ ಸರ್ಪನನಾಡಿಪಂತೆ ॥ ೨೫ ॥
ಒಬ್ಬೊಬ್ಬರಿದಿರಾಗಿ ಮೊನೆಮೊನೆಗಾಣಿಪ । ರುಬ್ಬಿ ಹಾರುವರು ಜಾರುವರು ॥
ಒಬ್ಬುಳಿಗಡೆಯೆತ್ತಿ ನಡೆವರು ಜೋಳದ । ಹೆಬ್ಬೆಳಸೆದ್ದುದೆಂಬಂತೆ ॥ ೨೬ ॥

ಕುದುರೆಕಾರರು ಕುದುರೆಯ ನೂಂಕಿ ಭರತೇಶ । ನಿದಿರಿಗೆಯ್ತಂದು ಕೈಮುಗಿದು ॥
ಸದೆವ ವಾದ್ಯದ ಗತಿಯೊಳು ತಮ್ಮ ಕುದುರೆಯ । ಚದುರಿಂದ ಕುಣಿಸುತೆಯ್ದುವರು ॥ ೨೭ ॥
ಅಡ್ಡವಡ್ಡಕೆ ತೆಗೆವರು ತಿರಿಮುರಿಯೆನ । ಲಡ್ಡ ಹರಿವ ಹೊಳೆಯಂತೆ ॥
ಒಡ್ಡಾಗಿ ಸರಿತಮಾಡುವರು ನೇರದೊಳು ಸಾ । ಲೊಡ್ಡಿ ಹರಿವ ತೊರೆಯಂತೆ ॥ ೨೮ ॥
ವೇಢೆಯದೊಳು ತೆಗೆವರು ಕುಂಭಕಾರನ । ರೂಢಿಯ ಚಕ್ರದಂದದೊಳು ॥
ಪ್ರೌಢಚಕ್ರಿಯ ಬಲವೆಂಬ ಸಮುದ್ರದ । ಗಾಢದ ಸುಳಿಯೊಯೆಂಬಂತೆ ॥ ೨೯ ॥
ಕಿರಿದಿನೊಳೊಲೆವರಲ್ಲಲ್ಲಿಗೆ ಹಾರಿಸಿ । ತುರುಗಿ ದುವ್ವಾಳಿಸುತಿಹರು ॥
ತೆರಪನರಿದು ಸಡಿಲವ ಬಿಟ್ಟು ದಾಯೆಂದು । ನೆರೆ ಬೇಗದೋರ್ವರೊಡೆಯಗೆ ॥ ೩೦ ॥
ಕುಪ್ಪಿಸುವರು ಕುಣಿಸುವರೆಡಬಲ ಕಂದ । ಕಪ್ಪಿಸುವರು ಮೇಣದಂತೆ ॥
ತೆಪ್ಪವ ತೆಗೆವಂತೆ ತೆಗೆದೇರಿ ರಾವುತ । ರೊಪ್ಪದಿ ಬಂದರೋಲೈಸಿ ॥ ೩೧ ॥

ಮಾವತಿಗರು ಮದದಾನೆಯ ನೂಂಕಿ ಕ । ಲಾವಿದನಿದಿರಿಗೆ ಬಂದು ॥
ದೇವಗೆ ಪೊಡವಡೆಂದಾನೆಯನೆರಗಿಸಿ । ತಾವು ಕೈಮುಗಿದರುಬ್ಬಿನೊಳು ॥ ೩೨ ॥
ಅಂಕುಶವಿಟ್ಟಡ್ಡ ತೆಗೆವರಾನೆಯ ಕಾಲ । ಸಂಕಲೆ ಝುಣರುಝುಗ್ಗೆನಲು ॥
ನೂಂಕುವರಿದಿರಿಗೆ ಕಡಲೊಳು ಹಡಗ ಬ । ಲ್ಲಂಕದಿ ನೂಕುವಂದದೊಳು ॥ ೩೩ ॥
ಆನೆಯ ಬಳಿವಿಡಿದಾನೆಯ ನಡೆಸಿ ಸಾ । ಲಾನೆಯ ಕಾಣಿಸಿದಾಗ ॥
ಸೇನಾಂಬುರಾಶಿಗೆ ಸೇತುಗಟ್ಟಿದವೊಲು । ಮಾನವೇಂದ್ರಗೆ ತೋರುತಿಹರು ॥ ೩೪ ॥
ಸೊಂಡಿಲನೆತ್ತಿ ಬಾಲವ ನೀಡಿ ಕಿವಿಗಳ । ಮುಂಡಿಸಿ ಬಲ್ದನಿದೋರಿ ॥
ಚಂಡೇಭ ಸುಳಿದುವು ಗಿರಿಯಿಂದ ಕಡುದೊಡ್ಡ । ಗುಂಡುಗಳುರುಳುವಂದದೊಳು ॥ ೩೫ ॥
ಸುರಿವ ಮದದ ಕಂಪಿಗೆರಗುವ ತುಂಬಿಯು । ನೇವಿ ಘಮ್ಮೆಂದುಬ್ಬಿ ಕೆದರೆ ॥
ಭರತೇಶನಿದಿರೊಳು ದಿಂಕಿಟ್ಟು ನಡೆದುದು । ಕರಿಘಟೆ ಕಮ್ಪರೆಗೊಂಡು ॥ ೩೬ ॥

ಗಾಲಿಗಳುರುಳೆ ಪತಾಕೆಗಳದಿರೆ ಮುಂ । ಗಾಲು ಮಡಿದು ಕುದುರೆಗಳಾ ॥
ಭೂಲಂಬದೊಳು ರಥಗಳ ತೆಗೆಯುವು ನೀರ । ಮೇಲೆನಿಸುವ ಬೆಡಗಿನೊಳು ॥ ೩೭ ॥
ಚೀತ್ಕಾರವೆಸೆಯೆ ರಥಿಕರು ರಥಗಳ ಚ । ಮತ್ಕಾರದಿಂದೊತ್ತಿ ತಂದು ॥
ಪೂತ್ಕಾರವೆಸೆಯೆ ಕೈಮುಗಿದು ನಡೆಸಿದರು । ಕುತ್ಕೀಲಗಳ ನೂಂಕುವಂತೆ ॥ ೩೮ ॥
ಗರಿಗರಿನುರುಳುವ ಗಾಲಿ ಬಾಯೊಳು ನೊರೆ । ಸುರಿವುತ ತೆಗೆವ ತೇಜಿಗಳು ॥
ಉರುಹೇಮರಥದ ಸಾಲ್ನಡೆದುದು ಚಿನ್ನದು । ಪ್ಪರಿಗೆಯ ಸಾಲ್ನಡೆದಂತೆ ॥ ೩೯ ॥
ಉಪ್ಪರಿಗೆಯ ಮಾಡದೊಳು ನಿಂದ ಬಹುವರ್ಣ । ದೊಪ್ಪುವ ಮುಗಿಲೊಲೆವಂತೆ ॥
ದಪ್ಪವಡೆದ ಪಂಚವರ್ಣದ ರಥದ ಸಾ । ಲುಪ್ಪರವೆತ್ತು ನಡೆದುದು ॥ ೪೦ ॥

ಸ್ಯಂದನಗಜಹಯಭಟರ ವೊತ್ತದೊಳು ಪೊ । ನ್ನಂದಣಗಳನೇರಿ ನೃಪರು ॥
ಇಂದುವನೋಲೈಪ ನಕ್ಷತ್ರಗಣದಂತೆ । ಬಂದರೋಲೈಸಿ ಚಕ್ರಿಯನು ॥ ೪೧ ॥
ಅಮರೇಂದ್ರನೊಡನೆಯ್ದುವಮರರೊ ಭವನೇಂದ್ರ । ಗಮಿಸಲೆಯ್ದುವ ಭವನಜರೊ ॥
ಅಮಮ ಚಕ್ರೇಶನನೋಲೈಸಿ ಬಂದರು । ತ್ತಮದೇಶಪಾಲರೊಗ್ಗಿನೊಳು ॥ ೪೨ ॥
ಕರವಾಳನಾಂತಪರಂಜಿಯ ಸಂಜೋಗ । ಉರಿವ ಸಾಮ್ರಾಣಿಗಳೇರಿ ॥
ಅರಸುಮಕ್ಕಳು ಬರುತಿದ್ದರು ರಾಯನ । ಮುರಿಮುರಿದೀಕ್ಷಿಸುತೊಡನೆ ॥ ೪೩ ॥
ಹರಿದಾಡುತೇರಾಡುತಿದಿರೊಳು ಪೋಪ ಬಂ । ಟರನೆರಳ್ಪಕ್ಕದ ನೃಪರಾ ॥
ವರವಂಶದರಸುಮಕ್ಕಳನೊಲಿದೊಲಿದು ಭೂ । ವರ ನೋಡುತೆಯ್ತರುತಿರ್ದಾ ॥ ೪೪ ॥
ಕೊಳಲ ರಾಗವ ಕೇಳುತೊಳಗರಿದಾಡುವ । ಕೆಳೆಯರ ನುಡಿಯ ಲಾಲಿಸುತ ॥
ದಳಪತಿ ದಳದ ಮುಂದೆಯ್ದೆ ಸಚಿವ ತನ್ನ । ಕೆಲದೊಳೆಯ್ತರೆ ತೆರಳಿದನು ॥ ೪೫ ॥
ದಾರಿಯೊಳಿಷ್ಟಿಷ್ಟರೊಳು ಬಹುದೆಂಬ ಕು । ಮಾರನ ರಾಜೀವಸ್ಥಿತಿಯಾ ॥
ಆರಯ್ಯುತಾ ರಾಯ ತಳರ್ದನು ಪಡೆ ತುಂಬಿ । ಭೋರೆಂಬ ವಾದ್ಯಘೋಷದೊಳು ॥ ೪೬ ॥
ದೆಸೆ ತುಂಬಿ ನಡೆವ ಪಾಯ್ದಳಗೂಡಿ ತನ್ನ ಭಾ । ವಿಸುತೊಂದು ಪಯಣವ ಸಾಗಿ ॥
ಬಿಸಿಲು ಬಲಿಯದ ಮೊದಲೆ ಬೀಡ ಬಿಡಿಸಿದ । ನೊಸೆದೊಂದು ತೆರಪಿನೆಡೆಯೊಳು ॥ ೪೭ ॥
ಉಚಿತದಿಂದೆಲ್ಲರ ಬೀಳ್ಕೊಟ್ಟು ಸುರಶಿಲ್ಪಿ । ರಚಿಸಿದ ಶಿಬಿರವ ಹೊಕ್ಕಾ ॥
ಪ್ರಚುರಾರ್ಕಕೀರ್ತಿಯ ಪೌಜು ಬಂದುದು ರಾಯ । ನಚಲಿತಲೀಲೆಯೊಳಿರ್ದಾ ॥ ೪೮ ॥
ಕೊಟ್ಟಿಗೆ ಕೊಲ್ಲಾರ ಕೀಲಾರ ಹೊರೆಯು ತಾ । ಳ್ದೊಟ್ಟಿಗಳ್ಪಾಸುಮಂಚಗಳು ॥
ಪೆಟ್ಟಿಗೆ ಭಂಡಾರ ಬೊಕ್ಕಸ ಸಾಗಿ ಬಂ । ದೊಟ್ಟುಗೂಡಿದುವು ಬೀಡಿನೊಳು ॥ ೪೯ ॥
ಪರದರು ಬೆಲೆವೆಂಗಳಾಡುವರ್ಪಾಡುವ । ರ್ಪರಿದು ವರ್ತಿಸೆ ಪಾಳೆಯದೊಳು ॥
ಅರಸು ಬಿಟ್ಟಲ್ಲಿ ಪಟ್ಟಣವೆಂಬ ನುಡಿದೋರು । ತಿರಲೊಂದು ದಿನವಿದ್ದನಲ್ಲಿ ॥ ೫೦ ॥

ಬರಸಿಡಿಲಂತೆ ಭಾರಿಯ ಭೇರಿ ಸೂಳೈಸೆ । ಮರುದಿನವೆದ್ದನಲ್ಲಿಂದ ॥
ತೊರೆಯುಕ್ಕಿ ಹರಿವಂತೆ ಹರಿವುತಿದ್ದುದು ರಾಯ । ರೆರೆಯನ ಸೇನೆ ಲೀಲೆಯೊಳು ॥ ೫೧ ॥
ದಿಗ್ಗಜದಂದದ ಗಜಘಟೆ ನಡೆವಾಗ । ಲಗ್ಗೆಯ ರಥ ಹರಿವಾಗ ॥
ತಗ್ಗುತಿದ್ದುದು ಭೂಮಿ ಕಿರುಬೆಟ್ಟ ಬಡಬೆಟ್ಟ । ನುಗ್ಗಾಗಿ ನೆಲಸಮವಾಯ್ತು ॥ ೫೨ ॥
ಹದಿನೆಂಟುಕೋಟಿಸಾಮ್ರಾಣಿಗಳತ್ತಿತ್ತ । ಕೆದರಿ ಕಾಲಿಡುವುವಾವೆಡೆಗೆ ॥
ಅದಿರುತಿದ್ದುದು ನೆಲ ವೈರಿರಾಯರ ಧೈರ್ಯ । ಕದಲುವಂತೆದೆಹಾರುವಂತೆ ॥ ೫೩ ॥
ಆಳುಗಳತ್ತಿತ್ತ ಹರಿವ ಭರಕೆ ಕಾಲ । ಧೂಳೆದ್ದು ಗಗನವ ಮುಸುಕೆ ॥
ಕಾಲವಲ್ಲದ ಕಾಲ ಸಂಜೆದೋರಿತು ವೈರಿ । ಜಾಲಕುತ್ಪಾತವೆದ್ದಂತೆ ॥ ೫೪ ॥

ಬಡಿವ ವಾದ್ಯದ ರಭಸಕೆ ದೂರದೊಳು ನಿಂದ । ನಿಡುಬೆಟ್ಟಗಳ ಕಟ್ಟು ಸಡಲಿ ॥
ಗುಡುಗುಟ್ಟಿ ಗುಂಡುಗಳುರುಳ್ದುವುಂಡಲಿಗೆಯ । ಮಡಕೆಯನೊಡೆಯ ಹೊಯ್ವಂತೆ ॥ ೫೫ ॥
ಎಡೆತೊರೆಗಳ ಮುಂದೆ ನಡೆವವರ್ಕುಡಿದರು । ನಡುವೆ ಪೋಪರಿಗರಿಲಾಯ್ತು ॥
ಕಡೆಯೊಳೆಯ್ದುವರ ಕಾಲೊಳು ಹುಡಿ ಹಾರಿತು । ನಡೆದುದು ಚಕ್ರಿಯ ಕಟಕಾ ॥ ೫೬ ॥
ಪಡೆಗೂಡಿ ರಾಜೇಂದ್ರನಲ್ಲಲ್ಲಿ ಪಾಳೆಯ । ಬಿಡುತೇಳುತೆಯ್ತಂದನಿತ್ತ ॥
ಪಡೆಯ ಪತಾಕೆಯೊಳಲ್ಲಲ್ಲಿ ಪಕ್ಕಿಗ । ಳೆಡೆಗೈದು ಹಾರಿದುವತ್ತ ॥ ೫೭ ॥
ಜಯರಾಜ ಬಿನ್ನವಿಸಿದವೊಲು ಕುರುಕುರು । ಪಯಣದೊಳಲ್ಲಲ್ಲಿ ಬಿಟ್ಟು ॥
ದ್ವಯತ್ರಯ ದಿನವಿರುತೆಯ್ತಂದು ನೃಪತಿ ಗಂ । ಗೆಯ ತಡಿಯೊಳು ಬೀಡುಬಿಟ್ಟಾ ॥ ೫೮ ॥
ಬಡಗಣ ಹಿಮಗಿರಿಯೊಳು ಹುಟ್ಟಿ ತೆಂಕ ಬಂ । ದೊಡನೆ ಡೊಂಕಿಸಿ ಮೂಡ ಹರಿದು ॥
ಕಡಲ ಕೂಡಿದ್ದುದಾ ಗಂಗೆಯುದರ ಡೊಂಕಿ । ನೆಡೆಯೊಳು ಬಿಟ್ಟನಾ ಚಕ್ರಿ ॥ ೫೯ ॥
ಗಂಗೆಯೊಳಗೆ ತನ್ನ ಪಡೆ ಮಿಂದು ಸರ್ವ ಶು । ದ್ಧಾಂಗವಡೆಯೆ ತಡೆದಿರ್ದು ॥
ಚಾಂಗು ಬಲಾಯೆನೆ ತಳರ್ದನಲ್ಲಿಂದ ವಾ । ದ್ಯಂಗಳಬ್ಬರಿಸೆ ದಂಡೆತ್ತಿ ॥ ೬೦ ॥
ದೇವಗಂಗೆಗೆ ತೆಂಕಲಿಹುದುಪಲವಣಾಬ್ಧಿ । ಭೂವರನದ ಬಲಕಿಕ್ಕಿ ॥
ದೇವಗಂಗೆಯ ತಡಿವಿಡಿದು ನಡೆದನು ಪೂ । ರ್ವಾವಲಂಬನದ ವಾರಿಧಿಗೆ ॥ ೬೧ ॥

ಬೀಡುಬಿಡುತ ಗಂಗೆಯೊತ್ತಿನೊಳಲ್ಲಲ್ಲಿ । ಕೂಡೆ ಕೂಡೆತ್ತಿ ನಡೆವುತ ॥
ನಾಡರಸುಗಳೊಗ್ಗಿನೊಳು ಬಂದು ಕಂಡನು । ಮೂಡಣ ಲವಣವಾರ್ಧಿಯನು ॥ ೬೨ ॥
ಈ ಕಡಲೊಳು ಮಾಗಧಾಮರನಿಹನು ಮ । ಹಾಕೋಪಿಯಾತನ ಜಯಿಸಿ ॥
ಬೇಕಾದ ಕಾರ್ಯವ ಮುಂದೆ ಯೋಚಿಪವೆಂದ । ನಾ ಕಿರೀಟಿಯ ಕೂಡೆ ಮಂತ್ರಿ ॥ ೬೩ ॥
ಕೋಪವೆ ಮಾಗಧನವನ ಕೋಪಾಗ್ನಿಯ । ಲೋಪಿಸಿ ಬೂದಿಮಾಡುವೆನು ॥
ಈ ಪಯೋಧಿಯೊಳಿದ್ದನೆಂಬ ಸೊಕ್ಕೈಸೆ ಸಾ । ಕಾ ಪೇಠಿನಾಟವೇನೆಂದಾ ॥ ೬೪ ॥
ಓಲೆ ಮಾತ್ರವನೆಚ್ಚು ನೋಡುವೆನೋದಿಸಿ । ಕೇಳಲೊಡನೆ ಬಾರದಾಗ ॥
ಮೇಲೆ ಹೇಳುವೆನವನಿಗೆ ತಕ್ಕ ಹರುವ ವಾ । ಗ್ಜಾಲವೇಕೀಗ ಸಾಕೆಂದಾ ॥ ೬೫ ॥
ಆ ನುಡಿ ಸಾಕದಂತಿರಲಿದು ಕೂಡೆಂದು । ಮಾನವ ಹೊಯ್ಸಿದನಲ್ಲಿ ॥
ಸೇನೆ ಬಿಟ್ಟಿತು ತಡಿಯೊಳು ನೋಡೆ ತಾನೊಂದು । ಮಾನುಷ್ಯಸಾಗರದಂತೆ ॥ ೬೬ ॥
ಪೇಳೆ ಮೂವತ್ತಾರುಯೋಜನದಗಲದೊ । ಳಾಲಂಬವಿ॰ದೋಜೆವಿಡಿದು ॥
ನೀಳ ನಾಲ್ವಂತೆಂಟುಗಾವುದ ಸಂದಿರೆ । ಪಾಳೆಯ ಬಿಟ್ಟುದಾ ಕಟಕಾ ॥ ೬೭ ॥
ವಣಿಜರಂಗಡಿಗಳು ಹಯಶಾಲೆ ಗಜಶಾಲೆ । ಗಣಿಕಾಂಗನೆಯರ ಕೇರಿಗಳು ॥
ಕ್ಷಣದೊಳಾದುವು ವಿಶ್ವಕರ್ಮನಿರ್ಮಿತದ ಪ । ಟ್ಟಣವಲ್ತೆ ಪಾಳೆಯ ನೃಪನಾ ॥ ೬೮ ॥

ದೊರೆಗಳಿಗರಸುಮಕ್ಕಳಿಗೆ ಕೆಳೆಯರಿಗೆ । ಕರಣಿಕರಿಗೆ ಮಂತ್ರಿವರಗೆ ॥
ಪರಿವಾರ ಕಡೆಯಾಗಿ ಸಕಲರಿಗಾವಾಸ । ನೆರೆದುವಾಗಳೆ ಹಲವೇನು ॥ ೭೯ ॥

ನಟ್ಟನಡುವೆ ರಾಯಗೊಳಗೋಟೆ ಹೊರಗೋಟೆ । ಪಟ್ಟಶಾಲೆಗಳು ಮಾಡಗಳು ॥
ಬಟ್ಟಚಾವಡಿನೀಟಚಾವಡಿಗಳ ಮಯ । ಕಟ್ಟಾಯದೊಳು ರಚಿಸಿದನು ॥ ೭೦ ॥

ಅರಸಿಯರಿಗೆ ತಕ್ಕ ಮನೆಗಳು ಶಯನವು । ಂದಿರ ಜಿನಗೃಹ ಮೊದಲಾದ ॥
ಅರಮನೆ ರಚಿಸಿದುವಾಗಳೆ ಚಕ್ರಿಯ । ಸಿರಿಯೇನು ನಾಡಾಡಿಸಿರಿಯೆ ॥ ೭೧ ॥

ರಾಜರೆಲ್ಲರನು ಬೀಡಾರಕೆ ಬೀಳ್ಕೊಟ್ಟ । ನೋಜೆಯಿಂದುಳಿದರ ಕಳುಹಿ ॥
ಪೌಜಿನಾರೈಕೆ ಜತನವೆಂದು ನೃಪ ಜಯ । ರಾಜನ ಬೀಳ್ಕೊಟ್ಟನೊಡನೆ ॥ ೭೨ ॥

ಬಂದುದಷ್ಟರೊಳರ್ಕಕೀರ್ತಿಯ ಪೌಜೊಲ । ವಿಂದರಮನೆಯೊಳಗಾಯ್ತು ॥
ಮಂದರಧೀರನು ಪಲ್ಲಕ್ಕಿಯಿಳಿದೋಜೆ । ಯಿಂದ ನಡೆದನರಮನೆಗೆ ॥ ೭೩ ॥

ನಾಳೆ ಯೋಚನೆಯುಂಟು ಮಂತ್ರಿ ಹೋಗೆಂದು ನೃ । ಪಾಲಕನಾತನ ಕಳುಹಿ ॥
ಆಲಯದೊಳು ಹೊಕ್ಕು ನವಭದ್ರಶಾಲೆಯೊ । ಳೋಲಗಗೊಟ್ಟನರ್ತಿಯೊಳು ॥ ೭೪ ॥

ಸುತನ ತರಿಸಿಕೊಂಡು ನೋಡಿ ಮುದ್ದಾಡಿ ಸ । ಮ್ಮತದ ದಾದಿಯ ಕೈಗೆ ಕೊಟ್ಟು ॥
ಸತಿಯರೆಲ್ಲರು ಬಂದು ಕಂಡರವರ ಮಂದ । ಸ್ಮಿತಮುಖದಿಂದ ನೋಡಿದನು ॥ ೭೫ ॥

ಹೋದ ಹಿಂದಣ ಪಯಣಗಳಲ್ಲಿ ಪೆಂಗಳ । ನಾದರಿಸುವನಡಿಗಡಿಗೆ ॥
ಆ ದಿನ ಮುನ್ನಿನಂತಲ್ಲ ಪೆಂಗಳೊಳು ತಾ । ಫೋದಯುವಿದ್ದುದೊಂದಿನಿಸು ॥ ೭೬ ॥

ತೆಳ್ಳುಸುರೊಪ್ಪಚ್ಚಿ ಹೆಚ್ಚಿ ಮೈ ಬಾಡಿದ್ದು । ದಲ್ಲಲ್ಲಿ ಮೊಗ ಬೆಮರಿದುದು ॥
ಪಲ್ಲವ ಬಿಸಿಲುತಾಗಿದವೊಲು ತನ್ನಿದಿ । ರಲ್ಲಿ ನಿಂದವರೊಳು ನುಡಿದಾ ॥ ೭೭ ॥

ಕುಳ್ಳಿರಿರಾ ಬಳಲ್ದಿರಿಯೆಂದನವರದ । ಕೆಲ್ಲರು ನಗುತ ಕುಳಿತರು ॥
ಪಲ್ಲಕ್ಕಿಗಳ ಭರದಲ್ಲಿ ತಂದರೆ ದೇಹ । ವಲ್ಲಾಡಿ ನೊಂದುದೆಯೆಂದಾ ॥ ೭೮ ॥

ನಸುಕಂದಿ ಮುಖ ತೋರುತಿದೆ ನಿವಗಿಂದಿಷ್ಟು । ಬಿಸಿಲು ತಾಗಿದುದಹುದಕಟಾ ॥
ಪಿಸುಣರು ದಟ್ಟದ ಪನ್ನಂಗಗಳ ನಿವ । ಗೆಸಗಿತಿಲ್ಲಹುದೆಂದು ನೊಂದಾ ॥ ೭೯ ॥

ಮುಟ್ಟೆ ನನ್ನೊಡನೆ ಬಂದರೆ ಪರಿವಾರಸಂ । ಘಟ್ಟದ ಸೆಕೆಯಹುದೆಂದು ॥
ಬಟ್ಟೆಯೊಳಗೆ ನೀವು ದೂರದಿ ಬಪ್ಪಂತು । ಕಟ್ಟು ಮಾಡಿರ್ದಿಂತುಟಾಯ್ತು ॥ ೮೦ ॥

ನೀವೊವ್ಮೆ ಸುಮ್ಮನೆಯಿದ್ದರೆ ನಿಮ್ಮೊತ್ತಿನ । ಸೇವಕಿಯರಿಗು ಪರಾಕೆ ॥
ಜೀವವಳಿದರೆ ನಂಬುಗೆವಂತರೆಂದನು । ನೋವಿಂದ ತನ್ನ ಪೆಂಡಿರೊಳು ॥ ೮೧ ॥

ಇಂದು ಸಮುದ್ರ ಸಮೀಪವೆಂದರೆ ನೋಳ್ಪೆ । ವೆಂದು ಬೇಗದಿ ಸಾಗಿರೆನಲು ॥
ತಂದರವರು ನಾವು ಪೇಳ್ಪಂತೆ ಬೆಸದವ । ರಿಂದ ತಪ್ಪಿಲ್ಲೆಂದರವರು ॥ ೮೨ ॥

ಸೇವೆಕಾತಿಯುರು ನಂಬುಗೆವಂತರುಸಿರ್ದರು । ದೇವ ಮುನಿವ ತವಗೆಂದು ॥
ನಾವು ಕೇಳದೆ ಬಂದೆವೆಮ್ಮಪರಾಧವ । ಕಾವುದೆಂದಿಂಪನಾಡಿದರು ॥ ೮೩ ॥
ಈ ಪಯಣದೊಳೊತ್ತಿ ಬಂದೆವಲ್ಲದೆ ಹಿಂದ । ಣಾ ಪಯಣದೊಳೊದಗಿದೆವೆ ॥
ತಾಪವಾಗಳೆ ನಿಮ್ಮ ಕಾಣುತ ಹೋದುದೆಂ । ದೋಪನೊಳಾಡಿದರೊಸೆದು ॥ ೮೪ ॥
ಎಂದರುಪ್ಪರಿಗೆಯನೇರಿ ಹಿಂಬೊತ್ತಿಗಾ । ನಂದದಿಂದಬ್ಧಿಯ ನೋಳ್ಪಾ ॥
ಮಿಂದು ದೇವಾರ್ಚನೆಗೈದು ಭೋಜಿಪವೇಳೆ । ರೆಂದೆದ್ದನಬಲೆಯರ್ವೆರಸಿ ॥ ೮೫ ॥
ಸಹಸದಿ ಮಯನು ಪೆಂಡಿರಿಗು ತನಗು ವಿಮಾವ । ಗೃಹಲಕ್ಷಗಳ ರಚಿಸಿರಲು ॥
ಗೃಹಪತಿರತ್ನ ಪ್ರೇರಿಸಿದ ಜಲದಿ ಸಂ । ಗ್ರಹದಿ ಮಜ್ಜನವ ಮಾಡಿದನು ॥ ೮೬ ॥
ಒಂದೊಂದು ಮನೆಯೊಳೊಬ್ಬೊಬ್ಬ ಪೆಂಡಿರು ಹೊಕ್ಕು । ಮಿಂದರು ತಾನು ಬೇರೊಂದು ॥
ಮಂದಿರದೊಳು ಹೊಕ್ಕು ಮಜ್ಜನಗೈದನ । ದೊಂದು ಗಣ್ಯವೆ ಚಕ್ರಧರಗೆ ॥ ೮೭ ॥
ಬೆಂಕಿಯನುರುಹು ಕಟ್ಟಿಗೆಯು ಹಾಕಿವರವ । ರಂ ಕರೆಯಿಗಾಗಲೆಂಬ ॥
ಡೊಂಕಿಲ್ಲ ಗೃಹಪತಿರತ್ನ ಪ್ರೇರಿಸೆ ಮಿಂದ । ಭೋಂಕನೆ ನಾರಿಯರ್ವೆರಸಿ ॥ ೮೮ ॥
ನೆನೆದ ವಸ್ತ್ರವ ಪದ್ಮನಿಧಿಯೆಂಬುದೀವುದು । ತನತನಗುಡಕೊಡಿಸಿದನು ॥
ವಿನುತಪಿಂಗಳನೆಂಬ ನಿಧಿ ತೊಡಿಗೆಯನೀವು । ದನಿಬರ್ಗೆ ತೊಡಿಗೆತೊಡಿಸಿದಾ ॥ ೮೯ ॥
ದೇವತಂತ್ರದೊಳೆಲ್ಲ ಮಿಂದುಟ್ಟು ತೊಟ್ಟು ಜಿ । ನಾವಾಸಕಡಿಯಿಟ್ಟರೊಸೆದು ॥
ದೇವಪೂಜೆಯ ಮಾಡಿ ದಿವ್ಯಾನ್ನಪಾನವ। ಸೇವಿಸಿದರು ಲೀಲೆಯಿಂದ ॥ ೯೦ ॥
ಪರಿಮಳ ತಂಬುಲಗಳ ಕೊಂಡು ಶಯನವಂ । ದಿರಕೆಯ್ದಿ ಸುಖನಿದ್ರೆಗೆಯ್ದು ॥
ಸರಸವಿನೋದದಿ ಮಧ್ಯಾಹ್ನದಾಸರ । ಪರಿಹರಿಸಿದರು ಭೋಗಿಗಳು ॥ ೯೧ ॥

ಬಳಿಕ ಮೂರನೆಯ ಜಾವದೊಳವನೀಶನಾ । ನಳಿನಾಕ್ಷಿಯರು ಸಹವಾಗಿ ॥
ನೆಲೆಮಾಡವೇರಿ ಮೇಲ್ಮನೆಯೊಳು ಕುಳಿತು ಪೆಂ । ಗಳಿಗಂಬುನಿಧಿಯ ತೋರಿದನು ॥ ೯೨ ॥
ಕಡಲ ಮುನ್ನರಿಯದ ಪೆಂಗಳಚ್ಚರಿವಟ್ಟು । ನಿಡುಬೆರಳಿಟ್ಟು ನಾಸಿಕಕೆ ॥
ಮುಡಿಯೊಲೆದೊಲೆದು ನೋಡಿದರದರೊಂದು ಬ । ಲ್ಗಡಣೆಗೆ ಬಗೆಯೊಳು ಮೆಚ್ಚಿ ॥ ೯೩ ॥
ದಿಟ್ಟಿಗೆ ಮಿಗೆ ಹಾಯ್ದು ತೋರ್ಪ ಸಮುದ್ರದ । ಕಟ್ಟಳಲಿಗೆ ಚೋದ್ಯವಟ್ಟು ॥
ಅಟ್ಟಹಾಸವ ಮಾಡುತೊಬ್ಬರೊಬ್ಬರ ಮೈಯ । ತಟ್ಟುತ ತೋರಿ ನುಡಿದರು ॥ ೯೪ ॥
ಅಟ್ಟುವ ತೆರೆಯ ಮುಂದೋಡುವ ತೆರೆಯ ಪೆ । ರ್ಚಿಟ್ಟದಂತೇಳ್ವ ತೆರೆಗಳಾ ॥
ತೊಟ್ಟನೆ ಬಯಲಹ ತೆರೆಗಳನವರು ಕ । ಣ್ಣಿಟ್ಟು ನೋಡಿದರರ್ತಿವಡುತ ॥ ೯೫ ॥
ಎಡೆಗುತ್ತಿಗಳನಲ್ಲಿಗಲ್ಲಿ ನಿಂದದ್ರಿಯ । ನಿಡುಗಲ್ಲುಗಳನದರೊಳಗೆ ॥
ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ । ಹಡಗುಗಳಿರವ ನೋಡಿದರು ॥ ೯೬ ॥

ತುಂತುರು ತೆರೆ ನೊರೆ ಸುಳಿ ಘುಳುಘುಳುರವ । ತೊಂತಿಟ್ಟು ಹೊಳೆವ ವಾರಿಧಿಯಾ ॥
ಕಾಂತೆಯರೆಲ್ಲರೀಕ್ಷಿಸುತಿರೆ ಭೂಪಾಲ । ನಿಂತೆಂದು ನುಡಿದ್ಧನವರೊಳು ॥ ೯೭ ॥

ಇಂದು ಮೊದಲುಗೊಂಡು ನಿಚ್ಚಲು ನೀವು ಪೆಂ । ಪೊಂದಿದಬ್ಧಿಯ ನೋಡಬಹುದು ॥
ಇಂದಿಗೆ ಸಾಕೆಂದು ಕರೆದುಕೊಂಡರಸಿಯ । ರೊಂದಾಗಿ ಮಾಡದಿಂದಿಳಿದಾ ॥ ೯೮ ॥

ರಾಗದಿಂದಾ ದಿನ ಮತ್ತೆ ಕಾಲೋಚಿತ । ಭೋಗದೊಳಾ ರಾಯನಿರ್ದಾ ॥
ಸಾಗರತಟದೊಳು ಪಡೆಯಿದ್ದುದಿದು **ಪೂರ್ವ । ಸಾಗರದರ್ಶನಸಂಧಿ** ॥ ೯೯ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜ ನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೦ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೧ ॥

ಕಡಲ ನಗುವ ಕಡುಗಂಭೀರ ಕಡಲೊಂದು । ಕಡುಪಿಗೆ ತೆರಪಾದ ಮಹಿಮಾ ॥
ಕಡೆಸಾರದೆನ್ನದೆಯೊಳಗಿರು *ನೀನೆಡೆ । ಬಿಡದೆ ಚಿದಂಬರಪುರುಷಾ ॥ ೧೦೨ ॥

ಪೂರ್ವಸಾಗರದರ್ಶನಸಂಧಿ ಸಂಪೂರ್ಣಂ

* ತ್ರಿಭುವನ । ದೊಡೆಯ

# ರಾಯಸದಂಬೆಚ್ಚ ಸಂಧಿ.

ಸಾರಮದೇಭಕಂಠೀರವ ಬೋಧಪ । ಯೋರಾಶಿಪೂರ್ಣಸುಧಾಂಶು ॥
ಕಾರುಣ್ಯದೋರು ಸನ್ಮತಿಯನು ಕರ್ಮಸಂ । ಹಾರಾ ನಿರಂಜನಸಿದ್ಧಾ ॥ ೧ ॥

ಅಂದಿನ ಮರುದಿನ ದಳಪತಿಸಚಿವರ । ಮಂದಿರಕಾ ಚಕ್ರಿ ಕರೆಸಿ ॥
ಮುಂದಣ ಕಾರ್ಯವ ಯೋಚಿಸಿ ನುಡಿದನ । ದೊಂದು ಲೀಲಾಮಾತ್ರವಾಗಿ ॥ ೨ ॥

ಬಿಡು ಮಾಗಧನ ಗೆಲ್ವುದಾವ ಗಹನವೆಲೆ । ಪಡೆವಳ್ಳ ಕೇಳ್ಮಂತ್ರಿ ಕೇಳು ॥
ಕಡಲ ತಡಿಯೊಳೆನಗೊಮ್ಮೆ ಯೋಗದೊಳಿರ । ಲಡರುತಿರ್ದಪುದರ್ತಿಯೆಂದಾ ॥ ೩ ॥

ನಿನ್ನೆ ಸಮುದ್ರವ ಕಂಡುದು ಮೊದಲಾಗಿ । ನನ್ನೆದೆಯೊಳು ಧ್ಯಾನದರ್ತಿ ॥
ಭಿನ್ನವಿಲ್ಲದೆ ದಳವೇರುತಿದ್ದಪುದದ । ಮನ್ನಿಸಬೇಕು ನಾನೆಂದಾ ॥ ೪ ॥

ಕಾನನದೊಳು ಕಡಲೊಳು ಹೊಳೆಯೊಳು ಗಿರಿ । ಸಾನು ಮುಂತಾದವರಲ್ಲಿ ॥
ಧ್ಯಾನಕೆ ಲೇಸೆಂದು ಪೇಳ್ವುದಧ್ಯಾತ್ಮದೊ । ಳಾ ನುಡಿ ಹೊಳೆದುದೆನ್ನೊಳಗೆ ॥ ೫ ॥

ಪುರದಿಂದ ತಳರ್ದುದು ಮೊದಲಾಗಿ ಪಥದಲ್ಲಿ । ಪಿರಿದು ಯೋಗವ ಮಾಡಿತಿಲ್ಲ ॥
ಶರಧಿಯೊತ್ತಿನೊಳೊಮ್ಮೆ ಯೋಗದೊಳಿರ್ದದ । ಪರಿಕಿಸಬೇಕು ನಾನೆಂದಾ ॥ ೬ ॥

ಬಿನ್ನಹ ದೇವ ಧ್ಯಾನವ ಮಾಳ್ಪೊಡಬ್ಧಿಯ । ಸನ್ನಿಧಿ ಲೇಸಹುದದಕೆ ॥
ಚೆನ್ನಾಗಿ ಪಗೆಯ ಜಯಿಸಿ ಮತ್ತೆ ಮಾಳ್ಪುದು । ಮುನ್ನಲೆಂತಹುದೆಂದರವರು ॥ ೭ ॥

ಮಾಗಧ ನನಗೊಬ್ಬ ಪಗೆಯೆ ಸೂರ್ಯಗೆ ದೊಡ್ಡ । ಗೂಗೆಯು ಯೋಚನೆಯೇಕೆ ।
ಯೋಗದೊಳಿರಲೆನಗೆದೆಹಾರಲವ ಬಂದು । ಕಾಗಲಾಪನೆ ನನ್ನ ಪಡೆಯಾ ॥ ೮ ॥

ತೃಣವ ಪರ್ವತವ ಮಾಳ್ಪಂತೆ ನೀವವನನೊ । ಕ್ಕಣಿಸುತಿಹಿರಿ ತೋರಮಾಡಿ ॥
ಗಣಬದ್ಧರಿಗೆ ಬೆಸನಿತ್ತೊಂದು ಕ್ಷಣದೊಳಾ । ಬಣಗನ ತರಿಸಲೆ ಹಿಡಿದು ॥ ೯ ॥

ಅದು ಬೇಡ ವಜ್ರಖಂಡಾಖ್ಯಚಾಪಕೆ ಕಿಡಿ । ಗೆದರುವ ಬಾಣವ ತೊಟ್ಟು ॥
ಬುದಿಬುದಿನವನೂರ ನಡುವೆ ಕೆಂಡವ ಸೂಸಿ । ಗದಗಾಪುಗೊಳಿಸಲೆ ಪುರವಾ ॥ ೧೦ ॥

ಆ ತಳ್ಳಿಯೇಕೆ ಬೆಟ್ಟವನೊಟ್ಟಿ ಮಯನಿಂದ । ಸೇತುವ ಕಟ್ಟಿಸಿ ನಡೆಸಿ ॥
ಭೂತದರಸನೆನ್ನ ತೊಂಡರಿಂದೊಯ್ಸಿ ತಂ । ದೀ ತಡಿಗೆಯ್ದಿಸಿ ಬಿಡಲೆ ॥ ೧೧ ॥

ಚಕ್ರ ಬೇಡವನಿಗೆ ಚಾಪಾಸ್ತ್ರ ಬೇಡೆನ್ನ । ವಿಕ್ರಮುದರಸುಮಕ್ಕಳೊಳು ॥
ಆಕ್ರಮಿಸಿಲ್ಲಿಗೆ ತರಿಸಿಕೊಂಡೆನಗೆ ಪಾ । ದಾಕ್ರಾಂತಗೆಯ್ಸಿ ನೂಂಕಿಸಲೆ ॥ ೧೨ ॥

ಅಹಹ ನೋಡಿವನಿಂದು ಬಿರಿಸಾಗೆ ಮುಂದಿನ್ನು । ಗುಹೆಯೊಳಗೆರಡು ಪೆರ್ದೊರೆಯಾ ॥
ವಹಿಸಿ ದಾಂಟುವ ಪರಿಯೆಂತೆಂದು ನುಡಿದನು । ಗಹಗಹಿಸುತ ಚಕ್ರಧರನು ॥ ೧೩ ॥

ಅದರಿಂದ ನನಗಿದು ತೋರವಲ್ಲಿದಕೆ ನೀ । ವೆದೆಹಾರುಗೊಳ್ಳದೊಪ್ಪಿಹುದು ॥
ಉದಧಿಯೊತ್ತಿನೊಳೊಮ್ಮೆ ಪರಮಾತ್ಮಯೋಗಸಂ । ಪದವ ನೋಡುವೆನು ನಾನೆಂದಾ ॥ ೧೪ ॥

ಅಕ್ಕಟ ಡೊಂಬರ ಗುಡಿಯನಿರಿಯೆ ಜೋಡು । ಪಕ್ಕರಿಕೆಯೆ ನನಗವನು ॥
ಲೆಕ್ಕವೆ ಗುರುಹಂಸನಾಥನ ಮೇಲಾಣೆ । ಮಿಕ್ಕು ಚಿಂತಿಸದಿರಿ ನೀವು ॥ ೧೫ ॥

ಹಂಸನಾಥನ ನೋಡುವಾಗ ಕರ್ಮಾಳಿ ವಿ । ಧ್ವಂಸನವಹುದೆನಲಿವನು ॥
ತಾಂ ಸಿಡಿದಳ್ಳನೆ ನೋಡಿರ್ಪೈ ನಾಳೆ ತಂ । ದಾಂ ಸೇವೆಗಿಕ್ಕಿ ತೋರುವೆನು ॥ ೧೬ ॥

ಒಂದಂಬನೆಚ್ಚವನೊಳಗ ನೋಡುವೆನುಗು । ರಿಂದ ಹೋಹದಕೇಕೆ ಕೊಡಲಿ ॥
ಬಂದರೊಂದೊಳ್ಳಿತು ಬಾರದರೆರಡೊಳ್ಳಿ । ತೆಂದು ತೋರುವೆನೆನ್ನ ಪರಿಯಾ ॥ ೧೭ ॥

ಕರ್ಮಾಳಿಗಳ ಗೆಲ್ವರೆನಗೆ ಯೋಚನೆಯೆಸೈ । ಪೆರ್ಮಡುವಿನ ಮಧ್ಯದಲ್ಲಿ ॥
ಕೂರ್ಮನಂತಿರ್ದನ ಗೆಲ್ವರೊಂದೆಣಿಕೆಯೆ । ಮರ್ಮಜ್ಞರಲ್ಲವೆ ನೀವು ॥ ೧೮ ॥

ಧ್ಯಾನದೊಳಗೆ ಮೂರುದಿನವಿದ್ದು ಮರುದಿನ । ನಾನವಗೊಂದಂಬನೆಚ್ಚು ॥
ಈ ನಿಳಯಕೆ ಬಹೆನಿದು ರಾಜಯೋಗಾಂಗ । ಸೇನೆ ಜತನ ಹೋಗಿರೆಂದಾ ॥ ೧೯ ॥

ಉಡುಗೊರೆಯಿತ್ತವರಿಬ್ಬರ ಬೀಳ್ಕೊಟ್ಟ । ನೊಡನೆ ಸಾಗರದೊತ್ತಿಗೆದ್ದಾ ॥
ಬಡಗಿಯೊಡ್ಡಿದ ಗೃಹದೊಳು ಮೂರುದಿನ ಯೋಗ । ವಿಡಿದಿದ್ದನಾ ರಾಜಯೋಗಿ ॥ ೨೦ ॥

ನೇಮಿಸಿ ಯಮನಿಯಮಾಸನಪ್ರಾಣಾ । ಯಾಮಪ್ರತ್ಯಾಹಾರಧ್ಯಾನ ॥
ಕೋಮಲಧಾರಣೆ ಸುಸಮಾಧಿಯೆಂಬ ಯೋ । ಗಾಮೃತಾಷ್ಟಾಂಗವ ಬಗೆದಾ ॥ ೨೧ ॥

ಲೋಕದವರ ಮುಂದೆ ತೋರದೆ ನಿಧಿಯ ತಂ । ದೇಕಾಂತದೊಳು ನೋಳ್ಪರಂತೆ ॥
ಆ ಕಡಲೊತ್ತಿನೊಳಾತ್ಮನ ಕಂಡನಾ । ಭೂಕಾಂತ ತನ್ನ ದೇಹದೊಳು ॥ ೨೨ ॥

ಮುನ್ನ ತಾ ಮಾಡುವ ಯೋಗದಿಂದಾಗ ಮ । ಹೋನ್ನತವೆತ್ತುದಾ ಯೋಗಾ ॥
ಮುನ್ನೀರ ತಡಿಯ ಯೋಗಕೆ ಸರಿಯಿಲ್ಲೆಂದು । ತನ್ನೊಳು ತಾನರ್ತಿವಟ್ಟಾ ॥ ೨೩ ॥

ಪರ್ವಯೋಗದ ಸಂಧಿಯೊಳು ಪೇಳ್ದ ಕ್ರಮದೊಳಾ । ಸಾರ್ವಭೌಮನು ಯೋಗವಿದ್ದು ॥
ದುರ್ವಾರಕರ್ಮವ ಜಜ್ಝರಗೈದನ । ಪೂರ್ವಾತ್ಮಸುಖವ ಪಡೆದನು ॥ ೨೪ ॥

ಮೂರುದಿವಸ ಮೂರುಗಳಿಗೆಯಾಗಿದ್ದುದು । ತೋರಿತಿಲ್ಲುದರಾಗ್ನಿ ನೃಪಗೆ ॥
ಮೂರುಲೋಕದ ಸಾರವೆನಿಪಾತ್ಮಸುಖದೊಳಾ । ನೀರನೋಲಾಡಿ ತಣಿದನು ॥ ೨೫ ॥

ತೀರಕೆ ಬೋನಗುಡಿಕೆ ಬರೆ ಮರುದಿನ । ಪಾರಣೆಗೈದು ವಿಶ್ರಮಿಸಿ ॥
ಧೀರರ ದೇವ ಮೂರನೆಯ ಜಾವದೊಳು ಪೊಂ । ದೇರೇರಿ ನಡೆದನಬ್ಧಿಯೊಳು ॥ ೨೬ ॥

ಧ್ವಜಘಂಟಿಕಲಶ ಪೂಮಾಲೆಯ ಶೃಂಗಾರ । ದಜಿತಂಜಯವೆಂಬ ರಥವಾ ॥
ಅಜಡಸಾಂಬ್ರಾಣಿಗಳೀರೈದು ತೆಗೆಯೆ ಭೂ । ಭುಜ ಗಮಿಸಿದನೋಜೆಯಿಂದ ॥ ೨೭ ॥

ಕೆಲದೊಳು ಗಣಬದ್ಧನೊರ್ವ ಸಾರಥಿಯಾಗಿ । ಸೆಳೆದೆತ್ತಿ ದಾಯೆಂದು ನಡೆಸೆ ॥
ನೆಲದ ಮೇಲೊಯ್ವಂತೆ ಜಲದ ಮೇಲೊಯ್ವುವಾ । ಜಲಗಾಮಿವಾಜಿಗಳೊಸೆದು ॥ ೨೮ ॥
ಮುಂಗಡೆಯೊಳು ಬಂದು ತಾಗುವ ಹಲವು ತ । ರಂಗವಮಾಲೆಗೆ ಮೊಗವೆತ್ತಿ ॥
ಮುಂಗಾಲ ಮಡಿದು ಹಿಂಗಾಲ್ನೀಡಿ ರಥವ ತು । ರಂಗವಮಾಲೆಗಳು ತೆಗೆದುವು ॥ ೨೯ ॥
ಚೆಂಗಚೆಂಗನೆ ತೇಜಿ ತೆಗೆಯೆ ದ್ವಾದಶಯೋಜ । ನಾಂಗಣಪರ್ಯಂತ ಹರಿದು ॥
ನಂಗಲ್ಲನಿಳುಹಿದ ಹಡಗು ನಿಲ್ವಂತೆ ರ । ಥಾಂಗ ನಿಂದುದು ತೊಟ್ಟನಲ್ಲಿ ॥ ೩೦ ॥
ಹಂದೆಯುವನು ನಿನ್ನ ಕಂಡರೋಡುವನಿನ್ನು । ಮುಂದೆಯ್ದಬೇಡವೆಂದಬ್ಧಿ ॥
ಬಂದು ಕಾಲ್ವಿಡಿದು ನಿಲ್ಲಿಸಿದಂತೆ ನಿಂದುದಾ । ಹೊಂದೇರು ಹರಿಯದೆ ಮುಂದೆ ॥ ೩೧ ॥
ನಿಡುಬಿಲ್ಲ ರಥದ ಮೇಲೂರಿ ದಕ್ಷಿಣದೊಂದು । ತೊಡೆಸೋಂಕಿ ಬಾಗಿಸಿ ಹೆದೆಯಾ ॥
ಎಡಗೈಯೊಳೇರಿಸಿ ನೀವಿ ಜೇವಡೆದನು । ಸಿಡಿಲ ವೀಣೆಯ ಮುಟ್ಟಿದಂತೆ ॥ ೩೨ ॥
ಸಿಂಜನಿಯೊಳಗೆ ಬಾಣವನಿಟ್ಟು ಪರಮನಿ । ರಂಜನಸಿದ್ಧನ ನೆನೆದು ॥
ಮಂಜುಳಾತ್ಮಾರಾಮ ಕರ್ಮವ ಗುರಿಗಾಣ್ಬಾ । ರಂಜನೆಯೊಳು ಗುರಿಗಂಡಾ ॥ ೩೩ ॥
ಆಕರ್ಣಪರ್ಯಂತ ಬಾಣವ ತೆಗೆದುಬ್ಬಿ । ಭೂಕಾಂತ ಸರಿತಗೊಟ್ಟೆಚ್ಚಾ ॥
ಆಕಾಶದೊಳು ಬಾಣ ಚುಮ್ಮು ಘೋರ್ಚುಯ್ಯೆಂದು । ಭೀಕರಿಸುತ ಹೋದುದತ್ತ ॥ ೩೪ ॥
ಹೂಂಕರಿಸಿದ ರಾಯನಾರ್ಭಟೆಗಾ ಬಿಲ್ಲ । ಟಂಕಾರದಾರ್ಭಟೆಗಬ್ಧಿ ॥
ದಿಂಕಿಟ್ಟು ಗಗನಕೆದ್ದುದು ಕೊಳವಿಯೊಳೂದೆ । ಬೆಂಕಿ ನಾಲಗೆನೀಡುವಂತೆ ॥ ೩೫ ॥
ಕಟಕದೊಳಿದ್ದಾನೆಕುದುರೆ ಬೆದರಿ ಲಟ । ಲಟಿಸುತತ್ತಿತ್ತಲೋಡಿದುವು ॥
ತಟವನುಚ್ಚಳಿಸಿತು ಕಡಲು ಮಂತಿಟ್ಟರೆ । ಘಟದ ಮೊಸರು ಚೆಲ್ಲುವಂತೆ ॥ ೩೬ ॥
ತಾರಗೆವುದಿರ್ದುವು ತಳಲೋಕ ನರಲೋಕ । ಮೇರುವಲ್ಲಾಡಿದುದೆಂಬ ॥
ಭೂರಿವರ್ಣನೆಯೇಕೆ ಮಾಗಧನೂರಿಗೆ । ನೀರುಕ್ಕಿ ನಾಡು ಕಂಪಿಸಿತು ॥ ೩೭ ॥
ಬಿರುಗುಟ್ಟುತಾ ಬಾಣ ಪೋಗಿ ಮಾಗಧನಿದ್ದ । ಹೊರಗಣೋಲಗದ ಶಾಲೆಯೊಳು ॥
ನಿರಿಸಿದ ಕಂಭಕೆ ತೊಟ್ಟನೆ ನೆಟ್ಟಿತು । ಬರಸಿಡಿಲಂತಿರಾರ್ಭಟಿಸಿ ॥ ೩೮ ॥

ಝಲ್ಲನೆ ಸಭೆ ಕೆದರಿತು ಹುಲಿ ಬರೆ ಕಂಡ । ಹುಲ್ಲೆಯ ಹಿಂಡಿನಂದದೊಳು ॥
ಬಲ್ಲಿದನಲ್ಲವೆ ಮಾಗಧಾಮರನಿದ್ದ । ನಲ್ಲಿ ತನ್ನಯ ಗದ್ದುಗೆಯೊಳು ॥ ೩೯ ॥
ಅಳುಕುಬಿಟ್ಟೊಡನೆಲ್ಲರೊತ್ತಿಗೆ ಬಂದರು । ಹಿಳುಕಿನೋಲೆಯ ತನ್ನಿರೆಂದಾ ॥
ಅಳುಕುತಳುಕುತೊಬ್ಬನದರೊತ್ತಿಗೆಯ್ತಂದ । ನೆಳಸಿಕೊಟ್ಟನು ಕರಣಿಕಗೆ ॥ ೪೦ ॥
ಕರಣಿಕನೋದಿದನೊಡನೆ ಶ್ರೀಮನ್ಮಹಾ । ಪುರುಜಿನೇಂದ್ರನ ಸುಕುಮಾರಾ ॥
ಗುರುಹಂಸನಾಥಭಾವಕೆ ಸೊಕ್ಕಿದರಿರಾಯ । ಗಿರಿವಜ್ರದಂಡ ಪ್ರಚಂಡಾ ॥ ೪೧ ॥

ಮಾರ್ಮಲೆವರಿರಾಯಮೇಘರ್ಝುಂಝೂನಿಲ । ದುರ್ಮುಖರಾಯಜಜ್ಝಾರಾ ॥
ಕರ್ಮಕೋಳಾಹಳ ಮೃತ್ಯುಕೋಳಾಹಳ । ಧರ್ಮಪಾಲಕ ಪ್ರಜಾಪಾಲಾ ॥ ೪೨ ॥

ಭರತಚಕ್ರೇಶ್ವರನೊಲವಿಂದ ನಮ್ಮ ಕಿಂ । ಕರವಾಗಧನಿಗೆ ನಿರೂಪಾ ॥
ಸರಿತದೊಳಗೆ ನಾಳೆ ಬಂದೆಮ್ಮ ಕಾಣ್ಬುದು । ಪರಮಶಾಸನವೆಂದು ಮುಗಿದಾ ॥ ೪೩ ॥

ಕೇಳುತ ಕಿಡಿಕಿಡಿಯಾಗಿ ಮಾಗಧನು ವೈ । ತೂಳವೆದ್ದಾಡುಗಚ್ಚಿದನು ॥
ಸೀಳುಸೀಳೋಲೆಯ ಸುಡುಸುಡೆಂದನು ತನ್ನ । ಬಾಳ ಸೀಳ್ಸುಡುಸುಡೆಂಬಂತೆ ॥ ೪೪ ॥

ಹಲ್ಲ ಕಡಿದು ಕಣ್ಣು ಕೆಂಪೇರಿ ತುಂಬುರ । ಗೊಳ್ಳಿಯಂತುರಿ ಛಿಟಛಿಟಿಸಿ ॥
ಅಲ್ಲಾಡಿ ಮೀಸೆ ಸೆರೆತು ನೋಡಿ ನುಡಿದನು । ಕೊಲ್ಲುವಂತದನೋದಿದವನಾ ॥ ೪೫ ॥

ಎಲ್ಲಿಯ ಭರತಗಿರತನಿವನೆಮ್ಮಬ್ಧಿ । ಯಲ್ಲಿಯ ಭರತವಿಳಿತವೊ ॥
ಚಲ್ಲಬಡಿವೆ ತನ್ನ ಸೇನೆಯ ಕರೆಯೊ ನ । ಮ್ಮೆಲ್ಲ ವ್ಯಂತರಿಗರನೆಂದಾ ॥ ೪೬ ॥

ಕಿಂಕರನೆ ನಾನು ತನಗೆ ತನ್ನೋಲೆಯೊಂ । ದಂಕೆ ನಿರೂಪವೆ ನನಗೆ ॥
ಬಿಂಕದ ಕಡಲೊಳಿಪ್ಪವರೊಳು ಪೊಡವಿಯ । ಡೊಂಕರಿಂತುಸುರ್ವುದು ಸೊಕ್ಕೆ ॥ ೪೭ ॥

ಒಮ್ಮಾರ ಬಿರುದಿನವೊಕ್ಕಣೆಯಿಲ್ಲದ । ಹೆಮ್ಮೆ ಸಲ್ಲದ ನಾಡ ಪಂಥಾ ॥
ನಮ್ಮ ಮುಂದಿವು ನಡೆವುವೆ ಭೂತನಾಥರ । ಸೊಮ್ಮನರಿಯನವನೆಂದಾ ॥ ೪೮ ॥

ಪುರೆ ನಾನು ತನ್ನ ಕಾಣ್ಬವನೆ ನೋಡವನೊಂದು । ಭರತವನಿಳಿತಮಾಡುವೆನು ॥
ಬರಹೇಳೊ ಭಟರನೆಂದುಲಿದು ಗದ್ದುಗೆಯ ಹೊ । ಯ್ದುರಿವುತಿದ್ದನು ಮಾಗಧೇಂದ್ರಾ ॥ ೪೯ ॥

ಕೂಪರು ಸಚಿವರಾ ಸಮಯದೊಳವನ ಸ । ಮೀಪದೊಳಿದ್ದವರವನ ॥
ಕೋಪ ತಂಪಹಂತೆ ನುಡಿದರು ತಂತ್ರಕ । ಲಾಪವರಿದು ಕಾರ್ಯವರಿದು ॥ ೫೦ ॥

ದೇವ ನೀವೇಳ್ವುದು ಮತವಲ್ಲ ಕುಳ್ಳಿರಿ । ದಾವ ದೊಡ್ಡಿತು ವ್ಯಂತರೇಂದ್ರಾ ॥
ನಾವು ನಿಲ್ಲಿಸುವೆವಾ ಕಾರ್ಯವ ನೀನು ಸ್ವ । ಭಾವದೊಳೋಲಗವಾಗು ॥ ೫೧ ॥

ಓಲಗ ಹರಿಯಲಿ ನಮಗೆ ಬೆಸನಕೊಡು । ಮೇಲೆಮ್ಮ ನೋಡೆಂದರದನು ॥
ಲಾಲಿಸಿ ಕುಳಿತನು ಹರಿದುದೋಲಗ ತಮ್ಮೊ । ಳಾಲೋಚನೆಯ ಮಾಡಿದರು ॥ ೫೨ ॥

ಧೀರನಲ್ಲವೆ ನೀನು ಪ್ರೌಢನಲ್ಲವೆ ನಿನ । ಗಾರಿದಿರದರಿಂದ ನಿನ್ನ ।
ಭಾರಿಯ ಭಾಗ್ಯಕೆ ತಕ್ಕಂತೆ ನಡೆ ಲಘು । ಚಾರಿತ್ರದಾಟವ ಬಿಸುಡು ॥ ೫೩ ॥

ಮುನಿಸ ಬಿಸುಡು ನಮ್ಮ ನುಡಿಗೇಳು ನೀನರ । ಮನೆಯೊಳಗಿರು ನಾವು ಮಾಳ್ಪ ॥
ಘನತೆಯ ನೋಡು ಭೂತಳವೆಲ್ಲ ಮೆಚ್ಚಿ ನಿ । ನ್ನನೆ ಕೀರ್ತಿಪಂತೆ ಮಾಡುವೆವು ॥ ೫೪ ॥

ಎನೆ ನಸುನಕ್ಕಿನ್ನು ಮುನಿಸಿಲ್ಲ ಪೇಳಿ ನಿ । ಮ್ಮನುಮಾನವೇನೆಂದು ಕೇಳ್ದಾ ॥
ಮನಸು ತಂಪಾದುದನರಿದು ಮಂತ್ರಿವರು ಮೆ । ಲ್ಲನೆ ನುಡಿದರು ಕಾರ್ಯದನುವಾ ॥ ೫೫ ॥

ಭರತಚಕ್ರೇಶ್ವರ ಸಾಮಾನ್ಯನಲ್ಲ ದೇ । ವರದೇವನಾತ್ಮಜನವನ ॥
ಪರಿಯ ಮಹಾಪ್ರಭು ನೀನೆ ತಿಳಿಯಬೇಕು । ಮರುಳುವ್ಯಂತರರರಿದಪರೆ ॥ ೫೬ ॥

ಅದ್ಭುತಸಂಪತ್ತಿನೊಡೆಯ ಮತ್ತವಗೆ ಕಿಂ । ಚಿದ್ಭಯವಿಲ್ಲ ನಿಶ್ಶಂಕಾ ॥
ತದ್ಭವದೊಳು ಮೋಕ್ಷಗಾಮಿ ನೀನಾತನ । ಚಿದ್ಭೂತಿಗಂಡರರ್ತಿಸುವೆ ॥ ೫೭ ॥

ಭರತಷಟ್ಖಂಡವನವನಾಳ್ವ ಪುಣ್ಯವ । ನೆರಪಿಕೊಂಡಾತ ಪುಟ್ಟಿದನು ॥
ಪರರಿನ್ನು ತೊಲಗಿಸಲಾರ್ಪರೆ ಪ್ರೌಢಭೂ । ವರನಲ್ಲವೆ ನೀನು ಸ್ಮರಿಸು ॥ ೫೮ ॥

ಮಡಕೆಯನೊಡೆವಂತೆ ವಜ್ರಕವಾಟವ । ನೊಡೆಹೊಯ್ವನವನಿನ್ನು ಮುಂದೆ ॥
ಬಡವನೆ ಭರತೇಶ ಬೆಟ್ಟವನೊಟ್ಟೈಸಿ । ಕಡಲ ದಾಂಟುವ ದಕ್ಷನವನು ॥ ೫೯ ॥

ಜಾಣನಲ್ಲವೆ ನೀನು ನೋಡವನೆಚ್ಚೊಂದು । ಬಾಣ ನೆಟ್ಟದೆ ಕಂಭದಲ್ಲಿ ॥
ಕೋಣೆಯೊಳಗೆ ಮುನ್ನಲಿಂತಾವನೆಚ್ಚನು । ಕಾಣಬಹುದಕೆ ಕನ್ನಡಿಯೆ ॥ ೬೦ ॥

ಅಲ್ಲಿದ್ದು ಕಂಭವ ತಾಗೆಂದು ಬಿಡೆ ಕಂಭ । ದಲ್ಲಿ ನೆಟ್ಟಿತು ಬಾಣ ಬಂದು ॥
ಕೊಲ್ಲೈಸಿ ಮತ್ತೊಬ್ಬ ಪಗೆಯ ತಾಗೆಂದೆಚ್ಚ । ರೊಲ್ಲದೊಲೆವುದೆ ಮಂತ್ರಾಸ್ತ್ರ ॥ ೬೧ ॥

ಓಲೆಯ ಕಟ್ಟಿ ಬಾಣವನೆಸೆವವನುರಿ । ಮಾಲೆಯ ಬಾಣವನಿಡನೆ ॥
ಜ್ವಾಲೆಯನುಗುಳುವ ಚಕ್ರದಿಂದಿಡನೆ ಸ । ಮಾಲೋಚಿಸೆದೆಯೊಳು ನೃಪತಿ ॥ ೬೨ ॥

ನೆಟ್ಟ ಬಾಣವ ತೋರಿ ನುಡಿದ ಮಾತುಗಳಿದೆ । ದಟ್ಟಿತು ವಜ್ರದ ಕದವಾ ॥
ಹಿಟ್ಟುಗುಟ್ಟುವನೆಂಬ ನುಡಿ ಬೆದರಿಸಿತು ಬಾ । ಯ್ಬಿಟ್ಟಾಡದಾಲಿಸುತಿರ್ದಾ ॥ ೬೩ ॥

ಇದಿರ ಶಕ್ತಿಯ ತನ್ನ ಶಕ್ತಿಯ ಯೋಚಿಸಿ । ಕದನವ ಮಾಳ್ಪುದು ಜಾಣ್ಮೆ ॥
ಮದಮುಖದೊಳು ಹೋಗಿ ತಾಗಿ ಬಾಗಿದರೆ ಲೋ । ಕದ ಹಾಸ್ಯಕಹುದೆಂದರೊಡನೆ ॥ ೬೪ ॥

ತುಡುಕಬೇಕಹುದು ಕಾಳಗವನು ತನಗೆ ತ । ಕ್ಕಡೆಯೊಳಗಧಿಕನೊಳ್ಸೆಣಸಿ ॥
ಬಡವ ಸೆರೆತು ನೋಡಿ ತಿವಿಯಿಸಿಕೊಂಡ ನಾ । ಣ್ನುಡಿಗೆಡೆಯಾಗಲುಬಹುದೆ ॥ ೬೫ ॥

ತನಗೆ ಸಮಾನನೊಡನೆ ಯುದ್ಧ ಸಲುವುದು । ತನಗಧಿಕನೊಳು ಹೋರಿದರೆ ॥
ತನಗೆ ತಾನಿರಿಗುಕೊಂಡಂತಹುದೆಂದರು । ಮನದಟ್ಟಿತಾ ಮಾತು ಮತ್ತೆ ॥ ೬೬ ॥

ನನ್ನಿಚ್ಚೆಗಾಡದೆ ಪರರ ಶಕ್ತಿಯನೆ ಮ । ಹೋನ್ನತಿಗೈದರೆನ್ನದಿರು ॥
ಕನ್ನಡಿಯಂತುಳ್ಳುದನೆ ತೋರಿ ನುಡಿದೆವು । ಬನ್ನವಲ್ಲದು ಲೇಸು ನಿನಗೆ ॥ ೬೭ ॥

ಒಡೆಯನ ಕುಸಿಗುಟ್ಟಿ ಪರರ ಹೆಚ್ಚಿಸಿ ನಾಡೆ । ನುಡಿವುದಧಮತನವಹುದು ॥
ಕಡೆಗೆ ಜಯಿಸುವ ಕಾರ್ಯವ ಕಂಡು ನುಡಿದೆವು । ಕೆಡುವ ಕಾರ್ಯವ ಪೇಳ್ವರಲ್ಲ ॥ ೬೮ ॥

ಇಂದಿಗೆ ಕಷ್ಟವೆಮ್ಮಯ ಮಾತು ನಿನಗದು । ಮುಂದೆ ಲೇಸದ ಕಾಣ್ಬೆ ನೀನೆ ॥
ಚಂದವ ನುಡಿದೆವೀ ನುಡಿ ನಿನ್ನ ಚಿತ್ತಕೆ । ಬಂದರೆ ಕೇಳ್ ಬಿಡಲ್ಲದಿರೆ ॥ ೬೯ ॥

ಕುಲವೃದ್ಧರಾಡಿದ ನುಡಿಯ ಲಾಲಿಸಿ ಚಕ್ರಿ । ಬಲು ಶಕ್ತಿವಂತನೆಂದರಿದು ॥
ಕಲಹ ಜಯಿಸದೆಂದು ಕಂಡೆದೆಯೊಳು ಸೋರಿ । ತಲೆಗುಸಿದನು ಮತ್ತೆ ನುಡಿದಾ ॥ ೭೦ ॥

ಎಂದರಿನ್ನೇನ ಮಾಡುವವೆಂದನಿದಕೊಲ । ವಿಂದೆಯ್ದಿ ಚಕ್ರೇಶನಡಿಗೆ ॥
ವಂದನೆ ಮಾಡುವವೆಂದರಾದೀಶನ । ಕಂದನಲ್ಲವೆಯೆಂದರೊಡನೆ ॥ ೭೧ ॥

ಬೆರೆವರಾರವನಿಗೆ ಷಟ್ಖಂಡದೊಳಗೆ ಸೋ । ತೆರಗದ ಬಲ್ಲಿದರಾರು ॥
ಕೊರತೆಯೆ ತದ್ಭವಮೋಕ್ಷಸುಖಿಯು ಪಾದ । ಕೆರಗುವವೆಂದರುತ್ತಮರು ॥ ೭೨ ॥

ಭಕ್ತಿಯೊಳೆರಗದಿದ್ದವರನಾ ನೃಪ ನಾಳೆ । ಶಕ್ತಿಯೊಳೆರಗಿಸಿಕೊಂಬಾ ॥
ರಿಕ್ತರಾಗದೆ ಹೋಗಿ ಮೊದಲೆ ಕಾಣ್ಬುದು ಮಹಾ । ಯುಕ್ತಿಯೆಂದಾಡಿ ತೋರಿದರು ॥ ೭೩ ॥

ಒಡಬಟ್ಟನದಕೆ ಮಂತ್ರಿಗಳಾಪ್ತರವನೊಡಂ । ಬಡಿಕೆಗೆ ಬಂದುದಕೊಲಿದು ॥
ಪೊಡವಟ್ಟು ಕೊಂಡಾಡಿದರು ನೀತಿಗೇಳ್ವ ನಾ । ಡೊಡೆಯನ ಪೊಗಳದರಾರು ॥ ೭೪ ॥

ನಾಳೆ ಬಂದೆರಗುವುದೆಂದು ಚಕ್ರಾಧೀಶ । ನೋಲೆಯೊಳಿರ್ದಪುದರಸಾ ॥
ನಾಳೆ ಹೋಗುವವಿಂದು ಕಡೆವಗಲಾಯ್ತೆಂದು । ಲೀಲೆಯೊಳವರಿದ್ದರತ್ತ ॥ ೭೫ ॥

ಇತ್ತ ಚಕ್ರೇಶ್ವರ ಬಾಣವನೆಚ್ಚ ಮೇ । ಲೊತ್ತಿನ ಸಾರಥಿ ರಥವಾ ॥
ಒತ್ತಿ ತಿರುಹಿ ಕಟಕಕೆ ಮುಖಮಾಡಿ ಸಂ । ಪತ್ತು ಕೈಮಿಗೆ ನಡೆಸಿದನು ॥ ೭೬ ॥

ತೂಗುವ ಘಂಟೆ ಪತಾಕೆಯು ರಥ ಮೇಲೆ । ಸಾಗಿ ಮುಂದರದಂತೆ ಬರಲು ॥
ಮೂಗಿನ ಹೊಳ್ಳೆಯುರಳಿ ಬುರುಬುರು ಬುಸು । ಟಾಗಿ ತೇಜಿಗಳು ತೆಗೆದುವು ॥ ೭೭ ॥

ಏರಿಸಿರ್ದುದು ದಂಡ ವಜ್ರಖಂಡವ ರಥ । ಕೂರಿ ಮೇಲಣ ಕೊಪ್ಪಿನಲ್ಲಿ ॥
ಹೇರಿ ತನ್ನೆಡಗೈಯ ರಥವನೊರಗಿ ಬಿಲು । ಗಾರನೆಯ್ದಿದನು ಗಾಡಿಯೊಳು ॥ ೭೮ ॥

ವಾಮಹಸ್ತದ ಪಂಚರತ್ನಕಟ್ಟಿನ ಬಿಲ್ಲು । ಕಾಮನ ಬಿಲ್ಲಿನಂತೆಸೆಯೆ ॥
ಕಾಮನ ಬಿಲ್ಲು ತನ್ನೊತ್ತಿನೊಳ್ಮೂಡಿದ । ಹೇಮಾದ್ರಿಯಂತೆಯ್ದುತಿರ್ದಾ ॥ ೭೯ ॥

ಹಡಪಿಗ ನೀಡುವೆಲೆಯ ಕೊಳುತಿಕ್ಕುವ । ಕಡುದೀರ್ಘಚಮರದೊಗ್ಗಿನೊಳು ॥
ಎಡಬಲನಿದಿರತ್ತ ಮುರಿದು ನೋಡುತ ರಾಯ । ರೊಡೆಯ ಬಂದನು ವಿಡಾಯದೊಳು ॥ ೮೦ ॥

ತೇರಿತ್ತ ಮುಖವಾಗಲೊಡನೆ ಕೋಯೆಂದಾಳ್ವ । ವೀರಬೊಬ್ಬೆಯ ಲಗ್ಗೆವರೆಯ ॥
ವೀರವೃಂದದ ದನಿಗೇಳುತ ನಗೆಮೊಗ । ದಾ ರಾಜಸಿಂಹನೆಯ್ತಂದಾ ॥ ೮೧ ॥

ಕಟಕವೆಲ್ಲವು ಜಯಜಯಯೆನುತಾ ವಾರ್ಧಿ । ತಟದಲ್ಲಿ ನಿಂದು ನೋಡುತಿರೆ ॥
ನಟನವನಾಡಿದಂತೆಯ್ತಂದು ರಥದಿಂದ । ಸ್ಫುಟದಿ ಲಂಘಿಸಿದನಾ ಚಕ್ರಿ ॥ ೮೨ ॥

ರಥದಲ್ಲಿ ಬಿಲ್ಲನಿರಿಸಿ ಹಯಗಳನು ಸಾ । ರಥಿಯನು ಮನ್ನಿಸೆಂದೊಬ್ಬ ॥
ರಥಿಕಗುಸುರಿ ಮುಂದೆ ನಡೆದನಾ ರಾಜಮ । ನ್ಮಥನು ತನ್ನರಮನೆಗಾಗಿ ॥ ೮೩ ॥

ದಳಪತಿಸಚಿವರಾಜರು ರಾಜಪುತ್ರರು । ಕೆಳೆಯರು ಗಣಬದ್ಧರೊಸೆದು ॥
ಸೆಳೆಸೆಳೆದೊದಗಿ ನಿವಾಳಿಯಿಟ್ಟಿರಗೆ ಭೂ । ತಳಪತಿ ನೋಡುತ ನಡೆದಾ ॥ ೮೪ ॥
ಕೂರಾಳ್ಗಳಂಗಡಿಕಾರರು ಗಣಿಕೆಯು । ರಾರೋಹಕರು ಮಾವುತರು ॥
ದಾರಿಯೊಳರ್ತಿವಟ್ಟೆತ್ತಿ ಕೈಮುಗಿಯೆ ಮ । ಹಾರಾಯ ನೋಡುತ ನಡೆದಾ ॥ ೮೫ ॥
ಕವಿಗಳು ಕೀರ್ತಿಸೆ ಪಾಠಕರೋದೆ ಹ । ಸ್ತವನೆತ್ತಿ ಭಟ್ಟರುಗ್ಗಡಿಸೆ ॥
ಅವಧಾನ ಪಾದ ಪರಾಕೆಂಬ ವೇತ್ರಾಂಕ । ರವದೊಳೊಯ್ಯನೆ ಪಜ್ಜೆಯಿಟ್ಟಾ ॥ ೮೬ ॥
ಅಲ್ಲಲ್ಲಿ ಕೆಲಬರ ಕೈಸನ್ನೆ ಕಣ್ಸನ್ನೆ । ಮೆಲ್ಲುಸುರಿಂದ ಬೀಳ್ಕೊಡುತ ॥
ಮೆಲ್ಲಮೆಲ್ಲನೆ ನಡೆದೆಲ್ಲರ ಕಳುಹಿ ಭೂ । ವಲ್ಲಭ ಪೊಕ್ಕನು ಗೃಹವಾ ॥ ೮೭ ॥
ರಾಣಿಯರೆಲ್ಲ ನಿವಾಳಿಯನಿಟ್ಟುಚ್ಚ । ಮಾಣಿಕದಾರತಿಯೆತ್ತಿ ॥
ಪ್ರಾಣೇಶನಡಿಗೆರಗಿದರೊಂದು ಪರಮಕ । ಲ್ಯಾಣವನೇನೆಂಬೆನಾಗ ॥ ೮೮ ॥
ನಾಲ್ಕುದಿವಸ ಪುರುಷನನಗಲಿರೆ ಯುಗ । ನಾಲ್ಕಾಗಿ ತಮಗೆ ತೋರಿದ್ದು ॥
ಬಿಲ್ಕೋಲನುಳಿದ ಮನ್ಮಥ ತನ್ನ ಗೃಹವ ಸಾ । ರಲ್ಕೆ ಸಂತೋಷವೇರಿದರು ॥ ೮೯ ॥
ಆ ಸುದತಿಯರೊಡಗೂಡಿ ಭೂಭುಜ ಮತ್ತೆ । ಹೋಸದಾರೋಗಣೆಮಾಡಿ ॥
ವಾಸರದಂತ್ಯಜಿನಸ್ತುತಿಗೈದು ನಿ । ವಾಸದೊಳಿರ್ದನರ್ತಿಯೊಳು ॥ ೯೦ ॥
ತೋಯಧಿಯೊಳು ಹೋಗಿ ಬಂದ ಕಾರ್ಯವನು ತ । ನ್ನಾಯತಾಕ್ಷಿಯರೊಳು ನುಡಿದು ॥
ರಾಯ ಮತ್ತು ಚಿತಲೀಲೆಯೊಳಿರ್ದನಿಲ್ಲಿಗೆ । **ರಾಯುಸದಂಬೆಚ್ಚ ಸಂಧಿ** ॥ ೯೧ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೨ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೩ ॥
ಉಲ್ಬಣದುಃಖವನುಣಿಸುವ ಕರ್ಮದ । ಬಲ್ಪಡೆಯನು ನೋಟದಿಂದ ॥
ಗೆಲ್ವ ಸಾಮರ್ಥ್ಯ ನನ್ನೆದೆಯೊಳಗಿರು ಕಡು । ಚೆಲ್ವ ಚಿದಂಬರಪುರುಷಾ ॥ ೯೪ ॥

ರಾಯುಸದಂಬೆಚ್ಚ ಸಂಧಿ ಸಂಪೂರ್ಣಂ

# ಆದಿರಾಜೋದಯಸಂಧಿ.

ಪುಣ್ಯವ ಕಾಣಿಸಿಕೊಂಡಾಳುತಘಮಹಾ । ರಣ್ಯವ ತೊತ್ತಳದುಳಿವ ॥
ಗಣ್ಯಾ ನೀನೆನಗೆ ಸನ್ಮತಿದೋರು ಲೋಕಶ । ರಣ್ಯಾ ನಿರಂಜನಸಿದ್ಧಾ ॥ ೧ ॥

ಉದಯದೊಳೆದ್ದು ಜಿನೇಂದ್ರಪೂಜೆಯ ಮಾಡಿ । ತ್ರಿದಶೇಂದ್ರನಂತೆ ಸಿಂಗರಿಸಿ ॥
ಮದವದರಾತಿದಲ್ಲಣನು ಹಜಾರವ । ಟ್ಟದೊಳು ಬಂದೋಲಗವಾದಾ ॥ ೨ ॥

ಕ್ಷೋಣೀಪಾಲರು ರಾಜಪುತ್ರರು ಬಂದು ಕೈ । ಗಾಣಿಕೆಯಿಕ್ಕಿ ಕೈಮುಗಿದು ॥
ಮಾಣಿಕಗದ್ದುಗೆಯಿತ್ತರವಿಡಿದು ಬಿ । ನ್ನಾಣದೊಳೆಸೆದು ಕುಳಿತರು ॥ ೩ ॥

ಪಡೆವಳ್ಳಸಚಿವರೊತ್ತಿನೊಳು ಕುಳ್ಳಿರೆ ದೂರ । ವಿಡಿದಾನೆಕುದುರೆಗಳಾಗ ॥
ಎಡಬಲದೊಳು ತೇರುಗಟ್ಟಾಗಿ ನಿಲೆ ಕಟ್ಟ । ಕಡೆಯ ಹಜಾರದೊಳಿರ್ದಾ ॥ ೪ ॥

ಬೆಂಗಡೆಯೊಳು ಗಣಬದ್ಧರು ಕೆಲದಲ್ಲಿ । ಸಂಗಡಿಗರು ಗಣಿಕೆಯರು ॥
ಮುಂಗಡೆಯೊಳಗೆ ಭರಾಭರಿಗೊಟ್ಟುದು । ಸಂಗರಭಟರ ಸಮೂಹಾ ॥ ೫ ॥

ಸಮ್ಮುಖ ಸ್ವಾಮಿ ಪರಾಕು ರಾಯರ ದೇವ । ಹಮ್ಮಾರರಿಪುಗಳ ಗಂಡ ॥
ಸುಮ್ಮಾನವಾರ್ಯೆಕೆಯೆನೆ ವೇತ್ರಿಗರು ನೋಡಿ । ಬಿಮ್ಮನುತೋಲಗವಾದಾ ॥ ೬ ॥

ಇದಿರಲ್ಲಿ ಕವಿಗಮಕಿಗಳು ಪಾಠಕರು ಚಿ । ತ್ರದಗದ್ಯಪದ್ಯವನೋದೆ ॥
ಕೆದರುವ ಚವುರಗಳೊಗ್ಗಿನೊಳಾ ರಾಜ । ಮದನನಿದ್ದನು ವಿಲಾಸದೊಳು ॥ ೭ ॥

ಪಾಡುವ ಪ್ರಾತಃಕಾಲದ ರಾಗವ । ಪಾಡುಗಾರಿಕೆಯೊಳಾಲಿಸುತ ॥
ನೀಡುವೆಲೆಯ ಘಳಿಗೆಯ ಕೊಳುತೊರಗುವ । ಮೂಡೆಯನೊರಗಿ ಮೋಹಿಸಿದಾ ॥ ೮ ॥

ಕ್ಷತ್ರಿಯಪುತ್ರರನೀಕ್ಷಿಸುತೊಮ್ಮೊಮ್ಮೆ । ಧಾತ್ರೀಪಾಲಕರನೀಕ್ಷಿಸುತ ॥
ನೇತ್ರ ನಿಮಿರಿ ದೀರ್ಘಬಲವನೀಕ್ಷಿಸುತ ಪ । ವಿತ್ರಗಾನವ ಕೇಳುತಿರ್ದಾ ॥ ೯ ॥

ಲಲಿತೆಯ ರಾಗ ಚೆನ್ನಾಯ್ತುದರೊಳಗಾತ್ಮ । ಕಲೆಯ ಹಾಡಿದನದು ಚೆನ್ನ ॥
ಕಲೆಗಧಿನಾಥ ನೀನೆ ಮೆಚ್ಚಬೇಕೆಂದ । ನೊಲಿದನುಕೂಲನಾಯಕನು ॥ ೧೦ ॥

ಅಕ್ಷರ ಮುಸುಳದಕ್ಕರಪಾಡಿನೊಳು ಧ್ವನಿ । ಸಾಕ್ಷಿ ಸುಸ್ವರದ ಪಾಡಿನೊಳು ॥
ಲಕ್ಷಿಸಿ ಪಾಡುತಿದ್ದನು ಸ್ವಾಮಿಯೆಂದಾಗ । ದಕ್ಷಿಣನಾಯಕ ನುಡಿದಾ ॥ ೧೧ ॥

ಪುಟದ ಸಕ್ಕರೆಯನು ತನಿವಾಲಿನೊಳು ಸೂಸಿ । ಗುಟುಕಿಸುವಂತೆ ಸಂಗೀತಾ ॥
ನಟನಿಸುತಿದ್ದಪುದೆಂದು ಸೂಚಿಸಿದನು । ಕುಟಿಲನಾಯಕನವನಿಪಗೆ ॥ ೧೨ ॥

ಛಾಯೆಯ ಠೀವಿ ತಾನದ ಸೋನೆ ಪಾಡುವ । ಗಾಯಕನೊಂದು ಗಂಭೀರಾ ॥
ರಾಯನ ಮೆಚ್ಚಿನಂತಿದೆಯೆಂದನುರೆ ಶಠ । ನಾಯಕನಾ ಸಮಯದೊಳು ॥ ೧೩ ॥

ಹೋಗಿರ್ಪ ರಾಗವೊಂದನೆ ಬಣ್ಣಿಸುವಿರಲ್ಲಿ । ಶ್ರೀಗುರುಹಂಸನಾಥನನು ॥
ಕೋಗಿಲೆಯಂತೆ ಪಾಡಿದನೆಂದು ನುಡಿದನು । ನಾಗರನವನೀಶ ಮೆಚ್ಚೆ ॥ ೧೪ ॥

ಪಟುವಾಗಿ ಮಲಹರಿರಾಗವ ಮಾಡಿ ನಿ । ಷ್ಕುಟಲಾತ್ಮಕಲೆಯ ಹಾಡಿದನು ॥
ಚಟುಲಾಕ್ಷಿ ಚಕ್ರಿಯ ನೋಡಿದಂತಾಯ್ತೆಂದು । ವಿಟ ನುಡಿದನು ಸಭೆ ನಲಿಯೆ ॥ ೧೫ ॥

ಪಾಠೀನ ಜಲದೊಳು ಹೊಳೆವಂತೆ ಹೊಳೆದು ತೋ । ರ್ಪಾ ಠಾಯಿ ಲೇಸು ಲೇಸೆಂದು ॥
ಪೀಠಮರ್ದಕ ನುಡಿದನು ಮಣಿಮಯಸಿಂಹ । ಪೀಠದೊಳೆಸೆವನ ಮುಂದೆ ॥ ೧೬ ॥

ಶೋಷಣಮುಖವೀಣೆಯೊಳು ತುಂಬಿದಧ್ಯಾತ್ಮ । ದೌಷಧರಸವನು ಕಿವಿಗೆ ॥
ವೈಷಯರೋಗಿಗಳ್ಗೆರೆದರೆಂದೊಡನೆ ವಿ । ದೂಷಕ ನುಡಿದು ನಗಿಸಿದಾ ॥ ೧೭ ॥

ಇಂತು ನುಡಿವ ಕೆಳೆಯರ ನುಡಿಗಾ ರಾಯ । ನಂತರಂಗದೊಳರ್ತಿವಡುತ ॥
ಮುಂತಣ ಗಾನವನಾಲಿಸುತಾತ್ಮವಿ । ಶ್ರಾಂತಿಯೊಳೋಲಾಡುತಿರ್ದಾ ॥ ೧೮ ॥

ನುಡಿವ ನುಡಿಗೆ ಮೆಚ್ಚಿ ಕೆಳೆಯರಿಗುಚಿತವ । ನಡಿಗಡಿಗೀವುತ ಮತ್ತೆ ॥
ಕಡುಸೊಗಸಾಗಿ ಹಾಡುವರಿಗೆ ಮನ್ನಣೆ । ಗೊಡುತ ಲೀಲಾಂಗದೊಳಿರ್ದಾ ॥ ೧೯ ॥

ಒಂದೊಂದು ರಾಗಕೆ ಮೆಚ್ಚುತ ಪರಮಾತ್ಮ । ನಂದವ ಬಗೆವುತಿರ್ಪಾಗ ॥
ಮಂದಾಕಿನಿಯೆಂಬ ದಾದಿ ಕುಮಾರನ । ತಂದು ಕೊಟ್ಟಳು ಚಕ್ರಧರಗೆ ॥ ೨೦ ॥

ಚಂಡಿಮಾಡಿದನು ಸಣ್ಣರಸು ದೇವರ ಸಭಾ । ಮಂಡಲಕೆಯ್ದುವೆನೆಂದೆನ್ನಾ ॥
ದಂಡಿಸಿದರೆ ತಂದೆನೆಂದಿಂತು ದಾದಿ ವ್ಯೆ । ಗೊಂಡು ನಿಂದಳು ಹೊರಸಾರಿ ॥ ೨೧ ॥

ಗಲಭೆಯೆಲ್ಲವು ನಿಂದಿತೆಲ್ಲರಾ ಕುವರನ । ಚೆಲುವನೀಕ್ಷಿಸುತಿದ್ದರಾಗ ॥
ಬಲದ ತೊಡೆಯ ಮೇಲೆ ಮಗನ ಕುಳ್ಳಿರಿಸಿಕೊಂ । ಡೊಲಿದು ಮುದ್ದಾಡಿಸುತಿರ್ದಾ ॥ ೨೨ ॥

ಮುತ್ತಿನ ಮಣಿಯೊಳು ಹುಟ್ಟಿದ ಕಟ್ಟಾಣಿ । ಮುತ್ತಿನ ಮಣಿಯೊಯೆಂಬಂತೆ ॥
ಚಿತ್ತವ ಸೋಲಿಸುತಿದ್ದನಾ ಕುವರನು । ಚಿತ್ತಜರೂಪನಂಕದೊಳು ॥ ೨೩ ॥

ತಂದೆಯ ಚೆಲ್ವೆ ತಂದೆಯ ರೂಪೆ ತಂದೆಯೊಂ । ದಂದವೆ ತಂದೆಯ ನೋಟಾ ॥
ತಂದೆಯುಚ್ಚೆನೊಳೊತ್ತಿದಂತಿರ್ದನಾ ರಾಜ । ನಂದನ ತಂದೆಯಂಕದೊಳು ॥ ೨೪ ॥

ಅರಳೆಲೆ ಮಾಗಾಯಿ ಕುಂಡಲ ಹಸ್ತದ । ಮುರಿ ಮಣಿಮಯದುಡಿದಾರಾ ॥
ಬೆರಳುಂಗುರ ಗೆಜ್ಜೆಯಂದುಗೆ ಮೆರೆದುವಾ । ಭರತರಾಜೇಂದ್ರನಾತ್ಮಜಗೆ ॥ ೨೫ ॥

ಕತ್ತುರಿಬೊಟ್ಟು ದುರಂಗಿಗುಪ್ಪಸ ನಡು । ಸುತ್ತಿದ ವಾಲು ನುಂಗೊರಳಾ ॥
ಹತ್ತಿದ ಮಣಿದಂಡೆ ತೋಳ ರಕ್ಷೆಗಳು ರಾ । ಜೋತ್ತುಂಗನಣುಗಗೊಪ್ಪಿದುವು ॥ ೨೬ ॥

ತೊಡೆಯ ಮೇಲಿಟ್ಟು ಮಗನ ನೋಡಿ ಮಂಡೆಯ । ತಡಹುತ ಮುತ್ತ ಕೊಡುವನು ॥
ಒಡನೆತ್ತಿಕೊಂಡೆದೆತುಂಬಲಪ್ಪುವನು ಬೊ । ಟ್ಟಿಡುವನು ಪಣೆಯೊಳಾ ನೃಪತಿ ॥ ೨೭ ॥

ತಕ್ಕೈಸಿಕೊಂಡು ತೂಗಾಡುವ ಬಾಯೊಳ । ಗಿಕ್ಕುವ ಗುಟುಕುದಂಬುಲವಾ ॥
ಚಿಕ್ಕಹರೆಯದೊಳು ಚಲುವ ಕಂದನ ಪೆತ್ತ । ಚೊಕ್ಕರ ದೇವನರ್ತಿಯೊಳು ॥ ೨೮ ॥
ಮೆಯ್ಯೆಲ್ಲ ಗುಡಿಗಟ್ಟಿ ತಕ್ಕೈಸಿಕೊಂಡು ಚೆ । ಲ್ವಯ್ಯ ಚೆನ್ನಾನೆಯೆಂದೆಂಬಾ ॥
ಕೆಯ್ಯ ಕನ್ನಡಿಯಂತೆ ತೊಡೆಯ ಮೇಲಿಟ್ಟು ವು । ತ್ತ್ಯೊಯ್ಯನೆ ನೋಡಿ ನಗುವನು ॥ ೨೯ ॥
ತಂದೆಯ ಕೊರಳನೆದ್ದಪ್ಪುವ ಕಿರುವೆರ । ಳಿಂದ ಕೊರಳ ಮಣಿಗಳನು ॥
ಒಂದೆಂಟುಹತ್ತೆರಡೆಂದು ತಪ್ಪೆಣಿಸುವ । ನಂದದಕರಸುಬ್ಬಿ ನಗುವಾ ॥ ೩೦ ॥
ವಿಾಸೆಯ ತಿದ್ದುವ ಗಲ್ಲವ ತಡಹಿ ವಿ । ಲಾಸದಿ ನಗುವನಾ ತರಳಾ ॥
ಆ ಸುಕುಮಾರನ ಮೊಳೆವಲ್ಲ ಕಂಡಣ್ಣ । ಲೇಸು ಲೇಸೆಂಬನಾ ತಂದೆ ॥ ೩೧ ॥
ಆದಿತೀರ್ಥಂಕರ ಎನ್ನರ್ಕಕೀರ್ತಿಯೆಂ । ದೋದಿಸುವನು ತನ್ನ ಮಗಗೆ ॥
ಆದಿಂಕರನೆಂಬನಾ ಬಾಲನದಕೆ ವಿ । ನೋದದಿ ನಗುವನಾ ರಾಯಾ ॥ ೩೨ ॥
ಅಣ್ಣ ಚಿದಂಬರಪುರುಷ ಎನ್ನೆಂದಾಗ । ಬಣ್ಣಿಸಿ ಕಲಿಸಿ ಕೊಡುವನು ॥
ಚಿಣ್ಣ ಚಿಂಬರಪೂಸಯೆಂಬನದಕೆ ಹೊಟ್ಟೆ । ಹುಣ್ಣಾಗೆ ನಗುವನಾ ಚಕ್ರಿ ॥ ೩೩ ॥
ಗುರುನಿರಂಜನಸಿದ್ಧ ಎನ್ನಪ್ಪಯೆಂದು ಭೂ । ವರ ತನ್ನ ಮಗನಿಗೋದಿಸುವಾ ॥
ತರಳನದಕೆ ನಿಂಜಸಿದ್ದಯೆಂಬನು ರಾಯ । ಮುರಿದಪ್ಪಿ ನಗುತ ಚುಂಬಿಸುವಾ ॥ ೩೪ ॥
ನೋಡಣ್ಣ ಮುಂದಿದ್ದರಾರೆಂದು ದೊರೆಗಳ । ಕೂಡೆ ತೋರುವನು ಬಾಲಕಗೆ ॥
ನೋಡುತ ಶಿಶು ಹಸ್ತದೊಳು ತೋರದೆಡಗಾಲ । ನೀಡಿ ತೋರುವುದು ಭೂಭುಜರಾ ॥ ೩೫ ॥
ಪಾದದೊಳಗದವರೆಂದು ನಮ್ಮೆಲ್ಲರ । ಪಾದಪದ್ಮದಿ ಸೂಚಿಸಿದನು ॥
ಆದಿಚಕ್ರಿಯ ಸುತಗದು ಜಾತಿಸಹಜವೆಂ । ದಾ ದೊಡ್ಡದೊರೆಗಳಾಡುವರು ॥ ೩೬ ॥
ಏಕಾಂತಗೈವಂತೆ ತಂದೆಯ ಕಿವಿಯೊತ್ತಿ । ಗಾ ಕುಮಾರಕ ಮೊಗವಿಟ್ಟಾ ॥
ಸಾಕಿನ್ನು ನವಗೇಕೆ ಸುಪ್ರಧಾನಿಕೆಯೆಂಬ । ನಾ ಕಾಲವರಿದೊಲ್ದು ಮಂತ್ರಿ ॥ ೩೭ ॥
ತಂದೆಯ ದೊರೆ ಮಗ ಮಂತ್ರಿಯಾದನು ಸಲೆ । ಸಂದುದಾಲೋಚನೆ ನಿವಗೆ ॥
ಮುಂದಿನ್ನು ನಿವಗಿದಿರಾರೆಂಬರೆಲ್ಲರಾ । ನಂದಿಸುವಂತೆ ಚಕ್ರೇಶಾ ॥ ೩೮ ॥
ಜಾಣರಲ್ಲವೆ ರಾಜರೆಲ್ಲರಾಲೋಚಿಸಿ । ಕ್ಷೋಣೀಶನೊತ್ತಿಗೆ ಬಂದು ॥
ಕಾಣಿಕೆಯಿಕ್ಕಿದರಾ ಶಿಶುವಿಗೆ ತಮ್ಮ । ಪ್ರಾಣರಕ್ಷಕನೀತನೆಂದು ॥ ೩೯ ॥
ತರಳಗೆ ಕೈಕಾಣ್ಕೆ ಬೇಡವೆಂದನು ಚಕ್ರಿ । ಧರಣೀಪಾಲರು ಬೇಡಿಕೊಂಡು ॥
ಇರಬೇಕು ಸ್ವಾಮಿ ನಮ್ಮಯ ಸೇವೆಯಿಷ್ಟೆಂದು । ಹರುಷದಿ ಕಾಣ್ಕೆಯಿಕ್ಕಿದರು ॥ ೪೦ ॥
ಅರಸುಮಕ್ಕಳು ಮೊದಲಾದರೆಲ್ಲರು ಮತ್ತೆ । ಹರಿದೆಯ್ದಿ ಕಾಣ್ಕೆಯಿಕ್ಕಿದರು ॥
ದೊರೆಯ ಮುಂದೊಂದು ಚಿನ್ನದ ರಾಶಿಯಾಯ್ತುಹೊ । ಭರತರಾಜೇಂದ್ರನ ಸಿರಿಯೆ ॥ ೪೧ ॥

ಕಳುಹಣ್ಣ ನಿನಗೆ ಕಾಣಿಕೆಯಿಕ್ಕಿ ಕೈಮುಗಿ । ದೆಳಸಿ ನಿಂದಿರ್ದರನೆಂದಾ ॥
ತಲೆಯೊಲೆದೊಲೆದು ಕೈಯಾಡಿಸಿ ಕಳುಹಿತಾ । ಯೆಳೆಗೂಸಿಗದು ಜಾತಿಸಹಜಾ ॥ ೪೨ ॥

ಅಂತಲ್ಲವಣ್ಣ ವೀಳೆಯವ ಕೊಟ್ಟೆಲ್ಲರ । ಸಂತೋಷದೊಳು ಕಳುಹೆಂದಾ ॥
ತಾಂ ತೆಗೆದವರ ಮೇಲೆಲೆಯ ಚೆಲ್ಲಿತು ಶಿಶು । ಮುಂತೆಲ್ಲ ಕುಳಿತರರ್ತಿಯೊಳು ॥ ೪೩ ॥

ಈ ರಾಶಿಹೊನ್ನನಿನ್ನಾಗೀರ್ವವಣ್ಣಯೆಂ । ದಾರೆಯ್ದನಾ ಪುತ್ರನೊಳಗಾ ॥
ಸಾರೆ ನಿಂದಿರ್ದ ಸೇವಕರ ತೋರಿತು ಶಿಶು । ಭೂರಾಮ ವಿಸ್ಮಯಬಟ್ಟಾ ॥ ೪೪ ॥

ಕಲ್ಪವೃಕ್ಷದ ಸಸಿ ಕಾಳ್ಕರನಪ್ಪುದೆ । ಬಲ್ಪಿನೊಡೆಯ ನಿನ್ನ ಕುವರಾ ॥
ಅಲ್ಪಗುಣಗಳ ಕೈವಿಡಿವನೆಯೆಂದು ಸಂ । ಕಲ್ಪಿಸಿ ಪೊಗಳ್ದರು ಬುಧರು ॥ ೪೫ ॥

ಬೀಜಕೆ ಬಿಡುವುದ ಹೀಚಿನೊಳರಿಯೆಂಬು । ದೀ ಜಗದೊಳಗುಳ್ಳ ಗಾದೆ ॥
ರಾಜ ನಿನ್ನಣುಗನೊಳ್ತೋರಿತೀತನೆ ಚಾಗಿ । ರಾಜಾಗ್ರಣಿಯೆಂದರೊಸೆದು ॥ ೪೬ ॥

ಬುಧರಿಗೆ ಸೇವಕರಿಗೆ ಹೊನ್ನ ಕೊಡಿಸಿ ವಾ । ಙ್ಮಧುರಗೋಷ್ಠಿಯೊಳೊಪ್ಪವಾಗ ॥
ಒದರಿತಾ ದಿಕ್ತಟವೆನೆ ವಾದ್ಯರವದಿ ಮಾ । ಗಧನ ಬರವು ತೋರಿತೊಡನೆ ॥ ೪೭ ॥

ಅದೆ ಗಗನದೊಳು ವಿಮಾನ ಪತಾಕೆ ತೋ । ರಿದುವು ವ್ಯಂತರರ ಪೌಜಹುದು ॥
ಉದಧಿಯು ಮುಟ್ಟದೆಯ್ತುರುತಿರ್ದುದೆಂದು ನೋ । ಡಿದುದು ಚಕ್ರೇಶನ ಸೇನೆ ॥ ೪೮ ॥

ಮಂದಾಕಿನಿಯು ಕರೆದು ಕುವರನ ಕೊಟ್ಟು । ಮಂದಿರಕವಳ ಬೀಳ್ಕೊಟ್ಟು ॥
ಮಂದರದಂತೆ ತಾನೋಲಗವಾದನು । ಮಂದಿಯಿದ್ದುದು ಗಮಕದೊಳು ॥ ೪೯ ॥

ಚಕ್ರಿಯ ಕಟಕವ ಕಂಡು ಮಾಗಧನ ಪ । ರಾಕ್ರಮ ಜಜ್ಜರವಾಯ್ತು ॥
ವಕ್ರ ಸಲ್ಲದೆಯಿವನೊಡನೆಂದು ಮನದೊಳ । ನುಕ್ರಮಿಸುತ ಬರುತಿರ್ದಾ ॥ ೫೦ ॥

ಕಡಲ ತಡಿಯೊಳು ವಿಮಾನವಿಳಿದು ಕಾ । ಲ್ನಡೆಯೊಳು ಮಾಗಧರಾಜಾ ॥
ಒಡೆಯನೊತ್ತಿಗೆ ಬರುತಿರ್ದನಷ್ಟರೊಳೊಬ್ಬ । ಕೆಡುಕ ಹಣ್ಣಿದನೊಂದು ನೋವಾ ॥ ೫೧ ॥

ಅವನು ಮಾಗಧನ ನಾಡವನು ಚಕ್ರಿಯ ಸೇವೆ । ಯವನನೊಬ್ಬನ ಕರೆಕೊಂಡು ॥
ತವೆ ನಿನ್ನೆ ಮಾಗಧ ಚಕ್ರಿಯ ಜರೆದುದ । ಕಿವಿಯೊಳವಗೆ ತುಂಬಿಬಿಟ್ಟಾ ॥ ೫೨ ॥

ಕೋಪ ಮಸಗಿ ಚಕ್ರಿಯೂಳಿಗದವನು ತಾ । ನಾ ಪೌಜಿನೊಳು ಮುಂದೆ ಬಂದು ॥
ಆ ಪೇಳ್ದುದೆಲ್ಲವ ಚಕ್ರಿಯ ಕಿವಿಯೊಳಾ । ಲಾಪಿಸಿ ಕೊಟ್ಟು ಜಾರಿದನು ॥ ೫೩ ॥

ಮೊದಲೆ ಮಾಗಧನತಿಕೋಪಿಯೆಂಬುದನು ಭೂ । ಸುದತೀಶ ಕೇಳಿರುತಿಹನು ॥
ಇದು ದಿಟವಹುದೆಂದು ಮನದೊಳು ಕೆರಳಿ ಕೋ । ಪದೊಳಿರ್ದ ನುಡಿದು ಕಾಣಿಸದೆ ॥ ೫೪ ॥

ಚಾಮರ ಛತ್ರ ಮುಂತಾದ ಚಿಹ್ನವ ಬಿಟ್ಟು । ಕ್ಷೌಮವಸ್ತ್ರವನುಡೆಸುತ್ತಿ ॥
ಶ್ರೀಮಹಾಚಕ್ರಿಯ ಸಂಧಿವಿಗ್ರಹಿಗಳ । ನೇಮದೊಳವನೆಯ್ದುತಿರ್ದಾ ॥ ೫೫ ॥

ರಾಹುಮುಖನು ದೊಡ್ಡಕಂಗಳವನು ದೀರ್ಘ । ದೇಹಿ ಡೊಳ್ಳೊಡಲ ಕಠಿಕನು ॥
ಸಾಹಸಿ ಮಾಗಧ ಮಣಿಮಯಾಭರಣದ । ಮೋಹರದೊಳು ಬರುತಿರ್ದಾ ॥ ೫೬ ॥
ಬಳಿಬಂದ ಸರ್ವರ ನಿಲಿಸಿ ಮಂತ್ರಿಯು ತಾನು । ಬಲುಕಪ್ಪಕಾಣಿಕೆ ಸಹಿತ ॥
ಒಳಹೊಗುತಿದ್ದರು ರತ್ನಖಚಿತದಂಡ । ಗಳನಾಂತರನುಮತದಿಂದ ॥ ೫೭ ॥
ಸೇತುಗಟ್ಟಾಗಿ ಭರಾಭರಿಗೊಟ್ಟ ಪ । ದಾತಿಯ ಹಯಗಜರಥವಾ ॥
ಭೂತನಾಥನು ನೋಡುತೆದೆಯೊಳಿಷ್ಟಳುಕುತ । ಮಾತಿಲ್ಲದೆಯ್ತರುತಿರ್ದಾ ॥ ೫೮ ॥
ಬಳಸಿದ ದೇಶಾಧಿಪತಿಗಳ ನಡುವೆ ಮಂ । ಗಲಮಣಿಪೀಠವನೇರಿ ॥
ಕುಲಗಿರಿ ಬಳಸಿದ ಮೇರುವಿನಂತಿರ್ದ । ಸುಲಭನ ಕಂಡನಿದಿರೊಳು ॥ ೫೯ ॥
ಅಭಿನವರತ್ನ ಕಿರೀಟವನಾಂತಂಗ । ಪ್ರಭೆ ಧಗಧಗಿಸುತ ಮತ್ತೆ ॥
ಉಭಯದಿಕ್ಕಿನೊಳು ಢಾಳಿಪ ಚವರದ ಮಹಾ । ವಿಭುವ ಕಂಡಚ್ಚರಿವಟ್ಟಾ ॥ ೬೦ ॥
ಗಂಡು ಗಂಡಿಗೆ ಮೋಹಿಪಂತಿರ್ದ ರಾಯನ । ಗಂಡಗಾಡಿಯನು ದೂರದೊಳು ॥
ಕಂಡ ಮಾತ್ರದೊಳವನೆದೆಸೋತನೆಂದರೆ । ಪೆಂಡಿರಿನ್ನೆದೆಸೋಲದಿಹರೆ ॥ ೬೧ ॥

ಅಲ್ಲಲ್ಲಿ ನಿಲ್ಲುತ ವೈಯೋಸರಿಸಿ ಕುಗ್ಗಿ । ತೊಲ್ಲಗೊತ್ತಿಗೆ ಬರುತಿಹನಾ ॥
ದಳ್ಳಿಸುತಿಹ ಕೋಪದಿಂದ ಭೂಪತಿ ನೋಡಿ । ಸೊಲ್ಲಿಸಿದನು ಕಠಿಣದೊಳು ॥ ೬೨ ॥
ಇವನೊ ಮಾಗಧನೆಂದು ಸಂಧಿವಿಗ್ರಹಿಗಳ । ನವನೀಶನೊಲಿದು ಕೇಳಿದನು ॥
ಇವನೀಗ ಸ್ವಾಮಿ ಮಾಗಧನು ದೊಡ್ಡವನು ನೀ । ನವಧರಿಸೆಂದರಾಗವರು ॥ ೬೩ ॥
ಎಲವೊ ಮಾಗಧ ನಿನ್ನೆ ಹಿರಿದಾಗಿ ಪಂಥವ । ಕೆಲೆದೆ ಕಂಡಹುದೊ ಗುಲಾಮಾ ॥
ಜಲಧಿಯೊಳಿದ್ದೆನೆಂಬಾ ಸೊಕ್ಕೆ ನಿನಗೆಂದು । ಯೆಳೆವಿಾಸೆತಿದ್ದುತ ನುಡಿದಾ ॥ ೬೪ ॥
ಗಡಗಡನಾಗಳೆ ನಡುಗಿದ ಬಲದ ಕೈ । ಯೆಡದ ಕೈಯೊಳು ತನ್ನ ಬಾಯ ॥
ಬಡಿದುಕೊಂಡನು ತಪ್ಪುತಪ್ಪೆನ್ನ ರಕ್ಷಿಸೆ । ನ್ನೊಡೆಯಯೆಂದೆನುತಡ್ಡಗೆಡೆದಾ ॥ ೬೫ ॥
ನಕ್ಕನು ಚಕ್ರಿಯೇಳೇಳಂಜಬೇಡೆಂದ । ಧಿಕ್ಕನೆದ್ದವ ಮುಂದೆ ನಿಂದು ॥
ಮುಕ್ಕೊಡೆಯೊಡೆಯನಾತ್ಮಜ ನಿನ್ನ ಕಂಡಾರ । ಸೊಕ್ಕಡುಗದು ಸ್ವಾಮಿಯೆಂದಾ ॥ ೬೬ ॥
ಬಾವಿಯೊಳಗೆ ಕಪ್ಪೆ ಬಾಳ್ವಂತೆ ನಾವೊಂದು । ದೀವಿಯೊಳಿದ್ದವರೈಸೆ ॥
ದೇವ ನಿನ್ನಯ ತೇಜದೇಳ್ಗೆಯ ಬಲ್ಲೆವೆ । ಗಾವಿಲರೆಂದರೇನಾಯ್ತು ॥ ೬೭ ॥
ಕಂತುನಿರ್ಜಿತರೂಪ ನಿನ್ನನೋಲೈಪುದು । ನೋಂತವರ್ಗಲ್ಲದೆ ಬಹುದೆ ॥
ವ್ಯಂತರರೆಂದರೆ ಭೂತಗಳಲ್ಲವೆ । ಭ್ರಾಂತರು ನಾವೆಂದರೇನು ॥ ೬೮ ॥
ಸಾಗರವನು ತೊರೆ ಜರೆದರೆ ಕಮ್ಮರೆ । ಗೂಗೆ ಹಂಸನ ನಿಂದಿಸಿದರೆ ॥
ಮಾಗಧ ಭರತಚಕ್ರೇಶನ ಹಳಿಯೆ ಭೂ । ಭಾಗದೊಳಾವುದು ಕೊರತೆ ॥ ೬೯ ॥

ಈ ಚೆಲ್ವಿನೀ ಪ್ರಾಯದೀ ಸುಜಾಣ್ಮೆಯ ಸರ್ವ । ಭೂಚಕ್ರದೊಡೆಯನ ಮುಂದೆ ॥
ಪೇಚಾಟದೆಮಗೊಂದು ರಾಜವೋಡಿಯೆ ಸುಡು । ನಾಚಬೇಡವೆ ಜಾಣರೆಂದಾ ॥ ೭೦ ॥

ನಿನ್ನಂತೆ ಸೊಬಗುಳ್ಳರರಸಾಗಿ ಬಾಳ್ವುದು । ನಿನ್ನಂತೆ ಸೊಬಗು ಕೂಡದಿರೆ ॥
ನಿನ್ನನೋಲೈಸಿ ಬಾಳ್ವುದು ಸುಖ ಮಿಕ್ಕಿನ । ಬಣ್ಣದರಸುತನವೆಂದಾ ॥ ೭೧ ॥

ಭೋಗಯೋಗದೊಳಿದ್ದು ಮುಕ್ತನಾಗುವ ಮೋಕ್ಷ । ಭಾಗಿಗಾರೆಣೆ ನಿನಗೆಂದು ॥
ಮಾಗಧೇಂದ್ರನು ನಿಂದು ಚಕ್ರವರ್ತಿಯ ಭಟ್ಟ । ಮಾಗಧರಂತೆ ಕೀರ್ತಿಸಿದಾ ॥ ೭೨ ॥

ಭೂಮಿಪಾಲರು ರಾಜಪುತ್ರರದಕೆ ಮೆಚ್ಚಿ । ಸ್ವಾಮಿಗುಳ್ಳುದನು ಕೀರ್ತಿಸಿದೆ ॥
ಸ್ವಾಮಿಹಿತವನು ನೀನೆಂದು ಪ್ರೇಮದಿ ಮಾಗ । ಧಾಮರೇಂದ್ರನ ಪೊಗಳಿದರು ॥ ೭೩ ॥

ಅಷ್ಟರ ಮೇಲೆ ಚಕ್ರೇಶ್ವರನವನಿಗ । ಭೀಷ್ಟದೊಳಾಸನಗೊಡಿಸಿ ॥
ಕಷ್ಟನಲ್ಲುತ್ತಮನ್ನೈ ನೀನು ಕುಳ್ಳಿರೆಂ । ದಿಷ್ಟ ವಾಕ್ಯವನೊಲ್ದು ನುಡಿದಾ ॥ ೭೪ ॥

ಬದುಕಿದೆ ಸ್ವಾಮಿಯೆಂದವಕೆ ಸಂತಸಬಡು । ತೊದಗಿ ನಿವಾಳಿಯನಿಟ್ಟಾ ॥
ಇದು ಕಾಣ್ಕೆಯೆಂದು ಜಾಳಿಗೆಯನೊಡೆದು ಹೊನ್ನ । ಬುದಿಬುದಿನಡಿಗಳ್ಗೆ ಸುರಿದಾ ॥ ೭೫ ॥

ಸಚಿವನ ಕೈಯೊಳಗಿದ್ದ ಮಹಾರತ್ನ । ರಚಿತದ ಭೂಷಣಗಳನು ॥
ಉಚಿತದ ಕಪ್ಪವಿದೆಂದು ಮುಂದಿರಿಸುತ । ಸಚಿವಸಹಿತ ಮತ್ತೆ ಮಣಿದಾ ॥ ೭೬ ॥

ಸಭೆಯೆಲ್ಲ ಲೇಸು ಲೇಸೆನೆ ಮತ್ತೆ ಕುಳಿತನು । ವಿಭವದೊಳಾ ಮಂತ್ರಿಸಹಿತ ॥
ಅಭಿಮುಖದೊಳಗಿರ್ದ ಬುದ್ಧಿಸಾಗರನನಾ । ಸುಭಗಚಕ್ರೇಶ ನೋಡಿದನು ॥ ೭೭ ॥

ಮಾಗಧಾಮರ ಸುಜನನು ಸ್ವಾಮಿ ವ್ಯಂತರ । ಭಾಗದೊಳೀತ*ನಗ್ಗಳನು ॥
ಬೇಗ ದೇವರ† ಸೇವೆಗೊದಗತಕ್ಕವನೆಂದು । ರಾಗಿಸಿ ನುಡಿದನಾ ಮಂತ್ರಿ ॥ ೭೮ ॥

ದೇಶಾಧಿಪತಿಗಳ ಸಂಸರ್ಗದಲ್ಲಿ ಜಿ । ನೇಶನಾತ್ಮಜನನೋಲೈಪ ॥
ಕೌಶಲವನು ಪೆತ್ತನವನೆ ಕೃತಾರ್ಥನೆಂ । ದಾ ಸಚಿವೇಂದ್ರನಾಡಿದನು ॥ ೭೯ ॥

ಬುದ್ಧಿಸಾಗರಮಂತ್ರಿ ಲೇಸನಾಡಿದೆ ನಿನ್ನ । ಶುದ್ಧಿಯ ಕೇಳ್ದಾನು ಬಲ್ಲೆ ॥
ಉದ್ಧರಿಸಿದೆ ನನ್ನನೆಂದು ಮಾಗಧನು ವಿ । ಶುದ್ಧ ಚಿತ್ತದೊಳೊಲ್ದು ನುಡಿದಾ ॥ ೮೦ ॥

ಇಂದಿಗೆ ಮಾಗಧಾಮರನೂರ್ಗೆ ಪೋಗಲಿ । ಮುಂದಣ ಪಯಣಕೆ ಬರಲಿ ॥
ಚಂದದಿ ಬೀಳ್ಕೊಡೆಂದಾ ಮಂತ್ರಿ ನೃಪತಿಗಾ । ನಂದದಿ ಬಿನ್ನವಿಸಿದನು ॥ ೮೧ ॥

ಬಾರೈ ಮಾಗಧಯೆಂದು ಸನ್ನಿಧಿಗೆ ಗಂ । ಭೀರವಾಕ್ಯದೊಳೊಲ್ದು ಕರೆದು ॥
ಧಾರಿಣಿಗುತ್ಕೃಷ್ಟವೆನಿಪ ಭೂಷಣಗಳ । ನಾ ರಾಯನುಡುಗೊರೆಯಿತ್ತಾ ॥ ೮೨ ॥

---

* ಬಲ್ಲಿದನು.   † ದೇವ

ಅವನು ಕಪ್ಪಕೆ ಕೊಟ್ಟ ಹಾರ ಕುಂಡಲ ಕಡ । ಗವ ನೋಡಲಧಿಕವೆಂದೆನಿಪ ॥
ನವರತ್ನಭೂಷಣದುಡುಗೊರೆಯಿತ್ತನಾ । ಭುವನೇಶಗೇನದು ಘನವೆ ॥ ೮೩ ॥
ಅಡಿಗೆರಗಿಸಿಕೊಂಬ ತೇಜವೊಂದಲ್ಲದೆ । ವೊಡವೆಯಾಸೆಯೆ ಚಕ್ರಧರಗೆ ॥
ಒಡನಿದ್ದ ನೃಪರೆಲ್ಲ ತಲೆದೂಗುವಂತವ । ಗುಡುಗೊರೆಯಿತ್ತು ಮನ್ನಿಸಿದಾ ॥ ೮೪ ॥
ಕೇಳಿದೆವೈ ನಿನ್ನ ಮಂತ್ರಿವೊಳ್ಳಿದನೆಂದು । ಹೇಳಿದರೆಂದೊಲ್ಪು ಕರೆದು ॥
ಮೇಲುದೊಡಿಗೆಯನಾತನ ಮಂತ್ರಿಗಿತ್ತು ನೃ । ಪಾಲಕ ಬೀಳ್ಕೊಟ್ಟನೊಡನೆ ॥ ೮೫ ॥
ಭವನವ ಹೊಕ್ಕಾನು ಬಪ್ಪೆನನ್ನೆಗ ನಾಳಿ । ನವನಿರಲೆಂದು ಮಾಗಧನು ॥
ಧ್ರುವಗತಿಯೆಂಬನ ಕರೆಸಿ ಕಾಲ್ಗೆರಗಿಸಿ । ಅವನೀಶಗೊಪ್ಪಿಸಿಕೊಟ್ಟಾ ॥ ೮೬ ॥
ಪಾದಕೆರಗಿ ಮಂತ್ರಿಸಹಿತ ಮಾಗಧನತ್ತ । ಹೋದನು ಗೆದ್ದೆ ಪೋಯೆನಲು ॥
ಆದುದು ಸಭೆಗೆಲ್ಲ ಪರಮಸಂತೋಷ ಭಾ । ಗ್ಯೋದಯನಿದ್ದನುಬ್ಬಿನೊಳು ॥ ೮೭ ॥

ಜಿನ ಜಿನ ಏನೆಂಬೆನಷ್ಟರೊಳೊಬ್ಬ ಮಾ । ನಿನಿ ರಾಯನರಮನೆಯಿಂದ ॥
ಘನಕುಚ ಕುಣಿವುತ ನಗುತೋಡಿ ಬಂದು ರಾ । ಯನಿಗೆ ಕೈಮುಗಿದಳುಬ್ಬಿನೊಳು ॥ ೮೮ ॥
ಚಿತ್ತೈಸು ದೇವ ದೊಡ್ಡೊಸಗೆ ಕುಮಾರನು । ತ್ಪತ್ತಿಯಾದನು ನಿಮಗಿಂದು ॥
ಉತ್ತಮೋತ್ತಮನೆಂದರವಳಿಗಾಗಳೆ ಮೆಚ್ಚಿ । ಮುತ್ತಿನ ಹಾರವ ಕೊಟ್ಟಾ ॥ ೮೯ ॥
ಒಸೆದು ಮತ್ತವಳನೊತ್ತಿಗೆ ಕರೆದಾವಳು । ಬೆಸಲಾದಳೆಂದು ಕೇಳಿದನು ॥
ಕುಸುಮಾಜಿಯರು ಸುಕುಮಾರನ ಪಡೆದರೆಂ । ದುಸುರಿದಳವಳು ಕರ್ಣದೊಳು ॥ ೯೦ ॥
ಮತ್ತೊಂದು ಉಳಿಯನವಳಿಗೊಲ್ದು ಕೊಟ್ಟನು । ಚಿತ್ತದೊಳಾನಂದವಟ್ಟಾ ॥
ಹತ್ತಿರಿದ್ದವರೆಲ್ಲ ತವಗೊಂದು ಪರಮಸಂ । ಪತ್ತು ಬಂದಂತೆ ಹೆಚ್ಚಿದರು ॥ ೯೧ ॥
ತೋರಣಗಟ್ಟಿತು ಗುಡಿಯೆದ್ದು ಕಟಕದಿ । ಭೋರೆಂದು ವಾದ್ಯ ಮೊಳಗಿತು ॥
ಧಾರಿಣಿ ಮುಟ್ಟಿತಾಗಳೆ ಚಕ್ರಿಗಿಂದು ಕು । ಮಾರನೊಗೆದನೆಂಬ ವಾರ್ತೆ ॥ ೯೨ ॥
ಇದ್ದವರೆಲ್ಲರನುಚಿತದಿ ಬೀಳ್ಕೊಡು । ತೆದ್ದನು ಜಿನ ಶರಣೆನುತ ॥
ಹೊದ್ದಿದನೊಲವಿಂದ ಹೆರುಗೆಯ ಮನೆಯನು । ಮುದ್ದಿನ ಮಗನ ನೋಡಿದನು ॥ ೯೩ ॥
ನಸುನಾಣ್ಚಿ ತೀಕ್ಷ್ಣಿಸಿ ತಲೆವಾಗಿ ಕುಳಿತಿರ್ದ । ಕುಸುಮಾಜಿಯೊತ್ತಿನೊಳೆಸೆವ ॥
ಹಸುಳೆಯ ನೋಡಿ ಸಿದ್ಧೋ ರಕ್ಷತೆಂದು ಸಂ । ತಸದಿಂದ ಮುಗುಳ್ದನಲ್ಲಿಂದ ॥ ೯೪ ॥
ಅರಸಿಯರೆಲ್ಲರು ನಲಿದಾಡುತೆಯ್ತಂದು । ಪುರುಷನಂಘ್ರಿಯ ಮೇಲೆ ಬಿದ್ದು ॥
ವರಸುತನಾದನೆಂದುಲಿವುತೊಪ್ಪಿದರೊಂದು । ಪರಮಸಂಭ್ರಮವನೇನೆಂಬೆ ॥ ೯೫ ॥
ದಾನಾಭಿಷೇಕಪೂಜೆಗಳ ನಾಡೊಳಗೆ ಪ್ರ । ಧಾನ ಸೂಚಿಸಿ ನಡೆಸಿದನು ॥
ಸೇನೆಯೊಳಗೆ ಸೇನಾಪತಿಯು ನಡೆಸಿದನೇ । ನಾ ನೃಪನೈಸಿರಿ ಬಡವೆ ॥ ೯೬ ॥

ಮಯ ರಚಿಸಿದ ಬಸದಿಗಳೊಳು ನೃಪರು ಪಾ । ಳಿಯದೊಳೆಸಗಿದರರ್ಚನೆಯಾ ॥
ಜಯ ಜಯಯೆನೆ ಪೂಜೆ ನಡೆದುದುರ್ವಿಯೊಳು ಚ । ಕ್ರಿಯ ತನುಜೋತ್ಪತ್ತಿಯಲ್ಲಿ ॥ ೯೭ ॥

ಆ ದಿನದೊಳು ಜಾತಕರ್ಮವ ಮಾಡಿಸಿ । ದ್ವಾದಶದಿನದೊಳು ನೃಪತಿ ॥
ಆದಿಜಿನನ ಪೆಸರವನಾದಿರಾಜನೆಂ । ದಾದರ ಮಿಗೆ ನಾಮವಿಟ್ಟಾ ॥ ೯೮ ॥
ನಾಮಕರ್ಮದ ದಿನದೊಳು ಮಾಗಧನು ತನ್ನ । ಸೀಮೆಯ ಸಂಪತ್ತುಗೂಡಿ ॥
ಸ್ತೋಮದುಲುಪೆಗೂಡಿ ಸಂಭ್ರಮದೊಳು ಬಂದು । ಭೂಮಿಪತಿಯ ಕಂಡನೊಸೆದು ॥ ೯೯ ॥
ಮುಂದಣ ಪಯಣಕೆ ಬಹೆನೆಂದು ಹೋಗಿ ನೋ । ಡಿಂದಿಲ್ಲಿಗಿವನೊದಗಿದನು ॥
ಎಂದೆಂದಿಗೆಮಗೆ ಮಾಗಧನೆ ಮಹಾಹಿತ । ನೆಂದು ನುಡಿದನಾ ಚಕ್ರೇಶಾ ॥ ೧೦೦ ॥
ಕಳುಹಿಸಿಕೊಂಡಾನು ಕಡಲೊತ್ತಿನೊಳು ಕೇಳ್ದೆ । ಸಲೆ ಕುಮಾರೋದಯೋತ್ಸವವಾ ॥
ಉಲುಪೆ ಸಹಿತ ಬಪೆನೆಂದೂರ್ಗೆ ಹೋದೆನಾ । ಗಳೆ ಮಗುಳ್ದೆನೆಯೆಂದನವನು ॥ ೧೦೧ ॥
ಬಿಟ್ಟತಾಗಿರೆ ನಿನ್ನ ನುಡಿದೆನ್ನೈ ಮರೆಯೆಂದು । ಮುಟ್ಟಿ ಭೂಪತಿ ಲೇಸ ನುಡಿದಾ ॥
ಕುಟ್ಟಿ ಸದ್ಬುದ್ಧಿಗಲಿಸಿದೆ ನನ್ನೊಡೆಯನಾಯೆಂ । ದಟ್ಟಹಾಸದೊಳವ ಮಣಿದಾ ॥ ೧೦೨ ॥
ಹೋಗು ನಿನ್ನಯ ನಾಳಿನವನ ಕರೆದುಕೊಂಡು । ಸಾಗರದೊಳಗೆ ತೆಪ್ಪಗಿರು ॥
ಆಗಲೆ ಸಂದಿತೆನ್ನೋಲಗವೆಂದನು । ಮಾಗಧೇಂದ್ರಗೆ ರಾಯ ಮೆಚ್ಚಿ ॥ ೧೦೩ ॥
ನುಡುನುಡು ನಾಡಿನೊಳೀನುಂಟು ಸಿರಿ ನಿನ್ನ । ಪಡೆಯೊಳಿಪ್ಪುದೆ ಭಾಗ್ಯವೆನಗೆ ॥
ಬಿಡೆನಿನ್ನು ನಿನ್ನಡಿಗಳನೆಂದನವನಾರು । ಬಿಡುವರಾ ಸೊಬಗನ ಕಂಡು ॥ ೧೦೪ ॥
ಹುಟ್ಟಿದ ಶಿಶುವಿಷ್ಟು ಬಲಿಯಬೇಕೆಂದು ಸಂ । ಘಟ್ಟಿಸಿ ದಂಡು ತೆರಳದೆ ॥
ಬಿಟ್ಟ ಬೀಡಿನೊಳಾರುತಿಂಗಳಿದ್ದನು ಹೊಸ । ಪಟ್ಟಣದೊಳಗಿಪ್ಪ ತೆರದಿ ॥ ೧೦೫ ॥
ಓದುವ ಪಾಡುವಾಡುವ ಲೀಲೆಯೊಳು ಸರ್ವ । ಮೇದಿನೀಪತಿಗಳೊಗ್ಗಿನೊಳು ॥
ಕಾದುವ ಕಟ್ಟುವ ನೆನಹಿಲ್ಲದಿರ್ದನಿ । **ದಾದಿರಾಜೋದಯಸಂಧಿ** ॥ ೧೦೬ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೭ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೮ ॥
ನಿಂದಲ್ಲಿ ನಡೆದಲ್ಲಿ ಕುಳಿತಲ್ಲಿ ಸರ್ವತ್ರ । ಕುಂದದೆ ಕುಶಲಲೀಲೆಯನು ॥
ಸಂದಿಸುವಭವ ನನ್ನೆದೆಯೊಳಗಿರು ಚಿದಾ । ನಂದ ಚಿದಂಬರಪುರುಷಾ ॥ ೧೦೯ ॥

ಆದಿರಾಜೋದಯಸಂಧಿ ಸಂಪೂರ್ಣಂ

# ವರತನುಸಾಧ್ಯಸಂಧಿ.

ನಡೆವಾಗ ನುಡಿವಾಗ ನೆನಹಿನೊಳಗೆ ತೋರಿ । ನಡೆದತ್ತ ಸಾಧ್ಯವ ಮಾಳ್ಪ ।
ನಡೆನಾಟಕಾಂಗ ಸನ್ಮತಿದೋರು ರನ್ನಗ । ನ್ನಡಿಯೆ ನಿರಂಜನಸಿದ್ಧಾ ॥ ೧ ॥

ಆರುತಿಂಗಳ ಮೇಲೆ ದಂಡೆದ್ದುದಲ್ಲಿಂದ । ಚೀರಿಟ್ಟು ಭೇರಿ ಸೂಳೈಸೆ ॥
ತೋರಲೆತ್ತಿದುವು ಪತಾಕೆಟೆಕ್ಕೆಯು ಬಾನ । ಕೇರಿತು ಪಡೆಯ ಕಾಲ್ಧೂಳು ॥ ೨ ॥

ಮುಖರಮಾಗಧನ ಮೂಡಣ ವಾರ್ಧಿಯೊಳು ಗೆಲ್ದು । ನಿಖಿಳಸೇನೆಯ ಕೂಡಿಕೊಂಡು ॥
ಸುಖಿಗಳೊಡೆಯ ಕಡಲೊತ್ತುವಿಡಿದು ತೆಂಕ । ಮುಖವಾಗಿ ದಂಡೆತ್ತಿ ನಡೆದಾ ॥ ೩ ॥

ಒಂದು ರಥದೊಳು ಕಿರಿಯ ಕುವರನ ತೊಟ್ಟ । ಲೊಂದು ರಥದೊಳು ದೊಡ್ಡಣುಗಾ ॥
ಮಂದಾಕಿನಿಯ ತೊಡೆಮೇಲೇರಿ ಬರೆ ಬಂದು । ದಂದರ್ಕಕೀರ್ತಿಯ ಪೌಜು ॥ ೪ ॥

ತಡಿವಿಡಿದೊಯ್ಯನೆ ತಂಪಿನೊಳಾ ಸೇನೆ । ನಡೆವುದು ಮದುವೆಯಂದದೊಳು ॥
ಕಡುಬಿಸಿಲಾಗದೆ ತೆರಪನುಳ್ಳೆಡೆಯೊಳು । ಬಿಡುವುದಲ್ಲಲ್ಲಿ ಬಿಂಕದೊಳು ॥ ೫ ॥

ತೇರು ಮಸಗುವಂತೆ ಮತ್ತೆತ್ತಿ ನಡೆವುದು । ವೀರವೃಂದದ ರಭಸದೊಳು ॥
ಆರಯ್ದು ಮತ್ತಿಂಬಿನೆಡೆಗಂಡು ನಿಲ್ವುದಿಂ । ತಾ ರಾಯಪಡೆಯೆಯ್ದುತಿಹುದು ॥ ೬ ॥

ಪಲ್ಲಕ್ಕಿಯೇರಿ ಭೂಭುಜನೊಂದು ಪಯಣವ । ಸಲ್ಲೀಲೆಯಿಂದ ಸಾಗುವನು ॥
ಉಲ್ಲಾಸದಿಂದೊಂದು ಪಯಣವ ದಂಡಿಗೆ । ಯಲ್ಲಿ ಸಾಗುವನೋಜೆವಿಡಿದು ॥ ೭ ॥

ಚವರ ಬೊಂಬಾಳವನಡರ್ದೊಂದು ಪಯಣವ । ದಿವಿಜೇಂದ್ರನಂತೆ ಸಾಗುವನು ॥
ದಿವಿಜವಿಮಾನದಂತೆಸೆವ ಪುಷ್ಪಕದೊಳು । ಸುವಿಲಾಸದಿಂದೊಮ್ಮೆ ಬಹನು ॥ ೮ ॥

ಆನೆಯ ಮೇಲೊಮ್ಮೆ ಪಯಣವ ಬಂದು ನ । ವೀನರಥದೊಳೊಮ್ಮೆ ಬಹನು ॥
ಏನೆಂಬೆ ಮರುತಮಾವುಗಳೇರಿ ಕುಣಿಸುತ । ತಾನೊಂದು ಪಯಣವೆಯ್ದುವನು ॥ ೯ ॥

ಅಶ್ವಕುಲೋತ್ತಮಗಳೊಳೊಮ್ಮೆ ಬಹನು ತ । ನ್ನಶ್ವರತ್ನದೊಳೊಮ್ಮೆ ಬಹನು ॥
ವಿಶ್ವವಿಲಾಸದೊಳೆಯ್ದುತಿದ್ದನು ಭರ । ತೇಶ್ವರ ಪಯಣಗತಿಯೊಳು ॥ ೧೦ ॥

ಮಾಗಿಯ ಬೇಸಗೆಯನು ಮಳೆಗಾಲವ । ನೀಗುತಲ್ಲಲ್ಲಿ ವಿಶ್ರಮಿಸಿ ॥
ಸಾಗಿ ಹಲವು ಪಯಣದ ಮೇಲೆ ತೆಂಕಣ । ಸಾಗರವನು ಬಂದು ಕಂಡಾ ॥ ೧೧ ॥

ಪಾಳೆಯ ಬಿಟ್ಟಿತು ಕಡಲೊತ್ತಿನೊಳು ಮುನ್ನ । ಪೇಳಿದಷ್ಟಗಲದುದ್ದದೊಳು ॥
ಸಾಲುಮಾತೇನು ಮುನ್ನಿನ ತೆರದೊಳು ಗೃಹ । ಜಾಲ ನಿರ್ಮಿಸಿತು ಸರ್ವರಿಗೆ ॥ ೧೨ ॥

ಕರೆಯೊಳು ನಿಂದು ರಾಜೇಂದ್ರ ಮಾಗಧನೆಲ್ಲಿ । ಕರೆಯೊಯೆನ್ನದ ಮೊದಲ್ಬಂದು ॥
ಕರವ ಮುಗಿದು ಮುಂದೆ ಮಾಗಧ ನಿಂದನು । ಭರತೇಶ ನುಡಿದನಿಂತೆಂದು ॥ ೧೩ ॥

ಏನೈ ಮಾಗಧ ವರತನುವ್ಯಂತರ । ನೀ ನೀರ ನಡುಕುರುವದೊಳು ॥
ತಾನು ಕುರುಬರಂತೆ ಬೆರೆತು ಕೊಂಡಿಹನಲ್ಲೈ । ನೀನವನೊಳಗ ಬಲ್ಲೆಯಲ್ಲೈ ॥ ೧೪ ॥

ಸುಮ್ಮನೆ ಬಂದೆಮ್ಮ ಕಾಣ್ಬನೊ ಬಾರದೆ । ಹೆಮ್ಮೆಯೊಳಿಪ್ಪನೊ ಅವನ ॥
ಸೊಮ್ಮೇನು ಹೇಳೆಂದರವನು ಚಕ್ರೇಶನ । ಸಮ್ಮುಖದೊಳಗಿಂತು ನುಡಿದಾ ॥ ೧೫ ॥

ದೇವ ನಿನಗೆ ಬೇರೆ ವೆಗ್ಗಳವಿಳೆಯೊಳಿ । ಲ್ಲಾ ವರತನು ತಾನು ಸುಮುಖಾ ॥
ಸೇವೆಗೆ ನಾಳೆ ನಾನೊಡಗೊಂಡು ಬಪ್ಪೆನಿ । ದಾವ ಗಹನ ಸ್ವಾಮಿಯೆಂದಾ ॥ ೧೬ ॥

ಆದರೊಳ್ಳಿತು ಪೋಗು ನಾಳೆ ಬಾರೆಂದು ನಿ । ವೇದಿಸಿ ಬೀಳ್ಕೊಟ್ಟನವನಾ ॥
ಆದರದಿಂದುಳಿದವರ ಬೀಳ್ಕೊಟ್ಟು ಪ್ರ । ಮೋದಿ ಹೊಕ್ಕನು ರಾಜಗೃಹವಾ ॥ ೧೭ ॥

ಸ್ನಾನದೇವಾರ್ಚನಭೋಜನಶಯನಲೀ । ಲಾನುವರ್ತನದೊಳಾ ದಿನವಾ ॥
ಮಾನಲೋಚನೆಯರ ಮೇಳದೊಳರಸನ । ನೂನವೆಂದೆನೆ ನೂಂಕಿ ಕಳೆದಾ ॥ ೧೮ ॥

ಬೆಳಗಾಗೆ ನಿತ್ಯಕರ್ಮವ ತೀರ್ಚಿ ಬಂದು ಸ । ಲ್ಲಲಿತದೊಳೋಲಗವಾದಾ ॥
ಇಳೆಯರಸುಗಳು ಕಾಣ್ಕೆಯನಿಕ್ಕಿ ಕಂಡು ಮುಂ । ದೆಳಸಿ ಕುಳ್ಳಿರ್ದರೊಪ್ಪದೊಳು ॥ ೧೯ ॥

ತರತರವಿಡಿದು ಕೆಳೆಯರು ಗಣಿಕೆಯರ । ಕ್ಕರಿಗರು ಪುಣ್ಯಗಾಯಕರು ॥
ಅರಸುಮಕ್ಕಳು ದಳಪತಿಸಚಿವರು ಸರ್ವ । ಪರಿವಾರವಿದ್ದುದಲ್ಲಲ್ಲಿ ॥ ೨೦ ॥

ಮಂಗಲಕೌಶಿಕೆಯೆಂಬ ರಾಗದೊಳು ಸ । ನ್ಮಂಗಲಮಪ್ಪ ವೇಳೆಯೊಳು ॥
ಮಂಗಲಶರಣ ಲೋಕೋತ್ತಮಹಂಸಗು । ಣಂಗಳನಾಲಿಸುತಿರ್ದಾ ॥ ೨೧ ॥

ನಾರಾಣಿ ಸೌರಾಷ್ಟ್ರ ಗುರ್ಜರಿಗಳೊಳು ಸಂ । ಚಾರಿಸಿ ಪಾಡೆ ಗಾಯಕರು ॥
ಕಾರಣಕಾರ್ಯವಿಚಾರವನಾತ್ಮತ । ತ್ತ್ವರಾಮನಾಲಿಸುತಿರ್ದಾ ॥ ೨೨ ॥

ಪುಣ್ಯಗಾನವ ಕೇಳುತಾತ್ಮನ ಪರಮಲಾ । ವಣ್ಯವನೊಳಗೆ ಭಾವಿಸುತ ॥
ಪುಣ್ಯವ ಬಗೆವುತ ರಾಜಾಧಿರಾಜಾಗ್ರ । ಗಣ್ಯನಿದ್ದನು ಸುಗೋಷ್ಠಿಯೊಳು ॥ ೨೩ ॥

ದೊಡ್ಡ ಭೂಭುಜರನೀಕ್ಷಿಸುತ ಗಾಯಕತತಿ । ಗೆಡ್ಡವಾಗಿರೆ ಮೆಚ್ಚುಗೊಡುತ ॥
ಒಡ್ಡೋಲಗಗೊಟ್ಟು ಕಡೆಯ ಹಜಾರದೊ । ಳೊಡ್ಡೋರಿರ್ದನಾ ನೃಪತಿ ॥ ೨೪ ॥

ಆದಿಜಿನನ ನೆನೆಯುತ ಹಂಸನಾಥನ । ಭೇದಿಸಿ ಬಗೆವುತಿರ್ಪಾಗ ॥
ಆದಿರಾಜನನೊಬ್ಬ ಗಂಧಮಾಧವಿಯೆಂಬ । ದಾದಿ ತಂದಿತ್ತಳಾ ನೃಪಗೆ ॥ ೨೫ ॥

ರಜತಾದ್ರಿಯೊಡೆಯನೆಯ್ತಂದನೆಂದಪ್ಪಾಜಿ । ಬಿಜಯಂಗೈದನೆಂದೊಸೆದು ॥
ನಿಜತನೂಜನನೀಸಿಕೊಂಡು ಭೂಪತಿ ತನ್ನ । ಭುಜತುಂಬಲಮರ್ದಪ್ಪಿಕೊಂಡಾ ॥ ೨೬ ॥

ಗಲ್ಲವ ಚುಂಬಿಸುವನು ಮುತ್ತ ಕೊಡುವ ಮು । ತ್ತಲ್ಲಾಡುತಪ್ಪುತ ನಗುವಾ ॥
ಎಲ್ಲಿಂದ ಬಿಜಯಂಗೈದಿರಿ ಸ್ವಾಮಿಯೆಂ । ದುಲ್ಲಾಸದೊಳು ಬೆಸಗೊಂಬಾ ॥ ೨೭ ॥
ತಾರಾದ್ರಿಯಿಂದ ಚಿತ್ತೈಸಿದುದಲ್ಲಿದು । ಮೇರುವಿನಗ್ರದೊಳ್ನಿಂದು ॥
ಕಾರುಣ್ಯದಿಂದೆನ್ನ ನೋಡಬೇಕೆಂದಾದಿ । ಪೂರುಷ ಎಯ್ದಿದೆಯೆಂದಾ ॥ ೨೮ ॥
ಮುದ್ದಿಸಿ ಮುಂಡಾಡುತೊಲೆದರಳೆಲೆಯನು । ತಿದ್ದುವ ಕೊರಳ ದಂಡೆಯನು ॥
ಹೊದ್ದಿಗೆ ಮಾಳ್ಪನು ಮಾಗಾಯು ಮುಟ್ಟುತ । ಮುದ್ದಾಡುತಿರ್ದನಾ ಮಗನಾ ॥ ೨೯ ॥
ಒಲೆದು ತಂದೆಯು ಮೊಗನೋಳ್ಪನಾ ಬಾಲಕ । ಮೊಳೆವಲ್ಲ ಮಿನುಗಿ ನಗುವನು ॥
ಎಳೆಮಿಸೆತಿದ್ದುವನಯ್ಯನ ಬಾಯು ತಂ । ಬುಲಕೆ ಬಾಯ್ದಿಟ್ಟೊಯ್ದುಕೊಂಬಾ ॥ ೩೦ ॥
ತೋಳರಕ್ಷೆಗಳ ತಂದೆಗೆ ತೋರಿ ತಂದೆಯು । ತೋಳ ತಾವುಜವ ಬೇಡುವನು ॥
ಕಾಲಂದುಗೆಯ ತೋರಿ ಪೆಂಡೆಯುವನು ಬೇಡಿ । ಬಾಲಕನರ್ತಿಮಾಡುವನು ॥ ೩೧ ॥
ಸ್ಯೆರಿಸ ಪೆಂಡೆಯಕೇನು ತಾವುಜಕೇನು । ಭೂರಿಭೂಷಣವನಿತ್ತಪೆನು ॥
ನೇರದೊಳಗೆ ಬೇಗ ಪ್ರಾಯುವಾಗೆಂದು ಕು । ಮಾರನ ಮುದ್ದಾಡುತಿಹನು ॥ ೩೨ ॥

ತೊಡೆಯ ಮೇಲಾದಿರಾಜನನಿಟ್ಟುಕೊಂಡು ವೈ । ದಡಹುತ ನೃಪತಿ ನೋಡುತಿರೆ ॥
ಸಡಗರದಿಂದರ್ಕಕೀರ್ತಿ ಸಿಂಗರಿಸಿ ಕಾ । ಲ್ನಡೆಯೊಳೆಯ್ತರುತಿರ್ದನಾಗ ॥ ೩೩ ॥
ಕಾಸೆ ಚಲ್ಲಣ ನಡುವಿನ ಸಣ್ಣಜವದಾಡೆ । ಮಾಸಾಳು ಕುಲ್ಲಾಯಿ ತಿಲಕಾ ॥
ಪೂಸಿದ ಗಂಧ ತಾವುಜ ಕುಡುಕಿನೊಳು ತೋ । ಳ್ಬೀಸುತ ಬರುತಿರ್ದನಾಗ ॥ ೩೪ ॥
ಕಾಣುತ ರಾಯನರಿದನಿದು ಬಿನದಕೆ । ರಾಣಿಯರಿಟ್ಟಂದವೆಂದು ।
ಹೊಣಿಸಿ ತಾನೆಮ್ಮನೋಲೈಸಲೆಂಬ ಬಿ । ನ್ನಾಣವೆಂದೀಕ್ಷಿಸುತಿರ್ದಾ ॥ ೩೫ ॥
ಹಿಂದೆ ಮಂದಾಕಿನಿ ನಡೆಸಿ ಮೆಲ್ಲನೆ ಬರೆ । ಮುಂದಿದ್ದ ಪಿತನನೀಕ್ಷಿಸುತ ॥
ಸಂದಣಿಸಿದ ನೃಪರೆಡೆಯೊಳು ಮರಿಯಾನೆ । ಯಂದದೊಳೆಯ್ತರುತಿರ್ದಾ ॥ ೩೬ ॥
ಜಯರಾಜಮಂತ್ರಿಭೂಪಾಲರು ಕಾಣುತ । ರ್ತಿಯೊಳೆದ್ದು ನಿಂದು ಕೈಮುಗಿಯೆ ॥
ನಯನದೊಳ್ ಕೈಸನ್ನೆಯಿಂದ ಕುಳ್ಳಿರಿಯೆಂದು । ನಿಯಮಿಸುತೆಯ್ತರುತಿರ್ದಾ ॥ ೩೭ ॥
ಅಣ್ಣಾಜಿ ಬಹಾಗ ಕುಳಿತಿರಲಾಗದೇ । ಳಣ್ಣಾಯೆಂದನು ಚಿಕ್ಕ ಮಗನಾ ॥
ಪೊಣ್ಣನಾ ಮಗನೆದ್ದನೊಡನೆ ಕೈಮುಗಿಯೆಂದು । ಬಣ್ಣಿಸಿ ಕೊಡಲು ಕೈಮುಗಿದಾ ॥ ೩೮ ॥
ಕಿರಿಯ ಕೈಮುಗಿಯೆ ಕೈಸನ್ನೆಯೊಳ್ನಿಲಿಸುತ । ಮೆರೆವ ಸಿಂಹಾಸನವೇರಿ ॥
ಕಿರುರತ್ನವೊಂದ ಕಾಣ್ಕೆಯನಿಕ್ಕಿ ಕೈಮುಗಿ । ದುರೆ ತಂದೆಯೊತ್ತಿನೊಳ್ನಿಂದಾ ॥ ೩೯ ॥
ಎಲಗೆ ಮಂದಾಕಿನಿ ಅರ್ಕಕೀರ್ತಿಗದೇನ । ಕಲಿಸಿಕೊಟ್ಟರಿ ಹೇಳಿರೆಂದಾ ॥
ಕಲಿಸಿಕೊಟ್ಟವರಿಲ್ಲ ತಾನೆ ತಂದೆಯ ಸೇವೆ । ಗೆಳಸಿದನೆಂದಳಾ ಸುರಸೆ ॥ ೪೦ ॥

ಹಾಲುಸಕ್ಕರೆಯುನಾರೋಗಿಸುತಿರುತಿರ್ದು । ಸಾಲವೆ ಪಿತನೊಡವೆಯುನು ॥
ಓಲೈಸಿ ತಿದ್ದಬೇಡವೆ ರಾಜಸುತನೆಂದು । ಬಾಲನೆಯ್ದಿದನೆಂದಳವಳು ॥ ೪೧ ॥
ಅಪ್ಪುಕೈದಂಡೆಯೊಳೆಡದ ದಿಕ್ಕಿನೊಳು ನಿಂ । ದಪ್ಪಾಜಿಯನು ನಿರೀಕ್ಷಿಸುತ ॥
ತೆಪ್ಪಗೆ ಮಕ್ಕಳಾಟಿಕೆ ಹೊದ್ದದವನಿದೊಂ । ದೊಪ್ಪಕೆ ಮೆಚ್ಚಿತಾಸ್ಥಾನಾ ॥ ೪೨ ॥

ಅರ್ಕಕೀರ್ತಿಯು ಕಾಣುತಾದಿರಾಜನು ಕೂಡೆ । ಮಾರ್ಕೊಂಡು ಸೇವೆಗಿಚ್ಛೈಸಿ ॥
ಬೇರ್ಕೆಗೈದೊಡನೆ ಕುಪ್ಪಸವ ಬೀಸಾಡಿ ಸ । ಮರ್ಕೆಯೊಳಾಯುತವಾದಾ ॥ ೪೩ ॥
ತೊನೆದಣ್ಣನಿಟ್ಟ ಕುಲ್ಲಾಯಿ ಚಲ್ಲಣ ಕಾಸೆ । ಯನು ಜವದಾಡೆಯ ನೋಡಿ ॥
ತನಗಂತು ಬೇಕೆಂದು ನಡುವ ಮಂಡೆಯು ಮುಟ್ಟಿ । ಜನಕಗೆ ತೋರಿ ಕಾಡಿದನು ॥ ೪೪ ॥
ಏನರ್ಕಕೀರ್ತಿಯಲ್ಲವೆಯುವನೋಲೈಸೆ । ನೀನೊಡಂಬಡಬಹುದಣ್ಣಾ ॥
ನೀನಾದಿರಾಜ ನನ್ನಪ್ಪಾಜಿಯಲ್ಲವೆ । ನಾನಂಜುವೆನು ಕುಳ್ಳಿರೆಂದಾ ॥ ೪೫ ॥
ಆದನವ ಕೇಳನಳುವನು ಚಂಡಿಯ ಮಾಳ್ಪ । ನದಕೊಬ್ಬ ಗಣಬದ್ಧಗರಸು ॥
ಪದೆದು ಸೂಚಿಸಲವ ಸಿಂಗರಿಸಿದನು ಬೇ । ಗದೊಳರ್ಕಕೀರ್ತಿಯಂದದೊಳು ॥ ೪೬ ॥
ಬಲದ ದಿಕ್ಕಿನೊಳು ತಾನಣ್ಣನಂದದೊಳು ನಿಂ । ದೊಲವಿಂದ ಪಿತನನೀಕ್ಷಿಸುತ ॥
ಒಲೆಯುದುಲಿಯದೆ ಗಂಭೀರದೊಳಿರೆ ನೋಡಿ । ತಲೆದೂಗಿದರು ಸರ್ವನೃಪರು ॥ ೪೭ ॥
ಎಳೆನೇಸರೆಡಬಲದೊಳಗೆರಡಿರೆ ಮಧ್ಯ । ದೊಳು ತೋರ್ಪ ಹೇಮಾದ್ರಿಯಂತೆ ॥
ಕಳಭಗಳೆರಡರ ನಡುವಣ ಗಜದಂತೆ । ಹೊಳೆದೊಪ್ಪಿದನು ರಾಯನಾಗ ॥ ೪೮ ॥
ಬಾಲಕರೆಡಬಲದೊಳು ಮುಂದೆ ನೃಪರು ಬಂ । ದೋಲೈಸೆ ಗಣಬದ್ಧರಾಗ ॥
ಲೋಲರಾಜೇಂದ್ರನೋಲಗವಿದ್ದುದಮರೇಂದ್ರ । ನೋಲಗವಾವ ಪಾಡೆನಿಸಿ ॥ ೪೯ ॥
ಕುಳ್ಳಿರೈ ಬಾಲಕರಿವರೆದ್ದರೇಕೆ ನೀ । ವೆಲ್ಲರೆದ್ದಿರಿಯೆಂದು ನೃಪರ್ಗೆ ॥
ಸಲ್ಲಾಪದೋರಿದನೀ ಮಹಾಭಾಗ್ಯವ । ನೆಲ್ಲಿ ಕಂಡಪೆವೆಂದರವರು ॥ ೫೦ ॥
ಅರರೆ ನಿನ್ನಯ ಸುಕುಮಾರಕರಿವರೇನು । ಸುರಕುಮಾರಕರೈಸೆ ಸ್ವಾಮಿ ॥
ನರಲೋಕದವರೆಯಿಂದೆಮ್ಮ ಕಂಗಳ ಜಾಡ್ಯ । ಹರಿದುದೆಂದರು ಭೂಪರೊಸೆದು ॥ ೫೧ ॥
ನಿಂದ ಗಮಕ ನೋಡುವೊಜೆ ಮಕ್ಕಳುತನ । ದಂದವ ಬಿಟ್ಟ ಗಂಭೀರಾ ॥
ಸಂದುದಿವರು ಬಾಲಕರೊ ಚೇಷ್ಟೆಯೊಳು ಬಾಳ್ವ । ಮಂದಭೂಭುಜರು ಬಾಲಕರೊ ॥ ೫೨ ॥
ನಿನ್ನ ಗಂಭೀರವ ಬೆಸಗೊಳಲೇಕೀಗ । ನಿನ್ನ ಬಾಲಕರ ಗಂಭೀರಾ ।
ಮನ್ನೆಯರಿಗೆ ಠೀವಿಗಲಿಸುತಿದ್ದಪುದು ಸಾ । ಕಿನ್ನೇಕೆ ಬಯಲ ವಿಡಾಯಾ ॥ ೫೩ ॥
ರಾಜಾವತಂಸ ನಿನ್ನಯ ಗುಣ ನಿನ್ನ ತ । ನೂಜರಿಗಹುದದು ಸಹಜಾ ॥
ಬೀಜದಂತಂಕುರವಹುದೆಂಬ ನುಡಿಯದು । ಮಾಜಿದ್ದುದಿಂದು ಕಾಣಿಸಿತು ॥ ೫೪ ॥

ಪಿರಿದು ಬಣ್ಣಿಸಲರಿಯೆವು ದೃಷ್ಟಿಪಾತವಾ । ವರಿಸುವುದದರಿಂದ ನಿನ್ನ ।
ವರಸುಕುಮಾರರೋಲಗವನು ನಿಲಿಸೆಂದು । ಕರವ ಮುಗಿದರು ಭೂಮಿಪರು ॥ ೫೫ ॥

ಒಂದುಘಳಿಗೆ ನಿಂದು ನಮ್ಮನೋಲೈಸಿದ । ರಿಂದಿವರ್ಗೇನು ಸಂಬಳವೈ ॥
ಅಂದವರಿದು ದಳಪತಿ ಪೇಳು ಮಂತ್ರಿ ಪೇ । ಳೆಂದು ರಾಜೇಂದ್ರ ಕೇಳಿದನು ॥ ೫೬ ॥

ಘಳಿಗೆಗೆ ಕೋಟಿ ವಿತ್ತವ ಹಿರಿಯರಸಿಗೆ । ಸಲಿಸಬೇಕೆಂದನಾ ಮಂತ್ರಿ ॥
ಒಲಿದರೆಕೋಟಿಯು ಚಿಕ್ಕರಸಿಗೆ ಕೊಡ । ಸಲುವುದೆಂದನು ದಂಡನಾಥ ॥ ೫೭ ॥

ಆಗಲಿ ಘಳಿಗೆಗೊಂದೂವರೆಕೋಟಿಯು । ನೀಗ ನೀವಿವರಿಗೆ ಸಲಿಸಿ ॥
ಈ ಗಣಿತದೊಳೆ ಮುಂದೋಲೈಸಿದಾಗ ಲೇ । ಸಾಗೀವುದೆಂದು ನೇಮಿಸಿದಾ ॥ ೫೮ ॥

ಸಾಕಿನ್ನು ಬನ್ನಿರೈ ಜಾತಿವೀರರಿರಯೆಂ । ದಾ ಕುಮಾರಕರನಿಬ್ಬರನು ॥
ಭೂಕಾಂತನೆರಡುತೋಳಿಂದಪ್ಪಿಕೊಂಡರ್ತಿ । ಯೋಕುಳಿಯಾಡಿದನೊಡನೆ ॥ ೫೯ ॥

ತವತವಗೆಲ್ಲ ನಿವಾಳಿಯನಿಟ್ಟು ಮಾ । ನವಪತಿಗಳು ನಮಿಸಿದರು ॥
ಅವರಿವರೆನ್ನದೆಲ್ಲರು ಕಾಣ್ಕೆಯಿಕ್ಕಿ ಮ । ತ್ತವನತರಾದರರ್ತಿಯೊಳು ॥ ೬೦ ॥

ಮೊರೆವ ವಾದ್ಯದೊಳಾಗ ಕಡಲೊಳು ವರತನು । ಬರುತಿಪ್ಪ ಭರವು ಕಾಣಿಸಿತು ॥
ಕರೆದಾದಿರಾಜನ ಗಂಧಮಾಧವಿಯು ಕೈ । ಗರಸನಿತ್ತೊಡನೆ ಬೀಳ್ಕೊಟ್ಟಾ ॥ ೬೧ ॥

ಹಿರಿಯ ಕುವರನ ಮಂದಾಕಿನಿಗೊಪ್ಪಿಸು । ತರಮನೆಯತ್ತ ಬೀಳ್ಕೊಟ್ಟಾ ॥
ದೊರೆಗಳೊಡ್ಡಿನೊಳೊಪ್ಪದೊಳು ಮೋಡಿ ಮಿಗೆ ಮತ್ತೆ । ಭರತೇಶನೋಲಗವಾದಾ ॥ ೬೨ ॥

ಜಲನಿಧಿಯೊತ್ತಿಗೆ ಬಂದು ವಿಮಾನದಿಂ । ದಿಳಿದು ಮಾಗಧನಂತೆ ತಾನು ॥
ತಳೆ ಚವರವ ಮಾಣ್ದು ವರತನು ಕಾಲ್ನಡೆ । ಯೊಳು ಬರುತಿದ್ದನೋಜೆಯೊಳು ॥ ೬೩ ॥

ದರಹಸಿತಾನನ ತೆಳ್ಪಿನ ದೇಹ ಸಿಂ । ಗರದೊಪ್ಪ ಹೊಂಬಣ್ಣವೆಸೆಯೆ ॥
ವರತನುವೆಂಬುದಿವಗೆ ಸಲ್ವುದೆಂಬಂತೆ । ಬರುತಿದ್ದನಾ ವ್ಯಂತರೇಂದ್ರಾ ॥ ೬೪ ॥

ದುಗುಲವನುಡೆಸುತ್ತಿ ಕಪ್ಪಕಾಣಿಕೆಯು ವ । ಸ್ತುಗಳಾಂತು ನಿಜಮಂತ್ರಿಸಹಿತ ॥
ಮಿಗೆ ಮಾಗಧೇಂದ್ರನ ಹಿಂದೆ ರಾಜೇಂದ್ರನೋ । ಲಗವೊಳಹೊಗುತಿದ್ದನವನು ॥ ೬೫ ॥

ಛಲದಂಕಮಲ್ಲ ಸೊಕ್ಕಿದ ಪಗೆರಾಯರ । ಬಲದುರ್ಗನಿರ್ಧೂಮಧಾಮಾ ॥
ತಲೆವಾಗಿದರಿರಾಯರಕ್ಷಕನೆಂಬೊಂದು । ಗಲಭೆಕೇಳುತ ಬರುತಿರ್ದಾ ॥ ೬೬ ॥

ಕಟ್ಟೆದಿರೊಳು ಚಕ್ರಧರನ ದಿವ್ಯಾಂಗವ । ತೊಟ್ಟನೆ ವರತನು ಕಂಡು ॥
ಹುಟ್ಟಿಬೇಡವೆ ನೃಪರಿಂತೆಂದು ತಾನರ್ತಿ । ವಟ್ಟು ಸನ್ನಿಧಿಗೆಯ್ದುತಿರ್ದಾ ॥ ೬೭ ॥

ಇತ್ತರವಿಡಿದ ರಾಜರ ನಡುವವನೀಶ । ನೊತ್ತಿಗೊಯ್ಯಾರದೊಳೆಯ್ದಿ ।
ಚಿತ್ತೈಸು ವರತನುವಿವನೀಗ ಸ್ವಾಮಿಯೆಂ । ದೆತ್ತಿ ಕೈಮುಗಿದ ಮಾಗಧನು॥ ೬೮ ॥

ಭರತರಾಜೇಂದ್ರ ಚಿತ್ತೈಸಿದ್ದನೆಂದಾನು । ವಿರಚಿಸಲಾ ಕ್ಷಣ ತನಗೆ ॥
ಪರಮಸೌಭಾಗ್ಯವೆಯಿದಿರ್ವಂದುದೆಂದುಬ್ಬಿ । ವರತನು ಬಂದನುರ್ವೀಶಾ ॥ ೧೯ ॥

ಕಾಣಬೇಡನೆ ಪುರುಜಿನನ ಕುಮಾರನ । ಪ್ರೀಣಾತ್ಮಯೋಗಭಾಸುರನಾ ॥
ಜಾಣರೊಡೆಯನನೆಂದೆಯ್ತಂದನೆಂದವ । ಕಾಣಿಸಿ ಕಡೆಸಾರಿ ನಿಂದಾ ॥ ೨೦ ॥

ಭಕ್ತಿಯೊಳ್ವರತನು ಪೊಸನಿವಾಳಿಯನಿಟ್ಟು । ಮೌಕ್ತಿಕಂಗಳ ಹಸ್ತತುಂಬಿ ॥
ಶಕ್ತರಾಜೇಂದ್ರನ ಪಾದಪದ್ಮಗಳಿಗೆ । ಯುಕ್ತಿಯೊಳಭಿಷೇಕಗೈದಾ ॥ ೨೧ ॥

ಒಪ್ಪುವ ಕಡಗ ಚೂಡಾರತ್ನ ಕವಚ ಮೇ । ಲಪ್ಪ ಕಂಠಾಭರಣಗಳಾ ॥
ಕಪ್ಪವೆಂದಿರಿಸಿ ಸಾಷ್ಟಾಂಗವೆರಗಿ ವ್ಪೈಯ । ನೊಪ್ಪಿಸಿದನು ಮಂತ್ರಿಸಹಿತ ॥ ೨೨ ॥

ದೃಷ್ಟಿಗಳ್ಸಫಲವಾದುವು ನಿನ್ನನೀಕ್ಷಿಸಿ । ತುಷ್ಟಿವಟ್ಟುದು ಚಿತ್ತವೆನಗೆ ॥
ಇಷ್ಟರಿಂದಧಿಕವೇನುಂಟಿಲೆ ಸ್ವಾಮಿಯೆಂ । ದಷ್ಟಾಂಗವೆರಗಿದಂತಿರ್ದಾ ॥ ೨೩ ॥

ಚಕ್ರೇಶನರಿದನೀ ವರತನು ಸುಮುಖನು । ವಕ್ರಿಯಲ್ಲೆಂದು ಮೆಚ್ಚಿದನು ॥
ಸುಕ್ರಮವಾಯ್ತು ನೀ ಬಂದುದೇಳೇಳೆಂದು । ಪಕ್ರಮವಾಕ್ಯದೋರಿದನು ॥ ೨೪ ॥

ಧಿಗಿಲನೆದ್ದನು ಮಂತ್ರಿಸಹಿತ ರಾಜೇಂದ್ರನ । ಮೊಗವ ನೋಡುತ ಮುಂದೆ ನಿಂದಾ ॥
ಜಗದೊಳೆಲ್ಲರ ಕಣ್ಣಹಬ್ಬವ ಮಾಡಲೋ । ಸುಗ ಜನಿಸಿದೆ ಸ್ವಾಮಿಯೆಂದಾ ॥ ೨೫ ॥

ಸಾಲದೆ ನಿನ್ನ ರೂಪೀ ರಾಯವೋಡಿ ತೇ । ಜೋಲಂಬ ನೇತ್ರಶೃಂಗಾರಾ ॥
ಈ ಲೇಸು ನಿಮಗಿರಲೆಮಗೆ ನಿನ್ನನೆ ಬಿಡ । ದೋಲೈಸುವ್ಪೈಸಿರಿಯಿರಲಿ ॥ ೨೬ ॥

ಕೂಪದ ಮೀನಂತೆ ಕಡಲೊಳಿಪ್ಪೆಮ್ಮಯ । ಪಾಪವ ಲೋಪಿಸಲೆಂದು ॥
ಕೂಪತನದೊಳಿಲ್ಲಿಗೆಯ್ದಿದ್ದೈ ಸ್ವಾಮಿ ಮ । ಹಾಪವಿತ್ರಗಳಾದೆವೆಂದಾ ॥ ೨೭ ॥

ನಸುನಗುತವನಿಗೆ ಕುಳ್ಳಿರಗೊಡಿಸಿ ಸಂ । ತಸಿಗನೆ ನೀ ಕುಳ್ಳಿರೆಂದಾ ॥
ವಸುಧೇಂದ್ರರುರೆ ಮೆಚ್ಚೆ ವರತನು ಕುಳಿತನು । ಲ್ಲಸದಿ ತನ್ನಯ ಮಂತ್ರಿಸಹಿತ ॥ ೨೮ ॥

ಮಾಗಧಾಂಕನ ಕುಳ್ಳಿರೆಂದು ಭೂಪತಿ ಬುದ್ಧಿ । ಸಾಗರಾಂಕನ ನೋಡಲವನು ॥
ಭೋಗದೇವೇಂದ್ರ ಕೇಳ್ ವರತನುಸುರ ನಿನ್ನ । ಭೋಗಕೊಪ್ಪುವ ಭೃತ್ಯನೆಂದಾ ॥ ೨೯ ॥

ಮೃದುಚಿತ್ತನಹುದು ಸುಮಾರ್ಗಿಯಹುದು ನಿನ್ನ । ಪದಪದ್ಮಹಿತನಹುದಿವನಾ ॥
ಪದುಳದಿ ಮಾಗಧಾಮರ ತಂದ ಸೇವೆ ದೊ । ಡ್ಡದು ಸ್ವಾಮಿ ಪರಿಭಾವಿಸೆಂದಾ ॥ ೩೦ ॥

ನಿನ್ನ ಸೇವೆಯನೆರಡಿಲ್ಲದೆ ಮಾಳ್ಪ ಸಂ । ಪನ್ನರಿವರು ನೀನೆ ಬಲ್ಲೆ ॥
ಚೆನ್ನಾಗಿ ಪೊರೆಯಬೇಕಿವರನಿಬ್ಬರನೆಂದು । ಬಿನ್ನವಿಸಿದನೊಲ್ದು ಮಂತ್ರಿ ॥ ೩೧ ॥

ನಾವು ಮಾಡುವ ಸೇವೆಯೇನುಂಟು ಸ್ವಾಮಿಗೆ । ಸೇವಕರಲ್ಲವೆ ಮಂತ್ರಿ ॥
ಈ ವಾಕ್ಯವೆಂಬ ಮನ್ನಣೆಯಿತ್ತೆ ನೀನೆಂದು । ತಾವಿಬ್ಬರೊಸೆದು ನುಡಿದರು ॥ ೩೨ ॥

ವರತನುಸುರನಿಂದು ತನ್ನೂರ್ಗೆ ಪೋಗಲಿ । ಬರಲಿ ಮುಂದಿನ ಬೀಡಿನೆಡೆಗೆ ॥
ಹರುಷದಿ ಬೀಳ್ಕೊಡೆಂದೊಡೆಯಗೆ ಬುದ್ಧಿಸಾ । ಗರ ಮಂತ್ರಿ ಬಿನ್ನವಿಸಿದನು ॥ ೮೩ ॥

ಇತ್ತ ಬಾರೈ ವರತನುನಾಮಯೆಂದು ತ । ನ್ನೊತ್ತಿಗೆ ರಾಜೇಂದ್ರ ಕರೆದು ॥
ಇತ್ತನಾಭರಣದಿವ್ಯಾಂಬರಗಳ ನೋಳ್ಪ । ವೊತ್ತದ ನೃಪರರ್ತಿವಡೆ ॥ ೮೪ ॥

ಅವನ ಸಚಿವಗುಡುಗೊರೆಯಿತ್ತು ವರತನು । ಭವನವ ಹೊಕ್ಕು ಬಾರೆಂದಾ ॥
ತವಕದೊಳವ ನಾಳಿನವನ ಕರೆಸಿದನೊ । ಪ್ಪುವ ಸುರಕೀರ್ತಿಯೆಂಬವನಾ ॥ ೮೫ ॥

ಚರಣಕೆರಗಿಸಿ ದೇವರ ಹತ್ತಿರಿವನಿರು । ತಿರಲಿ ನಾನೆಯ್ತಪ್ಪೆನೆಂದಾ ॥
ಭರತೇಶಗೆರಗಿ ಸಚಿವಗೂಡಿ ಹೋದನಾ । ವರತನು ಲೇಸು ಲೇಸೆನಲು ॥ ೮೬ ॥

ನಿಂದ ಮಾತ್ರವೆ ನಿನ್ನೆ ಮಾಗಧಾಂಕಿತನ ಹೋ । ಗೆಂದಟ್ಟಿದೆವು ಹೋದನಹುದು ॥
ಚಂದಗಾಣಿಸಿದನು ಕಾರ್ಯವ ಬಳಲಿದ । ನೆಂದೊಳ್ಪ ನುಡಿದನಾ ನೃಪತಿ ॥ ೮೭ ॥

ಆ ವಚನಕೆ ಮಂತ್ರಿಯೊಸೆದು ನೀ ಮಾಡಿದ । ಸೇವೆಯನರಿಯದ ದೊರೆಯೆ ॥
ಪಾವನನಾದನಾ ಮಾಗಧಾಮರನೆಂದು । ಭೂವರಗೆದೆದಟ್ಟಿಸಿದನು ॥ ೮೮ ॥

ನಿನ್ನ ಸೇವೆಗೆ ಸಲವಾಗಿ ವರ್ತಿಸುವುದು । ಮುನ್ನ ಮಾಡಿದ ಪುಣ್ಯವೆನಗೆ
ನಿನ್ನಡಿಯಾಣೆ ಬಳಲ್ಕೆಯಿಲ್ಲೆಂದವ । ತನ್ನ ವಿಶ್ವಾಸವ ಮೆರೆದಾ ॥ ೮೯ ॥

ಆಗಲೈ ಹೀಗೆ ಬಾರೆಂದು ತನ್ನೊತ್ತಿಗೆ । ಮಾಗಧಾಂಕನನೊಲ್ದು ಕರೆದು ॥
ರಾಗಿಸಿ ಮಂಡೆದಡಹಿ ನನ್ನ ಭೂತಸೇ । ನಾಗಣಕರಸು ನೀನೆಂದಾ ॥ ೯೦ ॥

ವ್ಯಂತರಮುಖ್ಯರಿನ್ನಾರು ಬಂದರು ನಿನ್ನ । ಪಿಂತಣೋಲಗ ಸಲ್ವುದವರ್ಗೆ ॥
ಮುಂತಣ ತೇಜ ಮನ್ನಣೆ ನಿನ್ನದೆಂದು ಭೂ । ಕಾಂತ ನುಡಿದನೆಲ್ಲರೊಸೆಯೆ ॥ ೯೧ ॥

ಕಡಲೊಳಗಿರ್ದ ವ್ಯಂತರರಿಗೆ ನೀನೇನ । ಕೊಡಹೇಳಿದುದನೊಲ್ದು ಕೊಡುವೆ ॥
ತಡೆಯೆಂದರದ ತಡೆವೆನು ನಿನ್ನ ನುಡಿಯನಾ । ನೆಡಹೆನು ಮುನ್ನಿಪೆನೆಂದಾ ॥ ೯೨ ॥

ಎರವಿಲ್ಲದಿಂದು ಮಾಗಧ ನೀನು ಸೇವೆ ಮಾ । ಳ್ಪಿರವಿಗೆ ನಾನಂದು ನಿನ್ನಾ ॥
ದೊರೆಗೆಡೆ ನುಡಿದುದ ನೆನೆದೆದೆ ನೋವುದು । ಗುರುಹಂಸನಾಥಾಣೆಯೆಂದಾ ॥ ೯೩ ॥

ನೀನೇನ ನುಡಿದೆ ನನ್ನೊಡೆಯ ನಾ ನಿನ್ನನ । ಜ್ಞಾನದಿ ಜರೆದಿದ್ದೆನಂದು ॥
ಆ ನೋವು ನನಗಿಲ್ಲ ನೀನದ ಮರೆಯೆಂದು । ತಾನಂಘ್ರಿಯೊಳು ಮಂಡೆಯಿಟ್ಟಾ ॥ ೯೪ ॥

ಆ ನೃಪ ತಾನಿಟ್ಟ ಹಾರವ ಕೊಟ್ಟನ । ನೂನಭೂಷಣವ ಬೇರಿತ್ತಾ ॥
ಏನ ಕೊಡನು ಚಕ್ರಿ ವ್ಯಂತರಾಗ್ರಣಿಯೆಂದು । ಪೀನಬಿರುದ ಕೊಟ್ಟನೊಡನೆ ॥ ೯೫ ॥

ಬಲುಬಿರುದಿದು ವ್ಯಂತರಾಗ್ರಣಿಯೆಂಬುದು । ಸಲುವುದಾತಗೆ ದೇವ ನಿನ್ನ ॥
ಒಲಿದವನೋಲೈಸಿದಾ ಫಲವೀಗಳೆ । ಫಲಿಸಿತೆಂದರು ಸರ್ವರೊಸೆದು ॥ ೯೬ ॥

ಬೀಡಿಗೆ ಹೋಗು ವಿಶ್ರಮಿಸೆಂದು ವಿನಯುವ । ನಾಡಿದನೊಡನೆ ಮಾಗಧಗೆ ॥
ಕೂಡೆ ಪಾದಕೆ ಮಣಿದನು ಪುರೆಯಿಡೆ ನಲಿ । ದಾಡುತೆಯ್ದಿದನವನತ್ತ ॥ ೯೭ ॥
ಮತ್ತುಳಿದೆಲ್ಲರನುಚಿತದಿ ಬೀಳ್ಕೊಟ್ಟು । ಚಿತ್ತದೊಳರುಹನ ನೆನೆದು ॥
ಮುತ್ತಿನ ಗದ್ದುಗೆಯಿಂದೆದ್ದು ಹೊಕ್ಕನಾ । ಚಿತ್ತಜೋಪಮನು ಮಂದಿರವಾ ॥ ೯೮ ॥

ಅಂತಃಪುರದ ಪೆಂಗಳುಗೂಡಿ ತನ್ನಯ । ಸಂತಾನಗೂಡಿ ಭೋಗಿಸುತ ॥
ಚಿಂತೆಯಿಲ್ಲದೆ ಕೆಲದಿವಸವಲ್ಲಿದ್ದನೋ । ರಂತಾತ್ಮಭಾವನೆವೆರಸಿ ॥ ೯೯ ॥
ಬೆಳೆದುದನರಿದರ್ಕಕೀರ್ತಿರಾಜಗೆ ರಾಜ । ಕುಲ ಮೆಚ್ಚಲೊಂದು ದಿನದೊಳು ॥
ಸುಲಲಿತಯಜ್ಞೋಪವೀತಕಲ್ಯಾಣವ । ನಿಳೆ ಪುರೆಯಿಡಲೆಸಗಿದನು ॥ ೧೦೦ ॥
ಓದುಸಾದನೆಯನುಜ್ಜುಗಿಸುತ ನೀನಿನ್ನು । ಬೋಧಗೃಹದೊಳಿಹುದೆಂದು ॥
ದಾದಿಗವನಿಗೂ ಬೇರ್ಮನೆಮಾಡಿ ಕೊಡಿಸಿ ನಿ । ವೇದಿಸಿದನು ನರನಾಥಾ ॥ ೧೦೧ ॥
ಹಿಂದರ್ಕಕೀರ್ತಿಯು ಪೌಜೆಂಬ ನುಡಿಯಿದ್ದು । ದಿಂದದು ಮಾಣ್ದುದು ಕೂಡೆ ।
ಮುಂದಾದಿರಾಜನ ಪೌಜೆಂದು ಸತಿಯರ । ಸಂಮೋಹಕಾಯ್ತೊಂದು ವಾರ್ತೆ ॥ ೧೦೨ ॥
ಪುರುಹೂತದಿಕ್ಕಿನ ದಕ್ಷಿಣದಿಕ್ಕಿನ । ಶರಧಿಪಾಲರ ಗೆಲ್ದು ನೃಪತಿ ॥
ವರುಣದಿಕ್ಕಿಗೆ ಹೋಗಲೆಳಸಿದ್ದನಿಲ್ಲಿಗೆ । **ವರತನುಸಾಧ್ಯದಸಂಧಿ** ॥ ೧೦೩ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೪ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೦೫ ॥
ಈರೈದುದಿಕ್ಕನು ಮೂರುಲೋಕವನೊಂದೆ । ಬಾರಿ ತುಂಬುವ ಘನಮಹಿಮಾ ॥
ಆರು ಬಲ್ಲರು ನಿನ್ನ ಘನವ ನನ್ನೊಳಗಿರು । ಧೀರ ಚಿದಂಬರಪುರುಷಾ ॥ ೧೦೬ ॥

ವರತನುಸಾಧ್ಯಸಂಧಿ ಸಂಪೂರ್ಣಂ

# ಪ್ರಭಾಸಾಮರಚಿಹ್ನಸಂಧಿ.

ಕಮಲಪಟ್ಟಗಳೆಸಳೈವತ್ತರೊಳಗೆಸೆ । ವಮಲಿನಾಕ್ಷರಗಳೈವತ್ತಾ ॥
ಕ್ರಮದೊಳೀಕ್ಷಿಸುತ ಸನ್ಮತಿದೋರು ಲೋಕವಿ । ಕ್ರಮನೆ ನಿರಂಜನಸಿದ್ಧಾ ॥ ೧ ॥

ಪೊಡವಿಯಾಗಸ*ನಾದಮಯವಾಗುವಂತೆತ್ತಿ । ಬಡಿದು ಬಳ್ಭೇರಿ ಸೂಳೈಸೆ ॥
ಪಡುವಣ ದಿಕ್ಕಿಗೆ ಮುಖವಾಗಿ ದಂಡೆತ್ತಿ । ನಡೆದನಾ †ರಾಜಮಾರ್ತಾಂಡಾ ॥ ೨ ॥
ಕಿರಿಯ ಕುಮಾರನ ಪೌಜು ಹಿಂದೆಯ್ತರೆ । ನೆರೆದ ಕುಮಾರ ತನ್ನೊಡನೆ ॥
ಮಿರುಪ ಪಲ್ಲಕ್ಕಿಯೊಳೆಯ್ತರೆ ದೊರೆವೋಡಿ । ಮೆರೆಯೆ ತೆರಳಿದನಾ ಚಕ್ರಿ ॥ ೩ ॥
ನವತೇಜವಡೆದುಬ್ಬಿನೊಳು ಮಾಗಧಾಮರ । ಧ್ರುವಗತಿಸುರಕೀರ್ತಿವೆರಸಿ ॥
ಲವಲವಿಕೆಯೊಳು ಮುಟ್ಟೋಲೈಸಿ ಬರೆ ನೋಡು । ತವನೀಶರೊಡೆಮನೆಯ್ದಿದನು ॥ ೪ ॥
ಮಗಧನ ನೋಡುತ ಕಾಂಬೋಜನೊಡನಿಷ್ಟ । ನಗುತ ಮಾಳವನ ಬಿನ್ನಹಕೆ ॥
ಮಿಗೆ ತಲೆಯಲುಗುತ ಬರುತಿರ್ದನೊಯ್ಯಗೊ । ಯ್ಯಗೆ ರಾಜಠೀವಿ ರಾಜಿಸಲು ॥ ೫ ॥
ಚೇರಚೋಳರ ನುಡಿಗೇಳುತ ನಡೆವ ಹ । ಮ್ಮಾರನ ಪಡೆಯ ನಿಟ್ಟಿಸುತ ॥
ಕೇರಳ ಕೀರ್ತಿಸೆ ಮೆಚ್ಚುತ ರಾಜಮಂ । ದಾರ ಬಂದನು ಗಮಕದೊಳು ॥ ೬ ॥
ಅಂಗದೇಶಾಧ್ಯನನೀಕ್ಷಿಸುತೊಮ್ಮೆ ಕ । ಳಿಂಗಭೂವರನ ನಿಟ್ಟಿಸುತ ॥
ಬಂಗಾಳಪತಿಯ ನೋಡುತ ಲೀಲೆಯಿಂದ ರಾ । ಜಾಂಗಲಕ್ಷಣನೆಯ್ದುತಿರ್ದಾ ॥ ೭ ॥
ಬಿಡಿಸುವನಲ್ಲಲ್ಲಿ ಬೀಡನೆಲ್ಲರ ನೋವ । ಬಿಡಿಸುವಂತಾ ದಳಾಧಿಪನು ॥
ಒಡನೆತ್ತಿ ನಡೆಸುವನೆಲ್ಲರಾನಂದವ । ನಡೆಸುವಂತೊಡೆಯ ಮೆಚ್ಚುವೊಲು ॥ ೮ ॥
ತಂಪಿನೊಳಗೆ ನಡೆಸುವನು ಸೇನೆಯನು ತೆ । ರಂಪನರಿದು ಬಿಡಿಸುವನು ॥
ಇಂಪಿಂದ ಹಲವುಮಕ್ಕಳ ತಾಯಿ ನಡೆಸುವಂ । ತೇಂ ಪಡೆವಳ್ಳನೊಳ್ಳಿದನೊ ॥ ೯ ॥
ಹಿಂದೆ ಬಂದಾದಿರಾಜನ ದಳವನು ನಡು । ಹೊಂದಿ ಬಪ್ಪರಸನ ಪೌಜಾ ॥
ಅಂದಂದಿಗಾರಯ್ವುತೊಯ್ಯನೆ ದಳಪತಿ । ಮುಂದೆಯ್ದುತಿದ್ದನೊಪ್ಪದೊಳು ॥ ೧೦ ॥
ಹಯಗಜರಥಭಟರನು ನೋಯದಂತೆ ರೂ । ಢಿಯ ಭೂಪರಾಸರದಂತೆ ॥
ಜಯರಾಜ ನಡೆಸಿದನವನೇನು ಚಕ್ರವ । ರ್ತಿಯ ಸೇನಾಪತಿರತ್ನವಲ್ತೆ ॥ ೧೧ ॥

ಠಾವರಿದಲ್ಲಲ್ಲಿ ಬಿಡುತೆಯ್ದುವಾಗೊಂದು । ಪಾವನಮಪ್ಪ ತಾಣದೊಳು ॥
ಭೂವರಾಗ್ರಣಿಯ ಪೆಂಡಿರೊಳೊರ್ವ ಚಂದ್ರಿಕಾ । ದೇವಿ ಪೆತ್ತಳು ವರಸುತನಾ ॥ ೧೨ ॥

---

* ವಾದ್ಯ

† ಕೃತಯುಗಸಿಂಹಾ

ಎಸಗಿತಾಗಳೆ ಗುಡಿತೋರಣವಲ್ಲಲ್ಲಿ । ಮಸಗಿತು ವಾದ್ಯನಿನಾದಾ ॥
ದೆಸೆತುಂಬಿ ಬಿಟ್ಟ ಸೇನೆಯೊಳು ಕುಮಾರನಾ । ದೊಸಗೆ ಹಬ್ಬಿತು ಚಕ್ರಧರನ ॥ ೧೩ ॥
ವರತನು ಬಂದಾಗ ಚಕ್ರಿಯು ಕಂಡೆನ್ನ । ಪುರದ ಸನ್ನಿಧಿಯಿಂದ ಮುಂದೆ ॥
ತೆರಳಿದೆಡೆಯೊಳು ಸ್ವಾಮಿಗೆ ಸುತನಾದನು । ಕರ ನಾನೆ ನಿರ್ಭಾಗ್ಯನೆಂದಾ ॥ ೧೪ ॥
ಸ್ವಾಮಿಗೆ ಸುತನಾದರುಲುಪೆ ಸಹಿತ ನೆನ್ನ । ಭೂಮಿಕಿತ್ತೆತ್ತಿ ಬಂದೊಸೆದು ॥
ಆ ಮಹಾವಿಭವವ ಕಾಣ್ಬರಾನುರೆ ಮಾಗ । ಧಾಮರನಂತೆ ನೋಂತವನೆ ॥ ೧೫ ॥
ತೆಗೆಯಿದಕೇನುರ್ಗೆ ಕ್ಷಣಕೆಯ್ದಿ ಸಾರವ । ಸ್ತುಗಳಾಂತು ಬಹೆನೆಂದು ನಮಿಸಿ ॥
ಮಗುಳ್ವಾಗ ವರತನು ಹೋಗದಿರೆನ್ನಾಣೆ । ಸೊಗಸಿ ಕೇಳೆಂದನಾ ಚಕ್ರಿ ॥ ೧೬ ॥
ಉಲುಪೆಯೇನಧಿಕವೈ ವರತನು ಮುಂದಿನ್ನು । ಬಲುಕಜ್ಜವುಂಟದರಿಂದ ॥
ತೊಲಗದೆನ್ನೊತ್ತಿನೊಳಿರು ಸಾಕು ನಿನ್ನ ನಾ । ಡುಲುಪೆಯೆಲ್ಲವು ಸಂದುದೆಂದಾ ॥ ೧೭ ॥
ನವನಿಧಿಗೊಡೆಯು ಚತುರ್ದಶರತ್ನಗೌ । ರವನೆ ಕೇಳ್ ನಿನಗದು ಪಿರಿದೆ ॥
ನವಗಿಷ್ಟು ಭಕ್ತಿ ತೋರಿತು ಸಂದುದಿಲ್ಲವೆಂ । ದವನಾಡಿ ನಿಂದನು ಮತ್ತೆ ॥ ೧೮ ॥
ಭೂಮೀಶ ಜಾತಕರ್ಮವನೆಸಗಿಸಿ ಮತ್ತೆ । ನಾಮಕರ್ಮದ ದಿವಸದೊಳು ॥
ಪ್ರೇಮದಿ ಪೆಸರಿಟ್ಟನಿವನು ವೃಷಭಸೇನ । ನಾಮ ವೃಷಭರಾಜನೆಂದು ॥ ೧೯ ॥
ಪೌಜೇಳದರುದಿಂಗಳಲ್ಲಿ ತಡೆದನಾದಿ । ರಾಜಗೊಲ್ದುಪನಯನವನು ॥
ಯೋಜಿಸಿದನು ಬೇರೆ ಮನೆಗಟ್ಟಿಕೊಟ್ಟಣ್ಣ । ನೋಜೆಯೊಳಿರಿಸಿದನವನಾ ॥ ೨೦ ॥
ಸುತರಿಬ್ಬರೋದುಸಾದನೆಯನುಜ್ಜುಗಿಸುತ । ಪಿತನಾಜ್ಞೆಯೊಳು ನಿಂದರತ್ತ ।
ಸತಿಯುರ್ಗೆ ವೃಷಭರಾಜನ ದಳವೆಂಬೊಂದು । ನ್ನತವಾರ್ತೆಯಾಯ್ತೊಳಗಿತ್ತ ॥ ೨೧ ॥

ಆರುದಿಂಗಳಿನ ಮೇಲೆ ದಂಡೆದ್ದುದಲ್ಲಿಂದ । ಬಿರುಬಿದ್ದ ಭೇರಿ ಸೂಳೈಸೆ ॥
ಹೆರೆದೆಗೆಯದೆ ನೂಂಕಿ ನಡೆದುದು ಕಟಕ ಬ । ಲ್ಪಿರಪಿನೊಳಗೆ ಜಾತ್ರೆಯಂತೆ ॥ ೨೨ ॥
ವೃಷಭರಾಜನ ಪೌಜು ಹಿಂದೆಯ್ದೆ ನೆರೆದ ಪೌ । ರುಷದ ಕುವರರಿಬ್ಬರೊಡನೆ ॥
ಸುಷಿರರಾಗದೆ ಶಿಬಿಕೆಯೊಳೆಯ್ದೆ ದುಷ್ಷಮ । ಸುಷಮಕಾಲಾದ್ಯನೆಯ್ದಿದನು ॥ ೨೩ ॥
ಖಡುಗವ ಜಡಿದು ತೇಜಿಯ ಚಾರಿವರಿಸುತ । ಕಡುಪಿನೊಳೋಲೈಸಿ ಬಪ್ಪ ॥
ಕಡುಪೆಂಪಿನರಸುಮಕ್ಕಳ ನೋಡುತಾ ಚಕ್ರಿ । ತಡೆಯದೆ ಮುಂದೆಯ್ದುತಿರ್ದಾ ॥ ೨೪ ॥
ಹರಿವಂಶದುಗ್ರವಂಶದ ನಾಥವಂಶದ । ಕುರುವಂಶದರಸುಮಕ್ಕಳನು ॥
ಹರುಷದಿ ನೋಡುತ ಬರುತಿದ್ದನಿಕ್ಷ್ವಾಕು । ವರವಂಶಗಗನಭಾಸ್ಕರನು ॥ ೨೫ ॥
ಇವನುಗ್ರವಂಶಕುತ್ತಮನಿವ ಹರಿವಂಶ । ಕವತಂಸನಿವ ಕುರುಕುಲಕೆ ॥
ಪ್ರವರನು ನಾಥವಂಶಕೆ ಪೂಜ್ಯನಿವನೆನು । ತವರ ಯೋಚಿಸುತೆಯ್ದುತಿರ್ದಾ ॥ ೨೬ ॥

ಗಂಭೀರನಿವನು ಪರಾಕ್ರಮಿಯಿವನು ಗು । ಣಾಂಭೋಧಿಯಿವನಿವನೆಂದು ॥
ಡಂಭರಹಿತರಾಜಪುತ್ರರ ಬಗೆವುತ । ಜಂಭಾರಿಯಂತೆಯ್ದುತಿರ್ದಾ ॥ ೨೭ ॥
ತರಣಿಯ ಕಂಡ ತಾವರೆಯಂತೆ ಚಂದ್ರನ । ಸಿರಿಯ ಕಂಡುತ್ಪಲದಂತೆ ॥
ಭರತರಾಜನ ನೋಡಿ ಹಿಗ್ಗುತ ರಾಜಪು । ತ್ರರು ಬರುತಿದ್ದರೋಲೈಸಿ ॥ ೨೮ ॥
ಬಹಳವಾಕ್ಯವನಾಡರಾಶೆದೋರರು ತಮ್ಮೊ । ಳಹಿತಚೇಷ್ಟೆಗಳ ಕಾಣಿಸರು ॥
ಮಹಿಮನೊತ್ತಿನೊಳೋಜೆಯೊಳು ಕ್ಷತ್ರಿಯರ್ಕಳು । ತ್ಸಹದೊಳೆಯ್ತರುತಿರ್ದರಾಗ ॥ ೨೯ ॥
ಹಿತವರವರು ಕೊಳುಕೊಡೆಗೆ ಚಕ್ರಿಗೆ ತಕ್ಕ । ನುತವಂಶಜಾತಿಕ್ಷತ್ರಿಯರು ॥
ಕ್ಷಿತಿಪನಷ್ಟೈಸಿರಿಯಿಲ್ಲ ವಂಶದಿ ಸಮ । ಯುತರೆಯ್ದುತಿರ್ದರೊಪ್ಪದೊಳು ॥ ೩೦ ॥

ಬಿಡುತಲ್ಲಿಗಲ್ಲಿ ದಂಡೆತ್ತಿ ನಡೆವುತ ಪೆ । ರ್ವಡೆಗೂಡಿ ಕ್ರಮದೊಳು ಗಮಿಸಿ ॥
ಕಡೆನೂಂಕಿ ಹಲವು ಪಯಣದೊಳೊಯ್ಯನೆ ಬಂದು । ಪಡುವಣ ವಾರ್ಧಿಯ ಕಂಡಾ ॥ ೩೧ ॥
ಮಾಗಧಾಂಕನ ಕರೆ ವರತನು ಬರಲೆಂದ । ನಾಗವರ್ಬಂದು ಕೈಮುಗಿಯೆ ॥
ಸಾಗರತೀರದೊಳ್ನಿಂದವರಿರ್ವರ್ಗೊರ್ಂ । ದಾಗಿ ಭೂಪತಿಯಿಂತು ನುಡಿದಾ ॥ ೩೨ ॥
ಈ ಸಮುದ್ರದ ಕುರುವದೊಳು ಬಾಳ್ವನಲ್ಲೈ ಪ್ರ । ಭಾಸನೆಂದೆನಿಪ ವ್ಯಂತರನು ॥
ಮಾಸದೆಯ್ತಂದೆಮ್ಮ ಕಾಣ್ಬನೊ ಕಡೆಯೊಳು । ಮಾಸಿ ಬಪ್ಪನೊ ಪೇಳಿರೆಂದಾ ॥ ೩೩ ॥
ಉತ್ತಮನವನು ಪ್ರಭಾಸದೇವನು ನಿನ್ನ । ಚಿತ್ತವನೊಲಿಸತಕ್ಕವನು ॥
ಸುತ್ತಿನ ನುಡಿಯನು ನಾವಿಬ್ಬರೆಯ್ದಿ ನಿ । ನ್ನೊತ್ತಿಗೆ ತಹೆವೆಂದರವರು ॥ ೩೪ ॥
ನೀವೆಯ್ದಬೇಡ ನಿಮ್ಮಯ ನಾಳಿನವರೊಂದು । ಸೇವೆಯ ಮಾಡಲಿ ನಮಗೆ ॥
ನಾವವರನು ನೋಡಬೇಡವೆಯೆಂದು ಸ । ದ್ಭಾವದಿ ನುಡಿದನಾ ಚಕ್ರಿ ॥ ೩೫ ॥
ಧ್ರುವಗತಿ ಬಾ ಸುರಕೀರ್ತಿ ಬಾ ಹೋಗಿ ನೀ । ವವನನಿಲ್ಲಿಗೆ ತಹುದೆಂದು ॥
ಸುವಿನಯದಿಂದ ಬೀಳ್ಕೊಟ್ಟನಾ ಸೇವೆಗು । ತ್ಸವಿಸುತೆಯ್ದಿದರವರತ್ತ ॥ ೩೬ ॥

ಎಲ್ಲರ ಬೀಳ್ಕೊಟ್ಟು ಕುವರರಿಬ್ಬರ ಮುದ್ದು । ಲಲ್ಲೆಯೊಳ್ಬೀಡಿಗೆ ಕಳುಹಿ ॥
ಪಲ್ಲಕ್ಕಿಯಿಳಿದರಮನೆಯ ಹೊಕ್ಕನು ಕಬ್ಬು । ವಿಲ್ಲನ ರೂಪನುಬ್ಬಿನೊಳು ॥ ೩೭ ॥
ಎಳೆವೆಂಗಳೊಡಗೂಡಿ ಜಳಕ ಮುಂತಾದ ನಿ । ರ್ಮಲಭೋಗಯೋಗಲೀಲೆಯೊಳು ॥
ಕಳೆದನಾ ಹಗಲಿರುಳನು ಮರುದಿವಸದ । ಬೆಳಗಿನೊಳೋಲಗವಾದಾ ॥ ೩೮ ॥
ಕಡೆಯ ಚಾವಡಿಯಲ್ಲಿ ದೊರೆಗಳೊಗ್ಗಿನೊಳು ಪೆ । ರ್ವಡೆಯ ಬಳಸಿನೊಳಾ ಚಕ್ರಿ ॥
ಕಡೆಕಟ್ಟು ರಂಜಿಸಲೋಲಗಗೊಟ್ಟಿಂಪು । ವಡೆದ ಗಾನವ ಕೇಳುತಿರ್ದಾ ॥ ೩೯ ॥
ಲೇಸು ಲೇಸೆಂಬಂತೆ ಪರಮಾತ್ಮಕಲೆಯ ಧ । ನ್ಯಾಸಿಭೈರವಿಯೊಳು ಪಾಡೆ ॥
ಬೀಸುವ ಚಾಮರಗಳ ಬಳಸಿನೊಳು ವಿ । ಳಾಸದೊಳಾಲಿಸುತಿರ್ದಾ ॥ ೪೦ ॥

ಹೊರಗೆಳೆವಿಸಿಲೆಸೆವಂತೊಳಗಾತ್ಮನ । ಮಿರುಗವ ಪ್ರಭೆ ತೋರುತಿಹುದು ॥
ತುರುಗೆವೆ ಮುಚ್ಚದೆ ನೆನಹಿನೊಳಗೆ ನೋಡು । ತೊರಗನೊರಗಿ ಕೇಳುತಿರ್ದಾ ॥ ೪೧ ॥

ಚರ್ಮದೃಷ್ಟಿಯೊಳು ಲೋಕವ ನೋಡುತಿದ್ದನಂ । ತರ್ಮಹಾಜ್ಞಾನದೃಷ್ಟಿಯೊಳು ॥
ನಿರ್ಮಲಾತ್ಮನ ನೋಡುತಿರ್ದನವನ ಮನೋ । ಧರ್ಮವ ಬಲ್ಲವರಾರು ॥ ೪೨ ॥

ಕೆಸರೊಳಿರ್ದಬ್ಜಕೆ ರವಿಯು ಮೇಲಲ್ಲದಾ । ಕೆಸರಿನ ಮೇಲಾಸೆಯುಹುದೆ ॥
ಅಸಮಭೋಗದೊಳಿರ್ದೊಡಾತ್ಮನ ಮೇಲಲ್ಲ । ದೆಸೆವುದೆ ಮಮತೆ ಭವ್ಯರಿಗೆ ॥ ೪೩ ॥

ರಾಗರಚನೆಯಾಗಿ ಹಾಡುವ ಪರಮಾತ್ಮ । ಯೋಗವ ಕೇಳುತವರಿಗೆ ॥
ಚಾಗಗೊಡುತ ಹಂಸನಾಥಲೀಲೆಯೊಳಿರ್ದ । ನಾ ಗುಣರತ್ನಭೂಷಣನು ॥ ೪೪ ॥

ಉತ್ತುಂಗವಿಭವದೊಳೋಲಗಗೊಟ್ಟಾಗ । ಮತ್ತೊಂದು ಸಿರಿ ಬಂದುದೆನಿಸಿ ॥
ಚಿತ್ತಾನುಮತಿಯೆಂಬ ದಾದಿ ಭೂವರಗೆ ತಂ । ದಿತ್ತಳು ವೃಷಭರಾಜನನು ॥ ೪೫ ॥

ಶ್ರೀಜಿನ ಬಿಜಯಂಗೈದನೆ ಭರತನ । ಪ್ಪಾಜಿಯೆಯ್ತಂದನೆಯೆಂದು ॥
ಆ ಜನಪತಿ ತನ್ನ ಕುವರನನೀಸಿಕೊಂ । ಡೋಜೆಯೊಳಮರ್ದಪ್ಪಿಕೊಂಡಾ ॥ ೪೬ ॥

ದೊಡ್ಡಮಾಣಿಕಬೊಂಬೆ ಚಿಕ್ಕಮಾಣಿಕಬೊಂಬೆ । ಯಡ್ಡೈಸಿ ತಕ್ಕಿಸಿದಂತೆ ॥
ದೊಡ್ಡಸೊಬಗ ರಾಯ ಚಿಕ್ಕಸೊಬಗಿನ ತ । ನ್ನೊಡ್ಡಮಗನನಪ್ಪಿಕೊಂಡಾ ॥ ೪೭ ॥

ಮುತ್ತಿತ್ತು ಮೊಗನೋಡಿ ನೊಸಲೊಳು ನೊಸಲಿಟ್ಟು । ಮತ್ತೆ ಹೊಕ್ಕುಳನಲುಗಿಸಿದಾ ॥
ಹೆತ್ತ ತಂದೆಯು ನೋಡಿ ಮೊಳೆವಲ್ಲ ಮಿನುಗಿ ಸಂ । ಪತ್ತಾಗಿ ನಕ್ಕನಾ ತರಳಾ ॥ ೪೮ ॥

ಅಂಗೈಯ ನಿಮಿರಿಸಿ ಲಕ್ಷಣಗಳ ನೋಳ್ಪ । ನಂಗಾಲುವಿಡಿದು ನೋಡುವನು ॥
ಮಂಗಲಮಯದ ರೇಖೆಯ ನೋಡಿ ಲೋಕೈಕ । ಮಂಗಲಯೆಂದು ಚುಂಬಿಸುವಾ ॥ ೪೯ ॥

ತಂದೆ ತನ್ನಯ ಕೈಯ ನೋಡಿದಂತಾ ಶಿಶು । ತಂದೆಯ ಕೈಯ ನೋಡುವುದು ॥
ತಂದೆಯ ಕಾಲ ನೋಡುವುದಪ್ಪಿಕೊಂಬುದು । ಮಂದಹಾಸವ ಮಾಡುತಿಹುದು ॥ ೫೦ ॥

ನಿನ್ನ ಲಕ್ಷಣವ ನಾ ನೋಡಿದರೊಡನೆ ನೀ । ನೆನ್ನ ಲಕ್ಷಣವ ನೋಡಿದೆಯ ॥
ನಿನ್ನಂತೆ ನಾನು ನನ್ನಂತೆ ನೀನ್ನೈಯೆಂದು । ತನ್ನ ಕಂದನ ಕೂಡೆ ನುಡಿದಾ ॥ ೫೧ ॥

ಒಬ್ಬಮಗನನಿಲ್ಲಿ ಮುದ್ದಿಸುತಿರಲೊಡ । ನಿಬ್ಬರು ನೆರೆದ ಕುವರರು ॥
ಉಬ್ಬಿನಿಂದೆಯ್ತರುತಿರ್ದರು ತಂದೆಯ । ಸಬ್ಬವಾದೋಲಗಕೆಂದು ॥ ೫೨ ॥

ತಂದೆಯ ದೃಷ್ಟಿ ಸಂದಿಸದ ಮೊದಲೆಯೇರಿ । ದಂದಳವಿಳಿದು ಜೋಕೆಯೊಳು ॥
ಮುಂದಣ್ಣ ಹಿಂದೆ ತಮ್ಮನು ಕಾಲುನಡೆಯೊಳಾ । ನಂದದಿ ಬರುತಿರ್ದರಾಗ ॥ ೫೩ ॥

ಬಳಿಕ ಕಿರಿದುದೂರದೊಳು ಛತ್ರ ಚವರವ । ತೊಲಗಿಸಿ ಹಾವುಗೆವುಳಿದು ॥
ಬಳಸಿದೊಳಿಗದರ ನಿಲಿಸಿ ತಾವಿರ್ವರೆ । ಪೊಳಹೊಗುತಿರ್ದರೋಜೆಯೊಳು ॥ ೫೪ ॥

ದೇವಾಂಗವಸ್ತ್ರವನುಡೆಸುತ್ತಿ ರತ್ನದ । ತಾವಡಕೋಲ ಕೈವಿಡಿದು ॥
ತೀವಿದಾಭರಣಕಾಂತಿಯೊಳೆಯ್ದುತಿರ್ದರು । ದೇವಕುಮಾರರಂದದೊಳು ॥ ೫೫ ॥
ಸಿರಿದುರುಬಿಗೆ ತಕ್ಕ ಚಿಮ್ಮುರಿ ಚುಂಗು ಕ । ತ್ತುರಿಬೊಟ್ಟು ಶ್ರೀಗಂಧಲೇಪಾ ॥
ಭರತರಾಜನ ಮಕ್ಕಳಲ್ಲವೆ ಅವರ ಸಿಂ । ಗರವನೇನೆಂಬೆನೆಯ್ದಿದರು ॥ ೫೬ ॥
ತಂದೆಯೋಲಗವೆಂಬ ಮಂದ್ಯಾಳತನವಿಲ್ಲ । ಹೊಂದಿದ ಭಯಭಕ್ತಿಯಿಂದ ॥
ಮಂದಗತಿಯೊಳೊಯ್ಯನೋಸರಿಸುತ ಬಪ್ಪ । ಚಂದಕೆ ನೃಪರು ಮೆಚ್ಚಿದರು ॥ ೫೭ ॥
ಮುಟ್ಟಲೊತ್ತಿಗೆ ಬರೆ ನೃಪರೆಲ್ಲರೊಲ್ದರ್ತಿ । ವಟ್ಟು ಕೈಮುಗಿದರವರನು ॥
ನಿಟ್ಟಿಸಿ ಕುಳ್ಳಿರಿಯೆನುತ ಕೈಸನ್ನೆಯೊ । ಳೊಟ್ಟೈಸುತೆಯ್ದಿದರವರು ॥ ೫೮ ॥
ಮಾರ್ತಾಂಡಗಿಮ್ಮಡಿ ಮಾರ್ತಾಂಡನೆಂಬರ್ಕ । ಕೀರ್ತಿರಾಜನ ನೋಡು ಸ್ವಾಮಿ ॥
ಸಾರ್ತಂದನಾದಿರಾಜನು ಪರಾಕೆಂದರು । ಕೂರ್ತು ಕಟ್ಟಿಗೆಕಾರರಾಗ ॥ ೫೯ ॥
ಘಳಿಗೆಗೆ ಕೋಟಿವಿತ್ತವ ಕೊಂಡ ವೀರರ । ತಲೆವಣಿಗಳ ಪರಾಂಬರಿಸು ॥
ಮಲೆವರಿರಾಯದಲ್ಲಣರ ಚಿತ್ತೈಸು ಹೋ । ಗಲಭೆನಿಲ್ಲಿಸಿರೆಂದರೊಡನೆ ॥ ೬೦ ॥
ಸೌಜನ್ಯವಿನಯವಿವೇಕವಿಡಾಯದೊ । ಳೋಜೆಯೊಳೂಣೆಯ ಹೊಗದ ।
ರಾಜಕುಮಾರಾಗ್ರಗಣ್ಯರ ನೋಡೆಲೆ । ರಾಜಾಧಿರಾಜಾಗ್ರಗಣ್ಯಾ ॥ ೬೧ ॥
ಹುಂಡಾವಸರ್ಪಿಣಿಯಾದಿಯ ಷಟ್ಖಂಡ । ಮಂಡಲೇಶಾದ್ರಿಯೊಳೊಗೆದ ॥
ಚಂಡಾಂಶುಚಂದ್ರರ ನೋಡು ವಿಸ್ಮಯವೆಂದು । ದಂಡಧರರು ಸೂಚಿಸಿದರು ॥ ೬೨ ॥
ನಗುತ ಕಟ್ಟಿಗೆಕಾರರಿಗೆ ರಾಯ ಕೈಮುಟ್ಟಿ । ದುಗುಲವನಿಟ್ಟನರ್ತಿಯೊಳು ॥
ನಗುತ ನಗುತ ಜನಕನ ಸಾರ್ಕೆಗೊಯ್ಯಗೊ । ಯ್ಯಗೆ ಕುವರರು ಗಮಿಸಿದರು ॥ ೬೩ ॥
ಏಳಣ್ಣ ಅಣ್ಣಾಜಿಯರು ಬರುತಿದ್ದಾರೆಂ । ದೇಳಿಸಿದನು ಚಿಕ್ಕಮಗನಾ ॥
ಮೇಲೆ ಕೈಮುಗಿಯೆಂಬರೊಡನೆ ಕೈಮುಗಿದನಾ । ಬಾಲಕ ತಂದೆ ಪೇಳ್ದಂತೆ ॥ ೬೪ ॥
ನವಗವನೇಕೆ ಕೈಮುಗಿವುದು ಸ್ವಾಮಿಯೆಂ । ದವನತನಾದ ದೊಡ್ಡಣುಗಾ ॥
ಅವನೀಶ ಪುತ್ರರ ಲಕ್ಷಣವೈಯೆಂದು । ಕುವರನ ಕೂಡೆ ನುಡಿದನು ॥ ೬೫ ॥
ಒಡನಿರ್ವರಯ್ಯಗೆ ಕಾಣ್ಕೆಯ ನೀಡಿ ತಾ । ವಡದ ಕೋಲೆತ್ತಿ ಕೈಮುಗಿದು ॥
ಎಡಬಲವಿಡಿವ ಗದ್ದುಗೆಯ ಕೆಳಗೆ ನಿಂದ । ರೊಡೆಯನನೋಲೈಪರಂತೆ ॥ ೬೬ ॥
ತೊಡೆಯ ಮೇಲೊಬ್ಬ ಕುಮಾರನು ಕೆಳಗೊಬ್ಬ । ರ ಡೆಪತ್ತಿ ನಿಂದ ಕುವರರು ॥
ಗಡಣದ ದೊರೆಗಳು ಮುಂದೆ ನಿಂದಿರೆ ರಾಯ । ರೊಡೆಯನೋಲಗ ವಿರಾಜಿಸಿತು ॥ ೬೭ ॥
ದೊರೆಗಳೆಲ್ಲರ ನೋಡಿ ಕುಳ್ಳಿರಿಯೆಂದನಾ । ಭರತೇಶನವರು ಕುಳ್ಳಿರರು ॥
ಹಿರಿಯಣ್ಣ ನೀ ಪೇಳ್ದವರನು ಕುಳ್ಳಿರಿಸೆಂದು । ವರತನೂಜಗೆ ಸೂಚಿಸಿದನು ॥ ೬೮ ॥

ತೆಪ್ಪಗೆ ಕುಳ್ಳಿರ್ದೈ ದೋಷವಿಲ್ಲೆಂದರೆ । ಒಪ್ಪದೆ ನಿಂದಿರ್ದರವರು ॥
ಅಪ್ಪಾಜಿಯಾಣೆ ಕುಳ್ಳಿರಿಯೆಂದ ಕುವರನ । ನೆಪ್ಪುಗೊಂಡವರು ನೋಡಿದರು ॥ ೭೯ ॥
ಹಿರಿಯ ಕುಮಾರನಾಜ್ಞೆಯ ಹಾರಿನಿಂದರೆಂ । ದರಿದನಾ ನೃಪತಿ ತನ್ನೊಳಗೆ ॥
ಕಿರಿಯಣ್ಣ ಕುಳ್ಳಿರವೇಳು ನೀನವರನೆಂ । ದರುಹಿಕೊಟ್ಟನು ಚಿಕ್ಕಮಗಗೆ ॥ ೭೦ ॥
ತಣ್ಣಗೆ ಕುಳ್ಳಿರ್ದೈ ದೋಷವಿಲ್ಲೆಂದರೆ । ಬಣ್ಣದಿ ನಿಂದಿರ್ದರವರು ॥
ಅಣ್ಣಾಜಿಯಾಣೆ ಕುಳ್ಳಿರಿಯೆಂದನವರೆದೆ । ಹಣ್ಣಾಗಿ ಕುಳಿತರೊಪ್ಪದೊಳು ॥ ೭೧ ॥
ಕೆಲಸವಿಲ್ಲಾದಿರಾಜಗೆ ಸ್ವಾಮಿಯಿದಿರೊಳು । ಸಲುವುದೆಯೆನ್ನಾಣೆಯೆಂದಾ ॥
ಸಲೆ ಸ್ವಾಮಿ ನಿನಗೊಡೆಯನು ನೀನೆ ನನ್ನಯ । ತಲೆಗೊಡೆಯನು ಸಲ್ವುದೆಂದಾ ॥ ೭೨ ॥
ರಾಜೇಂದ್ರನದಕೆ ಮೆಚ್ಚಿದನು ತನ್ನಯ ಮಕ್ಕ । ಳೋಜೆಗೆ ತಾನರ್ತಿವಟ್ಟಾ ॥
ಈ ಜಾತಿವಿನಯವಾರ್ಗುಂಟೆಂದು ಮೆಚ್ಚಿ ಸ । ಭಾಜನವೆಲ್ಲ ಕೀರ್ತಿಸಿತು ॥ ೭೩ ॥
ಒಂದಿನಿಸರ ಮೇಲೆ ದಳಪತಿಸಚಿವರ । ಮಂದಹಾಸದಿ ರಾಯ ಕರೆದು ॥
ಅಂದಾನು ಪೇಳ್ದಂತೆ ಕುವರರ ಸಂಬಳ । ಸಂದುಬಹುದೆ ಹೇಳಿರೆಂದಾ ॥ ೭೪ ॥
ಖಂಡಣೆ ಮಾಡೆ ನಾವೊಪ್ಪಿಸಿದೆವು ತಾವೆ । ಭಂಡಾರದೊಳಗಿರಿಸಿದರು ॥
ಚಂಡವೀರರಿಗಾರ ತಡೆಹೆಂದು ನೃಪನರ್ತಿ । ಗಂಡು ತಾವೊರೆದರರ್ತಿಯನು । ॥ ೭೫ ॥

ಇನ್ನು ಕುಳ್ಳಿಂರಿಯೆಂದು ಕುವರರಿಬ್ಬರಿಗೆ ತಾ । ನುನ್ನತಾಸನವ ಕೊಡಿಸಿದಾ
ಇನ್ನೊಂದು ಸೇವೆಯ ಮಾಳ್ಪರ್ತಿಯುಂಟೆಂದು । ಸನ್ನದ್ಧರಾದರಂದವರು ॥ ೭೬ ॥
ಅಯ್ಯಗೆಲೆಯ ಕೊಡುತಿರ್ದ ತಂಬುಲಿಗನ । ಕೈಯ ತಬಕನರ್ಕಕೀರ್ತಿ ॥
ಒಯ್ಯನೆ ಸೆಳೆಕೊಂಡು ತಂದೆಗೆಲೆಯ ತನ್ನ । ಕೈಯಾರೆ ಕೊಡತೊಡಗಿದನು ॥ ೭೭ ॥
ಅನಿತರೊಳೊಬ್ಬನ ಕೈಯ ಚವರವ ಭೋಂ । ಕನೆ ಸೆಳೆಕೊಂಡಾದಿರಾಜಾ ॥
ಜನಕಗೆ ಚವರವ ಢಾಳಿಸುತಿದ್ದನಾ । ಬಿನದವನೇನೆನ್ನಬಹುದು ॥ ೭೮ ॥
ಮಕ್ಕಳ ಪಡೆದು ಮತ್ಸರದಲ್ಲಿ ಬೆಂದೆಕ್ಕ । ಸಕ್ಕದೆ ಬಾಳ್ವರ ಬದುಕಾ ॥
ಧಿಕ್ಕರಿಸುತ ತಂದೆಗೂಳಿಗಗೈದರಾ । ಚಿಕ್ಕಕುಮಾರರರ್ತಿಯೊಳು ॥ ೭೯ ॥
ವೀಳೆಯದೆಲೆ ಪೂರ್ಣವಾದುದೆನಗೆ ಕುಳಿ । ತೋಲಗಿಸಿನ್ನು ನೀನೆಂದಾ ॥
ಕೇಳಿ ತಬಕ ನೀಡಿ ಪಿತನ ತೊಡೆಯೊಳಿದ್ದ । ಬಾಲನ ತಾನೆತ್ತಿಕೊಂಡಾ ॥ ೮೦ ॥
ಏನಣ್ಣ ತರಳನ ನೀನೆತ್ತಿಕೊಂಡೆಯೆಂ । ದಾ ನರನಾಥ ಕೇಳಿದನು ॥
ಬೇನೆಯುಳ್ಳನೆ ದೇವರೊಳುಮೊಡೆಗೆಂದಗ್ರ । ಸೂನು ನುಡಿದನಯ್ಯನೊಡನೆ ॥ ೮೧ ॥
ಘನನೇಳೆಯಾದುದು ವೃಷಭರಾಜನ ದೇವ । ರನುನಯ.ದಿಂದ ತಾಳಿದಿರಿ ॥
ಅನುಜನ ನಾನಿಷ್ಟು ಧರಿಸುವೆನೆಂದನಾ । ವಿನಯಕರಸ ಚೋದ್ಯವಟ್ಟಾ ॥ ೮೨ ॥

ಇವನೀಗ ಮುಂದಾನು ಧರಿಸಿದ ರಾಜ್ಯಭಾ । ರವ ತಾಳ್ವ ಸಾಮರ್ಥ್ಯನೆಂದು ॥
ಅವಧರಿಸಿರ್ದನಾ ಚಕ್ರೇಶನಂತೆ ಮಾ । ನವಸುರರೆಲ್ಲ ನೆನೆದರು ॥ ೮೩ ॥
ಮತ್ತೆ ನೋವಿಲ್ಲ ನನ್ನಾಣೆ ತಾರೆಂದು ತಾ । ನೊತ್ತಿ ಮಗನನೆತ್ತಿಕೊಂಡು ॥
ಹತ್ತಿರೆ ಕುಳ್ಳಿರಿ ನನ್ನಾಣೆಯೆನಲಿಬ್ಬ । ರುತ್ತಮಸುತರು ಕುಳಿತರು ॥ ೮೪ ॥
ಒಮ್ಮೆ ತಂದೆಯು ನೋಡುತೊಳುನುಡಿನುಡಿವುತ । ಸಮ್ಮುಖದವರನೀಕ್ಷಿಸುತ ॥
ದಿಮ್ಮಿಸುತೆಡೆಗೊಮ್ಮೆ ತೊಡೆಗಳ ತಟ್ಟುತ । ಸುಮ್ಮಾನದೊಳಗಿದ್ದರವರು ॥ ೮೫ ॥

ನುಡಿಸುತ ಕುವರರಿಬ್ಬರನೊಯ್ಯನೊಮ್ಮೆ ಮ್ಯೆ । ದಡಹುತ ತಾನೆ ಹೂಂಕೊಳುತ ॥
ಹಡಪಿಗರಿಂದ ವೀಳಯವ ಕೊಡಿಸುತರ್ತಿ । ವಡುತಿರ್ದನಾ ಪೆತ್ತ ತಂದೆ ॥ ೮೬ ॥
ಓದುಸಾದನೆ ನಿಮಗೆಂತಿಹುವಣ್ಣ ವಿ । ಷಾದವೊ ಹರ್ಷವೊಯೆಂದಾ ॥
ಆ ದೊಡ್ಡ ಸುಖವನೇನೆಂದಾಡಬಹುದು ವಿ । ನೋದವಾಗಿಹುದೆಂದರವರು ॥ ೮೭ ॥
ಸಾಧನೆಯೆಂಬುದು ಜಾಡ್ಯಹರಣ ಜ್ಞಾನ । ಸಾಧನವಲ್ಲವೆ ಶಾಸ್ತ್ರ ॥
ಭೂಧವಕುಲಕದು ಸುಖವಲ್ತೆಯೆಂದು ಸು । ಬೋಧನ ಮಕ್ಕಳಾಡಿದರು ॥ ೮೮ ॥
ಪ್ರಾರಂಭದೊಳಗಿಷ್ಟು ಬೇಸರಾಗಿಹುವು ಮು । ತ್ತೋರಂತೆ ಸೊಗಸುದೋರುವುವು ॥
ಧೀರರಿಗೋದುಸಾದನೆ ಸಾಧ್ಯವೆಂದು ಕು । ಮಾರರಿಗೊರೆದನಾ ಚಕ್ರಿ ॥ ೮೯ ॥
ನವಗವು ಬೇಸರುದೋರುವುದಿಲ್ಲ ರಾ । ಗವನೆ ಹೆಚ್ಚಿಸುತಿರ್ಪವವನು ॥
ಅವಸರಗೊಳ್ಳದೊಯ್ಯೊಯ್ಯನೆ ಕಲಿವೆವೆಂ । ದವರು ನುಡಿದರಯ್ಯನೊಡನೆ ॥ ೯೦ ॥
ಉದಯದಿ ಸಾಧನೆ ಹಿಂಬಗಲೋದು ನ । ಕ್ತದೊಳೋದಿದೋದಿನ ಚಿಂತೆ ॥
ಮೃದುಮೃದುವಾಗಿ ನಡೆವುದೆಮಗದರಿಂದ । ಪದುಳವಾಗಿಹುವೆಂದರವರು ॥ ೯೧ ॥
ಆದಿರಾಜನ ಬುದ್ಧಿಯೆಂಬುದು ದಿನದಿನ । ಕೋದಿನೊಳಗೆ ಸಾಧನೆಯೊಳು ॥
ಆದರುಶವನೊಲ್ದು ಬೆಳಗಿದಂತದೆಯೆಂದ । ನಾದರದಿಂದರ್ಕಕೀರ್ತಿ ॥ ೯೨ ॥
ಮರೆದೋದುಸಾದನೆಗಳ ಮುಗುಳ್ನೊಮ್ಮೆಯೆ । ಚ್ಚರುದೋರಿ ನೆನಯುಬಹಂತೆ ॥
ಮೆರೆವುತಿದ್ದಪುದು ತಮ್ಮನ ಮತಿಯೆಂದಯ್ಯ । ಗರಿಕೆಮಾಡಿದನಗ್ರಜಾತಾ ॥ ೯೩ ॥
ದೇವರದೇವನ ಹೆಸರಿಟ್ಟಿರಲ್ಲವೆ । ದೇವರ ವಾಕ್ಯ ತಪ್ಪುವುದೆ ॥
ಭಾವಿಸಲವನಾದಿರಾಜನಲ್ಲವೆ ಮಧ್ಯ । ಭಾವದಂತ್ಯದ ರಾಜನಲ್ಲ ॥ ೯೪ ॥
ಅಹುದೆ ನಿನ್ನಯ ಚಿತ್ತಕಸ್ತುತಿಯಾದುದೆ । ಸಹಸಿಯೆ ಕಿರಿಯಣ್ಣನೆಂದಾ ॥
ಬಹುವಚನವನರಿಯೆನು ನಮ್ಮ ವಂಶಕು । ತ್ಸಹಕಾರಿಯೆಂದನಯ್ಯನೊಳು ॥ ೯೫ ॥
ಹಿರಿಯರು ಕಿರಿಯರನಿಂತು ಬಣ್ಣಿಸುವರೆ । ಅರಸುಮಕ್ಕಳಿಗಿದು ನಡೆಯೆ ॥
ಪರಿಕಿಸಲೆನಗಷ್ಟು ಗುಣವುಂಟೆಯೆಂದನಾ । ಹಿರಿಯಣ್ಣನೊಡನಾದಿರಾಜಾ ॥ ೯೬ ॥

ದೋಷವಿಲ್ಲದಿದೇವರು ಸೈರಿಸಣ್ಣ ಸಂ । ತೋಷದಿ ನುಡಿದನೈ ನಿನ್ನಾ ।
ಭೂಷಣರಲ್ಲವೆ ನೀವಿಬ್ಬರೆಂದು ಸಂ । ಭಾಷಣೆಗೈದನಾ ತಂದೆ ॥ ೯೭ ॥

ಓಲಗವಿಂದಿಗೆ ಸಾಕಿನ್ನು ನಿಮ್ಮ ರಾ । ಜಾಲಯಕೆಯ್ದಿ ನೀವೆಂದು ॥
ಲಾಲಿತಾಭರಣತುಂಬಿದ ಕರಡಗೆಗಳ । ಲೋಲಪುತ್ರರಿಗೆ ನೀಡಿದನು ॥ ೯೮ ॥

ಉಡುಗೊರೆಯೇಕೆಮಗೀಗಳಾಭರಣಕೆ । ಕಡಮೆಯಿಲ್ಲೆನುತಿರ್ದರವರು ॥
ಕಡುರಮ್ಯಗೆಲಸದಾಭರಣಗಳಿವನೊಮ್ಮೆ । ಕೊಡಬೇಕು ಹಿಡಿಯಿರೈಯೆಂದಾ ॥ ೯೯ ॥

ಅವರಿಂದಿಗೊಲ್ಲೆನೆಂದರು ಕೊಟ್ಟರೊಲ್ಲಿರೆ । ನವಗಿನ್ನು ನೀವು ಕಾಣಿಕೆಯಾ ॥
ಸುವಿಧಾನದಿಂದಿತ್ತರಾನೊಲ್ಲೆನೆಂದನಾ । ಕುವರರ ಕೂಡೆ ಚಕ್ರೇಶಾ ॥ ೧೦೦ ॥

ದೊಡ್ಡ ಕುವರ ಮೊದಲುಡುಗೊರೆವಿಡಿಯೆ ಕೈ । ಯೊಡ್ಡುವ ಕಿರಿಯನೆಂದರಿದು ॥
ಎಡ್ಡನುಡಿಯೊಳು ದೊಡ್ಡವನ ಕರೆವನವ । ನಡ್ಡಮೋರೆಯುನಿಕ್ಕುತಿಹನು ॥ ೧೦೧ ॥

ಹೇಳಾದಿರಾಜ ನಿನ್ನಣ್ಣ ನಿನ್ನಯ ಮಾತ । ಕೇಳುವನೆಂದನಾ ತಂದೆ ॥
ತೋಳೆತ್ತಿ ಸ್ವಾಮಿ ಪಾಲಿಸಿ ಕೊಳ್ಳಬೇಕೆಂದು । ಹೇಳುತಣ್ಣನಿಗೆ ಕೈಮುಗಿದಾ ॥ ೧೦೨ ॥

ಎಂದರಾ ಕರಡಗೆಗಳ ವೃಷಭಣ್ಣನ । ಮುಂದೆ ದೇವರು ಸುಮ್ಮನಿರಿಸಿ ॥
ಚಂದಳಿಗೈಯಿಂದ ನವಗವಕೊಡುವೊಂದು । ಚಂದವ ನೋಡಬೇಕೆಂದಾ ॥ ೧೦೩ ॥

ಅದು ಕಾರ್ಯವಹುದೆಂದು ಕರಡಗೆಗಳ ಕಂದ । ನಿದಿರೊಳಾ ನೃಪನಿರಿಸಿದನು ॥
ಪಡೆದು ನೀನೆಮಗುಡುಗೊರೆಯು ಕೊಡೆಂದು ಬೇ । ಡಿದರು ಕೈಯೊಡ್ಡಿ ತಮ್ಮನನು ॥ ೧೦೪ ॥

ಕರಡಗೆಗಳ ಮೇಲೆ ಕೈಯಿಡನವ ನೀವೆ । ಕರದಿ ತೆಗೆದುಕೊಂಬುದೆಂದು ॥
ಕರದ ಸನ್ನೆಯು ತೋರ್ಪನಣ್ಣಾಜಿಯರಿಗೆತ್ತಿ । ಕರವ ಮುಗಿವನೇನನೆಂಬೆ ॥ ೧೦೫ ॥

ಅಜ್ಜನ ಪೆಸರ್ಪೆಸೆ ನೀನೀವುದಿದು ಲೇಸಿ । ನುಜ್ಜುಗವೆಂದು ಬೇಡಿದರು ॥
ಅಜ್ಜರಂತವ ತಲೆಗೊಡಹಿ ಕೈಮುಗಿದನು । ಪಜ್ಜೆತಪ್ಪುವನೆ ಕ್ಷತ್ರಿಯನು ॥ ೧೦೬ ॥

ಕಿರಿಯರು ಪಿರಿಯರ್ಗೆ ಕಾಣ್ಕೆಯಿಕ್ಕುವುದೋಜೆ । ಬೆರೆತುಡುಗೊರೆಗೊಡರೆಂಬ ॥
ತೆರನನೀ ಬಾಲಕನೆಲ್ಲಿ ಕಲಿತನೆಂದು । ಬೆರಗಾಗಿ ನೋಡಿತಾಸ್ಥಾನಾ ॥ ೧೦೭ ॥

ಮೋಕ್ಷಗಾಮಿಯ ಪುತ್ರರವರು ತದ್ಭವದೊಳೆ । ಮೋಕ್ಷವ ಪಡೆವರವರಿಗೆ ॥
ಅಕ್ಷಣ್ಣಬುದ್ಧಿ ಚೋದ್ಯವೆ ಮರುಗಕೆ ಗಂಧ । ಲಕ್ಷಣ ಮೊಳೆಯೊಳಗಿರದೆ ॥ ೧೦೮ ॥

ಕೊಡು ವೃಷಭಣ್ಣ ನೀನವರಿಗೆನುತ ಮುಂಡೆ । ದಡಹಲಾ ತಂದೆಯು ಕೈಯಾ ॥
ಪಿಡಿದುಕೊಂಡಾ ಕರಡಗೆಯ ಮುಟ್ಟಿಸಿ ಮುಂದ । ಕೊಡನೆ ನೂಂಕಿತು ಶಿಶು ನಗುತ ॥ ೧೦೯ ॥

ನನ್ನಯ್ಯನಲ್ಲವೆ ಅವ ತಪ್ಪಿ ನಡೆವನೆ । ಇನ್ನು ನೀವಾನಿರೈಯೆಂದು ॥
ತನ್ನ ಕೈಮುಟ್ಟಿ ಕುಮಾರರಿಬ್ಬರಿಗಚ್ಚ । ರನ್ನದಾಭರಣವನಿತ್ತಾ ॥ ೧೧೦ ॥

ತಂದೆ ಕೊಟ್ಟುಡುಗೊರೆಗಳ ಕೊಂಡರೊಬ್ಬೊಬ್ಬ । ರೊಂದೊಂದು ಹಾರವ ತೆಗೆದು ॥
ಚಂದದಿ ವೃಷಭರಾಜನಿಗಿಕ್ಕಿ ಮಿಕ್ಕವ । ನಂದು ಮುಡಿಲೊಳಿಟ್ಟರೊಸೆದು ॥ ೧೧೧ ॥

ಅರರೆಯಿನ್ನೊಂದು ಬಿನದವಣ್ಣ ಮಡಿಲೊಳು । ಕರಡಗೆಯಿರಿಸಿಕೊಂಬಾಗ ॥
ಅರಮನೆಮುಟ್ಟಾನು ತಂದೀವೆನೆಂದಾಗ । ಕರವ ನೀಡಿದನಾದಿರಾಜಾ ॥ ೧೧೨ ॥

ನಿಲ್ಲಾದಿರಾಜು ನೀನಪ್ಪಾಜಿಯಿದಿರೊಳು । ಸಲ್ಲದ ನಡೆಯು ನಡೆಸುವೆ ॥
ಎಲ್ಲ ತೇಜವ ನಮ್ಮ ಮನೆಯೊಳು ಮಾಡೆನ । ಗಿಲ್ಲಿ ಸಲ್ಲದು ಸೈರಿಸೆಂದಾ ॥ ೧೧೩ ॥

ಏಕೆ ಸಲ್ಲದು ತಂದೆಯಿದಿರೊಳು ಪುಂಡರ । ಪೋಕರ ನಡೆಯೊ ಗೌರವವೊ ॥
ತೂಕದಿ ನೀವು ಚಿತ್ತೈಸಬೇಕೆನಗೆ ಸೇ । ವಾಕೃತ್ಯಗಳ ಹೇಳಬೇಕು ॥ ೧೧೪ ॥

ಅಪ್ಪಾಜಿಯರ ಕೇಳಬಾರದೆ ನಾನೆಂದು । ದಪ್ಪದೊ ಆಗದೊಯೆಂದು ॥
ತಪ್ಪಲ್ಲ ಪಾಲಿಸೆಂದಣ್ಣನ ಕರಡಗೆ । ಗೊಪ್ಪದಿ ಕೈಯು ನೀಡಿದನು ॥ ೧೧೫ ॥

ಕೊಡದೆ ತಮ್ಮನ ಕೈಯುನಣ್ಣ ನೂಂಕುವನದ । ಬಿಡೆನೆಂದು ಹಿಡಿವನಾ ತಮ್ಮ ॥
ಮಿಡುಕದೆ ಸಭೆ ಬೆರಗಾಗಿರ್ದುದವರ್ಗೆ ಸಂ । ಗಡಿಸಿದ ವಿನಯುವ ಕಂಡು ॥ ೧೧೬ ॥

ನಡೆನೋಡಿ ರಾಜೇಂದ್ರ ಮನಹಿಗ್ಗಿ ದೊಡ್ಡಣ್ಣ । ಕೊಡು ಕೊಡೈ ಸಲಲರ್ತಿಯೆಂದಾ ॥
ಜಡಿದಾದಿರಾಜ ತಾನದನೊಯ್ದುಕೊಂಡಾಗ । ಮುಡಿಲೊಳಿಟ್ಟನು ವಿಲಾಸದೊಳು ॥ ೧೧೭ ॥

ತಾವಡಕೋಲೆತ್ತಿ ತಂದೆಗೆ ಕೈಮುಗಿ । ದೋವಿ ಮುಂದಣ್ಣ ಹಿಂದನುಜಾ ॥
ಭಾವಶುದ್ಧದೊಳತ್ತ ಸಾಗಿದರಿತ್ತ ಮ । ಹಾವಿಭು ಲೀಲೆಯೊಳಿರ್ದಾ ॥ ೧೧೮ ॥

ತಿತ್ತಿರಿಗಾಳಿತಂಬಟದಿ ಪ್ರಭಾಸಾಂಕ । ನಿತ್ತಲೆಯ್ತುರುತಿರ್ದನಾಗ ॥
ಚಿತ್ತಾನುಮತಿಗೆ ಕಂದನನಿತ್ತು ನಿಜಗೃಹ । ದತ್ತ ಬೀಳ್ಕೊಟ್ಟನಾ ರಾಯಾ ॥ ೧೧೯ ॥

ರಾಮಣೀಯುಕವಾದ ಸಭೆಯ ಮಧ್ಯದೊಳಭಿ । ರಾಮವೆತ್ತಿರ್ದನಾ ಚಕ್ರಿ ॥
ವ್ಯೋಮದೊಳವನೆಯ್ದೆ ಬರುತಿರ್ದನಿದು ಪ್ರಭಾ । **ಸಾಮರಚಿಹ್ನದ ಸಂಧಿ** ॥ ೧೨೦ ॥

ಈ ಜಿನಕಥೆಯುನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವ್ವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೨೨ ॥

ಒಸಗೆಯು ಮೇಲೊಸಗೆಯನಿತ್ತು ಸತತ ಭಾ । ವಿಸುವರ ಪಾಲಿಪ ಮಹಿಮಾ ॥
ನಸುಮಾಸದೆನ್ನೆದೆಯೊಳಗಿರು ನಿಚ್ಚ ಸಂ । ತಸನೆ ಚಿದಂಬರಪುರುಷಾ ॥ ೧೨೩ ॥

---

ಪ್ರಭಾಸಾಮರಚಿಹ್ನಸಂಧಿ ಸಂಪೂರ್ಣಂ

---

# ವಿಜಯಾರ್ಧದರ್ಶನಸಂಧಿ.

ಉಸುರೆಂಬ ಕರಗಸದಿಂದ ದೇಹಾತ್ಮರ । ಬೆಸುಗೆಯ ಬಿಡಿಸಿ ನೋಡಿದರೆ ॥
ಮಸುಳದೆ ತೋರ್ಪ ಮಹಾತ್ಮ ನೀನೆನಗೊಲ್ಪ । ನೆಸಗು ನಿರಂಜನಸಿದ್ಧಾ ॥ ೧ ॥

ಬಲಗೂಡಿಬಂದು ಸಮುದ್ರದೊತ್ತಿನೊಳಾಪ್ತ । ಬಲವ ನಿಲ್ಲಿಸಿ ವ್ಯಂತರೇಂದ್ರಾ ।
ಲಲಿತವಿಮಾನದಿಂದಿಳಿದು ಚಕ್ರೇಶನ । ಬಳಿಗೈದುತಿರ್ದನತಿಯೊಳು ॥ ೨ ॥

ಪ್ರತಿಭಾಸನೆಂಬ ತನ್ನಯ ನಾಳಿನವನು ತ । ನ್ನತುಳಮಂತ್ರಿಯು ತನ್ನ ಹಿಂದೆ ॥
ಹಿತಗೈಯ್ಯ ಸುರಕೀರ್ತಿಧ್ರುವಗತಿಗಳು ಮುಂದೆ । ಗತಿಗೆಯ್ಯೆ ಗಮಿಸಿದನವನು ॥ ೩ ॥

ನೇರಿದನೊಪ್ಪಚ್ಚಿ ತೋರಿದನಿಕ್ಕಿದ । ಭೂರಿಭೂಷಣಕಾಂತಿ ಕೆದರೆ ॥
ಗೌರವರ್ಣನು ಪ್ರಭಾಸಾಮರ ಬರುತಿರ್ದ । ನಾ ರಾಜಕಟಕವ ಹೊಕ್ಕು ॥ ೪ ॥

ಕಪ್ಪಕಾಣಿಕೆಯ ವಸ್ತುವ ಮಂತ್ರಿ ಯುವರಾಜ । ರೊಪ್ಪದಿ ತಾಳ್ದೊಡನೆಯ್ದೆ ॥
ದುಪ್ಪಟಿಯುಡೆಸುತ್ತಿ ಭಯಭಕ್ತಿಯಿಂದೋಜೆ । ತಪ್ಪದೆಯ್ತರುತಿರ್ದನವನು ॥ ೫ ॥

ಇಡಿಕಿರಿದಿದ್ದಾನೆಕುದುರೆಕಾಲಾಳ್ಗಳ । ನಿಡುರತ್ನಮಯದಂಡಧರರ ॥
ಎಡಬಲದೊಳು ನೋಡುತೊಯ್ಯನೊಯ್ಯನೆ ಪಜ್ಜೆ । ಯಿಡುತಿರ್ದನಾ ವ್ಯಂತರೇಂದ್ರಾ ॥ ೬ ॥

ತೊಲಗು ಕುಳ್ಳಿರು ಧ್ವನಿವಾದವಿರೊತ್ತದಿ । ರೆಲೆ ಮಹಾಸಭೆಯುಲ್ತೆಯೆಂದು ॥
ಕಲಿಗಳದೇವ ಚೆಲ್ವರದೇವ ಜಯ ಚಾಂಗು । ಭಲಯೆನೆ ಕೇಳುತೆಯ್ದಿದನು ॥ ೭ ॥

ಇದಿರೊಳು ಚಕ್ರಿಯ ರೂಪ ಕಂಡಿವನೇನು । ತ್ರಿದಶಪತಿಯೊ ನರಪತಿಯೊ ॥
ಮದನನೊ ಚಂದ್ರನೊ ಸೂರ್ಯನೊಯೆಂದು ತ । ನ್ನೆದೆಯೊಳೆಣಿಸುತೆಯ್ದುತಿರ್ದಾ ॥ ೮ ॥

ಸರಿತವೊಳೊತ್ತಿಗೆ ಸಾರ್ದಿವನೀಗವ । ಧರಿಸು ಪ್ರಭಾಸೇಂದ್ರನೆಂದು ॥
ಸುರಕೀರ್ತಿಧ್ರುವಗತಿಗಳು ಚಕ್ರಧರಗೆತ್ತಿ । ಕರವ ಮುಗಿದು ಕಾಣಿಸಿದರು ॥ ೯ ॥

ಸ್ವಾಮಿ ಸಮುದ್ರತೀರದೊಳಿದ್ದನೆಂದಾವು । ನಾಮಮಾತ್ರವ ಪೇಳಲೊಡನೆ ॥
ಭೂಮಿಗೆ ತಾನೇ ಕೃತಾರ್ಥನೆಂದುರೆ ಪ್ರಭಾ । ಸಾಮರನರಿದನು ನೃಪತಿ ॥ ೧೦ ॥

ಮುನ್ನ ಮಾಗಧಸುರವರತನುಗಳನೊಲ್ದು । ಮನ್ನಿಸಿ ಧನ್ಯರ ಮಾಡಿ ॥
ನನ್ನನುದ್ಧರಿಸಲೆಯ್ತಂದನೆ ರಾಯರ । ರನ್ನನೆಂದರ್ತಿಮಾಡಿದನು ॥ ೧೧ ॥

ಮೊದಲ ಬಂಧುತ್ವವಂತಿರಲಿಂದು ಸ್ವಾಮಿಯ । ಭ್ಯುದಯವಾರ್ತೆಯ ತಂದಿರೆಂದು ॥
ಒದವಿದ ಪ್ರೀತಿಯೊಳಮರ್ದಪ್ಪಿಕೊಂಡೆನು । ಗುದಿತಸತ್ಕಾರವಮಾಡಿದನು ॥ ೧೨ ॥

ನಾಡ ಮಾತೇನು ಸ್ವಾಮಿಯ ಕಾಣ್ಬೆನೆಂದರ್ತಿ । ಮಾಡಿಯೆಯ್ತಂದನೆಂದುಸುರಿ ॥
ಜೋಡಿಸಿ ತಾವಿರ್ವರರಸನೊತ್ತಿನೊಳು ಮಾ । ತಾಡವೆ ನಿಂದರು ಮತ್ತೆ ॥ ೧೩ ॥

ಸೆಳೆದು ನಿವಾಳಿಯುನಿಟ್ಟು ಪ್ರಭಾಸಾಂಕ । ಬಳಿಕೊಡೆಯನ ಪಾದಗಳಿಗೆ ॥
ಪಳಪಳನಪರಂಜಿಯುರಲ ಬೆಳ್ಳಿಯು ಹೂವ । ಮಳೆಗರೆದನು ಕಾಣ್ಕೆಯೆಂದು ॥ ೧೪ ॥
ಹೇಮಮುಕ್ತಾಳಿಸಂತಾನವ ವಸುಮಣಿ । ಸ್ತೋಮವ ಕಪ್ಪವೆಂದಿರಿಸಿ ॥
ಆ ಮಂತ್ರಿಯುವರಾಜವೆರಸಿ ಸಾಷ್ಟಾಂಗಾಭಿ । ರಾಮದೊಳೆರಗಿದನೊಡನೆ ॥ ೧೫ ॥
ಆದಿತೀರ್ಥೇಶಾಗ್ರಸುಕುಮಾರ ಜಯ ಜಯ । ಆದಿಚಕ್ರೇಶ ಮಾಂ ಪಾಹಿ ॥
ಭೋ ದೇವ ಧನ್ಯೋಽಸ್ಮಿಯೆಂದೆರಗಿದ್ದನಾ । ಮೋದದಿಂದಾ ವ್ಯಂತರೇಂದ್ರಾ ॥ ೧೬ ॥
ಕರುಣದಿ ನೋಡಿ ಚಕ್ರೇಶನೇಳೇಳೆಂದ । ನಿರದೆದ್ದನಿರ್ವರು ಸಹಿತ ॥
ಹರಿಪೀಠದೊಳಗೆಸೆವರಸನಿದಿರೊಳು ನಿಂ । ದರರೆ ಕೀರ್ತಿಸಿದನೇನೆಂಬೆ ॥ ೧೭ ॥
ಎವೆಯಿಕ್ಕುವಿಂದ್ರ ಕುಂದದ ಚಂದ್ರ ಬಿಸಿಬಿಟ್ಟ । ರವಿ ತನುವಾಂತ ಮನೋಜಾ ॥
ಅವನೀಶವೇಷದೊಳೆಯ್ದಿದ್ದೆ ಜಗದ ಜಾ । ಡ್ಯವ ತೊಳೆದ್ದೆ ಸ್ವಾಮಿಯೆಂದಾ ॥ ೧೮ ॥
ಸಾಕೇತಪುರದೊಳಿದ್ದರೆ ಕಡಲೊಳಗಿದ್ದ । ನೇಕವ್ಯಂತರರು ವೈಮರೆದು ॥
ಕಾಕಪ್ಪರೆಂದೆಮ್ಮ ರಕ್ಷಿಸಲೆಯ್ದಿದ್ದೆ । ಲೋಕೈಕಮಂಗಲಯೆಂದಾ ॥ ೧೯ ॥
ಪರಮಹಂಸಾರಾಮ ತದ್ಭವಮೋಕ್ಷ ಭಾ । ಸುರನೆ ಕೇಳ್ ನಿನ್ನಯ ಸೇವೆ ॥
ಧರೆಯೊಳೆಲ್ಲರಿಗೇಕೆ ಬಹುದೆಮ್ಮ ಪುಣ್ಯಕೆ । ಸರಿಯುಂಟೆ ಸ್ವಾಮಿ ಹೇಳೆಂದಾ ॥ ೨೦ ॥
ಸುಮುಖನ್ನೆ ಬಳಲಿದ್ದೆ ಕುಳ್ಳಿರೆಂದವನ ಭೂ । ರಮಣ ಕುಳ್ಳಿರಗೊಡಿಸಿದನು ॥
ಸಮತೆಯೊಳವ ಮಂತ್ರಿಪ್ರತಿಭಾಸರೊಡಗೂಡಿ । ಗಮಕದೊಳೊಲ್ಪು ಕುಳಿತನು ॥ ೨೧ ॥

ಸುರಕೀರ್ತಿ ಧ್ರುವಗತಿ ಕುಳ್ಳಿರಿರ್ಭೆಯೆಂದು । ಭರತೇಶ ಬುದ್ಧಿ ಸಾಗರನಾ ।
ತಿರುಗಿ ನಿಟ್ಟಿಸಿದನಾ ಸಚಿವ ಕಾಲೋಚಿತ । ದಿರವರಿದಿಂತು ನುಡಿದನು ॥ ೨೨ ॥
ರಾಯ ಪ್ರಭಾಸದೇವನು ಸುವಿವೇಕಿ ನಿ । ರ್ಮಾಯ ನಿಮ್ಮಯ ಪಾದಪ್ರೀತಾ ॥
ಶ್ರೀಯನು ಭವ್ಯಸೇವೆಯ ಪಡೆದನು ದೊಡ್ಡ । ಶ್ರೀಯಾವುದವನಿಗಿನ್ನೆಂದಾ ॥ ೨೩ ॥
ಮಾಗಧಾಮರವರತನುಗಳಿಬ್ಬರೆ ಪುಣ್ಯ । ಭಾಗಿಗಳಾಗಿದ್ದರಂದು ॥
ಈಗ ಪ್ರಭಾಸೇಂದ್ರಗೂಡಿ ಮೂವರು ಪುಣ್ಯ । ಭಾಗಿಗಳಾದರೆಂದೊರೆದಾ ॥ ೨೪ ॥
ಕರ ಲೇಸನಾಡಿದ್ದೆ ಮಂತ್ರಿಯೆಂದದಕೆ ಮೂ । ವರು ಮಹಾನಂದವೆಯ್ದಿದರು ॥
ಪರಿಕಿಸು ಧ್ರುವಗತಿಸುರಕೀರ್ತಿಗಳ ಸೇವೆ । ಸುರಸವಾಯ್ತೆಂದನಾ ಮಂತ್ರಿ ॥ ೨೫ ॥
ಮನೆಗೆ ಹೋಗಲಿ ಪ್ರಭಾಸಾಮರನಿಂದು ಮೆ । ಲ್ಲನೆ ನಾವು ಮುಂದೆ ಬಿಟ್ಟೆಡೆಗೆ ॥
ಅನುಗಮಿಸಲಿ ದೇವ ಕಳುಹಚಿತ್ತೈಸೆಂದು । ವಿನಯದೊಳೊರೆದನಾ ಸಚಿವಾ ॥ ೨೬ ॥
ಕರೆದು ಪ್ರಭಾಸದೇವಗೆ ಪ್ರತಿಭಾಸಾಂಕ । ಗೆರವಿಲ್ಲದವರ ಸಚಿವಗೆ ॥
ಹಿರಿದುಡುಗೊರೆಯಿತ್ತನೋಲಗದೊಳಗಿರ್ದ । ದೊರೆಗಳೆಲ್ಲರ್ತಿಮಾಳ್ಪಂತೆ ॥ ೨೭ ॥

ಆವರ್ಗೆ ಮನ್ನಣೆಯಿತ್ತು ಸುರಕೀರ್ತಿ ಬಾರೆಲೆ । ಧ್ರುವಗತಿ ಬಾರೆಂದು ಕರೆದು ॥
ನವರತ್ನಭೂಷಣವಿತ್ತು ನೀವೆಮಗೆ ತ । ಕ್ಕವಸರದಾಳ್ಗಳೈಯೆಂದಾ ॥ ೨೮ ॥
ಅಡಿಗೆರಗಿದ ಧ್ರುವಗತಿಸುರಕೀರ್ತಿಯೊ । ಳೊಡನೆ ಕುಳ್ಳಿರಿಯೆಂದು ನುಡಿದು ॥
ನಡೆ ಪ್ರಭಾಸಾಂಕ ನಿನ್ನೂರಿಗೆಂದವನ ಬೀ । ಳ್ಕೊಡುವಷ್ಟರೊಳಗೊಂದು ಚೋದ್ಯಾ ॥ ೨೯ ॥
ಒಸಗೆ ಒಸಗೆಯೆಂಬ ಗಲಭೆ ಹುಟ್ಟಿದುದು ತಾ । ಮಸವಮಾಡಿ ಪೋಪೆ ನಾನೆಂದು ॥
ವಸುಧಾಧಿಪತಿಯ ಮುಂದವನೊಲ್ದು ಕುಳಿತನಿ । ನ್ನೊಸಗೆಯೇನೆಂಬೆನಚ್ಚರಿಯ ॥ ೩೦ ॥

ಸಂಚಯುಸಭೆಯಲ್ಲಿ ನೃಪನಿತ್ತಲಿರಲತ್ತ । ಮಿಂಚುವೆತ್ತರಮನೆಯೊಳಗೆ ॥
ಪಂಚಕಾಂತೆಯರು ಪೆತ್ತರು ಪಂಚಪುತ್ರರ । ಪಂಚರತ್ನವ ಪಡೆದಂತೆ ॥ ೩೧ ॥
ಶ್ರೀಮಾಲೆ ವನಮಾಲೆ ಗುಣದೇವಿ ಮಣಿದೇವಿ । ಹೇಮಾಜಿಯೆಂಬ ಕಾಂತೆಯರು ॥
ಕ್ಷೇಮದೊಳೈವರುಪುತ್ರರ ಪಡೆದರು । ಕಾಮನ್ನೈಸರಲ ನಗುವರಾ ॥ ೩೨ ॥
ರಾಣಿಯುರರ್ತಿವಟ್ಟೊಸಗೆಯ ನೃಪನಿದ್ದ । ತಾಣಕೆ ಕಳುಹುವದೊಂದು ॥
ಜಾಣತನವನೇನನೆಂಬೆನವರು ನೆರೆ । ಜಾಣನರ್ಧಾಂಗಿಯರಲ್ತೆ ॥ ೩೩ ॥
ಕದಬೊದವಾಗಿ ಹೆಂಗಳು ಹೋಗಿ ನೃಪಗೆ ಹೇ । ಳಿದೊಡಣ್ಣಾತಮ್ಮನಿಂತೆಂದು ॥
ಮೊದಲು ಕಡೆಯೊಳು ಹುಟ್ಟಿದರನರಿಯಬಾರ । ದದಕೆ ಯೋಚಿಸಿ ಕಳುಹಿದರು ॥ ೩೪ ॥
ಆಸ್ಥಾನದೊಳು ಸತಿಯರ ನಾಮ ಸಲ್ಲದಂ । ತಸ್ಥದೊಳ್ ಪತಿಕೇಳಲೇಕೆ ॥
ಈ ಸ್ಥಿತಿಗವರ ಹೆಗ್ಗುರುಹಿನವರನಟ್ಟಿ । ಸ್ವಸ್ಥವೆಂದೆಣಿಸಿದರವರು ॥ ೩೫ ॥
ಬಾಲರೊಬ್ಬೊಬ್ಬರ ಹಿಂದೊಗೆದಂತೆ ಶ್ರೀ । ಮಾಲೆ ಮುಂತಾದ ನಾರಿಯರ ॥
ಊಳಿಗವೆಂಗಳೈವರನೊಂದುಗೂಡದೆ । ಸಾಲಾಗಿ ಕಳುಹಿದರಾಗ ॥ ೩೬ ॥
ಒಬ್ಬೊಬ್ಬರೆಡೆಗೆ ನಾಲ್ಕೆಂಟುಮಾರಷ್ಟು ಬಿ । ಟ್ಟೊಬ್ಬುಳಿಯೊಂದೆ ಸಾಲಾಗಿ ॥
ಉಬ್ಬಿನೊಳೋಡಿ ಬಪ್ಪರ ಕಂಡು ಸುತರಾದ । ಕೊಬ್ಬೆಂದು ತಿಳಿದನಾ ಚಕ್ರಿ ॥ ೩೭ ॥
ಶ್ರೀಮಾಲೆಯೂಳಿಗದವಳೆಯ್ದಿ ನಗುತೆಲೆ । ಸ್ವಾಮಿ ನಮ್ಮಮ್ಮಾಜಿಯಿಂದು ॥
ಕೋಮಲಸುತನ ಪಡೆದರೆನಲೊಂದು ಮು । ಕ್ತಾಮಾಲೆಯಿತ್ತನವಳಿಗೆ ॥ ೩೮ ॥
ವನಮಾಲೆಯೂಳಿಗದವಳೆಯ್ದಿ ಸ್ವಾಮಿ ಚೆ । ಲ್ವೆನಿಸಲೆಮ್ಮಮ್ಮಾಜಿಯಿಂದು ॥
ತನುಜನ ಪಡೆದರೆಂದೆನಲೊಡನೊಂದು ಮು । ತ್ತಿನ ಸರವಿತ್ತನವಳಿಗೆ ॥ ೩೯ ॥
ಗುಣದೇವಿಯೂಳಿಗದವಳೆಯ್ದಿ ಮುಡ ಚತು । ರ್ಗುಣಿಸೆ ನಮ್ಮಮ್ಮಾಜಿಯಿಂದು ॥
ಗುಣರತ್ನಸುತನ ಪಡೆದರೆನಲೊಡನೊಂದು । ಗುಣಯುಕ್ತಹಾರವನಿತ್ತಾ ॥ ೪೦ ॥
ಮಣಿದೇವಿಯೂಳಿಗದವಳೆಯ್ದಿ ಚಕ್ರಿಗೆ । ಮಣಿದು ನಮ್ಮಮ್ಮಾಜಿಗಿಂದು ॥
ಮಣಿಬೊಂಬೆಯಂದದ ಮಗನಾದನೆನಲೊಂದು । ಮಣಿಹಾರವಿತ್ತನವಳಿಗೆ ॥ ೪೧ ॥

ಬಂದು ಹೇಮಾಜಿಯೂಳಿಗದವಳವ್ಮಾಜಿ । ಕುಂದಣಬೊಂಬೆಯಂತೆಸೆವ ॥
ಕಂದನ ಪಡೆದರೆಂದೆನಲವಳಿಗೆ ನಲಿ । ದೊಂದು ಮುತ್ತಿನ ಸರವಿತ್ತಾ ॥ ೪೨ ॥

ಪರಿವಿಡಿಯಿಂದೊಬ್ಬರೊಬ್ಬರಿಗೊಂದೊಂದು । ಸರವ ಸಮಾನದೊಳೀಯೆ ॥
ಭರತಚಕ್ರೇಶನಿಕ್ಕಿರ್ದ ಕೊರಳ ಕಂಚ । ಸರ ಸರಿಯಾದುದೈವರಿಗೆ ॥ ೪೩ ॥

ಪಂಚಕುಮಾರರೊಸಗೆಯ ಪೇಳ್ದವರಿಗೆ । ಪಂಚಸರವನೊಸೆದಿತ್ತು ॥
ಪಂಚಮುಖಾಸನದೊಳು ಲೀಲೆಯಿಂದಿರ್ದ । ಪಂಚಾಸ್ತ್ರನಿರ್ಜಿತರೂಪಾ ॥ ೪೪ ॥

ಅರಸನಾನಂದವನಂತಿಂತುಟೆಂಬುದಂ । ಶಿರಲಿ ಮಹಾಸ್ಥಾನದಲ್ಲಿ ॥
ನೆರೆದಿದ್ದರೆಲ್ಲರು ತವಗೆ ಚಕ್ರೇಶನ । ಸಿರಿ ಸಾರಿದಂತೆ ಹೆಚ್ಚಿದರು ॥ ೪೫ ॥

ಈ ವಿಶ್ವತೋತ್ಸಾಹವನು ನೋಡದೆಯ್ದಿ ನ । ನ್ನಾವಾಸದೊಳು ಕಾಣ್ಬುದೇನು ॥
ದೇವ ನಾನಿಲ್ಲಿಪ್ಪೆನೆಂದು ಪ್ರಭಾಸಾಂಕ । ನಾ ವೇಳೆಯೊಳು ಪೂಣ್ದು ನುಡಿದಾ ॥ ೪೬ ॥

ಪ್ರತಿಭಾಸದೇವನ ಮಂತ್ರಿಯು ಕರೆದು ನೀ । ವತಿವೇಗದಿಂದೂರಿಗೆಯ್ದಿ ॥
ಮಿತವಿಲ್ಲದುಲುಪೆ ಸಹಿತ ಬಹುದೆಂದು ಸ । ವ್ಮಾತಪ್ರಭಾಸಾಂಕ ಬೀಳ್ಕೊಟ್ಟಾ ॥ ೪೭ ॥

ಪರಿವೃತರೆಲ್ಲರನುಚಿತದಿ ಬೀಳ್ಕೊಟ್ಟು । ಗುರುನಿರಂಜನಸಿದ್ಧಯೆಂದು ॥
ಧರಣೀಶನಾಸ್ಥಾನದಿಂದೆದ್ದು ರಾಜಮಂ । ದಿರವ ಹೊಕ್ಕನು ವಿಳಾಸದೊಳು ॥ ೪೮ ॥

ತನಯರೈವರ ಮುಖದರ್ಶನಗೈದು ಲೇ । ಸೆನೆ ಜಾತಕರ್ಮವ ರಚಿಸಿ ॥
ಮನುವಂಶಭೂಷಣ ನಾಮಕರ್ಮದ ಪುಣ್ಯ । ದಿನದೊಳೊಪ್ಪುವ ಪೆಸರಿಟ್ಟಾ ॥ ೪೯ ॥

ಹಂಸರಾಜನು ನಿರಂಜನಸಿದ್ಧರಾಜ ಮ । ಹಾಂಶುರಾಜನು ರತ್ನರಾಜಾ ॥
ಸಂಸುಖರಾಜನೆಂದೈವರ ಪೆಸರಿಟ್ಟ । ಹಂಸನಾಥನ ನೆನಹಿನೊಳು ॥ ೫೦ ॥

ವಿತತಸುವಸ್ತುಗಳುಲುಪೆವೆರಸಿ ಬಂದು । ನುತನಾಮಕರಣದಿನದೊಳು ॥
ಪ್ರತಿಭಾಸದೇವನು ಚಕ್ರಿಯು ಕಂಡವ । ನತನಾಗಿ ಸಲುಗೆವಡೆದನು ॥ ೫೧ ॥

ಷಣ್ಮಾಸ ತಡೆದನಲ್ಲಿಂದ ದಂಡೇಳದೆ । ಷಣ್ಮಾಸ ತುಂಬಿದ ಮೇಲೆ ॥
ಪೊಣ್ಮೆ ಮಹಾಭೇರಿ ಸೂಳೈಸಲಲ್ಲಿಂದ । ಜಾಣ್ಮೆಯೊಳಿರ್ದನಾ ಚಕ್ರಿ ॥ ೫೨ ॥

ಹಿಮಗಿರಿಯೊಳು ಪುಟ್ಟಿ ಗಂಗೆವೊಲ್ತೆಂಕಲಾ । ಕ್ರಮಿಸಿ ಮತ್ತಪರಸಾಗರವಾ ॥
ನಿಮಿರಿ ಕೂಡಿತು ಸಿಂಧುವೆಂಬ ಮಹಾನದಿ । ಗಮಿಸಿದರದರೊತ್ತವಿಡಿದು ॥ ೫೩ ॥

ಪಡುವಣ ವಾರ್ಧಿಯ ತಡಿಯಿಂದ ದಂಡೆತ್ತಿ । ಗಡಣಿಸಿ ಮೂಡ ಮುಂತಾಗಿ ॥
ನಡೆದುದು ಕಟಕವಾ ಸಿಂಧುನದಿಯ ತೆಂಕ । ವಿಡಿದು ಮಹಾಲೀಲೆಯಿಂದ ॥ ೫೪ ॥

ಇಚ್ಛೆಯಾದೆಡೆಯೊಳು ಬಿಡುತೆತ್ತಿ ನಡೆವುತ । ಸುಚ್ಛಾಯಮಾಜಲದ ತಂಪಿನೊಳು ॥
ಅಚ್ಛಿನ್ನಕೀರ್ತಿ ಮುಂದೆಯ್ದುರುತಿರ್ದನು । ಮ್ಲೇಚ್ಛರ ಮೇಲೆ ದಂಡೆತ್ತಿ ॥ ೫೫ ॥

ಪಯಣದೊಳಲ್ಲಲ್ಲಿ ಪಡೆದ ಮಕ್ಕಳಿಗುಪ । ನಯನ ಮುಂತಾದ ಕ್ಷತ್ರಿಯರ ॥
ಕ್ರಿಯೆಗಳ ಮಾಡಿಸುತೆಯ್ತರುತಿರ್ದನ । ರ್ತಿಯೊಳಗಣಿತಪುಣ್ಯಭಾಗಿ ॥ ೪೬ ॥

ತಗ್ಗಿತೆವರು ತರುಗಿರಿಯು ದಂಡಾಯುಧ । ನುಗ್ಗೊತ್ತಿ ನಡೆವುದು ಮುಂದೆ ॥
*ಹೆಗ್ಗಡ್ಡ ಸಂದ ಭೂಮಿಯೊಳೆಯ್ದುವೊಲು ಹಿಂದೆ । ಲಗ್ಗೆಯೊಳ್ನಡೆವುದು ಸೇನೆ ॥ ೪೭ ॥

ಇಡುಕುರು ಡೊಂಗರ ಘಟ್ಟಬೆಟ್ಟದ ಸಿಕ್ಕು । ತಡೆಕೆಟ್ಟು ಸಮತಳವಾಗೆ ॥
ಕುಡಿದ ನೀರಲ್ಲಾಡದುಸುರುಬ್ಬದಾಯಾಸ । ಬಡದೆಯ್ದುತಿರ್ದುದು ಕಟಕಾ ॥ ೪೮ ॥

ಸೇನೆಗೊಡ್ಡಿದ ಗಿರಿಗಳನೊಡೆವಾಗ ನಿ । ಧಾನರತ್ನಗಳು ಸಿಕ್ಕಿದರೆ ॥
ಸೇನಾಧಿಪತಿಗೆಂದು ನೇಮಿಸಿ ನಡೆದನು । ಭೂನಾಥಗೇನದು ಘನವೆ ॥ ೪೯ ॥

ಮೂಡ ಮುಂತಾಗಿ ಹಲವು ಪಯಣದಿ ಬಂದು । ಕೂಡೆ ಬಡಗ ಮುಖವಾಗಿ ॥
ನೋಡುತ ಸಿಂಧುನದಿಯ ಸೊಬಗನು ನಲ್ಮೆ । ಗೂಡಿ ಚಕ್ರೇಶನೆಯ್ದಿದನು ॥ ೫೦ ॥

ಬಿಟ್ಟಲ್ಲಿ ಬಿಡವೆ ದಂಡೆತ್ತಿ ನಡೆಮ ರಿಪು । ರಟ್ಟಡಿಕಾರನೆಯ್ತಂದು ॥
ದಿಟ್ಟಿಗಳಿಗೆ ರಮ್ಯವೆನಿಸುವ ಬೆಳ್ಳಿಯ । ಬೆಟ್ಟವ ಕಂಡನಿದಿರೊಳು ॥ ೫೧ ॥

ನಾಡಾಡಿಗಿರಿಯಲ್ಲ ವಿಜಯಾರ್ಧಗಿರಿಯದು । ನೀಡಿ ಮೇಘವ ಮುಟ್ಟುತಿಹುದು ॥
ಮೂಡಣಪಡುವಣಬ್ಧಿಯ ಮುಟ್ಟಿ ಬೆಳ್ಳಿಯ । ಗೋಡೆಯಂತೆಸೆವುದೇನೆಂಬೆ ॥ ೫೨ ॥

ಬಿಳಿಯಾನೆಗಳವಟ್ಟ ರಂಚಿಕೆಯಂತೆಡ । ಬಲದೊಳಾ ಗಿರಿಯ ತಪ್ಪಲೊಳು ॥
ಸಲೆ ನೂರಹತ್ತುಪಟ್ಟಣವೆಸೆದಿಹುವವ । ರೊಳಗೆ ವಿದ್ಯಾಧರರಿಹರು ॥ ೫೩ ॥

ಪುರಗಳೊಳ್ ಗಗನವಲ್ಲಭಪುರ ರಥನೂ । ಪುರಚಕ್ರವಾಳವೆಂಬೆರಡು ॥
ಪುರಗಳಗ್ಗಳವಲ್ಲಿ ನಮಿರಾಜವಿನಮಿರಾ । ಜರು ಬಾಳುತಿಹರು ಸೋದರರು ॥ ೫೪ ॥

ಅವರು ಭೂಭುಜನ ಸೋದರರದ ಮಾವಂದಿರ । ಕುವರರು ಖಚರರೆಲ್ಲರನು ॥
ಅವನತಗೆಯ್ಸಿಕೊಂಡುರೆ ತವ್ಮೊಳಧಿರಾಜ । ಯುವರಾಜ ಪದವಿಯೊಳಿಹರು ॥ ೫೫ ॥

ಗಿರಿಯೆರಳ್ಬದಿಯುವೊಲೆಸೆವ ತಪ್ಪಲೊಳು ಖೇ । ಚರರಿಹರದರ ತುದಿಯೊಳು ॥
ಪರವಿಜಯಾರ್ಧಕುಮಾರನೆಂಬರಸು ಕಿ । ನ್ನರಸಿದ್ಧಯಕ್ಷಾದ್ಯರಿಹರು ॥ ೫೬ ॥

ಗಂಗೆಯು ವಿಜಯಾರ್ಧಗಿರಿಯ ಮಧ್ಯದ ವಸು । ಧಾಂಗಣ ತಾನೊಂದು ಖಂಡಾ ॥
ಸಂಗತಸಿಂಧುನದಿಯು ವಿಜಯಾರ್ಧಮ । ಧ್ಯಾಂಗಭೂತಳವೊಂದು ಖಂಡಾ ॥ ೫೭ ॥

ಆ ಖಂಡವೆರಡವು ಮ್ಲೇಚ್ಛಖಂಡಗಳು ಮ । ತ್ತಾ ಖಂಡಗಳ ತೆಂಕಲೆಸೆವ ॥
ಈ ಖಂಡ ಲವಣಾಬ್ಧಿ ಕಡೆಯಾಗಿ ಮೆರೆವುದಾ । ರ್ಯಾಖಂಡವೆಂಬ ನಾಮದೊಳು ॥ ೫೮ ॥

* ಹಿಗ್ಗುತ ತಂದೆಯೊಡನೆ ಮಕ್ಕಳ್ಪೋಪವೊಲ್.

ಇವು ಮೂರುಖಂಡಗಳಾ ವಿಜಯಾರ್ಧಸಾ । ನುವಿಗೆ ದಕ್ಷಿಣದೊಳೊಪ್ಪುವುವು ॥
ವಿವರಿಸೆ ಮೂರುಖಂಡಗಳಿನ್ನು ಬಡಗಲುಂ । ಟವಕೇನು ಮೇರೆಯೆಂದೆನಲು ॥ ೬೯ ॥
ಆ ಗಿರಿಗುತ್ತರದಿಕ್ಕಿನೊಳದಕೆ ವಿಶಾ । ಲಾಗಿ ಪೂರ್ವಾಪರಾಬ್ಧಿಗಳಾ ॥
ತಾಗಿ ಮತ್ತೊಂದಡ್ಡಗೋಡೆಯೆಂಬಂತೆ ಸಂ । ಸಾಗಿರುತಿಹುದು ಹೇಮಾದ್ರಿ ॥ ೭೦ ॥
ಎರಡುಬೆಟ್ಟಗಳ ನಡುವೆ ಮೂಡ ಪಡುವ ನೀ । ಳ್ದಿರೆ ಮೂರುಖಂಡ ರಾಜಿಪುವು ॥
ಭರತಷಟ್ಖಂಡವನಾಳುವ ದಕ್ಷನಾ । ಭರತಚಕ್ರೇಶನೇನೆಂಬೆ ॥ ೭೧ ॥
ಕೋಟೆಯೆಂದದ ವಿಜಯಾರ್ಧಕೆ ವಜ್ರಕ । ವಾಟ ಮುಟ್ಟಿಹುದದನೊಡೆದು ॥
ದಾಟಿಸಬೇಕಾಚೆಗಖಿಳಸೇನೆಯನದ । ರಾಟವ ಮುಂದೆ ಹೇಳುವೆನು ॥ ೭೨ ॥

ಯೋಚಿಸಿ ಮುಂದಣ ಕಾರ್ಯವ ನೃಪತಿ ಸೇ । ನಾಚಕ್ರಮುಖ್ಯನ ಕರೆದು ॥
ಖೇಚರಗಿರಿಗೀಚೆ ರವಿಯೋಜನದೊಳು ಸಂ । ಕೋಚದಗಳ ತೆಗೆಸೆಂದಾ ॥ ೭೩ ॥
ಇಂದು ಬೀಡಿನೊಳಿರು ನಾಳೆ ನಿನ್ನನುಜರ । ಮಂದಿರರಕ್ಷಣೆಗಿರಿಸಿ ॥
ವೃಂದವ್ಯಂತರಸೇನೆಗೂಡಿ ತೆರಳಿ ದಂಡ । ದಿಂದ ಖಾತಿಯ ತೆಗೆಸೆಂದಾ ॥ ೭೪ ॥
ಮುಚ್ಚಿದ ಪಡಿಯ ಮುಂದೊಡೆವಾಗಲೊಳಗಿರ್ದ । ಕಿಚ್ಚು ಪಸ್ನೆರಡುಗಾವುದಕೆ ॥
ಉಚ್ಚಳಿಸುವುದದು ಮುಂದೊತ್ತಿ ಬಾರದಂ । ತೆಚ್ಚತ್ತು ಗೈಸಬೇಕೆಂದಾ ॥ ೭೫ ॥
ಬಡಗುಂಪುವೆತ್ತೊಂದು ಹಗದ ಬಾಯ್ದೆರೆವಾಗ । ಪ್ರೌಢವಿಯೊಳ್ಸಿಕೆಯುಹುದರಿಯ ॥
ಕಡುದೀರ್ಘಗುಹೆ ಬಲುಕಾಲ ಮುಚ್ಚಿದ್ದು ಬಾ । ಯ್ಬಿಡುವಾಗ ಬೆಂಕಿ ದಿಂಕಿಡದೆ ॥ ೭೬ ॥
ಗುಂಡಿಂದ ಬಡಗುಂಡನೊಂದ ತಾಟಿಸಲದು । ಕಂಡತ್ತ ಕಿಡಿಗೆದರುತದೆ ॥
ದಂಡರತ್ನದಿ ವಜ್ರಬಂಧವ ತಾಟಿಸೆ । ಕೆಂಡಸೂಸುವುದಾವ ಚೋದ್ಯಾ ॥ ೭೭ ॥
ಕಟ್ಟಿಗೆಯೊಂದನೊಂದೊರಸಲೆಡೆಯೊಳಗ್ನಿ । ಹುಟ್ಟಿ ಕಾಡೆಲ್ಲ ಬೇಯುತದೆ ॥
ಬೆಟ್ಟವ ದಂಡರತ್ನದೊಳೊಡೆವಾಗಲ್ಲಿ । ಹುಟ್ಟದಿಹುವೆ ಪ್ರಳಯಾಗ್ನಿ ॥ ೭೮ ॥
ಲೌಕಿಕದೃಷ್ಟಾಂತವಿವು ಗುಹೆಯೊಳಗಗ್ನಿ । ವ್ಯಾಕೀರ್ಣಿಸುವುದದು ಸಹಜ ॥
ಆ ಕಷ್ಟಶಿಖಿಗೆ ಮುಂಗಟ್ಟೆ ನೀರಗಳಾಗ । ಬೇಕೆಂದು ಪೇಳ್ದನಾ ಪ್ರೌಢಾ ॥ ೭೯ ॥
ಕಾಲುವೆತೆಗೆಯದಿದ್ದರೆ ಕಿಚ್ಚು ಮುಂದೊತ್ತಿ । ಜ್ವಾಲೆಯು ಕೆದರುತ ಬಹುದು ॥
ಪಾಳೆಯವೆದ್ದೋಡಬೇಕಹುದದನರಿ । ದೀ ಲೆಕ್ಕದೋರಿದೆನೆಂದಾ ॥ ೮೦ ॥
ಬಪ್ಪ ಬೆಂಕಿಯು ನಮ್ಮ ಕಟಕವೆಲ್ಲವು ನಾಡ । ಸೊಪ್ಪಿಂದ ಬಡಿದರು ಕೆಡದು ॥
ಸೊಪ್ಪುದೋಟಕೆ ನೀರಹೊಯ್ದಂತೆ ಹೊಯ್ದರು । ತಪ್ಪಿ ಹೋಗದು ನೂಂಕಿ ಬಹುದು ॥ ೮೧ ॥
ಏಕಿಷ್ಟು ಪ್ರಯಾಸ ಕಾಲುವೆತೆಗೆದರಂ । ತಾ ಕಿಚ್ಚು ತಾ ನಿಲ್ಬುದಾಚೆ ॥
ವ್ಯಾಕುಲವಿಲ್ಲದಾವಿರಬಹುದೆಂದು ವಿ । ವೇಕಿಗಳರಸ ನುಡಿದನು ॥ ॥ ೮೨ ॥

ಇದು ನಮ್ಮ ಕಡೆಗಗ್ನಿ ಬಾರದ ಬಗೆ ಸಿಂಧು । ನದಿಯಿಂದ ಪಡುವ ಹತ್ತಿದರೆ ॥
ಅದು ಪ್ರಳಯಾಗ್ನಿಯಂತಿಳಿಯು ಸುಡುವುದು ನೀ । ನದಕೂ ಕಾಲುವೆಯು ಗೈಸೆಂದಾ ॥ ೮೩ ॥

ಬಡಗ ಬೆಟ್ಟವೆ ಸಾಕು ತೆಂಕ ಸಿಂಧುವಿನೆರ । ಳ್ತಡಿಮುಟ್ಟ ಕಾಲುವೆದೆಗೆಸಿ ॥
ಪಡುವ ಮೂಡೆಯ್ದಿಸಿ ನೀರ್ತುಂಬಲಾ ನೀರ । ಬಡಗಬೆಟ್ಟವ ಮುಟ್ಟಿಸೆಂದಾ ॥ ೮೪ ॥

ವ್ಯಂತರಾಗ್ರಣಿಯು ಪ್ರಭಾಸಾಂಕವರತನು । ಮುಂತಾದವರನಾಗ ಕರೆಸಿ ॥
ಎಂತೀತ ಪೇಳ್ದನಂತೆಸಗುವುದೆಂದು ನಿ । ಶ್ಚಿಂತ ನೇಮಿಸಿ ಬಿಟ್ಟನವರಾ ॥ ೮೫ ॥

ಸಾರವಲ್ಲದೆ ದೂರವಲ್ಲದೆ ವಿಜಯಾರ್ಧ । ಧಾರಿಣೀಧರದಿದಿರಿನೊಳು ॥
ಆರೈಕೆಗೊಂಡು ದುಮಾನವ ಹೊಯ್ಸಿದ । ನಾ ರಾಜಸಿಂಹನುಬ್ಬಿನೊಳು ॥ ೮೬ ॥

ಅಗಲದೊಳಗೆ ಸೇನೆ ಬಿಟ್ಟಿತು ಮನೆಗಳು । ನೆಗೆದುವೆಲ್ಲರಿಗೆ ತಕ್ಕಂತೆ ॥
ಜಗದ ಜಂಜಡದ ರಾಜ್ಯಾಂಗವೆ ಹೊಸತೊಂದು । ನಗರಿಯಾಯ್ತಾ ಕ್ಷಣದಲ್ಲಿ ॥ ೮೭ ॥

ಸುಜನೋಕ್ತಿಯಿಂದ ಸರ್ವರ ತರವರಿದೊಲ್ದು । ನಿಜನಿಜನಿಳಯಕೆ ಕಳುಹಿ ॥
ಭುಜಬಲಾಗ್ರಣಿ ರಾಜಗೃಹಹೊಕ್ಕನಿಲ್ಲಿಗೆ । **ವಿಜಯಾರ್ಧದರ್ಶನಸಂಧಿ** ॥ ೮೮ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜ ನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೮೯ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೯೦ ॥

ಅಕ್ಷೀಣ್ಣಸಾಮರ್ಥ್ಯ ಅನುಪಮಲಾವಣ್ಯ । ಮೋಕ್ಷಾಗ್ರಗಣ್ಯವರೇಣ್ಯ ॥
ಸಾಕ್ಷಾತ್ತಾಗಿ ನನ್ನೆದೆಯೊಳಗಿರು ಲೋಕ । ರಕ್ಷಾ ಚಿದಂಬರಪುರುಷಾ ॥ ೯೧ ॥

ವಿಜಯಾರ್ಧದರ್ಶನಸಂಧಿ ಸಂಪೂರ್ಣಂ

# ಕವಾಟವಿಸ್ಫೋಟನಸಂಧಿ.

ಧಾರಣೆಯೆಂದೆಂಬ ದಂಡರತ್ನದೊಳು ಕ । ಠೋರಕರ್ಮವನೊಡೆಹೊಯ್ವ ॥
ಧೀರೋದಾತ್ತ ಸನ್ಮತಿದೋರು ದುಃಖಜ । ಜ್ವಾರಾ ನಿರಂಜನಸಿದ್ಧಾ ॥ ೧ ॥

ಆಗಳ ತೆಗೆದು ನೀರ ತುಂಬಿಯೆಂಟನೆಯ ರಾ । ತ್ರಿಗೆ ಬಂದು ಸ್ವಾಮಿಯ ಕಾರ್ಯ ॥
ಮುಗಿದುದೆಂದೊಡೆಯಗೆ ಜಯರಾಜ ಕರವೆತ್ತಿ । ಮುಗಿದನು ವ್ಯಂತರರ್ವೆರಸಿ ॥ ೨ ॥

ಆದುದೈ ಲೇಸು ಲೇಸೆಂದವನಿಗು ಮಾಗ । ಧಾದಿವ್ಯಂತರವಿಭುಗಳಿಗು ॥
ಹೋದ ವ್ಯಂತರರಿಗೊಲ್ದುಡುಗೊರೆಗೊಟ್ಟು ಪ್ರ । ಮೋದದಿ ಬೀಳ್ಕೊಟ್ಟನಂದು ॥ ೩ ॥

ದಳಪತಿಸಚಿವರ ಮರುದಿನ ತನ್ನಯ । ನಿಳಯಕೆ ಕರೆಸಿ ರಾಜೇಂದ್ರ ॥
ಕಳಧೌತಗಿರಿಯ ಕವಾಟವನೊಡೆಹೊಯ್ವ । ಕಳೆಯ ನುಡಿದನಲ್ಪಮಾಡಿ ॥ ೪ ॥

ಕೇಳೆಲೆ ಮಂತ್ರಿ ಕೇಳ್ಪಡೆವಳ್ಳ ವಿಜಯಾರ್ಧ । ಶೈಲದೊಳಿಕ್ಕಿದ ಪಡಿಯಾ ॥
ನಾಳೆ ಹೋಳ್ಮಾಡಿ ಬಿಡುವೆನೊಣಗಿದ ಬರ । ಹಾಳೆಯನೊಡೆಯ ಹೊಯ್ವಂತೆ ॥ ೫ ॥

ದ್ವಾರಬಂಧವನೊಡೆಹೊಯ್ವೆನೆಂದೆನಗೊಂದು । ಬೀರವಲ್ಲದು ತೋರವಲ್ಲ ॥
ಆರು ಮಾರುವರು ಪೂರ್ವಾರ್ಜಿತಪುಣ್ಯದ । ಪ್ರೇರಣೆಯಿದ್ದುದಂತೆಂದಾ ॥ ೬ ॥

ಕೌಶಲಿಯೊಳು ನಾನು ಜನಿಸಬೇಕೆತ್ತಿ ಬಂ । ದೀ ಶೈಲವನು ದಾಂಟಿ ಮುಂದೆ ॥
ದೇಶಾಧಿಪತಿಗಳನಾಳಬೇಕೆಂಬುದಾ । ದೇಶವಲ್ಲವೆ ಗೆಲ್ವರಾರು ॥ ೭ ॥

ಶ್ರೀಹಂಸನಾಥನ ನೆನೆವುತ ನಡೆವಾಗು । ತ್ಸಾಹವಲ್ಲದೆ ಚಿಂತೆಯಿಲ್ಲ ॥
ಸಾಹಸ ಸಾರ್ವುದಲ್ಲದೆ ಭೀತಿ ಸಾರದು । ಮಾಹಾತ್ಮ್ಯವಿದ ನಂಬಿರೆಂದಾ ॥ ೮ ॥

ಹಂಸನಾಥನ ನೋಡಿ ಕರ್ಮವನೊಡೆವುದು । ಪ್ರಾಂಶುವಜ್ರದ ಕವಾಟವನು ॥
ಧ್ವಂಸನಗೈವುದು ನಿನಗಹುದುಳಿದರ್ಗ । ದೇಂ ಸದರವೆಯೆಂದರವರು ॥ ೯ ॥

ಆನೆಕೇಸರಿಗಾಡಿನಂತಿಹುದಾಡಿಗೆ । ಬಾನದಷ್ಟುದ್ದವಾಗಿಹುದು ॥
ನೀನದ ಸದರವಾಗಿರೆ ಕಂಡೆ ಮಿಕ್ಕಿನ । ಮಾನವೇಂದ್ರರಿಗಳವಹುದೆ ॥ ೧೦ ॥

ಎನಲವರಿರ್ವರಿಗುಡುಗೊರೆಯಿತ್ತು ಮೇ । ದಿನಿಪತಿ ಬೀಡಿಗೆ ಕಳುಹಿ ॥
ಜಿನಪೂಜೆಗೈದು ಹತ್ತನೆಯ ದಿನದ ಬೆಳ । ಗಿನ ಹೊತ್ತಿನೊಳು ಪೊರಮಟ್ಟಾ ॥ ೧೧ ॥

ಜಗುಳೆಗಂಟಿಕ್ಕಿದ ಬಿಗುಹಿನ ಕುಲ್ಲಾಯಿ । ಮೃಗಮದಲೇಪವೊಂಟಿಗಳು ॥
ಬಿಗಿದುಟ್ಟ ಕಾಸೆ ಚಲ್ಲಣದಿ ರಾವುತರೀವಿ । ಸೊಗಸಲೆಯ್ತಂದನಾ ರಾಯಾ ॥ ೧೨ ॥

ಕುಂಕುಮತಿಲಕ ಪೆಂಡೆಯ ನಡುವಿನೊಳು ಚಿ । ಲ್ಪಂಕೆಗೊಂಡೆಸೆವ ಹೊಂಜುರಿಗೆ ॥
ಕಂಕಣತಾವುಜದೊಳು ವೀರಲಕ್ಷ್ಮಿಯ । ಬಿಂಕದ ನಲ್ಲನೆಯ್ತಂದಾ ॥ ೧೩ ॥

ನಡುವ ಬಳಸಿ ಬಂದ ದೂವಟದೊಲ್ಲಿ ತ । ನ್ನೆಡದ ತೋಳೊಳು ಸುತ್ತಿ ನಿಮಿರೆ ॥
ಬಿಡಗಿಂದ ವೀಳೆಯಗೊಳುತ ಹಾವುಗೆಮೆಟ್ಟಿ । ನಡೆತಂದನಾ ಮೋಡಿಕಾರಾ ॥ ೧೪ ॥

ಸಿಂಗರಿಸಿದ ಪವನಂಜಯವಾಜಿಯು । ಮುಂಗಡೆಯೊಳು ತೋರಿ ಪಿಡಿಯೆ ॥
ಸಂಗರನಿರ್ಧೂತ ಚಾಂಗು ಭಲಾಯೆನೆ । ಬೆಂಗಡೆಗೊಡನೆ ಲಂಘಿಸಿದಾ ॥ ೧೫ ॥

ದೂವಟದಿಜ್ಜೊರಗನು ತೊಡೆಗಳಿಗೆ ಲೀ । ಲಾವಾಸ ಮುಂದಿಳಿವಿಟ್ಟು ॥
ಪಾವಡಗಳ ಮೆಟ್ಟಿ ವಾಘೆಗೆ ಕೈನೀಡಿ । ರಾವುತರೊಡೆಯನೊಪ್ಪಿದನು ॥ ೧೬ ॥

ಗಜ್ಜೆಯ ನವರತ್ನಮಯದ ಸಂಜೋಗ ಪ । ಳಚ್ಚನೊಪ್ಪುವ ತೇಜಿಯೇರಿ ॥
ಉಚ್ಚೈಃಶ್ರವವೆಂಬ ಹಯವೇರಿದಮರೇಂದ್ರ । ನೊಚ್ಚಯವೆಸೆಯುತೊಪ್ಪಿದನು ॥ ೧೭ ॥

ವಿದಿತಲಕ್ಷಣ ಶುದ್ಧ ಪಚ್ಚೆವಣ್ಣದ ತೇಜಿ । ಯದು ಮುಂಜನೆನಿಪುದುರ್ವಿಯೊಳು ॥
ಮದನ ಹೆಗ್ಗಾರನನೇರಿದಂತಾ ರಾಯ । ಕುದುರೆಯನೇರಿ ಮೋಹಿಸಿದಾ ॥ ೧೮ ॥

ಏಳುತೇಜಿಗಳೆಂದು ಕವಿಗಳು ಕಲ್ಪಿಸಿ । ಹೇಳುವರುದಯಭಾಸ್ಕರಗೆ ॥
ಏಳರೊಳೊಂದೆ ತೇಜಿಯನಾಯ್ದುಕೊಂಡೇರಿ । ಬಾಲಾರ್ಕ ನಿಂದಂತೆ ಮೆರೆದಾ ॥ ೧೯ ॥

ಯಜ್ಞಸೂತ್ರವನೆತ್ತಿ ಕೊರಳಿಗೆ ಸುತ್ತಿ ಸ । ರ್ವಜ್ಞನ ನೆನೆದು ಕುಂಚವನು ॥
ವಿಜ್ಞಾನಿ ಬಲಗೈಯೊಳೆತ್ತಿ ಮುಂದಶ್ವವ । ಪ್ರಾಜ್ಞರುಲಿಯೆ ನಡೆಸಿದನು ॥ ೨೦ ॥

ಸುವಿಟನ ತೊಡೆ ಸೋಂಕಿದುತ್ತಮಗಣಿಕೆಗೆ । ತವಕ ತತ್ತರಿಸುತೇಳ್ವಂತೆ ॥
ಅವನೀಶರತ್ನನ ತೊಡೆ ಸೋಂಕಲೊಡನೆ ವಾ । ರುವಮಣಿ ನಲಿದು ಕುಣಿದುದು ॥ ೨೧ ॥

ಪಾಳೆಯದೊತ್ತ ಬಿಟ್ಟೊಂದು ದಿಕ್ಕಿನ ನಿಡು । ಮಾಳಕೆ ತೇಜಿಯ ತೆಗೆದು ॥
ಲೀಲೆಯೊಳೊಂದೆರಳ್ಬೇದಿಯನೇರಿ ನೃ । ಪಾಲ ರಾವುತಿಕೆದೋರಿದನು ॥ ೨೨ ॥

ಲಯ ಧಾರೆ ಗತಿ ಜವ ಭ್ರಾಮಕವೆಂದೆಂಬ । ಹಯದ್ವೈಧುಪದ್ಧತಿಯರಿದು ॥
ದ್ವಯವಿಲಂಘನಗೂಡಿ ಸಪ್ತವೈಹಾಳಿಸಂ । ಚಯವ ಕಾಣಿಸಿದನೇನೆಂಬೆ ॥ ೨೩ ॥

ತೆಗೆದನು ಮೊದಲೊಮ್ಮೆ ನೃಪನಡ್ಡತರದೊಳಂ । ಪ್ರಿಗಳ ನುಣ್ಮಡಸನ್ನೆದೋರಿ ॥
ಗಗನದೊಳಗೆ ಮಿಂಚು ಡೊಂಕಾಗಿ ಹರಿವಂತೆ । ಸುಗಮಾಶ್ವ ಹರಿದುದುರ್ವಿಯೊಳು ॥ ೨೪ ॥

ಮುಗುಚುವ ಭರಕೆಡಬಲಕೊಲಿದಾ ತೇಜಿ । ಮೊಗಗೊಟ್ಟು ಹರಿವಾಗ ಹಯಕೆ ॥
ಮೊಗಗಳೆರಡೊ ನಾಲ್ಕೊಯೆಂಟೊ ಹೊ ಅಗಣಿತ । ಮೊಗವೊಯೆಂದೆನೆ ವಿರಾಜಿಸಿತು ॥ ೨೫ ॥

ಕೂಡೆ ವೇಷ್ಟೆಯಕೆ ತೆಗೆದನದು ಮನದರ್ತಿ । ಗೂಡಿ ಬಂದಿತು ಬಟ್ಟೆತಾಗಿ ॥
ನೋಡು ನಿನ್ನಯ ಚಕ್ರವಿಂತಿಹುದೆಂದು ಕಾ । ಲಾಡಿ ರೂಪಿಂದ ತೋರ್ಪಂತೆ ॥ ೨೬ ॥

ಭುಗುಭುಗನೊದಗಿ ಸುತ್ತಿದುದಶ್ವಮಣಿ ತೆಗೆ । ಬೊಗರಿಯಂತವನೀಶನೆಂಬ ॥
ಪಗಲೊಡೆಯನ ಪರಿಮಂಡಲದಂತೆ ದಿ । ಟ್ಟಿಗೆ ರಮ್ಯವಾಗೆ ನೋಟಕರ ॥ ೨೭ ॥

ಝೂಡಿಸಿ ಮದನನಿಚ್ಚಾರಿಗೆ ತೆಗೆಯೆ ಸಿಂ । ಗಾಡಿಯ ಬಿಲ್ಲಾಗುವಂತೆ ॥
ನೀಡಿ ತೆಗೆಯುಲೆಡಚಾರಿಗೆ ಬಲಚಾರಿ । ಗೀಡಾಗಿ ಬಂದುದಾ ತೇಜಿ ॥ ೨೮ ॥

ಬಲಿದವಳೋಪನೊಳ್ಳಸು ಮುನಿದೆಡಚಾರಿ । ಬಲಚಾರಿಯೊಳು ನೋಡುವಂತೆ ॥
ಬಲದೆಡದೆರಡು ಕಂದವ ಕೊಟ್ಟು ನೃಪನ ಕಂ । ಡೊಲೆವುತ ಸುಳಿದುದಾ ತೇಜಿ ॥ ೨೯ ॥

ಗೋಣ ಸಂಕೋಚಿಸಿಯೆಡಬಲಕೊಲೆವಾಗ । ಗೋಣ ನಿಮಿರಿ ಹರಿವಾಗ ॥
ಮೋಣದ ಕುದುರೆಯೊಯೆಂಬಂತೆ ನೃಪನ ಸಾಂ । ಬ್ರಾಣಿ ಕಂಗೆಸೆದುದೇನೆಂಬೆ ॥ ೩೦ ॥

ಲಯುವ ಭ್ರಾಮಕವನೆರಡು ತೋರುತೊಡನಿನ್ನು । ತ್ರಯಪದ್ಧತಿಯ ತೋರ್ಪೆನೆಂದು ॥
ಹಯವ ನೆರೆದ ಬೀದಿಗೊಯ್ಯನೆ ತೆಗೆದನಾ । ನಯಕಾರನೇನ ಬಣ್ಣಿಪೆನು ॥ ೩೧ ॥

ಹದಿನೆಂಟು ಕೋಟಿ ಸಾಂಬ್ರಾಣಿಗಳ್ಬಲದಲ್ಲಿ । ಮದದಾನೆ ರಥಗಳೆಡದೊಳು ॥
ಮೊದೆಗಟ್ಟಿ ಸಾಲಾಗಿ ನಿಂದಿರಲವರ ಮ । ಧ್ಯದೊಳಶ್ವವೇರಿ ತೋರಿದನು ॥ ೩೨ ॥

ಮುರುಕವ ಬಲಿದು ವಾಘೆಯನೆತ್ತಿ ಮಡಸನ್ನೆ । ಯರಿಸುತ ವಿಭು ನಡೆಸಿದನು ॥
ಕುರುವಜ್ಜೆಗಳ ಘಣಘಣನಿಟ್ಟು ಬೇರೊಂದು । ಮುರುಕದಿ ನಡೆದುದಾ ತುರಗಾ ॥ ೩೩ ॥

ತೊಡೆಯ ತಟ್ಟುವರಂತೆ ತಟಪುಟನೊದಗಿ ಕಾ । ಲಿಡುವುದು ತೆಗೆದತ್ತ ಮತ್ತೆ ॥
ಜಡನಿಲ್ಲದೊಸೆದು ನಡೆವುದದು ಬಿನದಕೆ । ಸಡುಗುಡನಾಡುವಂದದೊಳು ॥ ೩೪ ॥

ವಾದ್ಯದ ಗತಿಯೊಳು ಕುಣಿದುದು ಹೊಸತೊಂದು । ಚೋದ್ಯದ ಪಾತ್ರವೆಂಬಂತೆ ॥
ವಿದ್ಯಾಧರನ ವಿಮಾನದಂತವಗದು । ವೇದ್ಯವಾಗಿಹುದೇನನೆಂಬೆ ॥ ೩೫ ॥

ಒಪ್ಪಚ್ಚಿ ಸಡಲಿಸಿ ಕಿರಿದಿನೊಳಗೆ ಬೀದಿ । ಗಪ್ಪಿಸಿ ಮತ್ತೆ ನೂಂಕಿದನು ॥
ಕುಪ್ಪಿಕುಣಿದು ತೇಜಿ ಹರಿದುದರ್ತಿಗೆ ಹಾರು । ಗುಪ್ಪೆಯನಾಡುವಂದದೊಳು ॥ ೩೬ ॥

ಬಿರುಗಾಳಿಯಂತೆ ಹರಿವುದಲ್ಲಿಗಲ್ಲಿಗೆ । ಮರಿಹುಲ್ಲೆಯಂತೆ ಹಾರುವುದು ॥
ಕುರಿತ ಮೆಟ್ಟನೊಳು ತಿರುಗಿ ಹೊಳೆದಾಡಿ ಹೊಂ । ಮರಿಯಂತೆ ಮೊಗದೋರಿತಶ್ವಾ॥ ೩೭ ॥

ಚೆನ್ನಾಗಿ ಸಡಲಿಸಿ ಮತ್ತೆ ಬೀದಿಯೊಳು ದಾ । ಯೆನ್ನದ ಮುನ್ನಶ್ವರತ್ನಾ ॥
ಉನ್ನತವಾದ ಸೇನೆಯ ಮೀರಿ ಹೋದುದು । ಹೊನ್ನಂಬನೆಚ್ಚಂತೆ ಕ್ಷಣಕೆ ॥ ೩೮ ॥

ಅಲ್ಲಿ ನಿಂದೊಡನಿತ್ತ ಮುಖಮಾಡಿ ದಾಯೆಂಬ । ಸೊಲ್ಲಿನೊಳಿರ್ದುದೀಚೆಯೊಳು ॥
ಇಲ್ಲಿ ನಿಂದೊಡನತ್ತ ಮುಖ ಮಾಡಲಾಕ್ಷಣ । ದಲ್ಲಿ ಹೋಗಿರ್ದುದಾಚೆಯೊಳು ॥ ೩೯ ॥

ನೀಟದ ಸೇನೆಯನತ್ತಿತ್ತ ಕ್ಷಣಕೆ ನಿ । ಟ್ಟೋಟದಿ ಮೀರಿ ಸಲ್ವಾಗ ॥
ನೋಟಕರೆವೆಯಾಟ ತಡವಾದುದದರ ಕಾ । ಲಾಟದೊಳ್ತಡವಾದುದಿಲ್ಲ ॥ ೪೦ ॥

ಬಲಿದು ಚಕ್ರೇಶ್ವರ ತಡೆದ ಕಾರಣ ಹೇಳಿ । ದಳತೆಯೊಳ್ತಿರುಗಿತಾ ತೇಜಿ ॥
ಬಲಿಯದಿದ್ದರೆ ಹವಣಿಸಿ ಕಾಣ್ಬನಾರದ । ರಳವಿಗೀ ಧಾರಿಣಿ ಸಾಕೆ ॥ ೪೧ ॥

ಗತಿಧಾರೆ ಜವವಿವು ಕೂಡಿಂತು ಪಂಚಪ । ದ್ಧತಿಯ ಸೂಚಿಸಿ ಚಕ್ರಧರನು ॥
ದ್ವಿತಿಯಲಂಘನವ ತೋರುವೆನೆಂದು ಮತ್ತಶ್ವ । ಪತಿಯ ಸರಿತವ ಮಾಡಿದನು ॥ ೪೨ ॥
ಉರದ ತಾವಣಿಯ ಕಿಂಕರನೊಬ್ಬ ಸಡಲಿಸೆ । ಸರಿಬೆನ್ನನೌಂಕಿ ದಾಯೆಂದಾ ॥
ಧರೆಗೆ ಕಾಲಿಡದೊಂದು ಲಾಗಲಾಗಿಸಿತಲ್ಲಿ । ಗೆರಡಾರುಯೋಜನವಾಯ್ತು ॥ ೪೩ ॥
ಓರೊಂದು ದಿಕ್ಕಿಗೋರೊಮ್ಮೆ ದಾಯೆನೆ ನಾಲ್ಕು । ಬಾರಿ ಲಂಘಿಸಿದ ಭೂಮಿಯನು ॥
ಆರಯ್ಯಲಾಯ್ತು ನಾಲ್ವತ್ತೆಂಟು ಗಾವುದ । ವಾ ರಾಜಹಯಕದು ಸ್ವಲ್ಪ ॥ ೪೪ ॥
ಪೆಂಚಕದತ್ತ ಭಾರವನೌಂಕಿ ವಾಘೆಯ । ನುಂಚದೊಳೆತ್ತಿ ದಾಯೆನಲು ॥
ಅಂಚೆ ಬಾನಕೆ ಹಾರುವಂತೆ ಹಾರಿತು ಮುಗಿ । ಲಂಚಿಗೀರಾರುಯೋಜನವಾ ॥ ೪೫ ॥
ಬುರುಬರನಾಕಾಶಕೆದ್ದು ಮುಗುಳಿ ತೇಜಿ । ಗರಗರನಿಳೆಗಿಳಿವಾಗ ॥
ಗರುಡನನೇರಿ ವೈಹಾಳಿಮಾಳ್ಪನೊ ಚಕ್ರ* । ಧರನೆಂದು ಪಡೆ ಬೆರಗಾಯ್ತು ॥ ೪೬ ॥
ಸುರಪನುಚ್ಚೈಃ ಶ್ರವವೇರಿದಂತಿದ್ದನೆಂ । ದೊರೆದುಪಮಾನದ ಮಾತಾ
ಪರಮಾರ್ಥವೆನಿಸಿದನಾಗ ದೇವೇಂದ್ರನೆ । ಧರೆಗಿಳಿತಂದನೆನಿಸಿದಾ ॥ ೪೭ ॥
ಧರಣಿಲಂಘನಮೋಘಲಂಘನಯುಗದೊಳಾ । ಧರಣೀಶನಿನಿಸು ಜಾರಿದನೆ ॥
ತುರಗದ ಬೆನ್ನ ಮೇಲೆರಕದ ದೇವರೆ । ಯ್ತುರುತಿದೆಯೆನೆ ಸೊಗಸಿದನು ॥ ೪೮ ॥

ಏಳುವೈಹಾಳಿಯ ಸೂಚಿಸಿ ಬಿಸಿಲುರಿ । ಯೇಳದ ಮುನ್ನ ರಾಜೇಂದ್ರಾ ॥
ತೋಳ ಸನ್ನೆಯೊಳು ಪಾಳೆಯವ ನಿಲಿಸಿ ಕೂಡೆ । ಶೈಲಕೆ ದಾರಿದೆಗೆದನು ॥ ೪೯ ॥
ಪಡೆವಳ್ಳನೊಡನೆ ನಿಂದಿತು ಸೇನೆ ಗಣಬದ್ಧ । ರೊಡಗೂಡಿ ನೃಪತಿ ಹೋಗುತಿರೆ ॥
ಕಡುಗಿ ಬಂದರು ಮಾಗಧಾದಿವ್ಯಂತರಿಗರಾ । ಳ್ಗೊಡೆಯನ ಬಿಟ್ಟು ನಿಲ್ಲುವರೆ ॥ ೫೦ ॥
ಜಯರಾಜನಿಂದ ಕದವ ಕುಟ್ಟಿಸಿದನೆಂದು । ನಯಗೆಟ್ಟು ಕೆಲಬರಾಡುವರು ॥
ಹಯಗಜರತ್ನ ಪೆಂಡಿರಿಗೆ ಸಮಾನ ಕ್ಷ । ತ್ರಿಯರಾಳ ಕೈಯೊಳೇರಿಪರೆ ॥ ೫೧ ॥
ಸಾಣೆಗಳುಳಿದ ತೇಜಿಯ ತಿದ್ದುವರು ಸಾಂ । ಬ್ರಾಣಿರತ್ನವ ತಿದ್ದಿತಿಲ್ಲ ॥
ಕ್ಷೋಣೀಶರನ್ಯರ್ಗೆ ಕೊಡುವರೊ ಕೊಡರೊ ಸು । ಜಾಣರೆ ತಿಳಿವರಂತಿರಲಿ ॥ ೫೨ ॥
ಕರಿಹಯರತ್ನ ಚಕ್ರಿಯ ತೊಡೆಗಲ್ಲದೆ । ಪರರಿಗೆ ಕೊಡುವುವೆ ಬೆನ್ನಾ ॥
ಅರಸಿನ ಹಾವುಗೆ ಗದ್ದುಗೆ ಬಂಟಗೆ । ವರವಲ್ಲ ಕೊಸರೆನು ಸಾಕು ॥ ೫೩ ॥
ಚಂಡವೇಗಾಖ್ಯದ ದಂಡರತ್ನಾಯುಧ । ಖಂಡೆಯ ಕಟ್ಟಿದ ಹಯದ ॥
ಮುಂಡೆಗೆ ಕುಂಚವ ಬೀಸಿ ದಾಯೆನೆ ಪಕ್ಷಿ । ಕೊಂಡೋಡಿದಂತೊಯ್ದುದತ್ತ ॥ ೫೪ ॥

* ಚಕ್ರಿ । ಧರೆಗೆಂದು

ತಡೆತಗ್ಗುತೆವರದೇಕಿಲ್ಲವುಂಟಾದರು । ಪಡೆವಳ್ಳ ಸವರಿ ಬಂದಿರ್ದಾ ॥
ಕಡುಬೇಗದೊಳು ಬಂದು ತೇಜಿಯುಗಳ ದಾಂಟಿ । ತುಡುಕಿತಾ ಗಿರಿಯ ಹೆಬ್ಬಾಗಿಲಯಾ ॥ ೫೫ ॥

ಸೋಪಾನವಿಡಿದಲ್ಪದೂರವ ಪತ್ತಿ ಮ । ತ್ತಾ ಪರ್ವತದ ಗರ್ಭದಲ್ಲಿ ॥
ಆಪತ್ತಿನಂತಿರ್ದ ವಜ್ರ ಕವಾಟವ । ಭೂಪತಿ ತೊಟ್ಟಗೆ ಕಂಡಾ ॥ ೫೬ ॥

ನಗವದಿಪ್ಪತ್ತೈದುಗಾವುದದುದ್ದವಾ । ನಗದ ಕಿಬ್ಬಸಿರಿನ ಕದದ ॥
ನೆಗಹೆಂಟುಗಾವುದ ಪನ್ನೆರಳ್ಗಾವುದ । ದಗಲವಾಗಿರೆ ನಿಟ್ಟಿಸಿದನು ॥ ೫೭ ॥

ಭೇರಿಯಿಕ್ಕಡೆಯು ಮುಚ್ಚಿದ ಚರ್ಮದಂತೆ ಗಂ । ಭೀರಗುಹೆಯ ತೆಂಕ ಬಡಗಾ ॥
ಸೇರಿಹುವೆರಡುಕವಾಟಗಳವರೊಳಾ । ಧೀರ ಕಂಡನು ತೆಂಕಣದನು ॥ ೫೮ ॥

ರೌದ್ರವನೊಳಗಿಟ್ಟು ಬಿಮ್ಮನೆ ಬಿಗಿದಿರ್ದಾ । ಕ್ಷುದ್ರರ ಹೊಟ್ಟೆಯಂದದೊಳು ॥
ರುದ್ರಾಗ್ನಿಯೊಳಗಿದ್ದು ಬಿಗಿದಿರ್ದ ಪಡಿಯನಾ । ಚಿದ್ರೂಪರಸಿಕ ನೋಡಿದನು ॥ ೫೯ ॥

ಸದರದಿ ನೋಡಿ ಮತ್ತೊಲಿದುತಿಮಿಸ್ರನಾ । ಮದ ಗುಹೆಯಿದು ವಜ್ರಬಂಧಾ ॥
ಇದೆ ಕಾಣ ಮಾಗಧಾಂಕಿತ ವರತನುನಾಮ । ವೃದುಪ್ರಭಾಸಾಂಕ ಕೇಳೆಂದಾ ॥ ೬೦ ॥

ಅವಳಿವಡಿಗಳೊಂದುಗೂಡಿದ್ದುವೊಳಗೆ ತಾ । ಳವಗತವಾಗಿದ್ದುದಿಲ್ಲಿ ॥
ತಿವಿದರೆ ತಾಳೊಡೆವುದು ಪಡಿ ತೆರೆವುದೆಂ । ದವನೀಶ ಕಟ್ಟಿ ತೋರಿದನು ॥ ೬೧ ॥

ಹಲ್ಲ ಕೀಲಿಸಿದಂತೆ ಕೀಲದ ತುಟಿಗಳಂ । ತಿಲ್ಲಿ ಮುಚ್ಚಿವೆ ಕೊ ದ್ವಾರಗಳು ॥
ಹಲ್ಲ ಮುರಿದು ಬಾಯ ಬಿಡಿಸುವೆ ಗುಹೆಯನೆಂ । ದುಲ್ಲಾಸದೊಳು ನಕ್ಕು ನುಡಿದಾ ॥ ೬೨ ॥

ಮಂಜಿನ ಮೊತ್ತ ಮುಕ್ಕಳಿಗೊಂದು ಗಿರಿಯಾಗಿ । ಅಂಜಿಪವಂತೆ ಲೋಕದೊಳು ॥
ಜಂಜಡರಿಗೆ ವಜ್ರವಾಗಿದ್ದುದಿದು ಹುಸಿ । ಹುಂಜಿಯೈ ಕಂಡೆ ನಾನೆಂದಾ ॥ ೬೩ ॥

ಇಡುಕತ್ತಲೆಯ ಮೊತ್ತ ರವಿಗಲ್ಪವಹುದಿದು । ಸೊಡರ್ಗಳ್ಗೆಲ್ಲಕೆ ಸ್ವಲ್ಪವಹುದೆ ॥
ಪೊಡವಿಗೆಲ್ಲಕೆ ಬಲ್ಪು ನಿನಗಲ್ಪವಹುದೆಂದು । ನುಡಿದರಾ ವ್ಯಂತರೋತ್ತಮರು ॥ ೬೪ ॥

ಕಡೆಸಾರಿ ನೀವಿನ್ನು ಬೇಗದೊಳಗಳ ಮುಂ । ಗಡೆಗೆಯ್ದಿರೆಂದು ಕೈವೀಸಿ ॥
ಕಡುಪಿನ ದಂಡರತ್ನಾಯುಧಕರಸ ಕೈ । ದುಡಿಕಿದನಧಿಕವೀರದೊಳು ॥ ೬೫ ॥

ಹಾರೆಯಾಕಾರದ ಚಂಡನೇಗೆಯ ರಾಯ । ವೀರಭುಜದಿ ತೂಗಿ ನೋಡಿ ॥
ವಾರುವಾಣಿಯ ತೆಂಕಮುಖಮಾಡಿ ತೆಂಕಮು । ಖಾರವಿಂದಾಯತನಾದಾ ॥ ೬೬ ॥

ಷಟ್ಪದ್ಮದಕ್ಷರಗಳ ನೋಡಿ ಪುರುಜಿನರಾ । ಟ್ಪಾದಯುಗಲವ ನೆನೆದು ॥
ಮುಟ್ಟರಿಹೃತಚಿತ್ತದೊಳು ಹಂಸನಾಥನ । ತ್ರಿಟ್ಪರಂಪರೆಯ ಭಾವಿಸಿದಾ ॥ ೬೭ ॥

ವಾಮಹಸ್ತದಿ ವಾಘೆವಿಡಿದು ದಕ್ಷಿಣಹಸ್ತ । ಧಾವದಿಂ ದಂಡವ ಧರಿಸಿ ॥
ಆ ಮುದ್ರಿಸಿದ ಕವಾಟವ ತಿವಿಯಲು ತೂಗಿ । ನೇಮದಾಣವ ನೆಪ್ಪುಗಂಡಾ ॥ ೬೮ ॥

ಹಿಂಚಾರಿಯೊಳು ತೂಗಿ ತಿವಿದನಾ ಪಡಿ ಕೂಡೆ । ಹಂಚಿದಂತೆರಡುಹೋಳಾಯ್ತು ॥
ಕಂಚಿನ ಬೆಟ್ಟ ಹೋಳಾದಂತೆ ದನಿಯಾಯ್ತು । ಮಿಂಚಿನಂತಶ್ವ ಲಂಘಿಸಿತು ॥ ೭೯ ॥
ಸಿಡಿಲೆಂದು ವಜ್ರವೆಂದರು ಭೇದವಿಲ್ಲಾಗಿ । ಪಡಿ ವಜ್ರ ದಂಡವು ವಜ್ರ ॥
ಸಿಡಿಲು ಸಿಡಿಲ ತಾಗಿದಂತಾಯ್ತು ಭರತೇಶ । ಪೊಡೆಯೆ ಮಹಾರ್ಭಟೆ ಮಸಗಿ । ೮೦ ॥
ಜಡಿದ ಭರಕೆ ರಾಯ ಪೊಡೆದ ಭರಕೆ ಕದ । ಪೊಡೆದ ಭರಕೆ ವಿಜಯಾರ್ಧಾ ॥
ನಡುಗಿತು ನೆಲವದಿರಿತು ಕಡಲುಗಳುಕ್ಕಿ । ಬಡದೋಣಿಯಂತೆ ತುಳ್ಕಿದುವು ॥ ೮೧ ॥
ಒಟ್ಟೆದಳಿಗೆಯ ಚಿನ್ನತಿಗೋಲ ತುದಿಯಿಂದ । ಕುಟ್ಟುವನಂತೆ ಮಾನ್ಯದೊಳು ॥
ಬೆಟ್ಟಿಯ ವಜ್ರಕವಾಟವ ನೃಪ ಪೋಳು । ಗುಟ್ಟಬಿಟ್ಟನು ನಿಮಿಷದೊಳು । ॥ ೮೨ ॥
ಕೊಡುವ ಕೊಂಬಳತೆಗೊಪ್ಪದುದೊಂದು ಬಿದಿರಿನ । ಪಡಿಯು ವಾಣಿಜನೊಡೆವಂತೆ ॥
ಪಡೆ ನಡೆವುದಕಡ್ಡಲಾಗಿದ್ದ ವಜ್ರದ । ಪಡಿಯ ಪೊಯ್ದೊಡೆದನಾ ಚಕ್ರಿ ॥ ೮೩ ॥
ಬೆಟ್ಟವ ಮುಸುಕಿದ ವಜ್ರಬಂಧವದೊಂದು । ಪೆಟ್ಟನೊಳಿಬ್ಭಾಗವಾಯ್ತು ॥
ಮುಟ್ಟ ಹತ್ತೆಂಟ ನೀಡುವೆನೆನಲವನ ಕೈ । ಪೆಟ್ಟಿಗಿನ್ನೊಡ್ಡುವರಾರು ॥ ೮೪ ॥
ಬರಸಿಡಿಲೆರಗೆ ಪಾಸರೆ ಬಿರಿವಂತೆ ಪೊ । ಚ್ಚರಿಸಿ ಸೀಳಾಯ್ತು ಮತ್ತೊಡನೆ ॥
ಮೊರೆಯಿಡುವಂತೆ ಘಿರ್ರೆಂದು ಘೀಳಿಡುತಾಗ । ತೆರೆದುದಾ ವಜ್ರಕವಾಟಾ ॥ ೮೫ ॥
ಮಜ್ಜ ವಿಸ್ಮಯವ ನಾನೇನೆಂಬೆನಾ ವೈರಿ । ಜಜ್ಝರನಾ ಕವಾಟವನು ॥
ಜಜ್ಝರಿಮಾಡಲಾಗಳೆ ಕಿಚ್ಚು ಜಿಹ್ವೆಯು । ನಿಜ್ಝಾಡಿಸುತ ಹಬ್ಬಿತೊಡನೆ ॥ ೮೬ ॥
ತೂಂಬ ಕಿತ್ತರೆ ನೀರು ನೆಗೆವಂತೆ ಗುಹೆಯಲ್ಲಿ । ತುಂಬಿದ್ದ ಬೆಂಕಿ ಭೂಪತಿಯ ॥
ಬೆಂಬಳಿಯೊಳಗೆ ನಾಲಗೆ ನೀಡಿತಶ್ವ ಕ । ದುಂಬಿ ಹಾರಿತು ಮೂರುಹಾರಾ ॥ ೮೭ ॥
ಥರ್ರೆಂದು ಪಡಿ ಹಿಗ್ಗಿ ತೆರೆಯಲೊಡನೆ ಬುಸ್ಸು । ಬುರ್ರೆಂದು ಜ್ವಾಲೆ ಹಬ್ಬಿದುದು ॥
ಸುರ್ರೆಂದು ಮೊರೆದು ವಾಹನ ಬೆಚ್ಚಿ ಸಾಗಿತು । ಬಿರ್ರನೆ ಬಿರುಗಾಳಿಯಂತೆ ॥ ೮೮ ॥
ತೆಂಕಮುಖದಿ ನಿಂದ ತೇಜಿ ಲಂಘಿಸುವಾಗ । ಭೋಂಕನಗ್ನಿಯ ದಿಕ್ಕಿಗೊಲೆದು ॥
ಡೊಂಕಿ ಹಾರಿತು ತೆಂಕ ನೆಗೆದರೆ ಸಿಂಧುವು । ಧ್ಯಾಂಕಕೆ ಬೀಳ್ವುದಾದೆಣಿಕೆ ॥ ೮೯ ॥
ಎದೆ ಸಿಂಧುನದಿಗಿದಿರಾಗಿ ನಿಂದಶ್ವದ । ವದನವನೆಡಗೈಯೊಳರಸಾ ॥
ಚದುರಿಂದ ಡೊಂಕಿಸಿ ತಿವಿಯಲೊಡನೆ ಹಾರಿ । ತದು ತಿರಿಮುರಿಯೆಂಬ ಲಾಗು ॥ ೯೦ ॥
ಲಾಗೊಂದರೊಳು ದಾಂಟಿತಗಳ ಮುಂದೆರಡು ಲಾ । ಗಾಗೆ ಭೂವರನೊತ್ತಿ ತಡೆದಾ ॥
ಬೇಗೆ ನೀರಗಳಿಂದ ಮುಂದೊತ್ತಿತಿಲ್ಲ ಮುಂ । ಭಾಗೆಯೊಳ್ನಿಂದನಾ ರಾಯಾ ॥ ೯೧ ॥
ಛಿಳಿಛಿಳಿ ಛಿಟಛಿಟ ದಿಮಿದಿಮಿ ದಿಮಿದಿಮಿ । ಘುಳುಘುಳು ಬುರುಬುರುಪಲೆರು ॥
ದಳದಳ ದಗಿಭುಗಿಲೆಂದುರಿ ನೆಗೆದುದು । ಪ್ರಳಯಕಾಲದ ಕಿಚ್ಚಿನಂತೆ ॥ ೯೨ ॥

ಇಟ್ಟಣಿಸಿದ ಮರ ಗಿಡು ಬಳ್ಳಿ ಪುಲ್ಪೊದ । ರೊಟ್ಟಲ ಹತ್ತಿ ಮೇಲ್ಮುಗಿಲಾ ॥
ಮುಟ್ಟೆ ಮಹಾಜ್ವಾಲೆ ನೆಗೆದುದಗ್ನಿಯದೊಂದು । ಬೆಟ್ಟವೋಯೆಂಬ ಬಿಂಕದೊಳು ॥ ೮೩ ॥
ಇಂಡೆಯಾಡಿದವೊಲು ಕೆಂಡಗೆದರಿ ಬಿಟ್ಟ । ಖಂಡೆಯವೆನೆ ಜ್ವಾಲೆಯೆದ್ದು ॥
ಹಿಂಡುಕಾರ್ಮುಗಿಲಂತೆ ಹೊಗೆ ನಿಮಿರ್ದಾಕಾಶ । ಮಂಡಲಕೆದ್ದುದಾರ್ಭಟಿಸಿ ॥ ೮೪ ॥
ದಳ್ಳುರಿಯೆದ್ದುದ ಕಂಡು ವಿದ್ಯಾಧರ । ರಳ್ಳೆವೊಯ್ದರು ಮ್ಲೇಚ್ಛನೃಪರು ॥
ತಳ್ಳಂಕಗೊಂಡರು ವಿಜಯಾರ್ಧದೇವನು । ಡಿಳ್ಳೈಸಿ ಮಂಡೆದೂಗಿದನು ॥ ೮೫ ॥
ಪಡಿವೊಡೆದಾರ್ಭಟಿಗೇಳ್ವಾಗಳೆದೆ ದುಮ್ಮು । ದುಡುಕೆಂದುದವರಿಗೆ ಮೊದಲೆ ॥
ಸಿಡಿಲ ಸೇತುವಿನಂತೆ ಜ್ವಾಲೆಯೆದ್ದುದ ನೋಡಿ । ಸಿಡಿಮಿಡಿಗೊಂಡರತ್ತಿತ್ತ ॥ ೮೬ ॥
ಮಾಗಧೇಂದ್ರಾದಿಗಳಚ್ಚರಿವಟ್ಟರು । ಕೂಗಿ ಬೊಬ್ಬಿರಿದುದು ಕಟಕಾ ॥
ತೂಗಿ ವಾಹನರತ್ನ ಕುಣಿಯೆ ಕಂದವ ತಟ್ಟು । ತಾಗ ಭೂಪತಿ ನೋಡುತಿರ್ದಾ ॥ ೮೭ ॥

ಚಂಡವೇಗೆಯ ನೆಲದೊಳು ನೆಟ್ಟ ವ್ಯಂತರ । ಮಂಡಳಿಕರ ಬಳಸಿನೊಳು ॥
ಕೆಂಡದೇಳ್ಗೆಯ ನೋಳ್ಪ ಚಕ್ರಿಗೆ ಮತ್ತೊಂದು । ಮಂಡಿತೋತ್ಸವವನೇನೆಂಬೆ ॥ ೮೮ ॥
ವಿಜಯಾರ್ಧದೇವನಾಗಳೆ ತನ್ನ ದೇವತಾ । ವ್ರಜಗೂಡಿ ಬಂದು ಬಾನದೊಳು ॥
ವಿಜಯಲಕ್ಷ್ಮಿಯ ನಲ್ಲ ಜಯ ಜಯಯೆಂದು ಭೂ । ಭುಜಗೆ ಹೂಮಳೆಯ ಸೂಸಿದನು ॥ ೮೯ ॥
ಸಲೆ ಗರ್ಭಸುಖಿಗಿಂದು ಸೆಕೆ ತಾಗಿತೆಂದು ಹೂ । ಮಳೆಯ ಕರೆದ ನಿಲ್ಲದೊಡನೆ ॥
ಮಲಯಜರಸದ ಕಪ್ಪುರದ ಪನ್ನೀರ ಮುಂ । ಮಳೆಯ ಕರೆದನರ್ತಿಯಿಂದ ॥ ೯೦ ॥
ಕಿನ್ನರಕಿಂಪುರುಷರು ಹಾಡಿದರು ರಾಯ । ರನ್ನನ ತೋಳ ಬಲ್ಮೆಯನು ॥
ಸನ್ನಿಧಿಯೊಳು ನಿಂದು ಗಂಧರ್ವಗಣಿಕೆಯ । ರುನ್ನತನೃತ್ಯವಾಡಿದರು ॥ ೯೧ ॥
ಬಳಿಕಲಾ ವಿಜಯಾರ್ಧದೇವ ತನ್ನಯ ದೇವ । ಬಲಗೂಡಿ ನೃಪನ ಸಮ್ಮುಖಕೆ ॥
ಅಳವಟ್ಟ ತೊಡಿಗೆಯ ಹೊಳಹಿಂದ ಮಿಂಚಿನ । ಬಳಗ ಬಹಂತೊತ್ತಿ ಬಂದಾ ॥ ೯೨ ॥
ಇಟ್ಟು ನಿವಾಳಿಯ ಕೊಟ್ಟು ಕಾಣಿಕೆಯ ಬಾಂ । ಬಟ್ಟೆಯೊಳ್ಮಣಿದೆದ್ದು ನಿಂದಾ ॥
ದಿಟ್ಟರ ದೇವ ಚೆಲ್ವರ ದೇವ ನಮ್ಮಯ । ದಿಟ್ಟಿ ಸಫಲವಾದುದೆಂದಾ ॥ ೯೩ ॥
ಮಣಿಪೀಠ ಭೃಂಗಾರ ಛತ್ರ ಚಾಮರಗಳ । ಮಣಿದೊಡಿಗೆಗಳೊಳುತ್ತಮವಾ
ಗಣಬದ್ಧರಾನಲು ಪಾಗುಡವಿತ್ತಾಪ್ತ । ಗಣವನೆಲ್ಲವನೆರಗಿಸಿದಾ ॥ ೯೪ ॥
ದೊರೆ ಮಾಗಧಾಂಕನ ನೋಡಿದನವನು ದೇ । ವರ ಸೇವೆಗೀತ ತಕ್ಕವನು ॥
ಸುರಪನು ವಿಜಯಾರ್ಧದೇವನು ಬೇಗ ಬಂ । ದಿರವ ಲಾಲಿಸು ಸ್ವಾಮಿಯೆಂದಾ ॥ ೯೫ ॥
ಆಗರ್ಗಿ ಬಂದೆವು ಮಾಗಧಾಮರ ಮೋಕ್ಷ । ಮಾರ್ಗಿಯನೋಲೈಪ ಭಾಗ್ಯಾ ॥
ಆರ್ಗೆ ಸಿಕ್ಕುವುದು ನೀವಾವು ಕೃತಾರ್ಥರೆಂ । ದೊರ್ಗಿನ ಮಾತನಾಡಿದನು ॥ ೯೬ ॥

ನಿಳಯಕೆ ಹೋಗಲಿನ್ನುತ್ತರಖಂಡಕೆ । ದಳ ನಡೆವಾಗೀತ ಬರಲಿ ॥
ಕಳುಹಬಿತ್ತೈಸೆಂದು ಮಾಗಧಾಮರನು ಭೂ । ತಿಲಕಗೆ ಬಿನ್ನವಿಸಿದನು ॥ ೯೭ ॥
ಸೋಂಕಿಗೆ ಕರೆದು ತಾನಿಕ್ಕಿದನರ್ಘ್ಯದ । ಕಂಕಣಗಳ ಕೊಟ್ಟನವಗೆ ॥
ಅಂಕಿತಾಳಾಪದಿ ಬೀಳ್ಕೊಡೆ ಬಲಗೂಡಿ । ಭೋಂಕನೆ ಹೋದನಾ ದೇವಾ ॥ ೯೮ ॥

ಅತಿಶಯ ಮತ್ತೆ ತಮಿಸ್ರಗುಹೆಯ ಮೇಲೆ । ಸತತನಿವಾಸಿಯಾಗಿರ್ಪ ॥
ಕೃತಮಾಳದೇವ ಸಾಷ್ಟಾಂಗದೊಳೆರಗಿ ಭೂ । ಪತಿಯ ಕಂಡನು ಕಾಣ್ಕೆಯಿಕ್ಕಿ ॥ ೯೯ ।
ತಿಲಕ ಮುಂತಾದ ಚತುರ್ದಶಭೂಷಣ । ಗಳನೊಲ್ದು ಪಾಗುಡವಿತ್ತು ॥
ಹಲವು ಪರಿಯಲಿ ಕೊಂಡಾಡಿ ತನ್ನಯ ದೇವ । ಬಲವ ಭೂವರಗೆರಗಿಸಿದಾ ॥ ೧೦೦ ॥
ಈತನೆಮ್ಮಯ ಬಂಧು ಕೃತಮಾಳಸುರನು ವಿ । ನೀತನು ನಿನ್ನ ಸೇವೆಯೊಳು ॥
ಪ್ರೀತನೆಂದೊಡೆಯಗೆ ಮಾಗಧಾಮರನು ಸಂ । ಪ್ರೀತಾರ್ಥ ಬಿನ್ನವಿಸಿದನು ॥ ೧೦೧ ॥
ಪಾಳೆಯ ತೆರಳ್ವಾಗ ಬರಲೀತ ಕಳುಹಿಂದಿ । ಗಾಲಯಕೆಂದು ಸೂಚಿಸಿದಾ ॥
ತೋಳ ತಾವುಜವ † ಬಿಟ್ಟರಸನಾತಗೆ ಕೊಟ್ಟು । ಬೀಳುಗೊಟ್ಟನು ಸೇನೆ ಸಹಿತ ॥ ೧೦೨ ॥

ಒಡೆಯನಂಗವ ಗಣಬದ್ಧರು ದುಗುಲದಿ । ತೊಡೆದು ವಸ್ತ್ರಾಭರಣಗಳಾ ॥
ಉಡಿಸಿ ತೊಡಿಸಿ ಮತ್ತೆ ನೋಡಿದರೊಸೆದು ಕ । ನ್ನಡಿಯ ಬೆಳಗಿ ನೋಳ್ಪರಂತೆ ॥ ೧೦೩ ॥
ಬೆಟ್ಟತೋರಿತು ಬಿಸಿಲಿನ್ನೆಯ್ದು ಕಟಕಸಂ । ಘಟ್ಟಕೆಂದವರು ಬಿನ್ನೈಸೆ ॥
ನೆಟ್ಟ ದಂಡವ ಕಿತ್ತು ಸಂಜೋಗದೊಳು ಸಿಕ್ಕಿ । ತೊಟ್ಟನಶ್ವವ ತಿರುಹಿದನು ॥ ೧೦೪ ॥
ಅಮರವಾದ್ಯದ ಗಲಭೆಯೊಳು ನೂತನಛತ್ರ । ಚಮರ ಮುಂತಾದ ಶೋಭೆಯೊಳು ॥
ಅಮರಸೇನೆಯೊಳೆಯ್ದುತಿದ್ದನಾ ನರಲೋಕ । ದಮರೇಂದ್ರ ತನ್ನ ಕಟಕಕೆ ॥ ೧೦೫ ॥
ನಿಮಿಷದಿ ಕಟಕಕೆ ತಂದುದಾ ತೇಜಿ ಸಂ । ಭ್ರಮದೊಳಿದಿರುಗೊಂಡರೆಲ್ಲ ॥
ಮಮತೆಯೊಳೆಲ್ಲರ ನೋಡುತ ಮನುಜೇಂದ್ರ । ಗಮಿಸುತಿರ್ದನು ಪಾಳೆಯದೊಳು॥ ೧೦೬ ॥
ರಾಜಗೆ ಸುಖವಾಗೆ ರಾಜ್ಯಕೆ ಸುಖವೆಂಬ । ರಾಜನೀತಿಯ ಮಾತಿನಂತೆ ॥
ರಾಜೇಂದ್ರ ನಲವಿನೊಳೆಯ್ತರೆ ನೋಡಿ ನಾ । ನಾಜನ ಗೆಲವೇರಿತಾಗ ॥ ೧೦೭ ॥
ಹರುಷದಿ ಮುಂದು ಮೂವರು ಸುತರೆಯ್ತಂದು । ತರದಿ ನಿವಾಳಿಯನಿಟ್ಟು ॥
ಶಿರದ ಮೇಲೆತ್ತಿ ಕೈಮುಗಿಯೆ ಚಕ್ರೇಶ್ವರ । ಸಿರಿದರ್ಶಿಯಿಂದ ನೋಡಿದನು ॥ ೧೦೮ ॥
ನಗೆಮೊಗದಿಂದ ನಿಟ್ಟಿಸಿ ನೀವು ನಿಮ್ಮ ತೇ । ಜಿಗಳೇರಿರೆಂದು ಸೂಚಿಸಿದಾ ॥
ಸುಗುಣಾರ್ಕಕೀರ್ತ್ಯಾದಿರಾಜವೃಷಭರಾಜ । ರೊಗೆದೇರಿ ಬಂದರೊತ್ತಿನೊಳು ॥ ೧೦೯ ॥
ದಂಡೇಶ ಮಂತ್ರಿ ಸಹಾಯರು ದೊರೆಗಳು । ಚಂಡಕ್ಷತ್ರಿಯರು ಲೆಕ್ಕಿಗರು ॥
ತಂಡತಂಡಾಗಿ ನಿವಾಳಿಯಿಟ್ಟರಗೆ ಸಾ । ಲ್ಗೊಂಡು ನೋಡುತ ಬರುತಿರ್ದಾ ॥ ೧೧೦ ॥

† ನಿತ್ತರಸ ಬೀಳ್ಕೊಡೆ ಕೃತ । ಮಾಳ ಹೋದನು ಸೇನೆಸಹಿತ ॥

ಕರವೆತ್ತಿ ಮುಗಿವ ಸೂಳೆಯರ ಭೃತ್ಯರ ಹಸ್ತಿ । ತುರಗವಾಹನರ ಸ್ಯಂದನರಾ ॥
ಪರದರ ನೋಡುತ ಮೆಲ್ಲಮೆಲ್ಲನೆ ರಾಯ । ಬರುತಿರ್ದನರಮನೆಗಾಗಿ ॥ ೧೧೧ ॥
ಭಟ್ಟರು ಹೊಗಳೆ ಪಂಡಿತರು ಲೇಸೆನೆ ಕೃತಿ । ಗಟ್ಟಿ ಕಬ್ಬಿಗರು ಶೇಖರಿಸೆ ॥
ಕಟ್ಟಿಗೆಕಾರರಾರೈಕೆ ಪರಾಕೆನೆ । ನಿಟ್ಟಿಸುತೆಯ್ತರುತಿರ್ದಾ ॥ ೧೧೨ ॥
ತಗರಂತೆ ತಾಗುತ ಫಣಿಯಂತೆ ಸೆಣಸುತ । ಜಗುಳುತ ಮತ್ಸ್ಯಗಳಂತೆ ॥
ಮಿಗದಂತೆ ನೆಗೆದು ಸಾಧನೆದೋರಿ ನಡೆವ ಜ । ಟ್ಟಿಗಳ ನೋಡುತ ಬರುತಿರ್ದಾ ॥ ೧೧೩ ॥
ಅರಮನೆಯಿದಿರಲಿ ತೇಜಿಯ ನಿಲಿಸಿ ವ್ಯಂ । ತರರುಳಿದೆಲ್ಲರ ಕಳುಹಿ ॥
ಸುರರಿತ್ತ ಹಾರದೊಳೊಂದೊಂದನಿಕ್ಕಿ ಮೂ । ವರುತನೂಜರನು ಬೀಳ್ಕೊಟ್ಟಾ ॥ ೧೧೪ ॥
ಕಂದವ ತಟ್ಟಿ ಬೋಳೈಸಿ ತೇಜಿಯ ಭಕ್ತಿ । ಯಿಂದಾದಿನಾಥನ ನೆನೆದು ॥
ಕುಂದಣಸೆಳೆಯೆತ್ತಿ ಚಾಂಗು ಭಲಾಯೆನೆ । ಮುಂದೆ ಭೂತಳಕೆ ಲಂಘಿಸಿದಾ ॥ ೧೧೫ ॥
ತೇಜಿಯ ಮನ್ನಿಸವೇಳುತ ಗಣಬದ್ಧ । ರಾಜಿ ಮುಂತಾದ ವ್ಯಂತರರಾ ॥
ಪೌಜಿಗೊಲ್ದುಡುಗೊರೆಯಿತ್ತು ಬೀಳ್ಕೊಟ್ಟನಾ । ರಾಜ ಹೊಕ್ಕನು ರಾಜಗೃಹವಾ ॥ ೧೧೬ ॥
ಅರಸಿಯರಾನಂದವಂತಿಂತುಟೆಂದಾಡ । ಲರಿದು ಸಂತೋಷಸಾಗರದ ॥
ತೆರೆಯೊತ್ತಿ ಬಪ್ಪಂತೆ ಬಂದು ನಿವಾಳಿಯಿ । ಟ್ಟರಸಗಾರತಿಯನೆತ್ತಿದರು ॥ ೧೧೭ ॥
ಹಂಸರಾಜನು ಮೊದಲಾದೈವರಣುಗರು । ಹಂಸೆಯ ಮರಿಗಳಂತೆಯ್ದಿ ॥
ಅಂಶುಕವಿಡಿದಯ್ಯಯೆನಲಪ್ಪಿಕೊಂಡನ । ದೇಂ ಸಿರಿವಂತನೊ ಚಕ್ರಿ ॥ ೧೧೮ ॥
ಮತ್ತಿನ ಮಕ್ಕಳ ಮುದ್ದಾಡಿ ಪೆಂಡಿರ । ಮೊತ್ತಕಾ ದಿನ ತಾನು ನೆಗಳ್ದ ॥
ವೃತ್ತಾಂತವನಿಷ್ಟು ಸೂಚಿಸಿ ಸೌಖ್ಯಸಂ । ಪತ್ತಿನೊಳಿರ್ದನಾ ಸುಕೃತಿ ॥ ೧೧೯ ॥
ಊಟವಿವಾಹಗಳಾದಿಯಾದ ಕಾಲೋಚಿತ । ದಾಟದೊಳಾ ಚಕ್ರವರ್ತಿ ॥
ಮಾಟುಜವ್ವನೆಯರೊಳಿರ್ದನೆಂಬೆಡೆಗೆ **ಕ । ವಾಟವಿಸ್ಫೋಟನಸಂಧಿ** ॥ ೧೨೦ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೧ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೨ ॥
ಕೆತ್ತಿ ಮಿಥ್ಯತ್ವದ ಕದವನೊಡೆದು ಮುಕ್ತಿ । ಗುತ್ತುಂಗಧೈರ್ಯದಿ ನಡೆವ ॥
ಚಿತ್ತಸಂಧಾನಿ ನನ್ನೆದೆಯೊಳಿರೆನ್ನ ಸಂ । ಪತ್ತೆ ಚಿದಂಬರಪುರುಷಾ ॥ ೧೨೩ ॥

ಕವಾಟವಿಸ್ಫೋಟನಸಂಧಿ ಸಂಪೂರ್ಣಂ

# ಕುಮಾರವ್ಯೈಹಾಳಿಸಂಧಿ.

---

ನಿಚ್ಚಸಮಾಧಿಭಾವನೆಯಿಂದ ಸುಖದುಃಖ । ಹೆಚ್ಚುಕುಂದೆಂಬಿವ ಗೆಲ್ವ ॥
ಸಚ್ಚರಿತಾತ್ಮ ಸನ್ಮತಿದೋರು ಭವ್ಯರ । ಮೆಚ್ಚೆ ನಿರಂಜನಸಿದ್ಧಾ ॥ ೧ ॥

ಜಯನ ಕರೆಯೊ ಜಯನನುಜನ ಕರೆಯೊ ಆ । ಲಯಕೆಂದು ಮಾರುದಿನ ಕರೆಸಿ ॥
ಜಯಸಿರಿಯೊಡೆಯನಾ ಚಕ್ರೇಶನವರಿಗೆ । ನಿಯಮವನಿತ್ತನೇನೆಂಬೆ ॥ ೨ ॥

ಬೇಗೆಯಾರುಪೂಡಾರುತಿಂಗಳು ತಡವುಂಟು । ಹೋಗಬಹುದು ಮುಂದೆ ಮತ್ತೆ ॥
ಈಗ ನೀವೆರಡುಖಂಡದ ಮ್ಲೇಚ್ಛದವರುಕ್ಕ । ನೀಗಾಡಿ ತಹುದಿಲ್ಲಿಗೆಂದಾ ॥ ೩ ॥

ಮೂಡಣ ಖಂಡಕೆ ನೀನೆಯ್ದು ಪಡುವಣ । ನಾಡಿಗೆ ವಿಜಯಾಂಕ ಸಾಕು ॥
ಬೀಡಿನಾರೈಕೆಯ ಕಿರಿಯ ಜಯಂತಾಂಕ । ನೋಡಿಕೊಂಡಿರಲೆಂದು ನುಡಿದಾ ॥ ೪ ॥

ವೆಗ್ಗಳವಾಗಿ ಸೇನೆಯ ಕೊಂಡು ಹೋಹುದು । ಮೊಗ್ಗಾಗಿ ನಡೆದು ಗೆಲ್ಲುವುದು ॥
ನೆಗ್ಗಿಹುದವರಿಗಾಗಳೆ ಕಿಚ್ಚ ಕಂಡೆಸೆ । ಭೊಗ್ಗನಿನ್ನೆಯ್ದಿ ನೀವೆಂದಾ ॥ ೫ ॥

ಸೋಪಾನವಿಡಿದು ಗಂಗೆಯ ದಾಂಟುವುದು ಸಿಂಧು । ಸೋಪಾನಕುರಿ ಬಿರಿಸೀಗ ॥
ಸ್ಥಾಪಿಸಿ ಚರ್ಮರತ್ನದಿ ಪಾಯ್ವುದೆಂದು ನಿ । ರೂಪಿಸಿದನು ನರನಾಥಾ ॥ ೬ ॥

ಅವರ ಬೀಳ್ಕೊಟ್ಟವನೀಶನಾ ಕಟಕದೊ । ಳವಿರಳಲೀಲೆಯೊಳಿರ್ದಾ ॥
ಧವಳಗಿರಿಯೊಳಿತ್ತ ನಮಿರಾಜ ಚಿಂತೆಯೊ । ಳವಗತನಾದನೇನೆಂಬೆ ॥ ೭ ॥

ಮಿಗೆ ರಥನೂಪುರಚಕ್ರವಾಳಾಖ್ಯದ । ನಗರಿಯ ವಿನಮಿರಾಜೇಂದ್ರಾ ॥
ನೆಗೆದುರಿಗಂಡು ಸಂತಸದಲಿ ಹೋದನು । ಗಗನವಲ್ಲಭವೆಂಬ ಪುರಕೆ ॥ ೮ ॥

ಬಳಿಯಟ್ಟೆ ಮಂತ್ರಿಯ ಬರವ ಹಾರುತ ತನ್ನ । ನಿಳಯದೊಳಗೆ ಮೋನದಲ್ಲಿ ॥
ಕುಳಿತಿರ್ದ ನಮಿರಾಜನೆಡೆಗೆಯ್ದಿ ವಿನಮಿ ಕೈ । ಗಳ ಮುಗಿದುಬ್ಬಿನೊಳ್ನುಡಿದಾ ॥ ೯ ॥

ಕೇಳ್ದಿರೆ ವಜ್ರಕವಾಟವ ಭಾವಾಜಿ । ಘೋಳ್ಪುಬಿಟ್ಟನು ನಿಮಿಷದೊಳು ॥
ನೀಳ್ದುದಾಕಾಶಕೆ ದಳ್ಳುರಿಯೆಂದರ್ತಿ । ದಾಳ್ದು ನುಡಿದನಣ್ಣನೊಡನೆ ॥ ೧೦ ॥

ಕುಟ್ಟಿದ ರಭಸಕೆ ಬೆಟ್ಟವದಿರಲೆಮ್ಮ । ಪಟ್ಟಣದರಸುಗಳೆಲ್ಲ ॥
ತೊಟ್ಟಿಲ ಮಕ್ಕಳಂತಿಳೆಗೆ ಬಿದ್ದರು ಹೆಮ್ಮೆ । ವಟ್ಟಿರ್ದ ಗದ್ದುಗೆಯಿಂದ ॥ ೧೧ ॥

ಪರಿವ ಬೆಳ್ಮುಗಿಲು ಕಿಚ್ಚಿನ ನಾಲಗೆಗೆ ಸಿಕ್ಕಿ । ಮರಳಿಯಂತುರಿದುಹೋಗುತದೆ ॥
ತಿರುಗಲಮ್ಮರು ಮೇಲೆ ಸುರರು ಭಾವಾಜಿಗೆ । ಸರಿಯುಂಟೆ ಅಣ್ಣಾಜಿಯೆಂದಾ ॥ ೧೨ ॥

ಹುಸಿನಗೆನಕ್ಕನದಕೆ ನಮಿರಾಜ ಸಂ । ತಸವಾಡಿತಿಲ್ಲವಷ್ಟರೊಳು ॥
ಒಸೆದು ಬಂದನು ಮಂತ್ರಿ ಕುಳ್ಳಿರೆಂಬನುಜನ । ಸಸಿನಿನ್ನು ಕುಳ್ಳಿರೈಯೆಂದಾ ॥ ೧೩ ॥
ಸಂತೋಷದೊಳಗೇಕೆ ಸಂಕ್ಲೇಶ ಭಾವಾಜಿ । ಗಂತಾದ ಸಿರಿ ನಮ್ಮದಲ್ತೆ ॥
ಚಿಂತೆಯೇಕೀಗ ನಿಮ್ಮಾಸ್ಯಕೆಂದೊಡನಣ್ಣ । ನಂತರಂಗವ ಮುಟ್ಟಿ ಕೇಳ್ದಾ ॥ ೧೪ ॥
ಮಕ್ಕಳಾಟಿಕೆಯುಲಾ ನಿನಗೆ ರಾಜಾಂಗದ । ದಿಕ್ಕಿನ್ನು ತೋರಿತಿಲ್ಲನುಜಾ ॥
ಮಿಕ್ಕು ನುಡಿಯದಿರೀ ನುಡಿಗಳ ಹೊರಗೆಂದು । ಚಿಕ್ಕವಗೋಜೆವೇಳಿದನು ॥ ೧೫ ॥
ಭಾವಾಜಿಯೊಂದು ಪೌರುಷಕೆ ಬೀಗಿದೆ ನಿನ್ನ । ಭಾವಾಜಿ ಷಟ್ಖಂಡದೆರೆಯಾ ॥
ಭೂವರಾವಳಿ ತನ್ನನೋಲೈಸಬೇಕೆಂಬ । ನಾವು ಸೇವಕರಾದೆವಿನ್ನು ॥ ೧೬ ॥
ಒಂದಾಗಿ ಕುಳಿತೊಮ್ಮೆ ಸರಸದಿ ನೀನುತಾ । ನೆಂದೆಂಬ ನುಡಿ ಹೋದುದೆಮಗೆ ॥
ನಿಂದು ಕಾಣ್ಕೆಯನಿಕ್ಕಿ ಕಂಡಯ್ಯ ಜೀಯ ಲೇ । ಸೆಂದೆಂಬ ನುಡಿ ಬಂದಿತೆಂದಾ ॥ ೧೭ ॥
ಸರಿಸಿರಿಯಾದಾಗ ಬೀಯಗರೆಂಬರು । ಸಿರಿ ಹೆಚ್ಚಿದವರು ಬೀಯಗರಾ ॥
ಕರೆವರು ತೊಂಡರ ಕರೆವಂತೆ ಕ್ಷತ್ರಿಯ । ರಿರವಿನ್ನು ನಿನಗೆ ಕಾಣಿಸದು ॥ ೧೮ ॥
ಬಾಲತ್ವವೊದಲಾಗಿ ಭರತೇಶನೊಳಗ ನಾ । ವಾಲಿಸಿದವರಲ್ತೆ ಅರಿಯ ॥
ಭೂಲೋಕದೊಳಗಿಲ್ಲವವನ ವಿಡಾಯ ನಾ । ನಾಲೋಚಿಸುವೆನದಕೆಂದಾ ॥ ೧೯ ॥
ಚೆಂಡಾಟದೊಳಗೋದುಗರುಡಿಯೊಳ್ಗೆಲವ ತಾ । ಕೊಂಡುಹೋಗುವನೆಮ್ಮ ಮೇಲೆ ॥
ಇಂಡೆಯ ಹೊರಿಸಿ ಹೋಗುವನದು ಕಡೆಮುಟ್ಟ । ಕಂಡ ಸಾಧನವಾದುದವಗೆ ॥ ೨೦ ॥
ಗೆಲವ ಪಡೆದು ತಾನು ಜಾರುವ ನಾವೊಮ್ಮೆ । ಗೆಲವ ಪಡೆದು ಪೋಪೆವೆನಲು ॥
ತೊಲಗಲೀಸನು ಮತ್ತು ಹಿಡಿದಾಡಿ ಸೋಲಿಸಿ । ಗೆಲುಗೆಲೆನುತ ಹೋಗುತಿಹನು ॥ ೨೧ ॥
ಅವನೊಮ್ಮೆ ಗೆದ್ದರೆ ಮೇಳದ ಮಕ್ಕಳು । ತವತವಗುಬ್ಬಿ ಕೂಗುವುವು ॥
ನವಗೊಮ್ಮೆ ಗೆಲವಾಗೆ ಸುಮ್ಮನಿಹುವು ತಮ್ಮ । ತಿವಿದಂತೆ ಸೆರೆತು ನೋಡುವುವು ॥ ೨೨ ॥
ಭುಜಬಲಿವೃಷಭಸೇನಾದಿಗಳೊಡನಾಡಿ । ವಿಜಯವ ಪಡೆದು ನಾವೊಮ್ಮೆ ॥
ಗಜದಂತೆ ಬಪ್ಪೆವಾ ಭರತೇಶನೊಡನಾಡಿ । ಅಜದಂತೆ ಬಪ್ಪೆವೇನರಿಯ ॥ ೨೩ ॥
ಬೆಳೆವಾಗ ಗೆಲವುವಿಡಾಯುಗಳವಗೊಡ । ವೆಳೆದು ಬಂದುವು ಸಾಜವಾಗಿ ॥
ಬೆಳೆದ ಮೇಲೀ ಸಿರಿ *ಬಂದಮೇಲವನಾರ । ಚುಲುಕುಗಾಣನು ಯೋಚಿಸೆಂದಾ ॥ ೨೪ ॥
ಧಾರೆಕೋರೆಯ ನೋಡೆ ರಾಜತೇಜವ ನೋಡೆ । ಯಾರೆಣೆ ಭಾವಾಜಿಗೆಂದಾ ॥
ಹೊರಿಗೆಯೆಂದರೆ ಗಬಕೆಂಬ ಗಾದೆಯಂ । ತಾರಿಂತು ನುಡಿವರೈಯೆಂದಾ ॥ ೨೫ ॥

*ಬಂದವನಾರನು । ಚುಳುಕುಗಾಣದೆ ಸುಮ್ಮನಿಹನೆ ।

ಆಗಲಿನ್ನದಕೇನ ಮಾಡಬಹುದು ಪುಣ್ಯ । ಭಾಗಿಯನಾರ್ಗೆಲಬಹುದು ॥
ಲೋಗನಲ್ಲಿ ಮಗಾತನೆಮ್ಮ ಭಾವಾಜಿಯೆಂ । ಬೀ ಗುಣದೊಳು ಪೋಪವೆಂದಾ ॥ ೨೬ ॥

ಆತನೆಮ್ಮಪ್ಪಾಜಿಯೊಡಹುಟ್ಟಿದಳ ತನು । ಜಾತ ನಾವವನ ಸೋದರದ ॥
ಮಾತುಳರಾತ್ಮಜರಿದರೊಳಗೆಡೆಗಟ್ಟಿ । ದೇತರದಣ್ಣಾಜಿಯೆಂದಾ ॥ ೨೭ ॥

ಅಂತಲ್ಲವೈಸಿರಿ ವಿನಯುಗೆಟ್ಟೆರಗಿದ । ರೆಂತಾವು ಕ್ಷತ್ರಿಯಾತ್ಮಜರೈ ॥
ಮುಂತಿದಿರೇಳನು ಕೈಮುಗಿಯನು ಚಕ್ರಿ । ಕುಂತಲ್ತೆ ಅದು ನಮಗೆಂದಾ ॥ ೨೮ ॥

ರಾಜರಿಗೆಮಗಿನ್ನು ರಾಜನೆಂದಾಡನು । ತೇಜದಿ ನೀವುತಾವೆನ್ನಾ ॥
ಯೋಜಿಸಿ ವ್ಯಂತರರ್ಕಳು ಸುರರೆಮ್ಮನು । ತೇಜಿಸ್ಪರೆಂತು ಸಾರುವರು ॥ ೨೯ ॥

ಹೆಣ್ಣ ಕೊಟ್ಟವರು ಕೈಮುಗಿಯೆ ಕೈಮುಗಿಯನು । ಬಣ್ಣ†ಕೆ ನೀವುತಾವೆಂಬಾ ॥
ಹೆಣ್ಣುಗಳೊಡಹುಟ್ಟಿದವರ್ಗದುವಿಲ್ಲ ಹು । ಚ್ಚಣ್ಣರೊಪ್ಪುವರದನೆಂದಾ ॥ ೩೦ ॥

ಅದಕಾತನಿಷ್ಟು ಯೋಚಿಸತೊಡಗಿದನು ತ । ನ್ನಿದಿರ ಮಂತ್ರಿಯು ಮತ್ತೆ ನೋಡಿ ॥
ಇದಕೇನು ತಂತ್ರವೈ ಮಂತ್ರಿ ನಾವಾತನ । ಚದುರಿಂದ ಜಯಿಸಬೇಕೆಂದಾ ॥ ೩೧ ॥

ಅನುಜೆ ಸುಭದ್ರಾದೇವಿಯು ಭರತರಾ । ಜನಿಗಿತ್ತರೊಳ್ಳಿತೆಂದಂದು ॥
ನನಗೆ ನೀನಾಡಿದ್ದೆಯಲ್ತೆಯಿನ್ನಾ ಮಾತ । ನೆನೆಯದಿರ್ಮರೆಮರೆಯೆಂದಾ ॥ ೩೨ ॥

ಹೆಣ್ಣೊಳ್ಳಿತೆಂದು ಕೇಳಿದರವ ಬೇಳ್ಪನು । ಬಣ್ಣವಲ್ಲಿನ್ನು ಕೊಡುವುದು ॥
ಕಣ್ಣ ಕೆಚ್ಚಗೆ ಮಾಳ್ಪನವ ನಾವು ಕೊಡದಾಗ । ಪೆಣ್ಣಿನ ಹೆಸರ ಹಾರದಿರಿ ॥ ೩೩ ॥

ನಾನು ಬಂದವನ ಕಾಣ್ಬುದು ಮತವಲ್ಲೊಂದು । ಪೀನವಿದ್ಯಾರ್ಥತಂತ್ರದೊಳು ॥
ಜಾನಿಸುತಿಪನು ನೀವದನಾತಗರುಹಿ ಕಂ । ಡಾನಂದವಟ್ಟೆಯಿದ್ದಿರೆಂದಾ ॥ ೩೪ ॥

ದಕ್ಷಿಣಭಾಗೆಯ ಖಚರಪುತ್ರಿಯರೊಳು । ಲಕ್ಷಣರೂಪವತಿಯರಾ ॥
ದಾಕ್ಷಿಣ್ಯವಿನಯದೊಳೊಯ್ದು ನೀವಾತನ । ಪೇಕ್ಷೆ ತಣಿಯೆ ಧಾರೆಯೆರೆಸಿ ॥ ೩೫ ॥

ಅವನ ಮೆಯ್ಯೊಂದಿಷ್ಟು ಕೆಂಪಹುದದರ ಮೋ । ಲವನಿಗಗ್ಗಳನಾದನೀಗ ॥
ತವತವಗೊದಗಿ ಪೆಂಗಳ ತಂದು ಕೊಡುವರು । ನೆವಕೆ ನೀವಿರಿ ಹೋಗಿರೆಂದಾ ॥ ೩೬ ॥

ನಮ್ಮ ಮಂದಿರದೊಳಗ್ಗಳವಾದ ತೊಡಿಗೆಯು । ನಿಮ್ಮ ಮನಸಿಗೆ ಬಂದವನು ॥
ಘಮ್ಮನೊಯ್ದಾತಗೆ ಕೊಡುವುದೆಂದೊರೆದನು । ತಮ್ಮಗೂ ಮಂತ್ರಿಗೂ ನೃಪತಿ ॥ ೩೭ ॥
ಉತ್ತರಕಾತ ಬಂದಾಗ ಯೋಚಿಸಿಕೊಂಬ । ಮೆತ್ತಗಿಂದಿಗೆ ಹೋಗಿರೆಂದಾ ॥
ಉತ್ತರಗೊಡದೆದ್ದು ವಿನಮಿ ಮಂತ್ರಿಯು ರಾಯ । ನೊತ್ತಿಂದ ಬೀಳ್ಕೊಂಡರೊಡನೆ ॥ ೩೮ ॥

† ಕೊಮ್ಮೆರಿಹೋಗಿಯೆಂಬಾ ।

ಚೆಲ್ವಿನ ಪೆಂಗಳ ನೆರಪುತ ಗಿರಿಯು ತೆಂ । ಕಲ್ವಿಚಾರಿಸುತಿರ್ದರವರು ॥
ಚೆಲ್ವರಾಯನ ಕಟಕದೊಳಿತ್ತಲೊಂದು ಪ । ಗಲ್ವಿನೋದಾರ್ಥವೇನೆಂಬೆ ॥ ೩೯ ॥

ನೀಲನ ನಿಮಿರ್ದೇರಿ ವೃಷಭರಾಜನು ತನ್ನ । ಮೇಳದ ಸೇವಕರ್ವೆರಸಿ ॥
ಹೇಳದಣ್ಣಂದಿರಿಗುದಯಕಾಲದೊಳು ಪೈ । ಹಾಳಿಗೆ ತಾನೆಯ್ದುತಿರ್ದಾ ॥ ೪೦ ॥

ಚಂದ್ರಗಾವಿಯ ದಟ್ಟಿ ಪಟ್ಟೆಯ ಕುಲ್ಲಾಯಿ । ಸಾಂದ್ರಿತಕುಂಕುಮತಿಲಕಾ ॥
ಮಂದ್ರದಂಬರ ಲಘುಭೂಷಣದೊಳು ಬಂದ । ನಿಂದ್ರಕುಮಾರನ ನಗುತ ॥ ೪೧ ॥

ದಿಗಿದಿಗಿನಶ್ವವ ನಡೆಸುತಲ್ಲಲ್ಲಿ ಕೈ । ಮುಗಿವರ ನೋಡುತೆಯ್ದುವನ ॥
ಮೊಗದಿದಿರಾಗಿ ಚೀನದ ಮಹಾಚೀನದ । ಸುಗುಣಭೂಪರು ಕಂಡರಾಗ ॥ ೪೨ ॥

ದಂಡಿಗೆಯಿಳಿದು ಕೈಮುಗಿದೆಡಬಲದೊತ್ತು । ಗೊಂಡು ತನ್ನೊಡನೆಯ್ದಲವರಾ ॥
ಕಂಡಯ್ಯನೋಲಗಕೆಯ್ದಿ ನೀವೆಂದೊಳ್ಪು । ಗೊಂಡು ಬೀಳ್ಕೊಟ್ಟನಾ ಕುವರಾ ॥ ೪೩ ॥

ಲಕ್ಷಿಸೆ ಮತ್ತೆ ಕಿರಿದುದೂರ ಹೋಹಾಗ । ದಕ್ಷಿಣನಾಗರರವನಾ ॥
ಈಕ್ಷಿಸಿ ಸಾರ್ಕೆಗೆ ಬಂದು ಕೈಮುಗಿದು ಸು । ಲಕ್ಷಣವರಿದು ನುಡಿದರು ॥ ೪೪ ॥

ಒಡಹುಟ್ಟಿದವರಿಬ್ಬರಿಲ್ಲವಿಲ್ಲದರು ಮ । ತ್ತೊಡನೊಬ್ಬ ಕ್ಷತ್ರಿಯನಿಲ್ಲ ॥
ಕಡುಗೂಪರಾವುತರಿಲ್ಲವೊಂಟಿಯೊಳಿಂತು । ನಡೆವರೆ ನೃಪರೆಂದರವರು ॥ ೪೫ ॥

ಧಾಮಕೆ ಸುಮ್ಮನೆ ತಿರುಗಲ್ಲದಿರೆ ಹೋಗಿ । ಸ್ವಾಮಿಗರಿಕೆವಾಳ್ವೆವೆಂದು ॥
ಸ್ವಾಮಿಹಿತವರಾಗ ಕುವರನ ಝುಂಕಿಸ । ಲಾ ಮಾತಿಗಳುಕಿದನವನು ॥ ೪೬ ॥

ದಕ್ಷಿಣ ನಾಗರ ನನಗಿನ್ನು ವೈಹಾಳಿ । ಗಕ್ಷುಣ್ಣಪ್ರೀತಿದೋರುತಿದೆ ॥
ರೂಕ್ಷಿಸಿ ದೂರ ಹೋಗೆನು ಬೇಗ ಬಹೆನೆನ್ನ । ಸುಕ್ಷೇಮಕೊಪ್ಪಿರೈಯೆಂದಾ ॥ ೪೭ ॥

ಒಡೆಯರಿಗರುಹಬೇಡೆಂದು ದೈನ್ಯದ ಮಾತ । ನುಡಿದು ಮತ್ತವರ್ಗೆ ಲಂಚವನು ॥
ಕೊಡುವೆನೆಂದೊಡನೆ ಕಂಕಣಕೆ ತನ್ನಯ ಕೈಯ । ನಿಡುತಿರ್ದನದ ಕಂಡರವರು ॥ ೪೮ ॥

ಮುಟ್ಟದಿರ್ ಕಂಕಣ ನಿನಗಿರಲವ ನಾವು । ಕೊಟ್ಟರೊಲ್ಲೆವು ಸ್ವಾಮಿಯಾಣೆ ॥
ಮುಟ್ಟ ಗೆಯ್ದಿಂದು ನಿನ್ನ ಕೀರ್ತಿಯ ಕೆಡಿಸೆವೆಂ । ದಟ್ಟಹಾಸದಿ ಕಳುಹಿದರು ॥ ೪೯ ॥

ಕುವರ ಮುಂದೆಯ್ದಿದ ದಕ್ಷಿಣನಾಗರ । ರವನೀಶಗರಿಕೆಯ ಮಾಡಿ ॥
ಇವನ ರಕ್ಷಣೆಗೆ ಪ್ರಾಪ್ತರ ಕಳುಹಿಸುವವೆಂ । ದವರೆಣಿಸುತ ಬಂದರಿತ್ತ ॥ ೫೦ ॥

ಗರುಡಿಗೆಂದಾದಿರಾಜನು ಬರುತನುಜನು । ತೆರಳಿದ ಸುದ್ದಿಯ ಕೇಳಿ ॥
ತರಹೇಳೊ ಕುದುರೆಯನೆಂದಲ್ಲಿ ನಿಂದಾಗ । ಬರೆದನಾ ಕ್ಷಣದೊಳೋಲೆಯನು ॥ ೫೧ ॥

ಓದಿದನೊಡನೆ ಶ್ರೀಮನ್ಮಹಾರಾಜ ರಾ । ಜಾದಿತ್ಯರಾಜರೊಡೆಯನ ॥
ಆದಿಚಕ್ರೇಶನ ಸುತಗರ್ಕಕೀರ್ತಿರಾ । ಜಾದೇಯಮೂರ್ತಿಗಗ್ರಣಿಗೆ ॥ ೫೨ ॥

ದೇವರೊಳಿಗದಾದಿ ಸಾಷ್ಟಾಂಗವೆರಗಿ ಸ । ದ್ಭಾವದಿ ಮಾಳ್ಪ ಬಿನ್ನಹವು ॥
ಸೇವಕರೊಡಗೂಡಿ ವೃಷಭಣ್ಣ ವೈಹಾಳಿ । ಗೀ ವೇಳೆಯೊಳು ತೆರಳಿದನು ॥ ೫೩ ॥

ನಾನೆಯ್ದಿ ಜೋಕೆಯೊಳವನ ತಹೆನು ದೇವ । ರೀನನು ಚಿಂತಿಸದಿಹುದು ॥
ಶ್ರೀನಿರಂಜನಸಿದ್ಧ ಜಯಜಯಯೆಂದು ಸಂ । ಧಾನಿಸಿ ಸುತ್ತಿ ಕಳುಹಿದಾ ॥ ೫೪ ॥

ತುರಗವನಡರಿ ತನ್ನೊಳಿಗದವರೊಡ । ವರಲವನತ್ತ ಸಾಗಿದನು ॥
ಹರಿಯೋಲಿಕಂಡರ್ಕಕೇರ್ತಿಕುಮಾರ ತಿ । ಚ್ಚರದೋದಿಕೊಂಡಿರಿಸಿದನು ॥ ೫೫ ॥

ಸಾಧನೆಯಿಂದಿಗೆ ಸಾಕೆಂದು ಗರುಡಿಯಿಂ । ದಾ ದೊರೆ ಪೊರಮಟ್ಟನೊಡನೆ ॥
ಸಾಧಿತಾಶ್ವವನೇರಿ ತಳರ್ದನು ತನ್ನ ಸೇ । ವಾಧಾರದವರೊಡಗೂಡಿ ॥ ೫೬ ॥

ಬಳಿಸಲ್ವ ಕುವರರಿಬ್ಬರ ನೋಡುತರಸನ । ಬಳಿಗೆ ನಾಗರನು ದಕ್ಷಿಣನು ॥
ತಳುವದೆಯ್ತಂದು ಸೂಚಿಸೆ ಕೇಳ್ದು ಚಕ್ರಿ ಸಂ । ಚಲನಾದನೆದೆಯೊಳೀನೆಂಬೆ ॥ ೫೭ ॥

ಕರೆಕರೆ ರಾಹುತರ್ಕಳ ಸಾಣಿಗಳ ಕರೆ । ಬರಹೇಳೊ ಬೇಗ ಕ್ಷತ್ರಿಯರಾ ॥
ತರಳರಾರೈಕೆಗಶ್ವವನೇರಿ ಹೋಗಹೇ । ಳಿರದೆಂದು ನೇಮಿಸಿ ಬಿಟ್ಟಾ ॥ ೫೮ ॥

ತತ್ತರಗೊಂಡು ತೇಜಿಗಳೇರಿ ಕೂರ್ವಾಳ । ಕಿತ್ತು ರಾಹುತರು ಸಾಣಿಗಳು ॥
ಉತ್ತಮರಾಜರು ನೃಪನ ಕುವರರ ಬೆಂ । ಬತ್ತಿ ಹಾರಿದರು ಲಗ್ಗೆಯೊಳು ॥ ೫೯ ॥

ಬೆಂಬಳಿವಿಡಿದೆಲ್ಲರಿತ್ತಲೆಯ್ತರುತಿಪ್ಪ । ಹಂಬಲನರಿಯದುಬ್ಬಿನೊಳು ॥
ತುಂಬಿದ ಸೇನೆಯಿಂದಗಲಿ ವೃಷಭರಾಜ । ಸೋಂಬಿಲ್ಲದತ್ತ ಸಾಗಿದನು ॥ ೬೦ ॥

ಸ್ಥೂಲಗೋಮಂಡಲದೆಡೆಯಿಂದ ಸಿಡಿದೊಂದು । ಗೂಳಿ ಹೋಹಂತೆ ಸೊಕ್ಕಿನೊಳು ॥
ಲೀಲೆಯಿಂ ವೃಷಭರಾಜನು ಕಟಕವ ಬಿಟ್ಟು । ಬಾಲವೃಷಭನಂತೆ ತಳರ್ದಾ ॥ ೬೧ ॥

ನಿಡುಮಾಳದೆಡೆಯಲ್ಲಿ ನಾಲ್ಕುದಿಕ್ಕಿಗೆ ತನ್ನ । ಕಡುಮಾನದಶ್ವವನವನು ॥
ಸಡಿಲಬಿಟ್ಟೇರಿ ವಿನೋದಮಾಡಿದನು ತ । ನ್ನೊಡನಿದ್ದವರು ಪುರೆಯೆನಲು ॥ ೬೨ ॥

ಭಂಗವಿಲ್ಲದ ನೆತ್ತಕಾರನೊಯ್ದೊತ್ತ ಹಾ । ಸಂಗಿಯೊಳ್ಸರಿವ ಕಾಯಂತೆ ॥
ಅಂಗವರಿದು ತೆಗೆದಂತೆ ನಾಲ್ದೆಸೆಗೆ ತು । ರಂಗ ವ್ಯೈಗೊಟ್ಟು ಹಾರಿದುದು ॥ ೬೩ ॥

ಅಡ್ಡ ತರದೊಳು ವೇಷಯದೊಳು ಕಿರಿದಿನೊ । ಳಡ್ಡಾಕೆಯಿಲ್ಲದೋಟದೊಳು ॥
ಅಡ್ಡೈಸಿ ಚೌಕನಡೆಯೊಳ್ಪೆದುಪದ್ಧತಿ । ಯೊಡ್ಡುಗಾಣಿಸಿದನಾ ಕುವರಾ ॥ ೬೪ ॥

ಆಯುಧವಿಡಿದಿನ್ನು ಕೆಲವು ವೈಹಾಳಿಯು । ಭಾಯೆಯ ನೋಡಬೇಕದಕೆ ॥
ಈಯೆಡೆಯಿಂದ ಮುಂದೊತ್ತಿ ಹೋಗುವೆನೆಂದು । ರಾಯಗುವರನನುವಾದಾ ॥ ೬೫ ॥

ಆದಿರಾಜನ ಬರವಷ್ಟರೊಳಗೆ ಕಾಣ । ಲಾದುದು ತೆರಳದೆ ನಿಂದಾ ॥
ವೇದಿತಾಶ್ವವನಿಳಿದಣ್ಣನಿಗಿದಿರಾಗಿ । ಪಾದಮಾರ್ಗದಿ ನಡೆತಂದಾ ॥ ೬೬ ॥

ಮಂದಹಾಸದೊಳು ಕೈಮುಗಿವುತ ದೇವರೆ । ಯ್ತಾಂದ ಕಾರಣವಿದೇನೆಂದಾ ॥
ಇಂದೆನಗಶ್ವದಾರೋಹಣದೊಳಗರ್ತಿ । ಸಂದಿಸಿತ್ತೈ ಬಂದೆನೆಂದಾ ॥ ೬೭ ॥
ಮತ್ತಷ್ಟರೊಳಗರ್ಕಕೀರ್ತಿಭೂವರನೊಂದು । ಕತ್ತಳನೇರಿ ಬರ್ಪುದನು ॥
ಹತ್ತಿರಿದ್ದವರು ಸೂಚಿಸಲಾದಿರಾಜನಾ । ಯುತ್ತದಿಂದಿಳಿದನಶ್ವವನು ॥ ೬೮ ॥
ಇದಿರಾಗಿ ನಡೆದಿರ್ದರಣ್ಣಗೆ ಕೈಮುಗಿ । ದೊದವಿ ಕಾಲ್ಗಡೆಯೊಳೆಯ್ದುತಿರೆ ॥
ಕುದುರೆಯನೇರಿರೈ ವೈಹಾಳಿಯೊಳಗಿಷ್ಟು । ಮೃದುಲೀಲೆಮಾಡುವವೆಂದಾ ॥ ೬೯ ॥
ಅನುಜರಶ್ವವನೇರಲಾ ಕ್ಷಣದೊಳು ರಾಯ । ನನುಮತವಿಡಿದ ವಾಹಕರು ॥
ಅನಿಲವೇಗದಿ ಬಂದು ಕಂಡು ಕುಮಾರರ್ಗೆ । ವಿನಮಿತರಾದರೊಗ್ಗಿನೊಳು ॥ ೭೦ ॥

ಏರಾಟದೋರಿಸೈ ವೃಷಭಣ್ಣಯೆಂದಿಂಪು । ದೋರಿದನೊಡನರ್ಕಕೀರ್ತಿ ॥
ತೋರಲಂಜುವೆನು ದೇವರ ಮುಂದೆ ನನಗೇತ । ರೇರಾಟವೆಂದನಾ ಕುವರಾ ॥ ೭೧ ॥
ಅಂಜಬೇಡಪ್ಪಾಜಿಯಾಣೆ ನಾ ನೋಳ್ಪೆನೆಂ । ದಂಜಿಕೆಬಿಡಿಸಿದನೊಡನೆ ॥
ಸಂಜೋಗದಶ್ವವ ತೆಗೆದನಾ ಕುವರ ನಿ । ರಂಜನಸಿದ್ಧನ ನೆನೆದು ॥ ೭೨ ॥
ದಿಕ್ಕುದಿಕ್ಕಿಗೆ ಕದಲಿಸುವನಶ್ವವ ಹಾಸು । ಹೊಕ್ಕಾಗಿ ತುಂಡುತುಂಡಾಗಿ ॥
ಸಕ್ಕನೆ ಸರಿತದೊಳೇರಿ ತೋರಿದನೆವೆ । ಯಿಕ್ಕುವಷ್ಟರೊಳೆರಳ್ಬಾರಿ ॥ ೭೩ ॥
ನಿಟ್ಟೋಟದೊಳು ಮಝು ಸಾಣಿ ಖಂಡೆಯವ ಮುಂ । ಗಟ್ಟೆ ಹೋಹಂತುದ್ದಕಿಟ್ಟು ॥
ತೊಟ್ಟನೆ ವಾಮಹಸ್ತದೊಳಾಂತನೆಡಗೈಯೊ । ಳಿಟ್ಟು ಮತ್ತೀ ಕೈಯೊಳಾಂತಾ ॥ ೭೪ ॥
ಅದ ಬಿಟ್ಟು ಬಲಗೈಯ ಲಾಡಿಯನುದ್ದಕಿ । ಟ್ಟೊದಗಿ ತಾನೆಡಗೈಯೊಳಾಂತಾ ॥
ಮೊದಲಂತೆ ಮತ್ತಿಟ್ಟು ಬಲಗೈಯೊಳಾಂತನಾ । ಕುದುರೆಯೋಟವು ತಪ್ಪಲಿಲ್ಲ ॥ ೭೫ ॥
ಚಕ್ರಗಳಾರೇಳ ಮುಂಗಟ್ಟೆ ನಭಕಿಟ್ಟು । ವಕ್ರಸದಶ್ವವೋಡುತಿರೆ ॥
ವಿಕ್ರಾಂತಖಂಡೆಯದೊಳು ಪೋಣಿಸಿದನಿಳಾ । ಚಕ್ರಕೊಂದಿಳಿವೀಳದಂತೆ ॥ ೭೬ ॥
ಇಂಬಿನಿಂದೋಡುವಶ್ವದೊಳು ಬಾಂಗಡೆಗೊಂದು । ನಿಂಬೆಯ ಹಣ್ಣ ತಾನಿಟ್ಟು ॥
ಅಂಬಿನಿಂದಾ ಹಣ್ಣನೆಚ್ಚು ತುಂಡಿಸಿದನೇ । ನೆಂಬೆನವನ ಚಮತ್ಕೃತಿಯಾ ॥ ೭೭ ॥
ಓಡಿಸುತಶ್ವವನೊಂದಂಬ ನಭಕೆ ಸಿಂ । ಗಾಡಿಯಿಂದೆಚ್ಚು ಮತ್ತದನು ॥
ಕೂಡೊಂದು ಬಾಣದಿಂದೆಚ್ಚು ತುಂಡಿಸಿದನಾ । ನೋಡುವರೆಲ್ಲ ಖೋಯೆನಲು ॥ ೭೮ ॥
ಬಲ್ಲಿಹದಲ್ಲಿದೊ ಖಂಡೆಯದೊಳು ತನ್ನ । ಗೆಲ್ಲವ ತೋರುವೆನೆಂದು ॥
ಬುಲ್ಲೈಸಿ ಕೈಯಿಕ್ಕುತಿದ್ದನಷ್ಟರೊಳಣ್ಣ । ನಿಲ್ಲಹೇಳೆನ್ನಾಣೆಯೆಂದಾ ॥ ೭೯ ॥
ಪರಿತಂದು ಸೇವಕರುಸುರಲಾ ಕ್ಷಣ ತನ್ನ । ತುರಗವ ಮುಗುಚಿ ತಾ ನಡೆಸಿ ॥
ಪೊರೆಗೆ ಸಾರ್ದಣ್ಣಂದಿರಿಗೆ ಕೈಯ ಮುಗಿದನಾ । ದರದಿಂದ ವೃಷಭರಾಜೇಂದ್ರಾ ॥ ೮೦ ॥

ನೆಲದ ಮೇಲಿಂತು ಸಾಧಿಸಲರಿದಿವನೆಂತು । ಕಲಿತೆಯ್ಯೆ ಮಝು ಭಾಪೆಂದು ॥
ತಲೆದೂಗುತಣ್ಣಂದಿರಿಬ್ಬರು ತಮ್ಮನ । ಬಲುಮೆಗಾನಂದಮಾಡಿದರು ॥ ೮೧ ॥
ಹಯಗಳ ಸಾರ್ಚಿ ತಕ್ಕಿಸಿಕೊಂಡು ತಮ್ಮನ । ದ್ವಯಕುಮಾರರು ತಮ್ಮ ಕೊರಳಾ ॥
ದ್ವಯಕಂಠಮಾಲೆಯ ತೆಗೆದಿಕ್ಕಿದರು ಭಕ್ತಿ । ಭಯದಿಂದ ನಮಿಸಿದನವನು ॥ ೮೨ ॥
ಸರ್ವರೊದಗಿ ಮತ್ತೆ ಮೆಚ್ಚಿ ಕೊಂಡಾಡಿದ । ರುರ್ವಿ ನಿವಾಳಿಯನಿಟ್ಟು ॥
ದೋರ್ವಲಾಗ್ರಣಿಗೆರಗಿದರೆರಗದರಾರು । ಸಾರ್ವಭೌಮನ ತನುಜರಿಗೆ ॥ ೮೩ ॥
ಇಂದಿಗೇರಾಟ ಸಾಕೆಂದರ್ಕಕೀರ್ತಿ ತ । ಮ್ಮಂದಿರಿಗೊರೆದು ತೇಜಿಯನು ॥
ಮುಂದೆ ನಡೆಸಿ ಹಿಂದೆ ತಮ್ಮಂದಿರೆಯ್ದುಲಾ । ನಂದದಿಂದೆಯ್ತುರುತಿರ್ದಾ ॥ ೮೪ ॥

ಆರೋಗಣೆಯ ಹೊತ್ತಾಯ್ತನೆ ಕುವರರು । ಬಾರದನ್ನಕ ಹೋಗೆನೆಂದು ॥
ದಾರಿಯ ನೋಡುತ ಭರತೇಶ ಕಡೆಯ ಹ । ಜಾರದೊಳಿರ್ದನೇನೆಂಬೆ ॥ ೮೫ ॥
ಮೊರೆವ ವಾದ್ಯದ ರಭಸದೊಳು ಪಾಳೆಯಕೆ ಸಾ । ರ್ತರುತಿಪ್ಪ ರಾಜಪುತ್ರರನು ॥
ಅರಸನಾಜ್ಞೆಯೊಳೆಲ್ಲರಿದಿರುಗೊಂಡರು ದೇಶ । ದರಸುಗಳುಳಿದ ಪಾಯ್ದಳವು ॥ ೮೬ ॥
ಆರತಿಕಲಶಕನ್ನಡಿಯಿಂದ ಪಾತ್ರದ । ವಾರನಾರಿಯರೊಡಗೂಡಿ ॥
ಸಾರಲೆಯ್ತಂದು ನಿವಾಳಿಯಿಟ್ಟೆಲ್ಲರು । ವೀರರಿಗೆರಗಿ ನಡೆದರು ॥ ೮೭ ॥
ಸೂಳೆಯರೆಡಬಲದಲ್ಲಿ ಸಿಂಗರಿಸಿ ನಿಂ । ದೋಲಗವೆಂದು ಕೈಮುಗಿಯೆ ॥
ತೇಲುನೋಟದಿ ಕಂಡರಲ್ಲದೆ ಕುವರರು । ಸೋಲದಿಟ್ಟೆಯೊಳು ನೋಡಿದರೆ ॥ ೮೮ ॥
ಪರದಾರಸೋದರ ಗಣಿಕಾಪಗತಚೇಷ್ಟಿ । ವಿರತನೆಂಬುತ್ತಮಬಿರುದಾ ॥
ಪೊರೆವುತಿದ್ದರು ಬಾಲಕಾಲದೊಳವರೇನು । ಭರತರಾಜನ ಪುತ್ರರಲ್ತೆ ॥ ೮೯ ॥
ಸಾಲಾಗಿ ಬರುತಿರ್ದರೆಂಬುದ ಕೇಳ್ದು ಭೂ । ಪಾಲನೊಬ್ಬನ ಕಿವಿಯೊಳಗೆ ॥
ಹೇಳಿ ಕಳುಹಿದನೊಂದೇಕಾಂತವನು ಬಂದು । ಲಾಲಿತಾತ್ಮರ ಕಂಡನವನು ॥ ೯೦ ॥
ಎಡಬಲದೊಳಗನುಜರು ಮಧ್ಯದೊಳಗಣ್ಣ । ಬೆಡಗಿನೊಳೆಯ್ದು ಬೇಕೆಂದು ॥
ನುಡಿಯದೆ ರಾಯನಟ್ಟಿದ ಮನುಜನು ತೋರಿ । ನಡೆಸಿದನೋಜೆಯೊಳವರಾ ॥ ೯೧ ॥
ಚವರವ ಢಾಳಿಸುತಲ್ಲಲ್ಲಿಗೊಮ್ಮೆ ಪಾ । ತ್ರವನಾಡುತಾರತಿಗೊಡುತ ॥
ಅವನೀಶಪುತ್ರರ ಕಟಕದೊಳಾ ರಾಜ । ಭವನಕೆಯ್ದುಸುತಿರ್ದರೊಸೆದು ॥ ೯೨ ॥
ಚಪ್ಪರಿಸುವ ಕಟಕದ ಗಲಭೆಯ ಕೇಳ್ದು । ನೆಪ್ಪುಗೊಂಡರಸಿಯರೆಲ್ಲ ॥
ಉಪ್ಪರಿಗೆಯನೇರಿ ಮಕ್ಕಳೆಯ್ತಪ್ಪದೊಂ । ದೊಪ್ಪವ ಕಂಡು ಬೀಗಿದರು ॥ ೯೩ ॥
ಅಲಘುಸಂಭ್ರಮದಲ್ಲಿ ಬಂದರಮನೆಯ ಮುಂ । ದಿಳಿದು ತಾವೇರಿದಶ್ವಗಳಾ ॥
ಒಳಹೊಕ್ಕು ತಂದೆಯ ಪಜ್ಜೆಗಳೊಳು ತಮ್ಮ । ತಲೆಮುಟ್ಟಿ ಸುತರೆರಗಿದರು ॥ ೯೪ ॥

ಬೇರೆಬೇರೊಬ್ಬರೊಬ್ಬರನಪ್ಪಿಕೊಂಡಶ್ವ । ದೇರಾಟದಧಿಕರ್ರೈಯೆಂದು ॥
ಆರುಖಂಡದ ಕರ್ತ ತನ್ನ ಮಕ್ಕಳಿಗರ್ತಿ । ದೋರಿ ಮುದ್ದಾಡಿ ಮನ್ನಿಸಿದಾ ॥ ೯೫ ॥

ಏನು ದೊಡ್ಡಣ್ಣ ನಿನ್ನನುಜರ ಲೀಲೆಗೆ । ನೀನು ಬೆಂಬತ್ತಿದ್ದೈಯೆಂದಾ ॥
ಏನೆಂಬೆ ಸ್ವಾಮಿ ವೃಷಭರಾಜನೊಂದು ಬ । ಲ್ಮಾನವನೆಂದನಾ ಕುವರಾ ॥ ೯೬ ॥

ಸೋದರನೆಂದಾನು ಹುಸಿದರು ದೇವರ । ಪಾದಪದ್ಮಗಳ ಮೇಲಾಣೆ ॥
ಮೇದಿನಿಯೊಳು ತೋರ್ಪರಂತೆ ವಾಜಿಯೊಳು ವಿ । ನೋದದೋರಿದನೆಂದು ನುಡಿದಾ ॥ ೯೭ ॥

ಬಿಲ್ಲು ಖಂಡೆಯ ಲೌಡಿ ಚಕ್ರ ಮುಂತಾದವ । ರಲ್ಲಿ ವಿಚಿತ್ರ ಸಾಧನೆಯಾ ॥
ಮಲ್ಲಾಶ್ವದೇರಾಟದೊಳಗೆ ಕಾಣಿಸಿದನೆಂ । ದೆಲ್ಲವ ಪಿತಗರುಹಿದನು ॥ ೯೮ ॥

ದೇವರು ಕಾಣಬೇಕಲ್ಲದವನದೊಂದು । ರಾವುತಿಕೆಯ ವಿಳಾಸವನು ॥
ನಾವೇನ ನೋಳ್ಪೆವೆಂದದರಿಂದ ನಿಲಿಸಿ ನಾ । ನೀ ವೇಳೆಯೊಳು ತಂದೆನೆಂದಾ ॥ ೯೯ ॥

ಒಡನೆ ಬಂದವರೆಲ್ಲರವನಂತೆ ಪೊಗಳಿದ । ರೊಡಲುಬ್ಬಿದನು ರಾಯನದಕೆ ॥
ಮಿಡುಕದೆ ಮೋನದೊಳಿದ್ದ ವೃಷಭರಾಜ । ನೊಡನೆ ಮತ್ತಿಂತು ನುಡಿದನು ॥ ೧೦೦ ॥

ಇನಿತಶ್ವದೇರಾಟದೊಳು ಶಕ್ತಿಯಿದ್ದು ಸು । ಮ್ಮನೆ ಮೊನ್ನೆ ನೀನದೇಕಿರ್ದೆ ॥
ನನಗೆ ಮುಂದೆಯ್ದಿ ಕದವ ಕುಟ್ಟಬೇಡ ನೀ । ನೆನೆ ನಗುತವ ಸುಮ್ಮನಿರ್ದಾ ॥ ೧೦೧ ॥

ವಿನಯದಿಂದೊಡನಿರ್ದರೆಲ್ಲರ ಬೀಳ್ಕೊಟ್ಟ । ತನುಜರ ಬೀಳ್ಕೊಡಲಿಲ್ಲ ॥
ಜಿನಯೆನುತೆದ್ದು ಮತ್ತವರ ಕೈವಿಡಿದರ । ಮನೆಯ ಹೊಕ್ಕನು ಚಕ್ರಧರನು ॥ ೧೦೨ ॥

ಮಂಗಲಾರತಿಯನೆತ್ತಿಸಿ ಸೇಸೆಯಿಕ್ಕಿಸಿ । ತುಂಗಶೋಭನವ ಪಾಡಿಸಿದಾ ॥
ಕಂಗಳು ತುಂಬ ಕುಮಾರರ ನೋಡಿ ವೀ । ರಾಂಗನೆಯರಸ ಲಾಲಿಸಿದಾ ॥ ೧೦೩ ॥

ಕುಂತಲಾವತಿ ಚಂದ್ರಿಕಾದೇವಿ ಕುಸುಮಾಜಿ । ಇಂತಿವರ್ಮೊದಲಾದ ತನ್ನ ॥
ಕಾಂತೆಯರೆಲ್ಲರ ಕರೆಸಿದನವರಿಗೋ । ರಂತೆ ಕುವರರೆರಗಿದರು ॥ ೧೦೪ ॥

ಕುಸುಮಾಜಿ ಕುಂತಲಾವತಿ ಚಂದ್ರಿಕಾದೇವಿ । ದೆಸೆಗೇಳ್ವ ನಿಮ್ಮ ಮಕ್ಕಳಿಗೆ ॥
ಉಸುರಬೇಡವೆ ನೀವು ಬುದ್ಧಿಯನೆಂದಿಷ್ಟು । ನಸುನಗುತರಸ ನುಡಿದನು ॥ ೧೦೫ ॥

ದೇವರಿಗತ್ತ್ಯವ್ಮ ಬುದ್ಧಿವೇಳ್ವಂದಿಗೆ । ನಾವವರಿಗೆ ಪೇಳ್ವೆವಹುದು ॥
ದೇವರ ಮಕ್ಕಳು ದೇವರಂತಲ್ತೆಯೆಂ । ದಾ ವನಿತೆಯರು ನುಡಿದರು ॥ ೧೦೬ ॥

ಒಂದುಪಂಕ್ತಿಯೊಳಮೃತಾನ್ನವ ತನ್ನಯ । ಕಂದಗಳೊಡಗೂಡಿ ಸವಿದು ॥
ಪೊಂದೊಡವಿತ್ತು ಬುದ್ಧಿಯ ಪೇಳ್ದು ಬೀಡಾರ । ಕೆಂದಿನಂತೊಡನೆ ಬೀಳ್ಕೊಟ್ಟಾ ॥ ೧೦೭ ॥

ನಾರಿಯರೊಡನೆ ಕುಮಾರರ ವಿನಯ ಗಂ । ಭೀರ ಚಾತುರ್ಯಮುಂತಾದ ॥
ವಾರತೆಯೊಳು ರಾಯನಿದ್ದನೆಂಬೆಡೆಗೆ ಕು । ಮಾರವೈಹಾಳಿಯ ಸಂಧಿ ॥ ೧೦೮ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೯ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೧೦ ॥

ಅನಿತಿನಿತೆಂದು ಸೊಲ್ಲಿಸಬಾರದನುಪಮ । ಘನಮಹಿಮೆಯ ದೇಹವಾದ ॥
ಮುನಿಜನವಂದ್ಯ ನನ್ನೆದೆಯೊಳಗಿರು ನಿರಂ । ಜನನೆ ಚಿದಂಬರಪುರುಷಾ ॥ ೧೧೧ ॥

ಕುಮಾರವ್ಯೈಹಾಳಿಸಂಧಿ ಸಂಪೂರ್ಣಂ

# ಖೇಚರಿಯರವೈವಾಹಸಂಧಿ.

---

ಎಷ್ಟೆಷ್ಟು ಕರ್ಮ ನಿರ್ಜರೆಯಾದುದೊಡನೊಡ । ನಷ್ಟಷ್ಟು ಸೌಖ್ಯವ ಪಡೆವ ॥
ಶಿಷ್ಟ ನೀನೆನಗೆ ಸನ್ಮತಿದೋರು ಲೋಕಕು । ತ್ಕೃಷ್ಟಾ ನಿರಂಜನಸಿದ್ಧಾ ॥ ೧ ॥

ಸುಮತಿಸಾಗರಮಂತ್ರಿವೆರಸಿ ಖೇಚರಭೂಪ । ರಮಲಕುಮಾರಿಯುಗ್ಗೂಡಿ ॥
ಢಮುಢಮುವೆಂಬ ವಾದ್ಯದೊಳು ವಿನಮಿರಾಜ । ಗಮಕದೊಳೆಯ್ತರುತಿರ್ದಾ ॥ ೨ ॥

ಹರಹಿದ ಹಲವು ವಿಮಾನದೊಳಾಕಾಶ । ಸರಣಿಯೊಳೋಜೆಯೊಳೆಯ್ದಿ ॥
ಸುರರಿಳಿವಂತೆ ರಾಯನ ಕಟಕವ ಸಾರೆ । ಧರಣಿಗಿಳಿದರು ಖೇಚರರು ॥ ೩ ॥

ಕೇಳುತ ಮೈದುನ ಬಂದ ಬರವನುರ್ವಿ । ಪಾಲಕ ಗೂಢಗೋಷ್ಠಿಯೊಳು ॥
ಓಲಗವಾದನು ಬುದ್ಧಿಸಾಗರನು ಸ । ಲ್ಲೀಲೆಯ ಕೆಳೆಯರು ಸಹಿತ ॥ ೪ ॥

ನೆರೆದ ಖೇಚರರು ಮತ್ತೆಯ್ದಲಿ ಮೊದಲೊಮ್ಮೆ । ಬರಹೇಳು ತನ್ನನೆಂದೊಡನೆ ॥
ತರುವಕ್ಕಳನು ರಾಯ ಕಳುಹಲಾ ಕ್ಷಣ ಮಂತ್ರಿ । ವೆರಸಿ ವಿನಮಿರಾಜ ಬಂದಾ ॥ ೫ ॥

ದೈವನಿರ್ಮಿತದ ಚಾವಡಿಗಳ ನೋಡುತ । ಭಾವನ ಸಿರಿಗರ್ತಿವಡುತ ॥
ಮಾವನ ಮಗನೈಸೆ ತಡೆಯಿಲ್ಲದೊಳಗಣ । ಚಾವಡಿಯನು ಹೊಕ್ಕನೊಡನೆ ॥ ೬ ॥

ಉಡೆಸುತ್ತಲಿಲ್ಲ ಸಾಷ್ಟಾಂಗವೆರಗಲಿಲ್ಲ । ನಡೆದು ಬಂದೊಂದುರತ್ನವನು ॥
ಬೆಡಗಿಂದ ಭಾವಗೆ ಕಾಣ್ಕೆಯನಿತ್ತರ್ತಿ । ವಡುತ ಕೈಮುಗಿದನಾ ಸುರಸಾ ॥ ೭ ॥

ಸಚಿವ ನಿವಾಳಿಕಾಣ್ಕೆಯನಿಕ್ಕಿ ನಮಿರಾಜ । ನುಚಿತವನಟ್ಟಿದನೆಂದು ॥
ಪ್ರಚುರಭೂಷಣಗಳನಿರಿಸಿ ಸಾಷ್ಟಾಂಗಸ । ದ್ರುಚಿಯೊಳೆರಗುತಿದ್ದು ನಿಂದಾ ॥ ೮ ॥

ಒತ್ತಿನೊಳಾಸನಗೊಡಿಸಿ ಮೈದುನಗೆ ಕ । ಣ್ಣೊತ್ತಿ ಕುಳ್ಳಿರವೇಳೆ ಕುಳಿತಾ ॥
ಮತ್ತೆ ಮಂತ್ರಿಗೆ ಸನ್ನೆದೋರೆ ಕುಳಿತನವ । ನುತ್ತುಂಗನೃಪನೋಲಗದೊಳು ॥ ೯ ॥

ವಿನಮಿ ನಿನಗೆ ಪರಿಣಾಮವೆ ನಮಿನಾಮ । ಗನುಪಮಕ್ಷೇಮವೆ ಮತ್ತೆ ॥
ಮನೆಯೊಳಿದ್ದವರೆಲ್ಲ ಪದುಳವೆಯೆಂದು ಮೇ । ದಿನಿಪತಿ ಕೇಳ್ದ ಮೈದುನನಾ ॥ ೧೦ ॥

ದೇವರ ಪೆಂಪಿಂದ ನನಗೊಳ್ಪು ನಮಿರಾಜ । ಗಾವಾಗ ಪರಮಸಂತೋಷಾ ॥
ಆವಾಸದೊಳಗಿರ್ದರೆಲ್ಲರ್ಗೆ ಸುಖವೆಂದು । ಭಾವನೊಳುಸುರಿದನವನು ॥ ೧೧ ॥

ಪುರುನಾಥನುದರದೊಳಗೆ ದೇವರುದಯಿಸಿ । ಭರತೋರ್ವಿಯೆಲ್ಲವನಾಳೆ ॥
ನೆರಬಂಧುಜನವೆಂಬ ವನಕೆ ವಸಂತನ । ಪರಿಯಾದೆ ಭಾವಾಜಿಯೆಂದಾ ॥ ೧೨ ॥

ನಮಿರಾಜ ಬಹನಹುದಿಲ್ಲಿಗೆ ದೇವರು । ಗಮಿಸುವಂದಿಗೆ ಮೊದಲೊಂದು ॥
ಭ್ರಮರೀವಿದ್ಯೆಯ ಸಾಧಿಸುವೆನೆಂದು ತೊಡಗಿದ್ದ । ಸ್ತ್ರಿಮಿತವಾಯ್ತುದರಿಂದ ಪಯಣಾ ॥ ೧೩ ॥
ಮಂತ್ರಯೋಗದೊಳಿದ್ದ ನಮಿರಾಜಗರುಹಿ ತ । ನ್ಮಂತ್ರಿಸಹಿತ ಬಂದೆನೆಂದು ॥
ತಂತ್ರದಿ ವಿನಮಿ ನುಡಿದನಹುದರಸನಾ । ತಂತ್ರವರಿದು ಸುಮ್ಮನಿರ್ದಾ ॥ ೧೪ ॥
ಆರಿಗೆ ಸಂತೋಷವಾಗದು ನಿನ್ನ ಗಂ । ಭೀರದೈಶ್ವರ್ಯವ ಕಂಡು ॥
ಭೂರಿನೃಪರು ತಮ್ಮ ಸುತೆಯರ ನಿನಗೆ ಕೈ । ಧಾರೆಯೆರೆಯೆ ತಂದರೆಂದಾ ॥ ೧೫ ॥
ನಲ್ಲವೆಂಗಳ ಪೆತ್ತವರು ಪೆಣ್ಣ ತಂದರ । ದಿಲ್ಲದಿದ್ದವರು ಭೂಷಣವಾ ॥
ಝುಲ್ಲಿಪಟ್ಟೆಗಳು ಮುಂತಾದವ ತಂದಿದ್ದ । ರೆಲ್ಲರ ಕರೆಸಬೇಕೆಂದಾ ॥ ೧೬ ॥
ಮೊದಲೆ ದಕ್ಷಿಣನೊಳು ನೃಪತಿಯೇಕಾಂತವಾ । ಕ್ಯದೊಳೊಂದನರುಹಿಕೊಟ್ಟಿರ್ದಾ ॥
ಅದರಿಂದ ಸಮಯವರಿದು ದಕ್ಷಿಣಾಂಕ । ನೊಪ್ಪದೊಳು ಮಂತ್ರಿಯೊಳಿಂತು ನುಡಿದಾ ॥ ೧೭ ॥
ಸುಮತಿಸಾಗರಮಂತ್ರಿ ಕೇಳ್ನಿಮ್ಮ ನೃಪರೊಳು । ಪ್ರಮದಪುತ್ರಿಯರ ತಂದವರು ॥
ಕ್ರಮದಿ ಕೈಮುಗಿಯಲಿ ಮಿಕ್ಕವರೆರಗಿ ಭೂ । ರಮನ ಕಾಣಲಿ ಕರೆಸೆಂದಾ ॥ ೧೮ ॥
ಸ್ಮಿತಮುಖದಿಂದಾಗ ಬುದ್ಧಿಸಾಗರನು ಭೂ । ಪತಿಯ ಚಿತ್ತಾಯತವರಿದು ॥
ಸುತೆಯರ ಕೊಡುವರು ಮೊದಲು ಕಾಣಲಿ ಮಿಕ್ಕ । ಕ್ಷಿತಿಪರು ಮತ್ತೆಯ್ದಲೆಂದಾ ॥ ೧೯ ॥
ಎನಲೆದ್ದು ಸುಮತಿಸಾಗರ ಹೋಗಿ ತಮ್ಮಯ । ಜನಪರೊಳ್ಕೆಲಬರ ತಂದು ॥
ಮನುವಂಶತಿಲಕನಾಸ್ಥಾನವ ಹೊಗಿಸಿದ । ನನುರಾಗವವರಂಗಂಕುರಿಸೆ ॥ ೨೦ ॥
ಬಂದು ಚಕ್ರಿಗೆ ಕಾಣ್ಕೆಯಿಕ್ಕಿ ಖೇಚರರು ಸಂ । ಪಿಂದ ಕೈಮುಗಿಯಲಾ ಕ್ಷಣವೆ ॥
ತಂದು ಕುಳ್ಳಿರಲಿತ್ತರರಸನ ಕಣ್ಸನ್ನೆ । ಯಿಂದೆಲ್ಲರೊಲ್ದು ಕುಳಿತರು ॥ ೨೧ ॥
ಮಿಕ್ಕವರುಡೆಸುತ್ತಿ ಬಂದು ನಿವಾಳಿಯ । ತಕ್ಕ ಕಾಣಿಕೆಯ ಕಪ್ಪಗಳಾ ॥
ಚೊಕ್ಕರಾಯಗೆ ನೀಡುತಡ್ಡಬಿದ್ದೆದ್ದರು । ಚಕ್ಕಳವೀಯೆ ಕುಳಿತರು ॥ ೨೨ ॥
ರೂಪುಳ್ಳ ಪೆಣ್ಣ ಪೆತ್ತವರ ಭಾಗ್ಯವೆ ಮಝು । ಭೂಪನಿನಿತು ತೇಜವಿತ್ತಾ ॥
ಓಪ ಭೋಗಕೆ ಪೆಣ್ಣೆ ಮುಖ್ಯವೆಂದೆದೆಯೊಳಾ । *ಭೂಪನ ಸಖರೆಣಿಸಿದರು ॥ ೨೩ ॥
ಅವನೀಶನಂಗಲಾವಣ್ಯಕೆ ಖಚರಪುಂ । ಗವರೆಲ್ಲರಚ್ಚರಿವಟ್ಟು ॥
ಎವೆಯಿಕ್ಕದೀಕ್ಷಿಸಿದರು ಕಾಣಲೊಡನೊಂದು । ದಿವಿಜಸಂಪದವಡೆದಂತೆ ॥ ೨೪ ॥
ಪಡೆಯಬೇಡವೆ ಪ್ರಾಯದೊಳಗಿಂತು ಚೆಲ್ವನೀ । ಬೆಡಗನೀ ಸಿರಿಯ ಗೌರವವಾ ॥
ಜಡರೆಲ್ಲ ದೊರೆಗಳೆ ಸುಡುಸುಡೆಂದೆಲ್ಲರು । ನುಡಿಯದೆ ನೆನೆದರೆದೆಯೊಳು ॥ ೨೫ ॥
ಬಹುಕಾಲತೊಡಗಿ ದೇವರ ಕಾಣಲಂಬರ । ವಿಹರಣರೆಳಸಿರ್ದರಿಂದು ॥
ವಹಿಲದಿ ಸಿದ್ಧಿಸಿತಿವರರ್ತಿಯೆಂದು ಸಂ । ಗ್ರಹಿಸಿ ಖೇಚರಮಂತ್ರಿ ನುಡಿದಾ ॥ ೨೬ ॥

* ನೃಪಣ್ಯ

ಸಾಮಾನ್ಯಪದವ ಪಡೆವರುಂಟು ಷಟ್ಖಂಡ । ಭೂಮಿಯನಾಳ್ವರಾರುಂಟು ॥
ಭೂಮಿಯನಾಳ್ದರಾಳಲಿ ನಿನ್ನ ಸೊಬಗು ನ । ರಾಮರೇಂದ್ರರೊಳಾರಿಗುಂಟು ॥ ೨೭ ॥

ದಾಕ್ಷಿಣ್ಯವಲ್ಲ ಡಂಬಕವಲ್ಲ ಪುರುಜಿನ । ಸಾಕ್ಷಿ ನಿನ್ನಂಘ್ರಿಗಳಾಣೆ ॥
ಈಕ್ಷಿಸಿ ನಿನಗೆ ಸೋಲದ ಗಂಡು ಪೆಣ್ ಮನು । ಜಕ್ಷೇತ್ರದೊಳಗಿಲ್ಲವೆಂದಾ ॥ ೨೮ ॥

ಸೌಂದರಾಂಗಿಯರಾದ ಮುನ್ನೂರುಪೆಂಗಳ । ತಂದಿದ್ದರೆಮ್ಮರಸುಗಳು ॥
ಚಂದದಿ ಮದುವೆನಿಲ್ಲೆಂದು ಖೇಚರಮಂತ್ರಿ । ನಿಂದು ಬಿನ್ನಹವ ಮಾಡಿದನು ॥ ೨೯ ॥

ನಗುತ ರಾಜೇಂದ್ರನಾತನ ಕುಳ್ಳಿರೆಂದನಾ । ಬಗೆಗೊಲ್ದು ಬುದ್ಧಿಸಾಗರನು ॥
ಖಗಮಂತ್ರಿ ಲೇಸನಾಡಿದನೆಂದ ಸಖರುಬ್ಬಿ । ಪೊಗಳ್ದರು ಲೇಸು ಲೇಸೆಂದು ॥ ೩೦ ॥

ಮದುವೆ ನಾಳಿನ ರಾತ್ರಿಯೊಳಗಾಗಲಿಂದಿಗೆ । ಮುದದೊಳಿವರ ಕಳುಹೆಂದು ॥
ಹದನರಿದಾ ಮಂತ್ರಿ ನುಡಿಯೆ ಚಕ್ರೇಶನೊ । ಪ್ಪಿದನೊಪ್ಪದವರಾರು ಸುಖಕೆ ॥ ೩೧ ॥

ಬಂದವರೆಲ್ಲರ್ಗೆ ಪಡಿಯ ಬೀಡಾರವ । ಚಂದದಿ ಮಾಡಿಸಿಂದಿವರು ॥
ಮಿಂದುಂಡು ವಿಶ್ರಮಿಸಲಿಯೆಂದು ಮಂತ್ರಿಗಾ । ನಂದದಿ ನೃಪತಿ ನೇಮಿಸಿದಾ ॥ ೩೨ ॥

ಮಣಿಮಯದುಡುಗೊರೆಗಳ ಖಚರರಿಗಿತ್ತು । ಗುಣವಚನದೊಳು ಬೀಳ್ಕೊಟ್ಟಾ ॥
ಮಣಿದವರೆಲ್ಲರು ಬೀಡಾರಕೊಡನೆ ಸಂ । ದಣಿಗೊಂಡು ಸಾಗಿದರತ್ತ ॥ ೩೩ ॥

ವಿನಮಿರಾಜಗೆ ಮಂತ್ರಿಗುಡುಗೊರೆಯಿತ್ತು ಮೇ । ದಿನಿಪತಿ ಬೀಡಿಗೆ ಕಳುಹಿ ॥
ವಿನಯದಿ ಸಖರನು ಮಂತ್ರಿಯ ಕಳುಹಲಾ । ದಿನ ಹೋಯ್ತು ಹರುಷವಾರ್ತೆಯೊಳು ॥ ೩೪ ॥

ಮರುದಿನ ಸಾರಣೆ ತೋರಣ ಗುಡಿ ಕೇತು । ನೆರೆ ರಂಗವಲಿ ಪುಷ್ಪವಲಿಯ ॥
ಮೆರಹಿಂದ ಕಟಕ ಸಿಂಗರವಾಯ್ತು ಮಂಗಲ । ವರೆಕೋಟಿ ಮೊಳಗಿತಲ್ಲಲ್ಲಿ ॥ ೩೫ ॥

ಕರುಮಾಡವೆಂಟುದಿಕ್ಕಿನೊಳೆದ್ದುವಾಗಳೆ । ಕುರುಜುಗಳೆದ್ದುವಲ್ಲಲ್ಲಿ ॥
ಕರಿಹಯರಥಪದಾತಿಗಳು ಸಿಂಗರವಾದು । ವರರೆ ಮಹೋತ್ಸವವಾಯ್ತು ॥ ೩೬ ॥

ಕೋಂಟೆ ಹೆಬ್ಬಾಗಿಲು ಗೋಪುರಗಳು ಝಲ್ಲಿ । ಘಂಟೆ ಪಟ್ಟೆಯೊಳು ಮೆರೆದುವು ॥
ನಂಟರು ದೊರೆಗಳು ವ್ಯಂತರರೂಳಿಗ । ವಂಟರು ಸಿಂಗರಿಸಿದರು ॥ ೩೭ ॥

ಸೊನ್ನಾರದಲ್ಲಿ ಸೊಬಗಿನಲ್ಲಿ ರನ್ನದಿ । ಚಿನ್ನದಿಂದೊಂದು ಸಾಲಾಗಿ ॥
ಮುನ್ನೂರುಮದುವೆಯ ಮಂಟಪವಾದುವು । ಸನ್ನದ್ಧಮಯನ ತಂತ್ರದೊಳು ॥ ೩೮ ॥

ಅರಮನೆ ಸಿಂಗರವಾಯ್ತು ರಾಣಿಯರು ಸಿಂ । ಗರಿಸಿದರುತ್ಸಾಹಗೊಳುತ ॥
ಭರತೇಶ ಸಿಂಗರಿಸಿದನು ನೋಡಿದನರ । ಸುರರೆಲ್ಲ ಬೆರಗಾಗುವಂತೆ ॥ ೩೯ ॥

ಖಚರಭೂಪರು ತಮ್ಮ ಸುತೆಯರ ನವರತ್ನ । ಖಚಿತಭೂಷಣತತಿಯಿಂದ ॥
ರಚನೆಯಪ್ಪಂತು ಸಿಂಗರವ ಮಾಡಿಸಿದರು । ಶುಚಿವೆತ್ತ ದಾದಿಯರಿಂದ ॥ ೪೦ ॥

ತೆಕ್ಕೆದುರುಂಬಿನ ತೊಂಡಿಲು ಮಣಿಬಲೆ । ಚೊಕ್ಕಬೊಟ್ಟಿಕ್ಕಿದ ರವಕೆ ॥
ಹಿಕ್ಕಿ ಲೆಕ್ಕಿಸಿ ತಿದ್ದಿ ನಿರಿವಿಡಿದುಡಿಸಿದ । ಸುಕ್ಕಿನಂಬರದೊಳೆಸೆದರು ॥ ४೧ ॥

ಅಲತಗೆಯೂಡಿ ಮಿಂಚಿಟ್ಟುಗುರಿಂದ ಜ । ಕ್ಕುಲಿಸುವಂದುಗೆಯಿಂದ ಮತ್ತೆ ॥
ಗಳಬಳಿಸುವ ಬಳೆಯಿಂದ ಕಂಕಣದಿಂದ । ನಳನಳಿಸಿದರು ನೀರೆಯರು ॥ ४೨ ॥

ಮೂಕುತಿ ಮುತ್ತಿನ ಸರ ಕರ್ಣಪತ್ರ ಚಿಂ । ತಾಕು ನೇವಳ ಲುಳಿ ಪದಕಾ ॥
ಕೇಕರಾಂಜನ ಬೆರಳುಂಗುರ ತೋಳ್ಬಳೆ । ಯಾ ಕನ್ನೆಯರಿಗೆ ಮೆರೆದುವು ॥ ४೩ ॥

ಕನ್ನಡಿಕದಪಿನ ಮಕರಿಕಾಪತ್ರ ಬಾ । ವನ್ನಜವಾದಿಯ ಲೇಪಾ ॥
ಚಿನ್ನಹೂ ತಾಳಿಹೂ ಮೊದಲಾದ ಸಿಂಗರ । ಚೆನ್ನವೆಣ್ಣುಗಳಿಗೊಪ್ಪಿದುವು ॥ ४४ ॥

ಸಕಲಶೃಂಗಾರವ ಮಾಡಿ ಮಾಣಿಕ್ಯದ । ಮುಕುರವ ತೋರೆ ದಾದಿಯರು ॥
ವಿಕಸಿತಾನನದ ವೀಳೆಯಗೆಂಪು ಸೂಸಿ ಕ । ನ್ನಿಕೆಯರು ನಗುತ ನೋಡಿದರು ॥ ४೫ ॥

ಗಮಕವಿಡಾಯವಿಳಾಸವೆಂಬುದು ನಭೋ । ಗಮನದಂಗನೆಯರ ಸೊಮ್ಮು ॥
ವಿಮಳದರ್ಪಣವ ನಿಟ್ಟಿಸಿ ತಮ್ಮ ಕೈಮುಟ್ಟಿ । ಸಮರಿದರೋರೆಕೋರೆಗಳಾ ॥ ४೬ ॥

ತಿಲಕದೊಳಗೆ ತುರುಬಿನೊಳಿಟ್ಟ ಕಣ್ಣ ಕ । ಜ್ಜಳದೊಳು ಮಕರಿಕಾದಿಯೊಳು ॥
ಹಳೆಯ ದಾದಿಯರ ಕೈಕರಣವ ಮೆಚ್ಚದೆ । ಚೆಲುವಾಗಿ ತಾವು ತಿದ್ದಿದರು ॥ ४೭ ॥

ಇಂದಿಗೆಮ್ಮವರು ಸಿಂಗರಿಸಿದಂತಿರಲೆಂಬ । ಛಾಂದಸಾಂಗನೆಯರೆ ಅವರು ॥
ಚಂದವಾದುದನೊಪ್ಪಿದರು ಚಂದಗೆಟ್ಟುದ । ಚಂದಗೈದರು ತಾವು ತಮಗೆ ॥ ४೮ ॥

ಭರತೇಶ ಜಾಣನೆಂಬುದು ಜಗವರಿಕೆ ಸಿಂ । ಗರಿಗನೆಂಬುದು ಸ್ವರ್ಗವರಿಕೆ ॥
ಪರಿಪರಿಯಾಗಿ ಸಿಂಗರಿಸಲೇಕಹುದೆಂದು । ಪುರುಳಾಗಿ ಸಿಂಗರಿಸಿದರು ॥ ४೯ ॥

ಆತನ ರಾಣಿಯರೆಲ್ಲರು ಪ್ರೌಢೆಯ । ರೋತೆಮ್ಮ ನೋಡುವರಿಂದು ॥
ಏತರ ಸಿಂಗರವೆನಬಾರದೆಂದು ಸು । ರೀತಿಯಾಗಿರೆ* ರಚಿಸಿದರು ॥ ೫೦ ॥

ಎಚ್ಚತ್ತು ತಾವು ಸಿಂಗರಿಸಿದ ರೀತಿಯ । ಮೆಚ್ಚದೊಯ್ಯನೆ ತಿದ್ದೆ ಕಂಡು ॥
ಅಚ್ಚರಿವಟ್ಟರು ದಾದಿಯರಿವರಹೊ । ಮೆಚ್ಚಪರೆಂದರು ನೃಪನಾ ॥ ೫೧ ॥

ಭೂಚರಾಂಗನೆಯರು ಚಕ್ರಿಯ ಚಿತ್ತವಿ । ಲೋಚನಗಳನೊಲಿಸಿದುದಾ ॥
ಖೇಚರಿಯರು ನೀವು ಮರೆಸಬೇಕೆಂದಾಗ । ಸೂಚಿಸಿದರು ಕೆಳದಿಯರು ॥ ೫೨ ॥

ಕ್ಷಿತಿಪನ ಬಗೆಯ ಕೇಳಿಹರಾಗಿ ಜಯಿಸುವ । ಸತಿಯರಾರೆಂದು ನಿಶ್ಚಯಿಸಿ ॥
ಪ್ರತಿವಾಕ್ಯವಿಲ್ಲದೆ ನಗುತಿದ್ದರಾತನಾ । ಯತವರಿದಿಹವೆನುತವರು ॥ ೫೩ ॥

* ರಂಜಿಸಿದರು

ಪರಿಪೂರ್ಣವಾಗೆ ಶೃಂಗಾರ ನೀರಾಜನ । ವಿರಚನೆಗೈದು ದಾದಿಯರು ॥
ಭರತರಾಜೇಂದ್ರನ ಮನವ ಸೋಲಿಸಿಯೆಂದು । ಹರಸಿ ಸೇಸೆಗಳನಿಕ್ಕಿದರು ॥ ೫೪ ॥

ಇರುಳು ಮುಂಜಾವದೊಳುತ್ತಮಲಗ್ನ ಹ । ತ್ತಿರೆ ತೋರಿತೆಂಬ ವೇಳೆಯೊಳು ॥
ಅರಸನೊಳಗದವರೆಯ್ತಂದು ಪೇಳೆ ಖೇ । ಚರರಿದ್ದರೊಂದೆ ಲಗ್ನಯೊಳು ॥ ೫೫ ॥
ಪನ್ನಂಗವೆಸೆವ ಪಲ್ಲಕ್ಕಿಯೊಳಗೆ ತಮ್ಮ । ಕನ್ನಿಕೆಯರ ತೆರಳಿಸುತ ॥
ಚೊನ್ನದೊಳಗೆ ಕೋಟಿಪಂಜೆತ್ತಿ ಬಹುವಾದ್ಯ । ಸನ್ನಾಹದೊಳು ಗಮಿಸಿದರು ॥ ೫೬ ॥
ಪಲ್ಲವ ಸತ್ತಿಗೆ ತೇರಾನೆ ಕುದುರೆ ಸಂ । ಫುಲ್ಲವಿಮಾನ ಪತಾಕೆ ॥
ಚೆಲ್ಲಿದಂತೆತ್ತ ನೋಡಿದೊಡತ್ತ ಬರೆ ಖಗ । ಮಲ್ಲರು ಬಂದರುಬ್ಬಿನೊಳು ॥ ೫೭ ॥
ಕಾಳೆಗಳೆತ್ತಿ ಚೀರಿದುವು ವಿವಾಹವ । ಹೇಳುವಂತಮರಸಂತತಿಗೆ ॥
ಸೂಳೈಸಿದುವು ಭೇರಿ ದಿಕ್ಪಾಲರೊಸಗೆಯ । ಕೇಳಲೆಂದರುಹುವಂದದೊಳು ॥ ೫೮ ॥
ತಂಬಟ ತುಡುಮು ತಿತ್ತಿರಿ ಕಾಳೆ ವೀರಣ । ಚೆಂಬಕವರೆ ಕೊಂಬು ಡಾಡೆ ॥
ಬೊಂಬುಳಿ ಗಿಡಿಬಿಡಿ ವೀರವೃಂದದ ನಾದ । ತುಂಬಿತೀರ್ಗೈದುದಿಕ್ಕಿನೊಳು ॥ ೫೯ ॥
ಪಾಡುವರಿಂದ ಕೀರ್ತಿಪರಿಂದ ಪಾತ್ರವ । ನಾಡುವರಿಂದ ನಲ್ಮೆಯೊಳು ॥
ನೋಡುವರಿಂದ ಮೆಚ್ಚುವರಿಂದ ಬಂದರು । ಗಾಡಿಯೊಳಂಬರೇಚರರು ॥ ೬೦ ॥
ವಿನಮಿರಾಜನ ಮುಂದುಮಾಡಿಕೊಂಡಾತ್ಮನಂ । ದನೆಯರ ಹಿಂದಿಕ್ಕಿಕೊಂಡು ॥
ಘನಗಾಢದೊಳು ಖೇಚರೇಂದ್ರರು ನೃಪನರ । ಮನೆಗಾಗಿ ಬರುತಿದ್ದರೊಸೆದು ॥ ೬೧ ॥
ಪಟಲು ಪೆರ್ಗಾಳೆ ನಿಸ್ಸಾಳ ತುಡುಮು ಭೇರಿ । ಪಟಹ ಶಂಖಗಳ ಘೋಷದೊಳು ॥
ಘಟಿಸಿ ಜಯಂತರಾಜನು ಬಂದನಿದಿರಾಗಿ । ಕಟಕದೊಳ್ಕೆಲಬರು ಸಹಿತ ॥ ೬೨ ॥
ಕಳಸಕನ್ನಡಿಯ ಹೆಂಗಳು ಮುಂದೆ ಕ್ಷತ್ರಿಯ । ಬಲ ಹಿಂದೆ ಬರಲ್ಗೈದೆ ಬಂದು ॥
ಒಳುನುಡಿಯಿಂದ ಕೈಮುಗಿದು ವಿನಮಿರಾಜ । ಗುಳಿದವರ್ಗುಚಿತವ ನುಡಿದಾ ॥ ೬೩ ॥
ದಿಬ್ಬಣವೆರಡೊಂದುದಿಬ್ಬಣವಾಗಿ ವ್ಯೈ । ಯುಬ್ಬಲುತ್ಸಾಹಲೀಲೆಯೊಳು ॥
ದಬ್ಬಣದೊಳು ದಾರ ನಡೆವಂತೆ ನಡೆದುದು । ಸಬ್ಬಲಗ್ಗಯೊಳರಮನೆಗೆ ॥ ೬೪ ॥
ಪಲ್ಲಕ್ಕಿಯಿಂದವತರಿಸಿ ಹೆಂಗಳು ಹೊಸ । ಫುಲ್ಲಿಪಟ್ಟೆಯ ಮುಸುಕಿಕ್ಕಿ ॥
ಮೆಲ್ಲನೆ ಮದುವೆಯ ಮಂಟಪಕೊಯ್ಯಾರ । ದಲ್ಲಿ ಮೆಲ್ಲಡಿಯಿಟ್ಟರೊಡನೆ ॥ ೬೫ ॥
ಮದವಳಿಗೆಯರಯ್ಯೆಂದಿರು ದಾದಿಸಖಿಯರು । ಮೃದುಬುದ್ಧಿಸಾಗರ ವಿನಮಿ ॥
ವಿದಿತಮಾಂತ್ರಿಕರೊಳಹೊಕ್ಕರು ಗೃಹದ ಬಾ । ಹ್ಯದೊಳಿದ್ದರುಳಿದವರೆಲ್ಲ ॥ ೬೬ ॥
ತಟ್ಟೈಸಿ ತೆಂಕಬಡಗಲೊಂದೆ ತೆರೆಯಿದ್ದು । ದಿಟ್ಟೆದ್ದರಾಚೆ ಮುನ್ನೂರು ॥
ತೊಟ್ಟೀಚೆ ಮುನ್ನೂರುಪಡಲಿಗೆ ಇದ್ದುವು । ಮೆಟ್ಟಕ್ಕಿತುಂಬಿ ಸಾಲಾಗಿ ॥ ೬೭ ॥

ಮಾಣಿಕ್ಯದೀಪದ ಸಾಲುರಂಜಿಸುವ ಕ । ಲ್ಯಾಣಮಂಟಪದೊಳಹೊಕ್ಕು ॥
ಶ್ರೇಣಿವೆತ್ತೊಂದುದಿಕ್ಕಿನ ಪಡಲಿಗೆಯೇರಿ । ಜಾಣವೆಂಗಳು ನಿಂದರೊಸೆದು ॥ ೧೮ ॥
ಸವಿಸವಿಯಾಗಿ ಸಂಭ್ರಮವಾಗಿ ಕೋಕಿಲ । ರವದಂತೆ ಮಿಂಚುಂಚವಾಗಿ ॥
ಧವಳಶೋಭನಗಳ ಪಾಡುತಿರ್ದರು ಖಗ । ಯುವತಿಯರಾ ಸಮಯದೊಳು ॥ ೧೯ ॥
ಕರಣ ನಿರ್ಮಲವಾಗಿ ಪೊಂಬಡಲಿಗೆಯೆಂಬ । ಗಿರಿಯೇರಿ ಖಚರನಾರಿಯರು ॥
ಭರತರಾಜನ ಕೂರ್ತು ಜಾನಿಸುತಿರ್ದರಿ । ನ್ನರರೆ ಬೇಗದೊಳಾತ ಬಹನು ॥ ೨೦ ॥

ಜಿನವಾಸಕೆಯ್ದಿ ಜಿನೇಂದ್ರವಂದನೆಗೈದು । ಘನಗುರುಹಂಸನಾಥನನು ॥
ಮನವುಟ್ಟಿ ಜಾನಿಸಿ ಬಂದರಮನೆಯೊಳಾ । ಜನಪನಿರ್ದನು ಪೆಂಡಿರೊಡನೆ ॥ ೨೧ ॥
ವನಜಗಂಧಿನಿಯರು ಸಿಂಗರಿಸಿದ ಮದ । ವನಿಗನ ಪೊರೆಯೊಳಿದ್ದಲ್ಲಿ ॥
ಮನದಲ್ಲಿ ನೋವಿಲ್ಲದರ್ತಿಗೊಬ್ಬಿಬ್ಬರು । ಬಿನದವ ನುಡಿದರೇನೆಂಬೆ ॥ ೨೨ ॥
ದೇವ ಬಿನ್ನಹವೊಂದುಹಂಸಕೆ ಪೆಣ್ಬಕ್ಕಿ । ಸಾವಿರವುಂಟು ಮತ್ತದಕೆ ॥
ಶೀವಿ ಕೆಲವು ಪಕ್ಕಿ ಬಂದುವು ಮೊದಲವು । ನೋವವೆಯೆಂದಳೊರ್ವಬಲೆ ॥ ೨೩ ॥
ಒಂದುಹಂಸವೆ ಬಹುರೂಪಾಗಿ ಹಲವರೊ । ಳೊಂದುವುದಬಲೆ ಮತ್ತವಕೆ ॥
ನೊಂದುಕೊಂಬುದಕೆ ಕಾರಣವೇನು ಹೇಳು ನೀ । ನೆಂದನಾಕೆಯೊಳೊಲ್ದು ನಗುತ ॥ ೨೪ ॥
ಕುಸುಮದಂಗಡಿಯೊಳು ತುಂಬಿಯಿದ್ದುದು ಮತ್ತೆ । ಹೊಸಹೂವ ತಂದರಂಗಡಿಗೆ ॥
ಮಸೆದರ್ತಿಯಾವ ಪುಷ್ಪದೊಳದಕಿಹುದೆಂದು ।ನಸುನಗುತೊರ್ವಳಾಡಿದಳು ॥ ೨೫ ॥
ಕಾತರಾರ್ಥದ ತುಂಬಿಯಲ್ಲದು ನಿಜಖರಂ । ಜ್ಯೋತಿಯ ಕಂಡ ತುಂಬಿಯದು ॥
ಆ ತುಂಬಿಗೆಲ್ಲರೊಳ್ಸರಿಯೆಂದು ಸರಸದೊ । ಳಾತನಾಡಿದನಾಕೆಯೊಡನೆ ॥ ೨೬ ॥
ಪರಿಣಯನದ ಸಮಯದೊಳಿಂತು ನುಡಿವರೆ । ಅರಸನ ಹೃದಯಕೆಂತಹುದು ॥
ಸರಸವಿರಸವಹುದಬಲೆಯರಿರ ಸುಮ್ಮ । ನಿರಿಯೆಂದರುಳಿದ ನಾರಿಯರು ॥ ೨೭ ॥
ಧರೆಯ ಪೆಂಗಳು ಬಂದರೊಬ್ಬನಾರಿಯನೊಬ್ಬ । ಪುರುಷನಾಳ್ವಂತಾಳ್ವ ಶಕ್ತಿ ॥
ಪುರುಷೋತ್ತಮಗುಂಟು ನಮಗೇಕೆ ಚಿಂತೆಯೆಂ । ದೆರವಿಲ್ಲದೆಲ್ಲರಾಡಿದರು ॥ ೨೮ ॥
ಆರಿದ ಬಯಸಿದರಬಲೆಯರಿರ ಮುನ್ನ । ಸಾರಾತ್ಮಭಾವನೆಗೈದ ॥
ಚಾರುಪುಣ್ಯದ ಫಲ ತರುತದೆಯೆಂದೊಲ್ದು । ನಾರಿಯರೊಳು ರಾಯ ನುಡಿದಾ ॥ ೨೯ ॥
ನಿಮ್ಮನು ಬಯಸಿ ತಂದವನಲ್ಲವಿಂದಿನ । ಹೆಮ್ಮಕ್ಕಳನು ಹೋರಿತಿಲ್ಲ ॥
ಸಮ್ಮಂಧಗೊಡುತಿದೆ ಪುಣ್ಯವೆಂದಾ ಪರ । ಬೊಮ್ಮರಸಿಕನೊಲ್ದು ನುಡಿದಾ ॥ ೩೦ ॥

ಧಾರೆಗೆ ಸಮಯವಾಯ್ತೆಂದಷ್ಟರೊಳಗೆ ಸಂ । ಚಾರಕಾಂತೆಯರು ಪೇಳಿದರು ॥
ಆ ರಮಣಿಯರನಲ್ಲಿಯೆ ನಿಲಿಸಿದನೆದ್ದ । ನೋರಂತೆ ಮದುವೆಯ ಗೃಹಕೆ ॥ ೩೧ ॥

ಸೆರಗಿಳಿವಿಟ್ಟು ಹೊದೆದ ದಿವ್ಯವಸ್ತ್ರಹೊ । ನ್ನೊರೆಯ ಕಠಾರಿ ಹಸ್ತದೊಳು ॥
ಮಿರುಪ ಪಾವುಗೆಮೆಟ್ಟಿ ರಾಜವಿಡಾಯುವ । ಕರೆವುತ ಬಂದನಾ ಸೊಬಗಾ ॥ ೮೨ ॥

ಭೋಗಸಾಮ್ರಾಜ್ಯನಾಯಕ ಪಾದ ಜತನ ಲೋ । ಕಾಗವ್ಯಾಸುಖಿ ಪರಾಕೆನಲು ॥
ಸೀಗುರಿಚಾಮರದೊಗ್ಗಿನೊಳಗೆ ಬಂದ । ಪೂಗಣೆಯನ ಹುರುಡಿಸುತ ॥ ೮೩ ॥

ಕಳವೀಣೆಯಂತೆ ಗಾಯಕಿಯರು ಪಾಡುವ । ಲಲಿತಶೋಭನವನಾಲಿಸುತ
ಚೆಲುವರರಸ ಬಂದು ಮದುವೆಯ ಮಂಟಪ । ದೊಳಹೊಕ್ಕನಧಿಕಲೀಲೆಯೊಳು ॥ ೮೪ ॥

ಪಟ್ಟದರಸಿಗಲ್ಲದುಳಿದ ವಿವಾಹಕೆ । ಪಟ್ಟಬಾಸಿಗವೆರಡಿಲ್ಲ ॥
ತೊಟ್ಟು ಮಿಕ್ಕಿನ ತೊಡಿಗೆಯನೆಳೆಮುತ್ತಿನ । ಮೆಟ್ಟಕ್ಕಿಯೊಳು ಬಂದು ನಿಂದಾ ॥ ೮೫ ॥

ತೆರೆ ತೆಂಕಬಡಗಲಾಗಿದ್ದುದಾಗಿದಿರೊಳು । ತರುಣಿಯರಾಚೆ ಸಾಲಾಗಿ ॥
ನಿರುತ ಪಶ್ಚಿಮಮುಖವಾಗಿದ್ದರೀಚೆ ಭೂ । ವರ ಮೂಡಮುಖವಾಗಿ ನಿಂದಾ ॥ ೮೬ ॥

ನಡೆದೊಂದುರೂಪಿನೊಳೆಯ್ತಂದು ಮೊದಲೊಂದು । ಪಡಲಿಗೆಯೊಳು ರಾಯ ನಿಂದು ॥
ಒಡನೆ ಮುನ್ನೂರುರೂಪಾಗಿ ಮುನ್ನೂರುಪ್ಪೊಂ । ಬಡಲಿಗೆಯೊಳು ತುಂಬಿ ನಿಂದಾ ॥ ೮೭ ॥

ಒಂದುರೂಪಿನೊಳೆಯ್ದಿ ಮುನ್ನೂರುರೂಪಾಗಿ । ನಿಂದುದ ಕಂಡು ಕನ್ನೆಯರ ॥
ತಂದೆಗಳೆಲ್ಲರಚ್ಚರಿವಟ್ಟರವನದೊಂ । ದಂದಕಾರಚ್ಚರಿವಡರು ॥ ೮೮ ॥

ಶ್ರೀಯಶೋರಂಜಿತಮಂಗಲಾಷ್ಟಕವೋದು । ತಾಯುತವೆಯೆಂಬರದಕೆ ॥
ಆಯುತವೆಂಬರು ಸನ್ನದ್ಧರಾಗಿಯೆಂ । ಬೊಯ್ಯಾರನುಡಿಗಳೊಪ್ಪಿದುವು ॥ ೮೯ ॥

ಉತ್ತಮಬುಧರು ಸಿದ್ಧಾಂತಮಂತ್ರವನೋದಿ । ಮುತ್ತಿನಕ್ಷತೆಗಳನಿಡುತ ॥
ಮತ್ತಡಿಗಡಿಗೊಡನಾಯುತವೆಯೆಂಬ । ರುತ್ತಮಾಯುತವೆಂಬರದಕೆ ॥ ೯೦ ॥

ಮಂಗಲಧವಳಶೋಭನಗಳ ಸತಿಯರು । ಭೃಂಗಾಳಿಯಂತೆ ಪಾಡುತಿರೆ ॥
ಮಂಗಲಾಷ್ಟಕ ಪೂರ್ಣವಾಗೆ ಮಧ್ಯದ ತೆರೆ । ಪಿಂಗಿತು ಜಯಜಯಯೆನಲು ॥ ೯೧ ॥

ಒಂದೊಂದುಪೆಣ್ಣ ಕೈವಿಡಿದು ಪೆಂಗಳ ಪೆತ್ತ । ತಂದೆಗಳಂದು ಭೂವರನ ॥
ಒಂದೊಂದುರೂಪಿನ ಬಲಗೈಗೆ ಬಲಗೈಯ । ನೊಂದಿಸಿ ಕೊಟ್ಟರರ್ತಿಯೊಳು ॥ ೯೨ ॥

ಬಟ್ಟಜವ್ವನೆಯರು ಭರತರಾಜನ ಕೈಯ । ಮುಟ್ಟಲಾ ಕ್ಷಣವೆ ಮೈಯೊಳಗೆ ॥
ಪುಟ್ಟಿತು ಜುಮ್ಮುಜುಮ್ಮೆನೆ ಪುಳಕಾಂಕುರ । ಸಟ್ಟಾಟದವನೆ ಚಕ್ರೇಶಾ ॥ ೯೩ ॥

ಎಳೆಲತೆಗಳ ಕಲ್ಪವೃಕ್ಷಕೆ ಹಬ್ಬಿಸಿ । ಬೆಳೆಯೆಂದು ನೀರೆರೆವಂತೆ ॥
ಹೊಳೆವ ಗಿಂಡಿಯನೆತ್ತಿ ಧಾರೆಯನೆರೆದರು । ನಲವಿಂದ ಖಚರನಾಯಕರು ॥ ೯೪ ॥

ಶೋಭನ ಶೋಭನ ಮಂಗಲ ಜಯ ಜಯ । ಲಾಭ ಉತ್ತಮಸಿದ್ಧಿಯೆಂಬ ॥
ವೈಭವದೊಳು ಹೆಂಗಳಂಗುಲಿವಿಡಿದನಾ । ಶ್ರೀಭರತೇಶನೋಜೆಯೊಳು ॥ ೯೫ ॥

ಆ ಮನೆಯಿಂದೊಯ್ಯನಡಿಯಿಟ್ಟು ಬೇರೊಂದು । ಹೋಮಶಾಲೆಯ ಬಂದು ಹೊಕ್ಕು ॥
ಧೂಮುಗೆಟ್ಟುರಿವಗ್ನಿಕುಂಡಗಳನು ನಾರೀ । ಸ್ತೋಮಸಹಿತ ಬಲವಂದಾ ॥ ೯೬ ॥

ಚಂದಿರ ಬಹುರೂಪವಾಂತು ರೋಹಿಣಿಯು ತ । ನ್ನಂದದಿ ಬಹುರೂಪ ಧರಿಸಿ ॥
ಮಂದರಾದ್ರಿಯ ಸುತ್ತುವಂತೆ ಹೋಮವ ಸುತ್ತಿ । ಬಂದನವರ ಹಸ್ತವಿಡಿದು ॥ ೯೭ ॥

ಸೊಕ್ಕಾನೆ ತೆಗೆಯೆ ಪೆಣ್ಣಾನೆ ಪೋಪಂತೆ ಪೆ । ಣ್ಮಕ್ಕಳು ನೃಪನೊಡನೆಯ್ದಿ ॥
ಮಕ್ಕಳ ಕೊಟ್ಟ ವಿದ್ಯಾಧರನೃಪರೆವೆ । ಯಿಕ್ಕದೆ ನೋಡಿ ಹಿಗ್ಗಿದರು ॥ ೯೮ ॥

ಹೆಣ್ಣ ಕೊಟ್ಟವರ ಕಣ್ಣನ್ನೆಯೊಳ್ಕಳುಹುತ । ಕಣ್ಣೊಳೆ ಮಂತ್ರಿಯ ಕಳುಹಿ ॥
ಹಣ್ಣ ಕೊಂಡರಗಿಳಿ ಹೋಹಂತೆ ಹೋದನು । ಹೆಣ್ಣುಗಳ್ವೆರಸಿ ಮಂದಿರಕೆ ॥ ೯೯ ॥

ಬಿಜ್ಜೋದರಿಯರ ತೋಂಡಿಲುರವಕೆಯ । ಪಜ್ಜಳದೊಡಿಗೆಯೊಳ್ಕರಿದಾ ॥
ಸೆಜ್ಜೆವನೆಯ ಪಟ್ಟಶಾಲೆಯೊಳ್ಸಿಳಿಕೊಂಡ । ರುಜ್ಜುಗವೆಂಗಳರ್ತಿಯೊಳು ॥ ೧೦೦ ॥

ಬೇರೆಬೇರೊಂದೊಂದು ಮನೆಗೊಬ್ಬಳೊಬ್ಬಳ । ತೋರಿದ ರೂಪಿನೊಳೆಯ್ದಿ ॥
ಏರಿದನಬಲೆಯರ್ವೆರಸಿ ಮಂಚಗಳ ಮ । ನ್ನೂರುಶಯ್ಯಾಗೃಹತುಂಬಿ ॥ ೧೦೧ ॥

ಇರಿಸಿ ಕೊಟ್ಟುಚಿತವಸ್ತುಗಳ ಸೇವಕಿಯರೆ । ಲ್ಲರು ಹೋದರಾಗ ಗೇಹದೊಳು ॥
ಅರಗಿಳಿ ಪುತ್ತಳಿ ಮದವಕ್ಕಳಿದ್ದರು । ಪರರಿಲ್ಲದೇಕಾಂತವಾಯ್ತು ॥ ೧೦೨ ॥

ಕಣ್ಣಲ್ಲದಿಂದ ರಾಯನ ನೋಡಿ ತಲೆವಾಗಿ । ನಾಣ್ಚುತಿಪ್ಪಳುಕುತಿದ್ದವರ ॥
ನಾಣ್ಚಿಕೆ ಭಯವನೊಯ್ಯನೆ ಕಳೆದನು ಮುಟ್ಟಿ । ನುಣ್ಚರದೋರಿ ಮಾತಾಡಿ ॥ ೧೦೩ ॥

ಕುರುಳನೊತ್ತುವ ತಿಲಕವ ತಿದ್ದುವಿಕ್ಕಿದಾ । ಭರಣವ ನೋಡುವ ನೆವದಿ ॥
ಸರಸದೊಳಮರ್ದಪ್ಪಿ ಭಯವ ಹಿಂಗಿಸಿದನಾ । ಭರತೇಶನೇನು ಕೋವಿದನೊ ॥ ೧೦೪ ॥

*     *     *     *     *

ಎಲೆ ರಾಯ ನಮ್ಮ ಮನೆಯ ಹೊಕ್ಕ ಗಂಡು ಪೆ । ಣ್ಣೊಲಿದು ಮುನ್ನುಟ್ಟ ವಸ್ತ್ರಗಳಾ ॥
ತೊಲಗಿಸಿ ಹೊಸ ವಸ್ತ್ರಗಳನುಡಬೇಕೆಂದು । ಗಿಳಿಗಳಾಡಿದುವಲ್ಲಿಗಲ್ಲಿ ॥ ೧೦೬ ॥

ಕೇಳ್ದಿಯ ಗಿಳಿಯ ನುಡಿಯನೆಂಬನವರದ । ಕೇಳ್ದು ನಗುತ ಸುಮ್ಮನಿಹರು ॥
ಸೀಳ್ದಲೆಗಳ ಮಡಿದೂಡುವನವರದ । ಕಾಳ್ದನೊಳ್ಮೊಗದಿರುಹುವರು ॥ ೧೦೭ ॥

ನಾನಿತ್ತರೇಕೊಲ್ಲೆಯೆಲೆಯ ಭಾಗವನಿನ್ನು । ನೀನೆನಗಿಡು ಕೊಂಬೆನೆಂಬಾ ॥
ಮಾನಿನಿಯರು ತಲೆಗುಸಿದು ನಗುವರು ನ । ವೀನಕಾಂತೆಯರ ನೋಡಿಯದು ॥ ೧೦೮ ॥

ಬೆರಳ ಚಿಟುಕ ತೆಗೆವನು ದುಂಡುದೋಳಿಂದ । ಕೊರಳನಪ್ಪುವನು ಚುಂಬಿಸುವಾ ॥
ಅರಗಿಳಿಯಾಡಿದ ಮಾತ ಕೇಳಿನ್ನೆಂದು । ಸರಿಬೆಸದೊಳು ನಕ್ಕು ನುಡಿವಾ ॥ ೧೦೯ ॥

ಭಾವಜರೂಪನ ಸೋಂಕಿಂದ ತವಕವು । ಜ್ಞೀವಿಸುತಿಹುದು ಹೆಂಗಳಿಗೆ ॥
ತಾವಾಗಿ ಮೇಲಿಕ್ಕರವರೇನು ಸಾಮಾನ್ಯ । ಭಾವಕಿಯರೆ ಸುಜಾಣೆಯರು ॥ ೧೧೦ ॥

ತೆಗೆದಂತೆ ಬಪ್ಪರೆಂಬುದ ಬಲ್ಲನಾ ರಾಯ । ಮೃಗದಂತೆ ಬೆಚ್ಚಿ ಗಟ್ಟಿದೊಡೆ ॥
ಸೊಗಸಲ್ಲವೆಂದು ಕಲಾವಿನೋದಗಳಿಂದ । ಚಿಗುರೇರಿಸಿದನಬಲೆಯರಾ ॥ ೧೧೧ ॥

ಗ್ರಹದಂತೆ ಪಿಡಿದು ಗರ್ದಭಗಳಂತೊದೆದಾಡಿ । ರಹಣಿಕಾರರವೊಲು ಕೆಲೆದು ॥
ಮಹಿಷನಂದದಿ ನೋಡಿ ಕುದುರೆವೊಲ್ಕೂಡುವ । ಮಹಿಯ ರೊಟ್ಟಿಗರ ವರ್ತನವೆ ॥ ೧೧೨ ॥

ಸರಸದೊಳಪ್ಪಿ ಸಲ್ಲಾಪದೊಳ್ನುಡಿದು ಕಾ । ತರವೇಳೆ ಕಲೆಯನಂಕಿಸುತ ॥
ಪರಿಪಕ್ವಮಾನಸರಾಗಿ ಭೋಗಿಪ ದಿವ್ಯ । ಸುರತಸುಖಿಗಳ ಮಾರ್ಗವದು ॥ ೧೧೩ ॥

ರೋಮಾಂಚ ನೆಗೆದು ಕಾತರವೇರಿ ಮೈಬಾತು । ವ್ಯಾಮೋಹದೊಳು ಕಂಪವಡೆದ ॥
ಕೋಮಲಾಂಗಿಯರಿಗೆ ರಾಯ ತಾ ಹೊದೆದಿದ್ದ । ಕ್ಷಾಮವಸ್ತ್ರವ ಹೊದೆಸಿದನು ॥ ೧೧೪ ॥

ನಿರಿಗೆ ಕೈಯಿಕ್ಕಿ ಕಳೆದು ನೂಂಕಿ ತವಕ ತ । ತ್ತರಿಸೆ ತನ್ನಿಚ್ಚೆಗೆ ತೆಗೆದಾ ॥
ತರಿಮಿಂಡಿಯರು ತೆಗೆದಂತೆ ಮೈಗೊಡಲೊಯ್ಯ । ನೊರಗಿದರಮಲತಲ್ಪದೊಳು ॥ ೧೧೫ ॥

ಮುಂದಾದ ಕಲೆಯ ಪೇಳ್ವುದು ಜಾಣ್ಮೆಯಲ್ಲದ । ರಿಂದ ಗೂಢದೊಳಿರಿಸುವೆನು ॥
ಸೌಂದರಿಗನು ಸೊಬಗೆಯರ ಕೂಡಿದನೆಂಬೆ । ನೊಂದೆ ಮಾತಿನೊಳೆಲ್ಲವಡಕ ॥ ೧೧೬ ॥

ಅವರು ವಿದ್ಯಾಧರಸತಿಯರು ಭೋಗಾಂಗ । ನಿವಹವಿದ್ಯಾಧರನಿವನು ॥
ನವರತಿಗೈದರೆಂದರೆ ಸಾಕು ಕಲೆಯನು । ಭವವನಂತಿಂತೆನಲೇಕೆ ॥ ೧೧೭ ॥

ಮಾಸಲುಜವ್ವನೆಯರ ರಾಜಮೋಹಿ ವಿ । ಲಾಸದಿಂದೊಡಗೂಡುವಾಗ ॥
ಆ ಸುಖವಡಕದೊಳಿಹುದೆ ಮೋಹನದೊಂದು । ರಾಶಿಯ ಕೆದರಿದಂತಿರದೆ ॥ ೧೧೮ ॥

* * * * *

ಕೊಬ್ಬುಜವ್ವನೆಯರ ಕೋಮಲಾಂಗವ ರಾಯ । ತಬ್ಬಲಾ ಕ್ಷಣ ಸುಖದಿಂದ ॥
ಉಬ್ಬದಿಹುದೆ ದೇಹ ಮೊರೆದಪ್ಪಿ ನುಡಿಗಳು । ತಬ್ಬಿಬ್ಬಿಯಾಗದೇನಿಹುವೆ ॥ ೧೨೦ ॥

ಕಡೆದ ಪೊಂಬೊಗರಿಯಂತೆಸೆವ ಮೊಲೆಗಳ ಕೈ । ವಿಡಿದಾಗಳೆದೆಸೋಂಕುವಾಗ ॥
ತಡೆದಿದ್ದ ಚಿತ್ತದ ಲಜ್ಜೆಯ ಗುಟ್ಟು ಕ । ಟ್ಟೊಡೆಯದಿಹುದೆ ರಾಜಸುಖಿಗೆ ॥ ೧೨೧ ॥

* * * * *

ನಸುಬೆಮರ್ಗಂಪು ಮೈಗಂಪು ಸುಯ್ಗಂಪು ಲೇ । ಪಿಸಿದ ಕಂಪಲರ್ಗಂಪು ನೆಗೆಯೆ ॥
ಕುಸುಮದೋಕುಳಿಯಾಡಿ ನಲಿವ ತುಂಬಿಗಳಂತೆ । ರಸಿಕದಂಪತಿಗಳರ್ತಿಸರೆ ॥ ೧೨೪ ॥

ಅನುಪಮರತಿಯೊಳೊಬ್ಬೊಬ್ಬರಿಗನ್ಯೋನ್ಯ । ಜನಿತಸುಖಾತಿರೇಕದೊಳು ॥
ಜಿನುಗುವ ಲಲ್ಲೆಗರೆವ ದನಿಗೇಳ್ದು ಬಿ । ಮ್ಮನೆ ತನು ಬಿಗುಹೇರದಿಹುದೆ ॥ ೧೨೫ ॥

ಪ್ರಥಮರತಿಯೊಳಿಷ್ಟು ಸಾಜ್ಞೆ ಹರಲ್ಲದೆ । ಪೃಥಿವೀಶ ತುಡುಕೆ ನೀರೆಯರು ॥
ರಥಿಕರಥಿಕರು ಸಾಧನೆವಾಡುವಂತೆ ಮ । ನ್ಮಥಕೇಳಿಗೊದಗದೇಸಿಹರೆ ॥ ೧೨೭ ॥

ಹೃದ್ಯವೆನಿಸಿ ರಾಯ ಹೊಸಕೂಟದೊಳು ಸುಖ । ವೇದ್ಯಗಾಣಿಸಿ ತೆಗೆದತ್ತ ॥
ವಿದ್ಯುಲ್ಲತೆಯಂತೆ ಚಳಚಳನೊದಗುತ । ವಿದ್ಯಾಧರಿಯರರ್ತಿಸರೆ ॥ ೧೨೮ ॥

* * * * *

ಅಚ್ಚವೆಂಗಳು ಪೊಸಕೂಟದ ಸುಖ ಮೈಗೆ । ನೊಚ್ಚಗೇರಲು ಮೂರ್ಛೆವಡುತ ॥
ಎಚ್ಚರುತೊಡನೆ ಮರೆವುತ ಕಣ್ದೆರೆವುತ । ಮುಚ್ಚುತ ಕೂಡದೇನಿಹರೆ ॥ ೧೨೯ ॥

ಚಳಬಳಿಕೆಯೊಳು ಚಂದದೊಳು ಬಂಧದೊಳು ನಿ । ರ್ಮಳವಮೋಹಿಗಳು ನೆರೆವಾಗ ॥
ಜಳಜಳನಂಗ ಬೆಮರಿ ತುರುಬಳಿದು ವೆ । ಗ್ಗಳಿಸದೆ ನಾಸಿಕದುಸಿರು ॥ ೧೩೦ ॥

* * * * *

ಕಾಮತೃಪ್ತಿಯೊಳು ಕಣ್ತಿರುಗಿ ಮಾತುಡುಗಿ ಮ । ತ್ತಾ ಮೈಯ ಬೆಸುಗೆ ಬೇರಾಗಿ ॥
ರಾಮಣೀಯಕಸುಖಿಗಳು ಪಾಸಿನಲ್ಲಿ ನಿ । ದ್ರಾಮುದ್ರರಾಗದೇನಿಹರೆ ॥ ೧೩೨ ॥

ಹೆಂಗಳೆಲ್ಲರ ಭರತೇಶ್ವರ ತನ್ನಂಗ । ಸಂಗದೊಳ್ತಣಿಪಿ ತಾನವರ ॥
ಸಂಗದೊಳ್ತಣಿದು ಕಣ್ಣವಿದೊರಗಿದನೆಲ್ಲ । ಹೆಂಗಳುವೆರಸಿ ಪಾಸಿನೊಳು ॥ ೧೩೩ ॥

ಘಳಿಲನೆದ್ದಂಗವ ತೊಳೆದು ಮತ್ತಾ ರಾಯ । ನಳಿನಾಕ್ಷಿಯರನಪ್ಪಿಕೊಂಡು ॥
ಬಳಸಿ ಶೈತ್ಯೋಪಚಾರವ ಮಾಡುತಿಪ್ಪ ಪು । ತ್ತಳಿಗೆ ಮೈಗೊಟ್ಟೊರಗಿದನು ॥ ೧೩೪ ॥

ನೂತನಯೌವನಾಂಗಿಯರಾಟವದು ಮನೋ । ಜಾತಸುಖದ ಮೊತ್ತವೊದಲು ॥
ಆ ತೀವ್ರಸುಖದ ಸೊಕ್ಕೇರಿದಂತಾ ರಾಯ । ನಾ ತಲ್ಪದೊಳು ನಿದ್ರೆಗೈದಾ ॥ ೧೩೫ ॥

ಕಿವಿವೇಟದೊಳು ಭರತೇಶಗೆ ಸೋತಿದ್ದ । ತವೆ ಕಂಡು ಸೋಂಕಿ ಮತ್ತವನ ॥
ಸವಿಗೂಟದಾನಂದ ತಲೆಗೇರಿದಂತೆ ಕ । ಣ್ಣವಿದು ನಿದ್ರೆಗೆ ಸಂದರವರು ॥ ೧೩೬ ॥

ಇಷ್ಟ ಸುಖವು ಪುಣ್ಯನಿರ್ಜರೆಯೆಂದು ಸ । ದೃಷ್ಟಿಯ ರಾಜೇಂದ್ರ ನೆನೆದಾ ॥
ದೃಷ್ಟಿಗಳೆರಡು ಮುಚ್ಚಿದ್ದುವು ಮನವಾತ್ಮ । ದೃಷ್ಟಿಯೊಳಿರಲೊರಗಿರ್ದಾ ॥ ೧೩೭ ॥

ಬೆಳಗೈದು ಘಳಿಗೆಯೆಂಬಾಗ ಚಕ್ರೇಶನಾ । ಲಲನೆಯರರಿಯದಂತೆದ್ದು ॥
ಜಲವ ಮುಕ್ಕುಳಿಸಿ ವೀಳೆಯಗೊಂಡು ಮತ್ತದ । ಕಳೆದಾತ್ಮಯೋಗದೊಳಿದ್ದಾ ॥ ೧೩೮ ॥

ತನು ತನ್ನದಲ್ಲವೆಂದೆಣಿಸುವನವನಾಗ । ವನಿತೆಯರ್ಕಳ ಚಿಂತಿಸುವನೆ ॥
ಅನಘನಿರಂಜನಸಿದ್ಧನ ಧ್ಯಾನದೊಂ । ದನುಭವದೊಳು ತೆಪ್ಪಗಿರ್ದಾ ॥ ೧೩೯ ॥

ಕೂಡರುಣೋದಯವಪ್ಪ ವೇಳೆಯೊಳೊಲ್ದು । ಪಾಡುವ ಸುಪ್ರಭಾತಗಳಾ ॥
ಗಾಡಿಕಾರರ ದೇವನಾಲಿಸುತಾತ್ಮನ । ನೋಡುತಿರ್ದನು ನಿಜಾಂಗದೊಳು ॥ ೧೪೦ ॥

ಉಪ್ಪವಡದ ಪದಗಳ ಕೇಳುತಬಲೆಯು । ರುಪ್ಪವಡಿಸುತುಟ್ಟು ತೊಟ್ಟು ॥
ತೆಪ್ಪಗೆ ಯೋಗದೊಳಿರ್ದ ರಾಯನ ನೋಡು । ತೊಪ್ಪದೊಳಿರ್ದರೊತ್ತಿನೊಳು ॥ ೧೪೧ ॥

ಮನೆಮನೆಗೆಯ್ದಿದ ತನ್ನ ಹಲವುರೂಪ । ನನಿತರೊಳ್ಪಯಲುಮಾಡಿದನು ॥
ನೆನೆದೊಂದೆ ರೂಪಿನೊಳ್ನಿಂದನಾ ನವ್ಯಕಾ । ಮಿನಿಯರೆಲ್ಲಚ್ಚರಿವಡಲು ॥ ೧೪೨ ॥

ವೇಳಾವಳಿಯೊಳು ಹಂಸನಾಥನ ಪಾಡೆ । ಕೇಳುತ ಪುಣ್ಯಗಾನವನು ॥
ಆಲಿದೆರೆದನೊಬ್ಬಳಿಗೆ ವಿನಯುವ ನುಡಿ । ದಾಲಯದಿಂದೆದ್ದನೊಡನೆ ॥ ೧೪೩ ॥

ತರಣಿಮಂಡಲವ ಪೂರ್ವಾದ್ರಿಯೊಳ್ಕಂಡನಾ । ದರದಿಂದ ನಿತ್ಯಕರ್ಮಗಳ ॥
ವಿರಚನೆಯೊಳು ರಾಯನಿರ್ದನೆಂಬೆಡೆಗೆ ಖೇ । **ಚರಿಯರ ವೈವಾಹಸಂಧಿ** ॥ ೧೪೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೪೫ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವ್ವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೪೬ ॥

ಸಾಕ್ಷಿಯಲ್ಲದೆ ಸುಖದುಃಖಕೆ ನೀನಲ್ಲಿ । ಸಾಕ್ಷಾದನುಭವಿಯಲ್ಲ ॥
ಮೋಕ್ಷವೆ ನೀನಲ್ತೆ ನನ್ನೊಳಗಿರು ನಿರ । ಪೇಕ್ಷಾ ಚಿದಂಬರಪುರುಷಾ ॥ ೧೪೭ ॥

ಖೇಚರಿಯರ ವೈವಾಹಸಂಧಿ ಸಂಪೂರ್ಣಂ

## ಭೂಚರಿಯರ ವೈವಾಹಸಂಧಿ.

ಪರಮಗುರುವೆ ಪರಮಾರಾಧ್ಯ ಜಯ ಪರಾ । ತ್ಪರವಸ್ತು ನಿನಗೆ ನಮೋಸ್ತು ॥
ಪರಿಪಾಲಿಸೆನಗೆ ಸನ್ಮತಿಯನು ಸೌಖ್ಯತ । ತ್ಪರನೆ ನಿರಂಜನಸಿದ್ಧಾ ॥ ೧ ॥

ವಿನಮಿರಾಜಗೆ ಖೇಚರರಿಗೆ ಭೂವರನರ । ಮನೆಯೊಳೌತಣವ ಮಾಡಿಸಿದಾ ॥
ಘನತರದುಡುಗೊರೆಯಿತ್ತು ಬೀಯಗರೆಂದು । ಬಿನದವನಾಡಿ ಮನ್ನಿಸಿದಾ ॥ ೨ ॥

ಇಂದುಮೊದಲುಗೊಂಡು ನೀವೆಲ್ಲರುರೆ ನಿಮ್ಮ । ನಂದನೆಯರ ಮನೆಗಳಿಗೆ ॥
ಬಂದುಂಡು ಹೋಗುತ ಕೆಲವುದಿವಸವಿಹು । ದೆಂದು ಬೀಡಿಗೆ ಕಳುಹಿದನು ॥ ೩ ॥

ಪೆಂಡಿರ ದಾದಿಯರನು ಸಖಿಯರ ಕರ । ಕೊಂಡು ಮನ್ನಿಸಿ ಸರಸದೊಳು ॥
ಉಂಡುಟ್ಟು ನಿಮ್ಮ ಪೆಂಗಳ ಹತ್ತಿರಿಹುದೆಂದು । ಮಂಡಲೇಶ್ವರನು ನೇಮಿಸಿದಾ ॥ ೪ ॥

ನಂಬುಗೆವಂತರ ಕರೆದು ನೂತನದ ನಿ । ತಂಬಿನಿಯರು ಬೆಸಸಿದುದಾ ॥
ಇಂಬಿನೊಳೆಮಗರುಹುತ ಬಹುದೆಂದು ನಿ । ಲುಂಬಿಸಿ ಮನ್ನಣೆಯಿತ್ತಾ ॥ ೫ ॥

ಮುನ್ನಿನ ರಾಣಿಯರೋಲಗದೊಳಗಿದ್ದು । ನಿನ್ನಿನ ಸತಿಯರ ಕರೆಸಿ ॥
ಬನ್ನಿರೌ ನಿಮ್ಮಕ್ಕಂದಿರಿಗೆ ವಂದಿಸಿರೆಂದ । ನೆನ್ನದ ಮುನ್ನೆರಗಿದರು ॥ ೬ ॥

ತಂಗಿಯರಿರ ಬನ್ನಿ ಸುಖಬಾಳ್ವ ಕನಕಲ । ತಾಂಗಿಯರಿರ ಬನ್ನಿರೆಂದು ॥
ಭೃಂಗಕುಂತಳೆಯರು ತೆಗೆದಪ್ಪಿಕೊಂಡರಾ । ಹೆಂಗಳನರಸನಿದಿರೊಳು ॥ ೭ ॥

ಇಂತು ನಿರಾತಂಕಲೀಲೆಯೊಳರಸನೋ । ರಂತಲ್ಲಿ ಕೆಲವುದಿನಗಳಾ ।
ತಾಂ ತವಿಸುತ ಸುಖಮಿರುತಿರೆ ಮತ್ತೊಂದು । ಸಂತೋಷ ಬಂದುದೇನೆಂಬೆ ॥ ೮ ॥

ಗಜಘಟೆಯೊಳು ಮಹಾಗಜವೊಪ್ಪುವಂತೆ ಭೂ । ರಿಜನೇಶರೆಡೆಯೊಳಿಪ್ಪಾಗ ॥
ವಿಜಯರಾಜನ ಬಿನ್ನವತ್ತಳೆ ಬಂದು ಭೂ । ಭುಜಗಿಕ್ಕಿವೋದಿದರೊಡನೆ ॥ ೯ ॥

ಸ್ವಸ್ತಿ ಶ್ರೀಮನ್ಮಹಾನಿಸ್ಸೀಮಸಾಮರ್ಥ್ಯ । ವಿಸ್ತಾರಿತೋರ್ವರಾತಳಗೆ ॥
ದುಸ್ತರರಿಪುರಾಜದಲ್ಲಣಗಾಪ್ತರಾ । ಜಸ್ತೋಮಸಂತೋಷಕರಗೆ ॥ ೧೦ ॥

ಕಾಮಿನೀಜನಪಂಚಬಾಣಗೆ ಷಟ್ಖಂಡ । ಭೂಮಂಡಲಾಗ್ರಗಣ್ಯನಿಗೆ ॥
ನಾಮಮಾತ್ರವ ಕೇಳಲೊಡನೆ ಜಾಣರಿಗೆ ಸು । ಕ್ಷೇಮವ ಮಾಳ್ಪ ಕೋವಿದಗೆ ॥ ೧೧ ॥

ಸುಜನೇಂದುಭರತಚಕ್ರೇಶಗೆ ಭಯಭಕ್ತಿ । ಋಜುದೋರೆ ದೇವರೂಳಿಗದ ॥
ವಿಜಯನು ಸಾಷ್ಟಾಂಗವೆರಗಿ ಕೈಮುಗಿದೆದ್ದು । ನಿಜದೋರಿ ಮಾಳ್ಪ ಬಿನ್ನಹವು ॥ ೧೨ ॥

ಸಾಧ್ಯವಾದುದು ಪಡುವಣ ಖಂಡ ತದ್ದೇಶ । ಮಧ್ಯದ ನೃಪರೆಲ್ಲರೊಸೆದು ॥
ಅಧ್ಯಾತ್ಮಸೂರ್ಯ ನಿನ್ನಡಿಗಳ ಕಾಣ್ಬದೊಂ । ದಧ್ಯಯನದೊಳಿರ್ದರೀಗ ॥ ೧೩ ॥

ವಾರಣವಾಜಿಯ ಕೆಲರಾಯ್ದು ತೆಗೆದಿದ್ದ । ರೀ ರಾಜರೊಳು ಮತ್ತೆ ಕೆಲರು ॥
ವಾರಣಗಮನದ ರಾಜಪುತ್ರಿಯರ ಶೃಂ । ಗಾರಿಸಿ ತೆಗೆದಿದ್ದರೀಗ ॥ ೧೪ ॥

ಕ್ಷತ್ರಿಯರೆಂಬ ಸಲುಗೆಯೊಳಿವರು ತಮ್ಮ । ಪುತ್ರಿಯರನು ತಂದು ಕೊಡುವ ॥
ಯಾತ್ರೆಯೊಳಿರೆ ಪೇಳ್ದೆನೆಮ್ಮೊಡೆಯಗೆ ವ್ರತ । ಗಾತ್ರೆಯರಾಗಬೇಕೆಂದು ॥ ೧೫ ॥

ವ್ರತವ ಕೊಂಬರೆ ಮುನಿಗಳು ಬೇಕು ಧರ್ಮಪ । ದ್ಧತಿಯಿಲ್ಲದೀ ಕ್ಷೇತ್ರದಲ್ಲಿ ॥
ಯತಿಗಳಿಲ್ಲಾ ಯೋರ್ವಿಗೆಯ್ದಿ ಯೋಗಿಗಳಿಂದ । ವ್ರತಗೊಳ್ಳಲೊಪ್ಪಿದರವರು ॥ ೧೬ ॥

ಅಷ್ಟರೊಳೊಂದು ವಿಸ್ಮಯವನೇನೆಂಬೆನು । ತ್ಕೃಷ್ಟವಲ್ಲವೆ ನಿನ್ನ ಪುಣ್ಯಾ ॥
ಇಷ್ಟಯಾತ್ರೆಗೆ ಪೋಪ ಚಾರಣರಿಳಿದರ । ಭೀಷ್ಟದೊಳೆಮ್ಮ ಪಾಳೆಯಕೆ ॥ ೧೭ ॥

ಚಾರಣಮುನಿಗಳ ಕೈಯಿಂದ ನನ್ನ ದೇ । ಹಾರದ ಮನೆಯೊಳೆಲ್ಲರಿಗೆ ॥
ಚಾರಿತ್ರವ್ರತವಾದುವಾ ಮುನಿಗಳು ಪೋದ । ರಾರಯ್ಯುದಲ್ಲಿಗಾ ವಿವರಾ ॥ ೧೮ ॥

ಮುಂದಣ ಬಿನ್ನಹ ಕುಂದಣಬೊಂಬೆಗ । ಳಂದದ ರಾಜಪುತ್ರಿಯರಾ ॥
ಚಂದದಿ ತರುತಿದ್ದರವರು ಮುನ್ನೂರಿಪ್ಪ । ತ್ತೆಂದೋಡಿ ಜಯಜಯಯೆಂದಾ ॥ ೧೯ ॥

ನಾಳೆ ದೇವರ ಕಾಣ್ಬರೆಂದು ಬಿನ್ನವಿಸಿದ । ನೋಲೆಯ ತಂದವನದಕೆ ॥
ಹೋ ಲೇಸು ಲೇಸೆಂದು ಬುದ್ಧಿಸಾಗರ ಕೊಟ್ಟ । ನಾಲೀಢಚರಗೆ ಮನ್ನಣೆಯಾ ॥ ೨೦ ॥

ಆ ದಿನ ಹೋದುದು ಮರುದಿನ ಬಹುವಾದ್ಯ । ನಾದದೊಳ್ದಾಂಟಿ ಸಿಂಧುವನು ॥
ಆದಿಯ ಕಟಕದೊತ್ತಿನೊಳು ವಿಜಯರಾಜ । ನಾದರದೊಳು ಬಂದು ಬಿಟ್ಟಾ ॥ ೨೧ ॥

ಭೂವರನದ ಕೇಳುತೋಲಗಗೊಟ್ಟೊಳ । ಚಾವಡಿಯೊಳಗೆಂದಿನಂತೆ ॥
ಆ ವಿಜಯಾಂಕನ ಬರಹೇಳೆನುತ ತನ್ನ । ಸೇವಕರನು ಕಳುಹಿದನು ॥ ೨೨ ॥

ಹೆಂಗಳ ಜನಕರ ಹಿಂದಿಕ್ಕಿಕೊಂಡೆಯ್ದಿ । ಪೊಂಗಿ ನಿವಾಳಿ ಕಾಣಿಕೆಯು ॥
ಸಂಗಿಸಿ ಸಾಷ್ಟಾಂಗವೆರಗಿ ವಿಜಯರಾಜ । ನಂಗಜರೂಪನ ಕಂಡಾ ॥ ೨೩ ॥

ಸೂಚಿಸಿದಂತೆ ಪೆಂಗಳ ಜನಕರು ರಾಯ । ಗೌಚಿತ್ಯದರ್ಶನವಿತ್ತು ॥
ಗೋಚರವೆನೆ ಕೈಯ ಮುಗಿದು ಕುಳಿತರು ಯ । ಥೋಚಿತದಾಸನಗಳಲಿ ॥ ೨೪ ॥

ಮತ್ತಿನವರು ಬಂದು ಸಾಷ್ಟಾಂಗವೆರಗೆ ಕಂ । ಡಿತ್ತ ಕುಳ್ಳಿರೆನೆ ಕುಳಿತರು ॥
ಮತ್ತೇಭಹಯಗಳ ತಂದಿದ್ದರಿವರೆಂದ । ನೊತ್ತಿನೊಳಾ ವಿಜಯೇಂದ್ರಾ ॥ ೨೫ ॥

ವ್ಯೆವೆಳಗುಕ್ಕಿತ ಕುಳಿತು ಬಂದವರನಾ । ರೈವ ರಾಜೇಂದ್ರನ ಸೊಬಗಾ ॥
ಸ್ವೈವೆರಗಾಗಿ ನೋಡಿದರು ಭೂಪಾಲರು । ಕೈವೆರಳಿಟ್ಟು ನಾಸಿಕಕೆ ॥ ೨೬ ॥

ಇದ್ದವರೆಲ್ಲರುತ್ತಮರಹುದಿವರೊಳೀ । ಉದ್ದಂಡಭೂಪನಗ್ರಿಮನು ॥
ಮುದ್ದುಮೊಗದ ತನ್ನ ಸುತೆಯರಿಬ್ಬರನು ತಂ । ದಿದ್ದನೆಂದನು ವಿಜಯೇಂದ್ರಾ ॥ ೨೭ ॥

ನಾಳಿನ ರಾತ್ರಿಗೆ ಲಗ್ನ ಲೇಸೆಂದಾನು । ಕೇಳಿಕೊಂಡೆಯ್ತಂದೆನಿವರಾ ॥
ಲಾಲಿಸಿ ಬೀಳ್ಕೊಡು ಮದುವೆಗುಜ್ಜುಗಿಸೆಂದ । ನಾಲಿಸಿ ಸಖರು ಲೇಸೆನಲು ॥ ೨೮ ॥

ಉಡುಗೊರೆಯಿತ್ತು ಭೂಪಾಲರ ಕಳುಹಿ ಮ । ತ್ತೊಡನೆ ಬೀಳ್ಕೊಟ್ಟನೆಲ್ಲರನು ॥
ಸಡಗರದೊಳು ಹೋದುದಾ ದಿನ ಮರುದಿನ । ತೊಡಗಿತು ಮದುವೆ ರಾಯನಿಗೆ ॥ ೨೯ ॥

ಕಪ್ಪಕೆ ತಂದಾನೆಕುದುರೆಗಳನು ಹಗ । ಲೊಪ್ಪಿಸಿಕೊಂಡನಾ ರಾಯಾ ॥
ಸುಪ್ಪಾಣಿಪೆಂಗಳನೊಂದೆ ಪಸೆಯೊಳಿರು । ಳೊಪ್ಪದೊಳ್ವೈವಾಹವಾದಾ ॥ ೩೦ ॥

ಸೆಜ್ಜೆವನೆಯೊಳು ಮುನ್ನೂರಿಪ್ಪತ್ತೆನಿಸುವ । ಕಜ್ಜಲಾಕ್ಷಿಯರನಾ ನೃಪತಿ ॥
ಬಿಜ್ಜೋದರಿಯರ ನೆರೆದಂತೆ ಭಯವನು । ಲಜ್ಜೆಯನೊತ್ತಿ ಕೂಡಿದನು ॥ ೩೧ ॥

ಹೆಂಗಳೆಲ್ಲರು ಸೊಬಗೆಯರಹುದವರಲ್ಲಿ । ರಂಗಾಣಿ ಗಂಗಾಣಿಯೆಂಬ ॥
ಹೆಂಗಳಿಬ್ಬರು ಸೂರೆಗೊಂಡರು ರಾಯನ । ಕಂಗಳ ಮನವನೇನೆಂಬೆ ॥ ೩೨ ॥

ಕಂಡರಿಸಿದವೊಲು ಕಡೆದೆರೆದಂತೆ ಕ । ರಂಡಗೆವೊಲೆವೊಗದಿಂದ ॥
ದುಂಡುದೋಳ್ತೊಡೆನಡುಮುಡಿಯಿಂದ ಮೆರೆದರು । ದ್ದಂಡರಾಜನ ಮಕ್ಕಳವರು ॥ ೩೩ ॥

ಬೀಗಿ ಬೆಳೆದ ಸೊಕ್ಕು ಜವ್ವನೆಯರ ಮದ । ನಾಗಮುಸಿದ್ಧನಾ ರಾಯಾ ॥
ಭೋಗಿಸಿದನು ನೇಮದಾಣವಲುಗಿ ಸುಖ । ಸಾಗರಮಥನದಂತಾಯ್ತು ॥ ೩೪ ॥

ಪೂಣಿಸಿ ರಾಜೇಂದ್ರ ತೆಗೆದತ್ತ ರತಿಗೆ ರಂ । ಗಾಣಿಗಂಗಾಣಿಯರೊಸೆದು ॥
ಊಣೆಯಗೊಡದೆ ವ್ಯೆಗೊಟ್ಟರು ನವ್ಯಸಾಂ । ಬ್ರಾಣಿ ವ್ಯೆಗೊಡುವ ರೀತಿಯೊಳು ॥ ೩೫ ॥

ಕಮಲಗಳೊಳು ತುಂಬಿ ರಮಿಸುವಂತಾ ರಾಯ । ರಮಿಸಿದನೆಲ್ಲ ಪೆಂಗಳನು ॥
ರಮಣಿಯರ್ತಣಿದರು ತಾನು ತಣಿದನಹೊ । ಸಮಸುಖವಾಯ್ತೊರಗಿದರು ॥ ೩೬ ॥

ರತಿಸುಖಾಂತ್ಯದ ನಿದ್ರೆಗೈದು ವಿಶ್ರಮಿಸಿಯಾ । ಸತಿಯರುವೆರಸುದಯದೊಳು ॥
ಕ್ಷಿತಿಪನುಪ್ಪವಡಿಸಿ ನಿತ್ಯಕರ್ಮವ ತೀರ್ಚಿ । ವಿತತಶೋಭೆಯೊಳಿರುತಿರ್ದಾ ॥ ೩೭ ॥

ರಾಜಿತವಿನಯವ ಖಚರರಂತುದ್ದಂಡ । ರಾಜಮುಂತಾದವರ್ಗೆಸಗಿ ॥
ಆ ಜಾಣೆಯರನು ಖೇಚರಿಯರ ನಿಲಿಸಿದಂ । ತೋಜೆಯೊಳಿಂಬಿಟ್ಟನೊಡನೆ ॥ ೩೮ ॥

ಔತಣಮಾಡಿಸಿ ವಿಜಯರಾಜಗೆ ಸವಿ । ಮಾತ ನುಡಿದು ತಾನು ತೊಟ್ಟ ॥
ಜ್ಯೋತಿರ್ಮಯದ ಭೂಷಣವಿತ್ತು ಕಳುಹಿದ । ನಾತನೇನುಚಿತಬಾಹಿರನೆ ॥ ೩೯ ॥

ಸುಖದೊಳಗಿಂತು ಕೆಲವುದಿನ ಸಲುತಲ್ಲಿ । ಸುಖಿಗಳರಸನಿರುತಿರಲು ॥
ಸುಖದ ಮೇಲುತ್ತಮಸುಖವೆ ಬಪ್ಪಂತೊಂದು । ಸುಖಚಿಹ್ನೆತೋರಿತು ಮತ್ತೆ ॥ ೪೦ ॥

ಮೂಡಣ ಖಂಡವ ಸಾಧಿಸಿ ಜಯರಾಜ । ಕೂಡಿಕೊಂಡಲ್ಲಿಯ ನೃಪರಾ ॥
ಡೌಡೆ ತಂಬಟ ಭೇರಿ ಮೊದಲಾದ ವಾದ್ಯದ । ಗಾಢದೊಳೆಯ್ತರುತಿರ್ದಾ ॥ ೪೧ ॥

ಹರಿವ ಕುದುರೆ ಹಜ್ಜೆಯಿಕ್ಕುವ ಪೇರಾನೆ । ತೆರಳುವ ತೇರು ಪತಾಕೆ ॥
ಹರಳಲಿಸಿದ ಭಟರಿಂದೊತ್ತಿ ಬರುತಿರ್ದ । ಭರತೇಶ ಬಪ್ಪ ರೀತಿಯೊಳು ॥ ೪೨ ॥

ರಾಯರ ದೇವಗೆ ಬಂಟನಲ್ಲದೆ ಮಿಕ್ಕ । ರಾಯರಿಗವ ರಾಯನಲ್ತೆ ॥
ಆಯತಜಾತಿಕ್ಷತ್ರಿಯನಲ್ತೆ ರಾಜವಿ । ಡಾಯದೊಳೆಯ್ತರುತಿರ್ದಾ ॥ ೪೩ ॥

ಹೋಹಾಗ ಕೊಂಡೆಯ್ದಿದೊವ್ಮಡಿಸೇನೆಗೆ । ಬಾಹಾಗಲಿವ್ಮಡಿಯಾಗಿ ॥
ಸಾಹಸಿ ಬಂದು ರಾಯನ ಕಟಕದ ಸಾರೆ । ಮೋಹರದೊಳು ಬೀಡ ಬಿಟ್ಟಾ ॥ ೪೪ ॥

ಒಡೆಯಗೆ ಗಜಹಯಗಳ ತಂದ ರಾಯರ । ಪಡೆಯನೊಂದೆಸೆಯೊಳು ಬಿಡಿಸಿ ॥
ಕಡುಚೆಲ್ವಪೆಂಗಳ ತಂದ ಭೂಪರನೊಂದು । ಕಡೆಯೊಳಿಂಬಿಟ್ಟನಾ ಕುಶಲಾ ॥ ೪೫ ॥

ವೇತಂಡರಾಜನೆಂಬವನ ಪುತ್ರಿಯರಿಬ್ಬ । ರಾ ತಳೋದರಿಯರು ಸಹಿತ ॥
ನೂತನಪ್ರಾಯದ ನಾನೂರುಪೆಂಗಳ । ಪ್ರೀತಿಯೊಳ್ತಂದಿದ್ದರವರು ॥ ೪೬ ॥

ಪಯಣದೊಳವರಿತ್ತ ಬಹಾಗ ಕರ್ಮಭೂ । ಮಿಯ ಹೊಕ್ಕು ಗುರುಕರುಣೆಯೊಳು ॥
ನಿಯತವ್ರತಗಳಾಂತು ಬಂದಿದ್ದರೆಲ್ಲರು । ಜಯರಾಜ ಜಾಣನೇನಲ್ತೆ ॥ ೪೭ ॥

ಮಾತಿನ ಮಾಲೆಯೇನವರನು ಮುನ್ನಿನ । ರೀತಿಯೊಳ್ಕಾಣಿಸಿಕೊಂಡಾ ॥
ಆ ತೆರದೊಳೆ ಕಪ್ಪ ಸಂದುವು ಮದುವೆ ಮ । ತ್ತಾ ತೆರದೊಳೆ ನೃಪಗಾಯ್ತು ॥ ೪೮ ॥

ನಾನೂರುಪೆಂಗಳ ಸೆಜ್ಜೆವನೆಗಳಿಗೊ । ಯ್ದಾ ನರಪತಿ ರಮಿಸಿದನು ॥
ಏನೆಂಬೆ ರೂಪಿಂದ ಗುಣದಿಂದ ನೃಪಗೆ ಮ । ಹಾನಂದದೋರಿದರವರು ॥ ೪೯ ॥

ಕೊಂಕು ಕೊರತೆಯಿಲ್ಲದಂಗವಂಗಕೆ ತಕ್ಕ । ಲಂಕಾರವದಕೆ ತಕ್ಕಂತೆ ॥
ಸೋಂಕುವ ಸೊಗಸು ಕೂಡುವ ಕುಶಲದೊಳು ಮಾ । ನಾಂಕರೂಪನ ಮೆಚ್ಚಿಸಿದರು ॥ ೫೦ ॥

ಕಾಮಾರ್ಥವೆರಡುಂಟು ಧರ್ಮಮೋಕ್ಷಗಳೆಂಬ । ನಾಮವಿಲ್ಲೈದುಮ್ಲೇಚ್ಛದೊಳು ॥
ಆ ಮಹಿಯೊಳು ಹುಟ್ಟಿದವರಿಗೀ ಲಾವಣ್ಯ । ಕಾಮಕಲಾಪ್ರೌಢಿ ಸಹಜಾ ॥ ೫೧ ॥

ಕಡುದೊಡ್ಡ ಮೊಲೆ ಮುಡಿಪಿಂಚಕದಿಂದ ನು । ಣ್ಪಡೆದ ತೋಳ್ತೊಡೆ ಮೊಗದಿಂದ ॥
ನಿಡುಗಣ್ಣು ಸೆಳೆನಡುವಿಂದ ಹೆಂಗಳು ಸೆರೆ । ವಿಡಿದರು ನೃಪನ ದಿಟ್ಟಿಗಳಾ ॥ ॥ ೫೨ ॥

ತೆಗೆದಂತೆ ರಾಯನಿಚ್ಛೆಗೆ ಸಲ್ವ ಕಲೆಗಳ । ಬಗೆದೋರಲೊಡನೆ ಬಲ್ಪಿಡಿವ ॥
ಬಿಗಿದಪ್ಪಿ ಬೆರಸುವ ಬಿನ್ನಾಣದಿಂದ ಚ । ಕ್ರಿಗೆ ಮಹಾಲೀಲೆದೋರಿದರು ॥ ೫೩ ॥

ಚೆನ್ನಿಗರರಸನ ಕಂಡು ಕಣ್ಣಲಿದು ಪ್ರ । ಸನ್ನಲೀಲೆಗೆ ಮನಹಿಗ್ಗಿ ॥
ಕನ್ನೆಯರೊಸೆದು ಕೂಡಿದರು ಚಂದ್ರನ ಕಂಡು । ಕನ್ನೈದಿಲರಳುವಂದದೊಳು ॥ ೫೪ ॥

ಸೌಂದರದೊಳು ರತಿಲೀಲೆಯೊಳೆಲ್ಲರು । ಕುಂದಿಲ್ಲದವರಹುದಲ್ಲಿ ॥
ಸೌಂದರದೊಳಗು ಸೌಂದರಲೀಲೆಯೊಳು ಲೀಲೆ । ಯೆಂದೆನಲಿಬ್ಬರೊಪ್ಪಿದರು ॥ ೫೫ ॥

ಸಿಂಧುರಾವತಿ ಬಂಧುರಾವತಿಯೆಂಬಬ್ಬ । ಗಂಧಿಯರಿಬ್ಬರೊಲ್ಮೆಯೊಳು ॥
ಸಿಂಧುರದೊಡನೆ ಸಿಂಧುರಸತಿ ಬೆರಸುವ । ಬಂಧುರದೊಳು ಬೆರಸಿದರು ॥ ೫೬ ॥

ವೇತಂಡರಾಜಪುತ್ರಿಯರವರಿಬ್ಬರು । ಭೂತಳೇಶ್ವರನಿಚ್ಛೆಗೊದಗಿ ॥
ಜ್ಯೋತಿಯೊಡನೆ ಜ್ಯೋತಿ ಬೆರಸುವಂತೆರವಿಲ್ಲ । ದಾ ತರುಣಿಯರು ಕೂಡಿದರು ॥ ೫೭ ॥

ಆ ಸಿಂಧುರಾವತಿಬಂಧುರಾವತಿಯರ । ಸೂಸುಜವ್ವನದ ಸೊಕ್ಕರಿದು ॥
ಆಸೆ ತೀರ್ವಂತೆ ಕೂಡಿದನು ಸಕ್ಕರೆಯ ಮೇ । ಲ್ಸೂಸಿ ಪಾಲ್ಸುಡಿವಂತೆ ನೃಪತಿ ॥ ೫೮ ॥

ಮರೆಯಿಸಿದನು ತಂದೆತಾಯಿಗಳನು ಕೂಡೆ । ತೊರೆಯಿಸಿದನು ಬಂಧುಜನವಾ ॥
ನೆರೆಜಾಣನಾ ರಾಯನೊಂದಿರುಳೊಳೆ ತನ್ನೊ । ಳೆರಕವ ಮಾಡಿದನವರಾ ॥ ೫೯ ॥

ತಣಿದರು ಸತಿಯರೆಲ್ಲರು ತಾನು ತಣಿದೊಲ್ದು । ಮಣಿಮಂಚಗಳೊಳು ವಿಶ್ರಮಿಸಿ ॥
ಗುಣಕೆ ಸೋಲದ ಸುಖಿಯಾವನಾ ಸತಿಯರ । ಗುಣವ ನೆನೆದನು ತನ್ನೊಳಗೆ ॥ ೬೦ ॥

ಸ್ವಚ್ಛರೂಪಿನ ಪೆಂಗಳತಿಕುಶಲೆಯರಿವ । ರಚ್ಚಿನ್ನವೆನೆ ಪುಟ್ಟಿದುರ್ವಿ ॥
ಮ್ಲೇಚ್ಛಖಂಡಗಳೆಂಬ ಪೆಸರಾಗಬಹುದೆಯೆಂ । ದಿಚ್ಛೆವಟ್ಟೆಣಿಸಿದನೊಳಗೆ ॥ ೬೧ ॥

ಧರ್ಮವರ್ತನೆಯಿಲ್ಲವಾಗಿ ಮ್ಲೇಚ್ಛೋರ್ವಿಯೆಂ । ಬರ್ಮನುಜರು ನೋಡಲಿಲ್ಲ ॥
ಕರ್ಮಭೂಮಿಯ ಸತಿಯರಿಗೆ ಹೆಚ್ಚಿನ ಚಿನ್ನೆ । ಯರ್ಮರ್ಘು ಜನಿಸಿದರೆಂದಾ ॥ ೬೨ ॥

ಧರ್ಮಚಾರಿತ್ರಭಾಂದಸಿಕೆಯದಿಲ್ಲಾಗಿ । ನರ್ಮಪ್ರೌಢೆಯರಾದರಿವರು ॥
ಧರ್ಮಭಾಂದಸಿಕೆಯ ಸೋಂಕಾದರಿವರೆಮ್ಮ । ಕರ್ಮಭೂಮಿಜೆಯರಂತಿರರೆ ॥ ೬೩ ॥

ಕ್ರಮದಿಂದ ಧರ್ಮದೋಜೆಯ ಕಲಿಸುವವಿನ್ನು । ವಿಮಲಭೋಗಾಂಗವಿಡಾಯ ॥
ಘಮಘಮಿಸುತ ಗಾಡಿವೆತ್ತಿದೆಯಿವರ್ಗೆಂದು । ಸುಮುಖಶಿರೋಮಣಿ ನೆನೆದಾ ॥ ೬೪ ॥

ಆಡಬಾರದು ಪರರೊಡನಿದನಾನಂದ । ಮಾಡಬಹುದು ಮನಸಿನೊಳು ॥
ನೋಡಿದು ಹಂಸನಾಥನ ಕೃಪೆಯೆಂದು ಕೊಂ । ಡಾಡಿದನವನಾತ್ಮಗುರುವಾ ॥ ೬೫ ॥

ಕೈವಲ್ಯಸುಖವ ಕೊಡುವ ಹಂಸನಾಥನ । ಭಾವಿಸುವಾತ್ಮಸಿದ್ಧರಿಗೆ ॥
ಆವಾವ ಸುಖಗಳು ಸಿರಿಗಳು ಬಾರವೆಂ । ದಾ ವಿಭು ನೆನೆದನೆದೆಯೊಳು ॥ ೬೬ ॥

ಬಂದ ಸುಖವ ಬಿಡಬೇಡ ಬಾರದುದ ಬೇ । ಕೆಂದು ಬಯಸಬೇಡ ತನ್ನ ॥
ಬೊಂದಿಯೊಳಿರ್ದ ಹಂಸನ ನೋಡುತಿರಲವ । ನೆಂದೆಂದು ಸುಖಿಯೆಂದು ನೆನೆದಾ ॥ ೬೭ ॥

ವೇದಿತಾತ್ಮಜ್ಞಾನಿ ಪೆಂಗಳೊಳ್ಪೆರೆದು ಪುಂ । ವೇದನೀಯವನುದಿರ್ಚುವನು ॥
*ಓದಿನೊಳಿದೆ ಸಾರುತದೆ ನಿಚ್ಚ ಪುಂವೇದ । ವಾದಾಂತವೆಂದು ಸಿದ್ಧಾಂತಾ ॥ ೬೮ ॥

---

*ಓದಿನೊಳರಿ ಸಾರುತಿದೆ ನಿಚ್ಚ ಪುಂವೇಯಂ । ವೇದಂತೊಯೆಂದು ಸಿದ್ಧಾಂತಾ.

ಗುರುವರೆ ಬಲ್ಲರು ಗಾಂಪರರಿಯರಿದು । ಪರಮರಹಸ್ಯ ನುಡಿದರೆ ॥
ಉರುಹಾಸ್ಯವಹುದೆಂದು ನುಡಿಯದೆ ನೆನೆದನು । ಗುರುಹಂಸನಾಥಸಾಕ್ಷಿಯೊಳು ॥ ೧೯ ॥

ಯುವತಿಯರೊಡಗೂಡಿ ಮನ್ನಿನಂತುದಯದೊ । ಳವನೀಶನುಪ್ಪವಡಿಸಿದಾ ॥
ಅವರ ತಂದೆಗಳನು ದಳಪತಿಯನು ಮನ್ನಿ । ನವರಂತೆ ಕೂಡೆ ಮನ್ನಿಸಿದಾ ॥ ೨೦ ॥

ಹಗಲಿರುಳುತ್ಸಾಹಮಯವಾಗಿ ಕಟಕದೊ । ಳ್ಸುಗುಭೋರುಶೋಭನವೆಂಬ ॥
ಬಗೆಯೊಳೆ ಕೆಲವುದಿನಗಳಂತು ಲೀಲೆಯೋ । ಳ್ತಿಗೆದುಹೋದುವು ಚಕ್ರಧರಗೆ ॥ ೨೧ ॥

ಆರುತಿಂಗಳಿಗಗ್ಗಿಯಾರಿತಾ ದಿನವನು । ವಿಾರಿ ಕಿರಿದುಕಾಲ ಹೋಯ್ತು ॥
ಮೂರುದಿನಂಬೊಲಿರ್ದುದು ಹೋದ ದಿನಗಳು । ತೋರಿತಿಲ್ಲುತ್ಸಾಹದಿಂದ ॥ ೨೨ ॥

ವೇಳೆಯನರಿದು ಮತ್ತೊಂದು ಪಗಲು ರಾಯ । ನೋಲಗಕೆಯ್ತಂದು ಮಂತ್ರಿ ॥
ಲೀಲೆಯೊಳಿರ್ದ ರಾಜೇಂದ್ರನ ಮುಂದೆಲ್ಲ । ಕೇಳೆ ಬಿನ್ನೈಸಿದನಿಂತು ॥ ೨೩ ॥

ಮೂರುಖಂಡವು ಸಾಧ್ಯವಾದುವಿನ್ನಾಜೆಯ । ಮೂರುಖಂಡವ ಗೆಲಬೇಕು ॥
ಆರಿತು ಬೆಂಕಿ ಪ್ರಯಾಣಕುಜ್ಜುಗಿಸಲೆ । ವಾರಾಂಕದಲ್ಲಣಯೆಂದಾ ॥ ೨೪ ॥

ಸ್ತ್ರೀರತ್ನಗಳನಿತ್ತ ನೃಪರ ನೀನಿಂತು ಕ । ಠೋರದ ದಂಡಿಗೆ ಕರೆಯೆ ॥
ಆ ರಾಜರೆಲ್ಲ ಕೃತಾರ್ಥರಾದರು ತಮ್ಮ । ಧಾರಿಣಿಗೆಯ್ದಲಿನ್ನೆಂದಾ ॥ ೨೫ ॥

ಜೋಲಿಮಾಡದಿರುಡುಗೊರೆಯಿತ್ತು ಸರ್ವಭೂ । ಪಾಲರ ಕಳುಹೆಂದು ಮಂತ್ರಿ ॥
ಪೇಳಲೊಡನೆ ರಾಯನೆಲ್ಲರ ನಿಲಿಸಿ ರಾ । ಜಾಲಯಕೆದ್ದನಾ ಕ್ಷಣವೆ ॥ ೨೬ ॥

ನೆನೆದು ಹಲವುರೂಪ ಕೈಕೊಂಡು ಹಲವುಮಾ । ನಿನಿಯರ ಮನೆಗಳ ಹೊಕ್ಕು ॥
ವನಿತೆ ನಿಮ್ಮಯ್ಯಗೆ ಪಯಣದೋರಿತು ಮುಂದ । ಣನುವ ಹೇಳೆಂದನೆಲ್ಲರೊಳು ॥ ೨೭ ॥

ನಿಮ್ಮ ತಂದೆಯ ಮನ್ನಿಸುವೆನಹುದಬಲೆ ನಿ । ಮ್ಮಮ್ಮನಿಲ್ಲಿಗೆ ಬಂದುದಿಲ್ಲ ॥
ಗಮ್ಮನೆ ಕಳುಹಬೇಕುಡುಗೊರೆಗಳ ಹೇಳು । ನಿಮ್ಮವರ್ಗೇನಿಚ್ಛೆಯೆಂದಾ ॥ ೨೮ ॥

ತೊಡಿಗೆಯೊಳೇನರ್ತಿ ಸೀರೆಯೊಳೇನರ್ತಿ । ಕಡುಗಂಪಿನೊಳಗಾವುದರ್ತಿ ॥
ಒಡನವರಿಚ್ಛೆಯ ಕಳುಹಬೇಕುಸುರೆಂಬ । ನುಡಿಯದೆ ನಗುತಿಹರವರು ॥ ೨೯ ॥

ನಿಮ್ಮ ತಾಯಿಚ್ಛೆಯ ಹೇಳೆಂಬನಲ್ಲಲ್ಲಿ । ಸುಮ್ಮನೆ ನಗುತಿಹರವರು ॥
ನಮ್ಮತ್ತೆಯಿಚ್ಛೆಯ ಹೇಳೆಂದು ಕೇಳ್ವನಾ । ಹೆಮ್ಮಕ್ಕಳೊಡನೆ ಗೂಢದೊಳು ॥ ೩೦ ॥

ನನ್ನಾಣೆ ಹೇಳುಹೇಳೆಂದೊತ್ತಿ ಕೇಳ್ವನಾ । ಚೆನ್ನೆಯರೊಡನುಸುರಿದರು ॥
ತನ್ನ ಮುಂದಿಟ್ಟುಡುಗೊರೆಯ ಕಟ್ಟಿಸಿದನಾ । ಮನ್ನಣೆಕಾರರೆಲ್ಲರಿಗೆ ॥ ೩೧ ॥

ಅವರವರೆಲ್ಲರ ದಾದಿಯರ್ಕಳ ಕರೆ । ದವರ್ಗೆ ಮನ್ನಣೆಯಿತ್ತು ಮತ್ತೆ ॥
ಇವನೆಮ್ಮ ಮಾತುಲಾನಿಯರಿಗೆ ಕೊಡಿಯೆಂದು । ತವೆ ಕಟ್ಟಿದುಡುಗೊರೆಯಿತ್ತಾ ॥ ೩೨ ॥

ಹೋಗಿ ನೀವಲ್ಲಿಯೆ ನಿಲಲಾಗದೆನ್ನಾಣೆ । ಬೇಗದೊಳ್ಬಹುದೆಂದು ನುಡಿದು ॥
ರಾಗದೊಳೆಲ್ಲರ ಪಯಣವ ಮಾಡಿದ । ನಾಗಲೆ ಬಂದನೋಲಗಕೆ ॥ ೮೩ ॥

ಬಳಿಕ ಬೀಳ್ಕೊಡುವೆನು ನಿಮ್ಮನನಕ ಮನೆ । ಯೊಳು ಹೊಕ್ಕು ಬನ್ನಿ ನೀವೆಂದು ॥
ಲಲನೆಯರಯ್ಯಂದಿರೆಲ್ಲರನೇಳಿಸಿ । ಕಳುಹಿದನಾ ಲೇಸುಗಾರಾ ॥ ೮೪ ॥
ಸುತೆಯರ ಮನೆಗೆ ನಂಬುಗೆವಂತರೊಡಗೂಡಿ । ಪಿತರತ್ತ ಸಾಗಿದರಿತ್ತ ॥
ಕ್ಷಿತಿಪತಿ ಮಿಕ್ಕಿನ ದೊರೆಗಳ್ಗೆ ರತ್ನರಂ । ಜಿತದುಡುಗೊರೆಗಳ ತೆಗೆದಾ ॥ ೮೫ ॥
ಕರವಿಡಿದಗ್ಗಳದುಡುಗೊರೆತುಂಬಿದ । ಹರಿವಾಣವೆತ್ತಿ ರಾಜೇಂದ್ರಾ ॥
ದೊರೆಗಳೆಲ್ಲರ ಮೊಗಗಳ ನೋಡಿ ನಗುತಿಷ್ಟು । ಸರಸದೊಳ್ನುಡಿದನೇನೆಂಬೆ ॥ ೮೬ ॥
ಬನ್ನಿರೈ ಖಚರರು ಮ್ಲೇಚ್ಛಮುಖ್ಯರು ಚಕ್ರಿ । ಚೆನ್ನವೆಣ್ಣುಗಳನಿತ್ತವರಾ ॥
ಮುನ್ನ ಮನ್ನಿಸಿದನೆಂಬಿರಿ ನಾನು ನಿಮ್ಮನೆ । ಮನ್ನಿಪೆನಿದೆ ಮೊದಲೆಂದಾ ॥ ೮೭ ॥
ಮೊದಲೇನು ಕಡೆಯೇನು ಲೋಹಕೆ ಪರುಷ ತಾ । ಗಿದ ವೇಳೆಯೊಳೆ ತೇಜವಲ್ತೆ ॥
ಮೃದುದೀರ್ಘಹಸ್ತದಿ ನೀನಿತ್ತ ಮನ್ನಣೆ । ಸದಮಲವೆಂದರಂದವರು ॥ ೮೮ ॥
ಹೋಹುದು ಕೆಲಬರೂರಿಗೆ ಕೆಲಬರು ನಿಮ್ಮ । ವಾಹಿನಿವೆರಸಿಹುದೆಂದು ॥
ಊಹಿಸಿ ಜಯರಾಜನಾ ಸಮಯದೊಳು ಸ । ನ್ನಾಹದೊಳ್ನುಡಿದನೆಲ್ಲರಿಗೆ ॥ ೮೯ ॥
ಕೆಲಬರೂರಿಗೆ ಹೋಗಿ ಕಾಣ್ಬುದೇನೆಲ್ಲರು । ಬಲಗೂಡಿ ರಾಜಮನ್ಮಥನ ॥
ಬಳಿಯೊಳು ಚೋದ್ಯಲೀಲೆಯ ನೋಡುತಿಹೆವೆಂದು । ನಲಿದು ನುಡಿದರು ಮತ್ತವರು ॥ ೯೦ ॥
ಎಂದರುತ್ತಮ ನೀವು ಕಟಕದೊಳೆಲ್ಲರು । ಮುಂದಾಗಿಯೆನೆ ದಳಪತಿಯು ॥
ನಿಂದುಡುಗೊರೆವಿಡಿದವರಡ್ಡಬಿದ್ದೆದ್ದು । ಸಂದಣಿಗೊಂಡು ಸಾಗಿದರು ॥ ೯೧ ॥

ಮಕ್ಕಳ ಮನೆಗೆ ಹೋದವರು ತಮ್ಮಯ ಹೆಣ್ಣು । ಮಕ್ಕಳಿಗೋಜೆಯ ಪೇಳ್ದು ॥
ತಕ್ಕಿಸಿ ತಲೆದಡವಿಂಬಿಟ್ಟು ಬಂದಾಗ । ಚೊಕ್ಕ ರಾಯನ ಕಂಡರೊಡನೆ ॥ ೯೨ ॥
ಉದ್ದಂಡರಾಜವೇತಂಡರಾಜಾದಿಯೊ । ಗಿದ್ದ ಭೂಚರಖಚರರನು ॥
ಗದ್ದುಗೆಯೊತ್ತಿಗೆ ಕರೆದುಡುಗೊರೆಗಳ । ತಿದ್ದಿದನಾ ಬಿಂಕಕಾರಾ ॥ ೯೩ ॥
ಸುಖದಲ್ಲಿ ನೀವು ನಿಮ್ಮಯ್ಯನಾಡೊಳಿಹುದೆಮ್ಮ । ಮುಖನೋಡಲರ್ತಿಯಾದಾಗ ॥
ನಿಖಿಳರು ಬಹುದೆಂದು ವಿನಯವ ನುಡಿದನು । ಸಖರತ್ತ ನೋಡುತ ನಗ್ತುತ ॥ ೯೪ ॥
ಅವರ ಭಾಗ್ಯವೆ ಭಾಗ್ಯ ಸ್ವಾಮಿ ನಿನ್ನಯ ರಾಜ । ಭವನಕೆ ತಡೆಯಿಲ್ಲದೆಯ್ದಿ ॥
ಸುವಿನಯದೊಳು ಬಾಳ್ವ ಸಿರಿಯ ಪಡೆದರೆಂದ । ರವಸರವರಿದು ಕೆಳೆಯರು ॥ ೯೫ ॥
ಒಂದೆ ಲಗ್ಗೆಯೊಳು ಕೈಮುಗಿದರೆಲ್ಲರು ನೋಟ । ದಿಂದ ಬೀಳ್ಕೊಟ್ಟನಾ ರಾಯಾ ॥
ಬಂದಡಿಗೆರಗಿ ದಾದಿಯರು ತಮ್ಮರಸುಗ । ಳೊಂದಾಗಿ ಹೋದರುಬ್ಬಿನೊಳು ॥ ೯೬ ॥

ಇತ್ತುಡುಗೊರೆಯ ಪೆಟ್ಟಿಗೆಗಳ ದಾದಿಯು । ರೊತ್ತಿನಾಳ್ಗಳ ಮೇಲೆ ಹೊರಿಸಿ ॥
ಅತ್ತೆಯರೆಂದು ಚಕ್ರೇಶ ನುಡಿದ ಮಾತ । ಹೊತ್ತುಕೊಂಡೊಯ್ದರು ತಾವೆ ॥ ೯೭ ॥

ತೊಂಡರ ಕರೆವಂತೆ ದೊರೆಗಳ ಕರೆವ ಭೂ । ಮಂಡಲೇಶ್ವರನು ಗೂಢದೊಳು ॥
ಪೆಂಡಿರ ಜನನಿಯರತ್ತೆಯರೆನಲು ಷ । ಟ್ಖಂಡ ಬಂದಂತಾಯ್ತು ತಮಗೆ ॥ ೯೮ ॥

ದಂಡೆಯ್ದಬೇಡೆಂದು ಕಳುಹಿದನಹುದಿಚ್ಚೆ । ಗೊಂಡವರ್ತವ್ಮ ಸೇನೆಯನು ॥
ದಂಡನಾಥರನಲ್ಲಿ ನೇಮಿಸಿ ಹೋದರು । ದ್ದಂಡವೇತಂಡಭೂಭುಜರು ॥ ೯೯ ॥

ನೆರೆದರಸುಗಳನೆಲ್ಲರ ಕಳುಹಿದನು ಖೇ । ಚರಮಂತ್ರಿವಿನಮಿರಾಜರನು ॥
ಭರತೇಶ ಕಳುಹುವೆನೆಂದು ನೋಳ್ಪಿಡೆಗೆ ಭೂ । ಚರಿಯರ ವೈವಾಹಸಂಧಿ ॥ ೧೦೦ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೨ ॥

ಪ್ರಾಢರ ಪರಮಪರಾಕ್ರಮರಧ್ಯಾತ್ಮ । ಗಾಢರ ಹೃದಯವೆಂದೆಂಬ ॥
ಗೂಢನಿವಾಸಿ ನನ್ನೆದೆಯೊಳಗಿರು ಲೋಕ । ರೂಢಾ ಚಿದಂಬರಪುರುಷಾ ॥ ೧೦೩ ॥

ಭೂಚರಿಯರ ವೈವಾಹಸಂಧಿಸಂಪೂರ್ಣಂ

## ಮೈದುನ ಮಾತಿನ ಸಂಧಿ.

ಸುಗುಣರದೇವ ಸುಜ್ಞಾನಿಗಳರಸ ಮೋ । ಕ್ಷಗರ ಮನೋಹರಚರಿತಾ ॥
ದ್ವಿಗುಣಚತುರ್ಗುಣವೆನೆ ಮತಿದೋರು ಲೇ । ಸುಗನೆ ನಿರಂಜನಸಿದ್ಧಾ ॥ ೧ ॥

ಹಲಬರ ಕಳುಹಿ ಪ್ರಧಾನಿಸಹಾಯರು । ಕೆಲದೊಳಗಿರೆ ಚಕ್ರಧರನು ॥
ಕಳುಹಬೇಕಲ್ಲವೆ ವಿನಮಿಯನೆಂದು ಮ । ತ್ತೊಳುನುಡಿಯಿಂದಿಂತು ನುಡಿದಾ ॥ ೨ ॥

ವಿನಮಿ ಕೇಳ್ನಮಿನಾಮಧೇಯನು ತನ್ನೊಂದು । ಘನತರಪ್ರೌಢಿಯನೆನಗೆ ॥
ಮೊನೆದೋರುತಿದ್ದನು ನನ್ನ ತಾನಾರೆಂದು । ನೆನೆದನೊ ಜಿನಜಿನಯೆಂದಾ ॥ ೩ ॥

ನಾಡಾಡಿಯಲ್ಲ ಮೇಲವನೊಂದುಬೆಳ್ಳಿಯ । ಗೋಡೆಯ ಮೇಲಿದ್ದನೈಸೆ ॥
ಆಡಬಹುದು ಹೊರಜಾಣ್ಮೆಯನೆಂದಿಷ್ಟು । ಖೋಡಿಯ ಕಾಣಿಸಿ ನುಡಿದಾ ॥ ೪ ॥

ಏನ ಕಾಣಿಸಿದನು ಜಾಣ್ಮೆಯ ದೇವರಿ । ದೇನ ಚಿತ್ತೈಸುವಿರಕಟಾ ॥
ಹಾ ನಮ್ಮ ಕರ್ಮದ ಫಲವೈಸೆ ಭಾವಾಜಿ । ನೀನಿಂತು ನೆನೆವರೆಯೆಂದಾ ॥ ೫ ॥

ಸಾಕ್ಕೈ ಸಟೆಯ ವಿನಮಿ ನಿಮ್ಮ ವಚನ ವ್ಯ । ಲೀಕವಲ್ಲದೆ ಸತ್ಯವಹುದೆ ॥
ಏಕೆ ತಾನೆನ್ನ ಬಳಿಗೆ ಬಾರದಾದನು । ಯೀ ಕೊಂಕು ನಾನರಿಯದುದೆ ॥ ೬ ॥

ನಾನಿತ್ತ ಬಹುದಕೆ ಮೊದಲೊಂದು ವಿದ್ಯೆಯ । ತಾನಲ್ಲಿ ಸಾಧಿಪನೆಂದು ॥
ಜಾನಿಸುತಿರ್ದ ಕಂಡದರಿಂದ ತಡೆದ ಕಂ । ಡಾನರಿಯದುದೆಯೀ ತಂತ್ರಾ ॥ ೭ ॥

ಬೇಡಮೈ ವಿನಮಿ ನಿಮ್ಮಣ್ಣಗೆ ಹೇಳೆನ್ನ । ಕೂಡಿಷ್ಟು ಹೆಮ್ಮೆ ಮೆರೆವುದೆ ॥
ನೋಡುವವದಕೇನು ತಾನಾನು ಸರಸವ । ನಾಡುವವೆಂದನು ಕೂಡೆ ॥ ೮ ॥

ಮಾವನ ಮಗನಲ್ತೆ ತಾನಾನು ಸರಿಯೆಂದು । ಯೀ ವಿಡಾಯವ ತೋರ್ಪನೈಸೆ ॥
ನೀವೆಲ್ಲರರಿದಿರಿ ಮುಂದವನೊಡನೆ ಲೀ । ಲಾವಿನೋದವ ಮಾಳ್ಪೆನೆಂದಾ ॥ ೯ ॥

ಮುಂದೆಂಬ ನುಡಿಯೇಕೆ ತಾನು ಸಾಧಿಪ ವಿದ್ಯೆ । ಗಿಂದೆ ವ್ಯಂತರಿಗರನಟ್ಟಿ ॥
ಬಂದಿರಾದರೆ ಹಂಸನಾಥನ ಮೇಲಾಣೆ । ಯೆಂದಾಣೆಯಿಡಿಸಿ ಜಾರಿಸಲೆ ॥ ೧೦ ॥

ವ್ಯಂತರಿಗರನೇಕೆ ಕಳುಹಬೇಕೆನ್ನಾತ್ಮ । ಚಿಂತೆಯೊಳಗೆ ನಾನು ನಿಂದು ॥
ನೋಂತು ತಾನೊಲಿಸುವ ವಿದ್ಯೆಗುಚ್ಚಾಟನ । ಸಂತತಿಯನು ಸಮನಿಸಲೆ ॥ ೧೧ ॥

ಓಡಿಸಲೇಕೆ ವಿದ್ಯೆಗಳನಾಕರ್ಷಣ । ಮಾಡಿ ತನ್ನಯ ವಿದ್ಯೆಯಿಂದ ॥
ಮೂಡೆಗಟ್ಟಿಸಲೆ ತನ್ನನು ತನ್ನ ವಿದ್ಯೆಯ । ಕೇಡು ತನ್ನಯ ಕೆಡದಿಹುದೆ ॥ ೧೨ ॥

ಕ್ರಮವಲ್ಲವೆಂದು ಮಾಣ್ದಿಹೆನೈಸೆ ಮಂತ್ರವಿ । ಕ್ರಮವ ನೋಡುವೆಯ ನಾನೀಗ ॥
ಭ್ರಮರಿಯೆಂದೆಂಬ ವಿದ್ಯೆಯ ಸಾಧಿಪಾತನ । ಭ್ರಮೆಗೊಳಿಸಲೆಯೆಂದು ನುಡಿದಾ ॥ ೧೩ ॥

ವಿದ್ಯೆಗಳೆಂದರೆ ಭೂತಗಳವ ನೆನೆ । ದುದ್ಯೋಗಿಸುವ ಮಂತ್ರ ತನಗೆ ॥
ವಿದ್ಯೆಗಳೊಡೆಯನ ಹಂಸನಾಥನ ಧ್ಯಾನ । ದುದ್ಯೋಗ ನನಗರಿದುಂಟಿ ॥ ೧೪ ॥
ಅರಿಯರಲ್ಲಾ ಹಂಸನಾಥನ ಶಕ್ತಿಯ । ನೆರೆ ಮೋಕ್ಷಪದವ ಪಾಲಿಪನಾ ॥
ಕುರಿತು ಧ್ಯಾನಿಸುವರಿಗೇನೇನು ಸಿದ್ಧಿ ಸೋ । ತೆರಗವ್ವೆ ಲೋಕದೊಳೆಂದಾ ॥ ೧೫ ॥
ನನಗಿದು ದೊಡ್ಡಿತಲ್ಲಂತುಟಾಗಿಯು ನಾನು । ತನಗೆ ವಿಘ್ನವ ಮಾಳ್ಪನಲ್ಲ ॥
ನಿನಗಿಷ್ಟು ಸೂಚಿಸಿ ತೋರಿದೆನ್ನೆಯೆಲೆ । ವಿನಮಿ ನೀನರಿದಿರ್‍ದೈಯೆಂದಾ ॥ ೧೬ ॥
ಮತ್ತೇನು ದೇವರ ಸಾಮರ್ಥ್ಯ ನಮ್ಮನೆ । ವೊತ್ತಬೇಕೈಸೆ ಸೋದರರದ ॥
ಅತ್ತೆಯ ಮಗನಿಂದ ಹರುಷಿಸಿ ನಗಬಾರ । ದತ್ತೆವೆಂದೆನಿಸಬೇಕೆಂದಾ ॥ ೧೭ ॥
ಹೋ ವಾಕ್ಯಪ್ರೌಢಿಯಿಂದಾರ ಚಾಳಿಸಬಂದೆ । ಭಾವಿಸ್ಯೆ ನೀವು ಸೋದರರದ ॥
ಮಾವನ ಸುತರಲ್ತೆ ನಂಟುಮಾಡುವರೊವ್ಮೆ । ಮಾವರೆನಿಸಿದಿರ್ದೈಯೆಂದಾ ॥ ೧೮ ॥
ನಮಿಯೆಂದು ವಿನಮಿಯೆಂದಂದು ಮಾವಾಜಿಯು । ರಮರಿಸಿ ಪೆಸರಿತ್ತರರಿಯ ॥
ನಮಿಸಬೇಡವೆ ನೀವು ನನಗೆ ನಿಮ್ಮಯ್ಯಂದಿ । ರಮಳವಾಕ್ಯಗಳ ಮಿಗುವರೆ ॥ ೧೯ ॥
ಭರತೇಶನೆಂದೆನಗಪ್ಪಾಜಿ ನಾಮವ । ಕರುಣಿಸಲಾತನೆಂದಂತೆ ॥
ಭರತೋರ್ವಿಯೆಲ್ಲವನಾಳ್ವೆನ್ನೆ ನೋಡು ನೀ । ವರರೆ ಬಾಹಿರರಾದಿರೆಂದಾ ॥ ೨೦ ॥
ಕಚ್ಛಮಹಾಕಚ್ಛಮಾವಾಜಿಯರ ಮಹಾ । ಸ್ವಚ್ಛಗರ್ಭಗಳಲ್ಲಿ ನೀವು ॥
ಸ್ವೇಚ್ಛಾಚಾರಿಗಳುದಯಿಸಿದಿರಿಯೆಂದು । ತುಚ್ಛಗಾಣಿಸಿ ನಕ್ಕು ನುಡಿದಾ ॥ ೨೧ ॥
ಬರಿಮಾತಿನೊಳು ವಿನಯವನಾಡಿ ಕಾರ್ಯವ । ಮರೆಸಿಕೊಂಡೆಯ್ದುವ ನಿಮ್ಮ ॥
ತೆರನ ನಾನರಿಯೆನೆ ಬಲ್ಲವರೊಳಗಿವು । ಮೆರೆವುವೆ ವಿನಮಿ ಹೇಳೆಂದಾ ॥ ೨೨ ॥
ದೇವರಿಗಾವ ಕಾರ್ಯವ ಮರೆಸಿದೆವೆಮ್ಮ । ಭಾವದೊಳ್ಕಸುಮರೆಯಿಲ್ಲ ॥
ಭಾವಾಜಿ ನೀನಿಂತುಟೆರವುಗಂಡೆಂಬಾಗ । ನಾವಿನ್ನು ಪರರೈಸೆಯೆಂದಾ ॥ ೨೩ ॥
ಪರನಲ್ಲ ವಿನಮಿ ನೀನೆನ್ನವನುರೆ ನಿನ್ನ । ಹಿರಿಯನೊಬ್ಬನೆ ಪರನದರ ॥
ಪರಿಯ ಬಲ್ಲೆನು ಹೇಳಬಾರದು ನೀನರಿ । ದಿರು ಮುಂದೆ ಕಾಣಿಪೆನೆಂದಾ ॥ ೨೪ ॥
ಅವನ ಹೆಮ್ಮೆಯ ಬಿಡಿಸುವರವನೊಂದು ಗೂ । ಢವ ರೂಢಮಾಡುವರೆನಗೆ ॥
ಅವಗಾಢವಲ್ಲ ಸೈರಿಸು ಮುಂದೆ ತೋರ್ಪೆನೆಂ । ದವನೀಶ ಗುಟ್ಟುಮಾಡಿದನು ॥ ೨೫ ॥

ನಾಗರದಕ್ಷಿಣವಿಟವಿದೂಷಕರಾದಿ । ಯಾಗಿರೆ ಪೇಳಿರ್‍ದೈ ನಾನು ॥
ಈಗಳಾಡಿದ ಮಾತು ನಿಮ್ಮಯ ಕರ್ಣಕಿಂ । ಬಾಗದೊ ಆದುದೊಯೆಂದಾ ॥ ೨೬ ॥
ಆರಿಗಿಂಬಾಗದೀ ಗುಣವಾಕ್ಯ ಸ್ವಾಮಿ ಮ । ತ್ತಾರ ಮನವನು ಸೋಲಿಸದು ॥
ಬಾರದ ನಮಿರಾಜ ನಾಳೆ ಬಪ್ಪನು ನಸು । ಸೈರಿಸೆಂದೊರೆದ ನಾಗರನು ॥ ೨೭ ॥

ವಿನಮಿರಾಜಗೆ ದೇವರವರಣ್ಣನಿರವ ಸೂ । ಚನೆಗೈದ ಮೇಲಾತನಿನ್ನು ॥
ಅನುಬಂಧಿಕೆಯ ಮಾಡದಿಪ್ಪನೆ ಮಾಳ್ಪನೆಂ । ದನುಕೂಲನಾಯಕ ನುಡಿದಾ ॥ ೨೮ ॥
ಉಡುಗೊರೆಯೇನ ಕಳುಹಿದನಾ ನಮಿರಾಜ । ತೊಡಿಗೆಯಿಲ್ಲವೆ ನಮ್ಮ ನೃಪಗೆ ॥
ಕಡುಸುಖಿಯಿಚ್ಛೆಗೆ ತಕ್ಕ ವಸ್ತುವ ನೋಡಿ । ಕೊಡಬೇಡವೆಯೆಂದ ವಿಟನು ॥ ೨೯ ॥
ಜೀವರತ್ನಗಳೊಳುತ್ತಮುವ ಕಳುಹದೆ ನಿ । ರ್ಜೀವರತ್ನವ ಕಳುಹಿದುದು ॥
ಆವೋಜೆಯೆಂದನು ವಿಟನು ವಿನಮಿರಾಜ । ಭಾವದೊಳ್ಚಿಂತಿಸುವಂತೆ ॥ ೩೦ ॥
ವಿನಮಿರಾಜಗೆ ಪಟ್ಟಗಟ್ಟಬೇಕಾತಗೆ । ವಿನಯದುಂಬಳಿಗೊಡಬೇಕು ॥
ಘನವೆ ಭೂಭುಜಗಿದೆಂದನು ಶಠನಾಯಕ । ವಿನಮಿರಾಜನ ಚಿತ್ತ ಬೆದರೆ ॥ ೩೧ ॥
ಹಿತವ ಮಾಳ್ಪನೆ ಬಂಧು ಬಂಧುವಾದರು ತನ್ನ । ನತಿನೋಯಿಸುವನೀಗ ವೈರಿ ॥
ಚ್ಯುತಿಮಾಡಬೇಕು ವೈರಿಯನೆಂದು ಚಕ್ರಿಗೆ । ಹಿತವಾಗಿ ನುಡಿದನಾ ಶಠನು ॥ ೩೨ ॥
ಠಕ್ಕಿನ ನಂಟಗೆ ಠಕ್ಕುಕಾಣಿಸುತೊಂದು । ದಿಕ್ಕಿನೊಳಾತನ ತೆಗೆದು ॥
ಇಕ್ಕಬೇಕೆಂದನು ವಿನಮಿರಾಜನಿಗೆದೆ । ಸೊಕ್ಕೋಡೆ ಕುಟಿಲನಾಯಕನು ॥ ೩೩ ॥
ಮೂಢರ ಚಾಳಿಸುವಂತೆ ನೋಡವನೆಮ್ಮ । ಪ್ರೌಢರಾಜನ ಚಾಳಿಪುದನು ॥
ಮೋಡಿಯೊಯಿದು ತನಗೆಂದನು ಕುಟಿಲನು । ಗೂಢಾರ್ಥವರಿದಾತ್ಮಪತಿಯ ॥ ೩೪ ॥
ಬಡಬೆಟ್ಟವಲ್ಲದು ಬಲುಬೆಟ್ಟವದರ ಮೇ । ಲಿಡಲಾಗಿ ಸೊಕ್ಕಾದುದವಗೆ ॥
ಪೊಡವಿಯೊಳಿರಿಸಬೇಕಾತನನೆಂದೊತ್ತಿ । ನುಡಿದನು ಪೀಠಮರ್ದಕನು ॥ ೩೫ ॥
ತೆಗೆಯಬೇಡಿರಿಸಬೇಡೀಗಾತ ಕುಳಿತ ಭೂ । ಮಿಗು ಭೂಮಿಸೋಂಕಿದಾಸನಕೂ ॥
ತೆಗೆಯಬಾರದವೊಲು ಮಂತ್ರಿಸೆ ಸಾಕೆಂದು । ನಗಿಸಿದನಾ ವಿದೂಷಕನು ॥ ೩೬ ॥
ಕರ್ಕಶವನೆ ಹೇಳುತಿದ್ದಿರಿ ನೀವೇನು । ತರ್ಕಶಾಸ್ತ್ರವ ಪಠಿಸಿದಿರೊ ॥
ಉರ್ಕಿನ ತುರುಕಾಣ್ಯದೊಳಗಿದ್ದರೊಯೆಂದು । ಮಾರ್ಕೊಂಡು ನುಡಿದ ದಕ್ಷಿಣನು ॥ ೩೭ ॥
ಎರವೆ ನಮ್ಮರಸಗಾ ನಮಿರಾಜ ನೀವಿಂತು । ವಿರಸವ ನುಡಿವುದುಚಿತವೆ ॥
ಪರಿಣಾಮದೊಳು ನಾಳೆ ಬಾರದಿರನು ಸುಮ್ಮ । ನಿರಿಯೆಂದು ನುಡಿದನಾ ಚದುರಾ ॥ ೩೮ ॥
ಒಸೆದೊಮ್ಮೆ ತಮ್ಮನ ಕಳುಹಿದನಿನ್ನು ಸಂ । ತಸದಿ ತಾನೆಯ್ದುವನೆಂದು ॥
ರಸಿಕ ನುಡಿದನೊಲ್ದು ವಿನಮಿಭೂವರನೆದೆ । ಹಸಹಸನಾಗುವಂದದೊಳು ॥ ೩೯ ॥
ಮುಂದೆ ಬಂದಖಿಳಭೂಭುಜರೆಮ್ಮ ನೃಪಗೊಲ । ವಿಂದಿತ್ತ ಸಾರವಸ್ತುಗಳಾ ॥
ಹಿಂದಿಕ್ಕುವುತ್ತಮವಸ್ತುವನಿನ್ನಾತ । ತಂದೀವನೈಯೆಂದು ನುಡಿದಾ ॥ ೪೦ ॥
ವಸ್ತುವಿನಾಶೆಯಿಾ ನಮ್ಮ ಭೂವರಗೇನ । ವಿಸ್ತರಿಸುವೆಯೆಂದು ಹುಸಿಗೆ ॥
ಪ್ರಸ್ತುತಕಲಹವ ನುಡಿದನು ಶಠನು ವ । ಚಸ್ತುಂಗದಕ್ಷಿಣನೊಡನೆ ॥ ೪೧ ॥

8

ನಿಲ್ಲಿರೈ ನೀವೆಲ್ಲರವನೀವುದೇನು ನಾ । ನುಲ್ಲಾಸದಿಂ ಕೊಂಬುದೇನು ॥
ಖುಲ್ಲರಂತವ ಬಾರದಿರೆ ನೊಂದೆನೆಂದು ಭೂ । ವಲ್ಲಭ ನುಡಿದನಾಪ್ತರೊಳು ॥ ೪೨ ॥

ರಾಯನಂತಸ್ಥವನರಿದು ಖೇಚರಮಂತ್ರಿ । ವೊಯ್ಯಾರದಿಂದೆದ್ದು ನಿಂದು ॥
ನ್ಯಾಯವಹುದು ದೇವರೊರೆವುದು ಮುಂದೆವ್ಮ । ರಾಯ ಬಪ್ಪನು ಸ್ವಾಮಿಯೆಂದಾ ॥ ೪೩ ॥
ವಿಜಯಾರ್ಧದಿಂದಾಚೆಗೊಯ್ಯನೆ ದೇವರು । ಬಿಜಯಂಗೈಯೆ ನಮ್ಮರಸು ॥
ನಿಜವಿನಯದಿ ಬಂದು ಕಂಡು ಸನ್ಮಾನವ । ಭಜಿಸುವನವಧರಿಸೆಂದಾ ॥ ೪೪ ॥
ವಿನಯಾರ್ಧ ದೇವರೆಮ್ಮರಸನ ಕಾಣಬೇ । ಕೆನುತಿರ್ದಿರೈಸೆ ವಸ್ತುವಿನ ॥
ಘನತೆಯೇನದ ನಾನು ತುರಿಹದಿ ಮುಂದೆ ತಂ । ದನುಬಂಧಿಸುವೆನೆಂದು ನುಡಿದಾ ॥ ೪೫ ॥
ಭಾವಾಜಿ ನಿನ್ನ ಚಿತ್ತವ ನಾವು ನೋಯಿಪು । ದಾವ ಬಲ್ಲವಿಕೆ ಕೇಳ್ನಿನ್ನ ॥
ಭಾವಕೆ ಸಂತೋಷವಪ್ಪಂತೆ ಮಾಳ್ಪೆವೆಂ । ದೋವಿ ವಿನಮಿರಾಜ ನುಡಿದಾ ॥ ೪೬ ॥
ವಿನಮಿ ಕೇಳದಕಲ್ಲ ನಿಮ್ಮಣ್ಣ ಹೆಮ್ಮೆಯು । ನನಗೆ ತೋರುವುದದು ಗುಣವೆ ॥
ನಿನಗಾಗಿ ತಾಳಿದೆನೈ ನನ್ನ ಮುಂದೊಂದು । ಗೊನೆಹವೆ ಖರರ್ಗೆಂದು ನುಡಿದಾ ॥ ೪೭ ॥
ಮತ್ತಾರುಮಿಲ್ಲ ಗೂಢವಿದ್ಯೆಸೆ ಕೇಳ್ನಿಮ್ಮ । ಹೆತ್ತ ತಾಯೆನ್ನ ಚಿಕ್ಕಂದು ॥
ಎತ್ತಿ ಮುದ್ದಾಡಿರ್ದಳದರಿಂದ ತಾಳ್ದಿನೆಂ । ದತ್ತೆಗೆ ವಿನಯವೇರಿಸಿದಾ ॥ ೪೮ ॥
ಅರಿಯದೆ ನಮಿಯೊಂದ ನೆಗಳ್ದರೆನ್ನಳಿಯನು । ಪೆರರ ಕಾಣ್ಬೊಲು ಕಂಡನೆಂದು ॥
ಮರುಗುವಳತ್ತ್ಯಾಜಿಯೆಂದು ಸೈರಿಸಿದೆನು । ಅರಿದಿರೈ ನೀನಿದನೆಂದಾ ॥ ೪೯ ॥
ನೀವಾವ ಗುಣಿಗಳೆಮ್ಮತ್ತ್ಯಾಜಿಯರ ನಮ್ಮ । ಮಾವಾಜಿಯರ ನೋಡಬೇಕು ॥
ಭಾವಿಸಲೇನವರ್ಗೆರವಿಲ್ಲ ನೀವು ಮಾ । ಯಾವಿತನವ ಮಾಳ್ಪರೆಂದಾ ॥ ೫೦ ॥
ಅತ್ಯಂತತೇಜವಿನ್ನಾವುದೈ ವಿನಮೊಂದ್ರ । ಅತ್ತ್ಯಾಜಿ ಮಾವಾಜಿಯೆಂದು ॥
ಸ್ತುತ್ಯರಾದವರಾರು ಚಕ್ರಿಯಿಂದೆಂದು ಸಾಂ । ಗತ್ಯದ ಕೆಳೆಯರಾಡಿದರು ॥ ೫೧ ॥
ವರಪುತ್ರಿಯರನಿತ್ತ ಬಹುನೃಪರುಂಟೆಮ್ಮ । ದೊರೆಗತ್ತೆಮಾವಂದಿರೆಂದು ॥
ಕರೆಯಿಸಿಕೊಂಡವರಿಲ್ಲ ನೀವೀತನೊ । ಳೆರವುಗಾಣ್ಬರೆಯೆಂದರವರು ॥ ೫೨ ॥
ನಮಿರಾಜಗಾನು ಬಿನ್ನವಿಸಿದೆನೆನ್ನಿದು । ಕ್ರಮವಲ್ಲ ತನ್ನ ಭಾವನನು ॥
ಮಮತೆಯೊಳಗೆ ಬಂದು ಕಾಣಹೇಳೆಂದನು । ತ್ತಮಬುದ್ಧಿಸಾಗರಮಂತ್ರಿ ॥ ೫೩ ॥
ತನ್ನಾಣ್ಮಗಲ್ಲದೆ ವ್ಯಂತರರ್ಗರಸರ್ಗೆ । ಬಿನ್ನಹವೆಂಬನೆ ಮಂತ್ರಿ ॥
ಇನ್ನಾವುದಧಿಕವೈ ನಿಮ್ಮಣ್ಣಗೆಂದೊಂದು । ಮನ್ನಣೆಗೈದರು ಸಖರು ॥ ೫೪ ॥
ದೊರೆಯಂತರಕೆ ಬುದ್ಧಿಸಾಗರನಲ್ಲದ । ನ್ಯರದಾರು ಮಹಿಮೆವೆತ್ತವರು ॥
ಖರರ್ಗಿಂತು ನುಡಿವನೆ ನವಗೆರವಿಲ್ಲ ನೀ । ವೆರವುಗಾಣ್ಬುದು ಬಲ್ಲತನವೆ ॥ ೫೫ ॥

ಕೊಟ್ಟುಕೊಂಡನ್ಯರು ಹೊಸತಾಗಿ ಬೀಯಗ । ವಟ್ಟಿಗೆ ಬರುತಿರ್ದರೀಗ ॥
ಹುಟ್ಟುಬೀಯಗರಲ್ತೆ ನೀವದರೊಳಗೆಡೆ । ಗಟ್ಟುಗೆಯ್ವರೆಯೆಂದರೊಡನೆ ॥ ೫೬ ॥

ಹಲವುಮಾತೇನು ಭಾವಾಜಿ ನೀನುತ್ತರ । ಕೊಲವಿಂದ ಗಮಿಸಲಾ ಕ್ಷಣವೆ ॥
ನಲವಿಂದ ನಮಿರಾಜ ಬಂದು ಕಾಣ್ಬನು ನಿನ್ನ । ತೊಲಗಿ ನಾವಿಹುದೊಂದು ಬದುಕೆ ॥ ೫೭ ॥

ಅಮ್ಮಾಜಿ ಮೊದಲೆ ದೇವರ ವಿಳಾಸವ ಕೇಳ್ದು । ಸುಮ್ಮಾನಗೊಳುತಿರ್ದಳಿನ್ನು ॥
ನಮ್ಮ ನಾವರಿಯೆವೆಯೆಂದು ವಿನಮಿರಾಜ । ಜುಮ್ಮಜುಮ್ಮನೆ ತೋರಿ ನುಡಿದಾ ॥ ೫೮ ॥

ನಿನ್ನಿಂದ ಹೆಚ್ಚಿನ ಬೀಯಗರಾರುಂಟು । ಭಿನ್ನಪ್ರೀತಿಯ ಮಾಡೆವಿನ್ನು ॥
ನಿನ್ನಯ ಮನಕೆ ಸಂತಸವ ಮಾಡುವೆವೆಂದು । ಚೆನ್ನಚೆನ್ನನೆ ತೋರಿ ನುಡಿದಾ ॥ ೫೯ ॥

ಆಗಲೈ ಮಾವನ ಮಕ್ಕಳಿಂದುರೆ ಪ್ರೀತಿ । ಯೋಗವ ಬಯಸಿದೆ ನಾನು ॥
ಲೋಗರಂತಿರದಿರಿ ನೀವೆಂದು ಮತ್ತನು । ರಾಗದಿ ನುಡಿದನಾ ಚಕ್ರಿ ॥ ೬೦ ॥

ಇತ್ತ ಬಾರೆಂದು ತನ್ನೊತ್ತಿಗೆ ಕರೆದವ । ಗುತ್ತುಂಗದುಡುಗೊರೆಯಿತ್ತಾ ॥
ಮತ್ತೆ ಮಂತ್ರಿಗೆ ಕೊಟ್ಟ ನಮಿನಾಮಧೇಯಗೆಂ । ದಿತ್ತನು ದೊಡ್ಡುಡುಗೊರೆಯಾ ॥ ೬೧ ॥

ಬೇರುಡುಗೊರೆಯ ನಮ್ಮತ್ತ್ಯಾಜಿಯರಿಗೆಂದು । ಕೀರಿ ಕೊಟ್ಟನು ಹರಿಸದೊಳು ॥
ಗಾರುನುಡಿದರೆಂದು ನೋಯದಿರೆಂದಾಯ । ಕಾರನಪ್ಪಿದನು ಮೈದುನನಾ ॥ ೬೨ ॥

ಭಾವನ ಭುಜ ಸೋಂಕಲೊಡನೊಂದು ಹೊಸಭೂಷ । ಣಾವಳಿ ಬಂದವೊಲಾಯ್ತು ॥
ನೋವು ಹಿಂಗಿತು ನಗೆಮೊಗವಾಯ್ತು ರಾಯರ । ದೇವನ ಸೋಂಕು ಸದರವೆ ॥ ೬೩ ॥

ಸಾಲದೆಯಾ ಭಾಗ್ಯ ಚಕ್ರೇಶನೊಬ್ಬರ । ನಾಲಿಂಗಿಸುವನೆ ಭೂಪರೊಳು ॥
ಈ ಲೇಸಿಗಧಿಕದ ಲೇಸ ನೀವೆಸಗಿಯೆಂ । ದಾ ಲೋಲಸಖರು ನುಡಿದರು ॥ ೬೪ ॥

ಹರಿಸದಿ ವಿನಮಿ ಕೈಮುಗಿದು ಬೀಳ್ಕೊಂಡ ಖೇ । ಚರಮಂತ್ರಿ ಸಾಷ್ಟಾಂಗವೆರಗಿ ॥
ದೊರೆಯ ಬೀಳ್ಕೊಂಡನೆಲ್ಲರು ವಿಮಾನವನೇರಿ । ತೆರಳಿದರಾಕಾಶವಿಡಿದು ॥ ೬೫ ॥

ಕೊಡದಿದ್ದರಹುದೆ ಸುಭದ್ರಾದೇವಿಯನಿನ್ನು । ಬಿಡುವನಲ್ಲೀ ಚಕ್ರಿ ನಾವು ॥
ಒಡಬಡಿಸುವ ನಮಿರಾಜನನೆಂದತ್ತ । ನುಡಿವುತ ಸಾಗಿದರವರು ॥ ೬೬ ॥

ನಿಟ್ಟಿಸಿ ನೃಪನಿತ್ತ ಸಖರಿಗೆಂದನು ನೀವು । ಬೆಟ್ಟಗಾಣಿಸಲೊಡನವರು ॥
ತೊಟ್ಟನಂಜಿದರದು ಲೇಸಾದುದೆಂದೊಲ್ದು । ಕೊಟ್ಟನೆಲ್ಲರಿಗೆ ಮನ್ನಣೆಯಾ ॥ ೬೭ ॥

ನಂಟುತನದ ಸಲುಗೆಯ ತೋರಿ ತಾವೊಂದು । ಕುಂಟಣಿಕೆಯೊಳು ಕಾರ್ಯವನು ॥
ಗಂಟಿಕ್ಕಿಕೊಂಡಿರಲಂಜಿಸಿ ನುಡಿದೆವೆಂ । ದುಂಟಾದುದನೆ ಪೇಳ್ದರವರು ॥ ೬೮ ॥

ಕಳುಹಿಸಿಕೊಂಡು ಮಿತ್ರರು ಹೋಗುತಾ ಹಾದಿ । ಯೊಳಗೆ ಚಕ್ರೇಶನ ಮನದ ॥
ಒಳಗನರಿದು ತಾವು ತಮ್ಮೊಳಾಲೋಚನೆ । ಗೊಳುತ ಕೊಂಡಾಡುತೆಯ್ದಿದರು ॥ ೬೯ ॥

ಬಂದ ದಿನವೆ ವಿನಮಿಯು ಬೆದರಿಸದೆ ಗು । ಟ್ಟಿಂದದ ಮಾಜಿಕೊಂಡಿದ್ದು ॥
ಇಂದು ನುಡಿದನು ಮದುವೆಯಾದ ಮೇಲಿವ । ನಂದ ಲೇಸೆಂದರರ್ತಿಯೊಳು ॥ ೭೦ ॥

ನಮಿರಾಜನನುಜೆಯು ಮೇಲೊಲ್ಮೆ ತನಗುಂಟು । ಭ್ರಮಿಸಿ ಹೆಣ್ಣೆಂಬುದ ನುಡಿಯಾ ॥
ಗಮಕದೊಳಾ ಹೆಣ್ಣು ಬಪ್ಪಂತೆ ಮಾಡಿದ ।ನಮಮ ಲೇಸೆನುತ ಸಾಗಿದರು ॥ ೭೧ ॥

ಕೃತಮಾಲ ಬಂದನಷ್ಟರೊಳವನನು ದಳ । ಪತಿ ತಂದು ನೃಪನ ಕಾಣಿಸಿದಾ ॥
ಕ್ಷಿತಿಪನಾಗಳೆ ಭದ್ರಮುಖನ ಕರೆಸಿ ದಳ । ಪತಿಗವನಿಗು ಪೇಳ್ದನಿಂತು ॥ ೭೨ ॥

ಇವನು ತಿಮಿಸ್ರಗುಹೆಯು ಹೊಲಬಿಗನು ನೀ । ನಿವನೊಡನೆಯ್ದಿ ಹಾದಿಯನು ॥
ಸವರಿ ಬಹುದು ಮತ್ತೆ ದಂಡೆತ್ತಿ ಹೋಹವೆಂ । ದವನೀಶ ನೇಮವನಿತ್ತಾ ॥ ೭೩ ॥

ತೆಗೆದಗಳನು ಹೂಳಿ ಮುಂದೆ ವಜ್ರದ ಪಡಿ । ತೆಗೆದು ಕತ್ತಲೆಯಿಡಿದಿರ್ದ ॥
ವಿಗಡದ ಗುಹೆಯನು ಕಾಕಿಣಿಪ್ರಭೆಯಿಂದ । ಹೊಗುವುದೊಯ್ಯಾರದೊಳೆಂದಾ ॥ ೭೪ ॥

ಗುಹೆಯು ನಡುವೆ ಸಿಂಧುನದಿ ತೆಂಕಮುಖವಾಗಿ । ವಿಹರಿಸುತಿರ್ದುದಾ ನದಿಯು ॥
ಲಹರಿಗೆ ಮೂಡಣಿಂ ಪಡುವಣಿಂದೆರಡು ದು । ರ್ವಹನದಿ ಕೂಡಿರ್ದುವೆಂದಾ ॥ ೭೫ ॥

ಪಡುವಣಿಂ ಬಹುದು ನಿಮಗ್ನವೆಂಬುದು ಮೂಡ । ಗಡೆಯುದುನ್ಮಗ್ನವೆನಿಪುದು ॥
ಕೆಡುಕುತೊರೆಗಳವು ನಾಡಾಡಿತೊರೆಗಳ । ನಡೆಯಲ್ಲ ಕೇಳಿರೈಯೆಂದಾ ॥ ೭೬ ॥

ಬೆಂಡ ಬಿಟ್ಟರೆ ಗುಂಡಿನಂತೆ ಪಾತಾಳಕೆ । ಕೊಂಡೊಯ್ಯುತಿಹುದು ನಿಮಗ್ನಾ ॥
ಗುಂಡ ಬಿಟ್ಟರೆ ಮೇಲಕುನ್ಮಗ್ನನದಿ ಹೊಯಿ । ಚೆಂಡಿನಂತಿಡುತಿಹುದೆಂದಾ ॥ ೭೭ ॥

ಎಲ್ಲನದಿಯ ಚರ್ಮದೊಳು ದಾಂಟಬಹುದವ । ರಲ್ಲಿಗಾಗದು ಚರ್ಮರತ್ನಾ ॥
ಬಲ್ಲಿತಾಗಿರೆ ಸೇತುಗಟ್ಟಬೇಕೆಂದು ಭೂ । ವಲ್ಲಭ ತಂತ್ರದೋರಿದನು ॥ ೭೮ ॥

ನೀರ ಮುಟ್ಟದೆ ಮೇಲಕೆತ್ತಿ ಪಾಲವ ಕಟ್ಟಿ । ದಾರಿಯ ಮಾಡಬೇಕದಕೆ ॥
ಧಾರಿಣಿಚರರಾಗದಂಬರೇಚರರು ಕ । ರೋರವ್ಯಂತರರು ಬೇಕೆಂದಾ ॥ ೭೯ ॥

ಕಂಟಕನದಿಗಳಾಚೆಗೆ ಭೂತಖಚರರ । ದಾಂಟಿಸುತಾಚೆ ಮತ್ತೀಚೆ ॥
ಗೂಂಟವ ಬಲಿದೆತ್ತಿ ಪಾಲವ ಕಟ್ಟಿ ನಿ । ಷ್ಕಂಟಕಾಂಗವ ಮಾಳ್ಪುದೆಂದಾ ॥ ೮೦ ॥

ಒಡನೆ ಮುಂದೆಯ್ದಿ ಮತ್ತಾ ಗುಹೆಗಿಕ್ಕಿದ । ಬಡಗಣ ಕದವಿನ ಕೀಲಾ ॥
ಬಡಿದೊತ್ತಿ ತೆಗೆವುದು ನಾವೆಯ್ದುವಿನೆಗಲ್ಲಿ । ಪಡೆಗೂಡಿ ಕೃತಮಾಲನಿರಲಿ ॥ ೮೧ ॥

ಪಾಲಗಟ್ಟುವ ಸೇವೆ ಭದ್ರಮುಖಗೆ ಕೃತ । ಮಾಲಗೆ ಗುಹೆಯ ಕಾವಾಜ್ಞೆ ॥
ಕಾಲುವೆಯನು ಹೂಳಿ ಕಡೆಯ ಕದವ ತೆಗೆ । ವೂಳಿಗ ಜಯನಾಮಗೆಂದಾ ॥ ೮೨ ॥

ವ್ಯಂತರಾಗ್ರಣಿ ಮೊದಲಾದರ ಖಚರರ । ನಂತರಿಸದೆ ಕೂಡೆ ಕರೆಸಿ ॥
ಮುಂತವರೊಡಗೂಡಿ ಕಳುಹಿದನವರು ಭೂ । ಕಾಂತಗೆರಗಿ ಪೋದರತ್ತ ॥ ೮೩ ॥

ಮುನ್ನ ಕಂಡಂತೆ ಗುಹೆಯೊಳಿದ್ದ ತೊರೆಗಳ । ಬಿನ್ನಣಿಸಿದೆ ಸ್ವಾಮಿಯಿದರ ॥
ಗನ್ನ ತಾನೇನೆಂದು ಬುದ್ಧಿಸಾಗರಮಂತ್ರಿ । ಬಿನ್ನವಿಸಿದನರ್ತಿವಡುತ ॥ ೮೪ ॥

ನಾನಲ್ಲಿ ಹೋಗಿ ನಿಟ್ಟಿಸಿ ಬರಬೇಕೆಯಿ । ದೇನು ಚಿತ್ರಾರ್ಥವೈಯೆಂದಾ ॥
ಜೈನಶಾಸನದಲ್ಲಿ ಕೇಳ್ದರಿಯೆವೆ ನೀನು । ತಾನರಿಯೆಯ ಮಝುಯೆಂದಾ ॥ ೮೫ ॥

ಅರಿವೆವಾ ಕ್ಷಣದಲ್ಲಿ ಮರೆವೆವೆಮ್ಮೆಲ್ಲರೊಂ । ದರಿಕೆಯೇತರದೆಂದು ನೃಪನ ॥
ಅರಿಕೆಯ ಕೊಂಡಾಡಿ ಮಂಡೆದೂಗಿದನವ । ನರಿಕೆಗಾರ್ತಲೆದೂಗದವರು ॥ ೮೬ ॥

ಬಳಿಕ ಮಂತ್ರಿಗೆ ವಿನಯವನಾಡಿ ಮನ್ನಣೆ । ಗಳನಿತ್ತು ಬೀಡಿಗೆ ಕಳುಹಿ ॥
ತಳುವದೆದ್ದನು ಜಿನ ಶರಣೆನುತರಮನೆ । ಯೊಳಹೊಕ್ಕನಾ ಸಾರ್ವಭೌಮಾ ॥ ೮೭ ॥

ದಾದಿಯುರಯ್ಯಂದಿರಗಲಿದ ಚಿಂತೆತ । ಘೋದರಿಯುರಿಗಾಗದಂತೆ ॥
ಆದರದಿಂದವರೊತ್ತ ಸಾರಿದನಿದು । **ಮೈದುನವಮಾತಿನ ಸಂಧಿ** ॥ ೮೮ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೮೯ ॥

ಪ್ರೇಮದಿಂದಿದನೋದಿದರ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೦ ॥

ಸರಸದೊಳಗೆ ಸವಿಮಾತಿನೊಳಘವ ನಿ । ರ್ಜರಿಸುವ ಸಾಮರ್ಥ್ಯವುಳ್ಳ ॥
ಪರಮ ನೀನೆನ್ನಂತರಂಗದೊಳಿರು ಸುಖಾ । ಕರನೆ ಚಿದಂಬರಪುರುಷಾ ॥ ೯೧ ॥

ಮೈದುನವಮಾತಿನ ಸಂಧಿ ಸಂಪೂರ್ಣಂ

## ವೃಷ್ಟಿನಿವಾರಣಸಂಧಿ.

---

ತನುಗುಹೆಯೊಳು ರಾಗರೋಷದ ನದಿಯ ಚಿ । ದ್ಘನಸೇತುಗಟ್ಟಿ ಲಂಘಿಸುವ ॥
ವಿನುತಾತ್ಮ ನನಗೆ ಸನ್ಮತಿದೋರು ದಿವ್ಯಲೋ । ಚನನೆ ನಿರಂಜನಸಿದ್ಧಾ ॥ ೧ ॥

ಮುಂದಿ ಪೋಪಂತೆ ದಾರಿಯ ಕೊಂಕ ನೃಪತಿ ಪೇ । ಳ್ದಂದದಿ ನೇರವ ಮಾಡಿ ॥
ಒಂದುತಿಂಗಳ ಮೇಲೆ ಬಂದು ಕಂಡರು ಸೇವೆ । ಗಂದು ಪೋದವರೆಲ್ಲ ನೃಪನಾ ॥ ೨ ॥

ಭೂತಾರಣ್ಯ ದೇವಾರಣ್ಯವೆಂಬ ವಿ । ಖ್ಯಾತಭೂಮಿಯ ವೃಕ್ಷಗಳನು ॥
ತೂತಿಟ್ಟು ತರಿಸಬೇಕಾಗಿ ತಿಂಗಳು ತಳ್ವಿ । ಸೇತುಗೈದೆಯ್ತಂದರವರು ॥ ೩ ॥

ಬೆಟ್ಟ ತಾನದು ತೆಂಕ ಬಡಗಲೀಕ್ಷಿಸುವಾಗ । ದಟ್ಟವೈವತ್ತುಯೋಜನವು ॥
ನಟ್ಟ ನಡುವೆ ಪಾಲಕಟ್ಟಿತು ಜಯರಾಜ । ಮುಟ್ಟಿ ಬಿನ್ನವಿಸಿದನಿಂತು ॥ ೪ ॥

ಮಾರಿ ಬಾಯ್ದೆರೆದಂತೆ ತೆರೆದ ಗುಹೆಯ ನಿನ್ನ । ವೀರದಿ ಪೊಕ್ಕು ಬಡಗಣ ॥
ದಾರವಂದದ ಕೀಲನೊಡೆಹೊಯ್ದು ತೆಗೆದೆನು । ದಾರಿಯಾದುದು ಸ್ವಾಮಿಯೆಂದಾ ॥ ೫ ॥

ಉಸುರನುಳಿದ ಹುಲಿಯುಗುರ್ಗಳ ಮುರಿಪೊಡು । ಬ್ಬಸವೆ ಲೋಕದೊಳದರಂತೆ ॥
ಬಿಸಿಬಿಟ್ಟ ಗುಹೆಯ ಕವಾಟವ ತೆಗೆಪೊಡಾ । ಯಸವೇನು ಸ್ವಾಮಿ ಕೇಳೆಂದಾ ॥ ೬ ॥

ಜ್ವಾಲೆಯೆಂಬುಸುರು ಕೆಟ್ಟೋಡೆ ಮುಂಬಾಗಿಲ । ಹೋಳುಗುಟ್ಟಿದೆ ಮುಂದೆ ನೀನು ॥
ಹಾಳುಮನೆಯ ಹೊಕ್ಕು ಹಿತ್ತಿಲ ಬಾಗಿಲ । ತಾಳ ತೆಗೆದೆನು ನಾನೆಂದಾ ॥ ೭ ॥

ಸಾಕು ಚಕ್ರೇಶನಲ್ಲದೆ ನಮ್ಮ ತೆರೆವ ಮ । ಹಾಕಾಯಬಲ ನೀನೆಯೆಂದು ॥
ಆ ಕದವೆನ್ನನದ್ದಲಿಸುತ ಪೋಪಂತೆ । ಗೀಕುಗಿರ್ರೆನುತ ತೆರೆದುದು ॥ ೮ ॥

ಕೃತಯುಗಚಕ್ರಿಯ ಸೇವೆ ಸಿಕ್ಕಿದುದಾನು । ಕೃತಕೃತ್ಯನಾದೆನೆಂದಲ್ಲಿ ॥
ಕೃತಮಾಲ ತನ್ನಯ ವ್ಯಂತರಬಲವಲಂ । ಕೃತವಾಗೆ ಕಾದಿರ್ದನೆಂದಾ ॥ ೯ ॥

ಭೂಚರರಿಂದ ಕಾಲುವೆಯ ಹೊಳಿಸಿದೆನೆಂ । ದಾ ಚಮೂಪತಿ ಪೇಳ್ದು ನಿಂದಾ ॥
ಖೇಚರಗ್ರಹರಿಂದ ಪಾಲವಾಯ್ತೆಂದಾಗ । ಸೂಚಿಸಿದನು ವಿಶ್ವಕರ್ಮ ॥ ೧೦ ॥

ಹೋದಷ್ಟು ಜನಕೆ ಮನ್ನಣೆಯಿತ್ತನೊಡನೆ ದಂ । ಡಾದರೆ ಬಳಲಿ ಬಂದವರು ॥
ವೇದನೆಬಡುವರೆಂದೊಂದುತಿಂಗಳು ಮತ್ತೆ । ಮೇದಿನೀಪತಿಯಿದ್ದನಲ್ಲಿ ॥ ೧೧ ॥

ತಿಂಗಳ ಮೇಲೆ ಭೇರಿಯ ನಾದ ಭೂಗಗ । ನಾಂಗಣಮುಸುಕಿ ಸೂಳೈಸೆ ॥
ಸಂಗರಾಂಗಣಮಲ್ಲ ದಂಡೆತ್ತಿ ನಡೆದನು । ತ್ತುಂಗಲಗ್ನದೊಳು ಲಗ್ಗೆಯೊಳು ॥ ೧೨ ॥

ಮುಂದಂಡಿನೊಳು ಜಯರಾಜನು ಬಹುನೃಪ । ರೊಂದಾಗಿ ನಡೆಯಲಾರಯ್ದು ॥
ಹಿಂದೆ ವ್ಯಂತರರೆಯ್ದೆ ನಡುವೆ ತಾ ಗಣಬದ್ಧ । ವೃಂದವೆರಸಿ ತೆರಳಿದನು ॥ ೧೩ ॥

ಸ್ವದಳಸಹಿತ ಮೆಲ್ಲನೆಯ್ದಿ ಸೋಪಾನವಾ । ಗ್ಗದೊಳೇರಿ ಗುಹೆಯೊಳಹೊಕ್ಕು ॥
ವಿದಿತಸಿಂಧುವಿನೆರಳ್ತಡಿವಿಡಿದಾ ಚಕ್ರಿ । ಚದುರಿಂದ ದಂಡುನಡೆದನು ॥ ೧೪ ॥

ಎಣಿಸಿ ಗಾವುದಕೊಂದು ಚಂದ್ರಾರ್ಕರೂಪ ಕಾ । ಕಿಣಿಯಿಂದ ಗುಹೆಯು ಗರ್ಭದೊಳು ॥
ಅಣೆದೊತ್ತಿ ಬರೆಯಲಾ ಬೆಳಗಿಂದ ಭೂಭುಜಾ । ಗ್ರಣಿಯು ಕಟಕ ಗಮಿಸಿದುದು ॥ ೧೫ ॥

ಗುಹೆಯ ಮೂಡಣ ಪಡುವಣ ಗೋಡೆಯೊಳು ಚಂದ್ರ । ಮಿಹಿರರ ಸಾಲು ಕಣ್ಗೆಸೆಯೆ ॥
ಬಹುಖಡ್ಗಮಕುಟಚಕ್ರದ ಕಾಂತಿ ನಡುವಿರೆ । ಮಹಿಪನ ಸೇನೆ ನಡೆದುದು ॥ ೧೬ ॥

ದಿವರಾತ್ರಿಯನು ಘಳಿಯಾರದಿಂದರಿದು ಹೋ । ಸವನು ಸಂಧ್ಯಾಕೃತ್ಯಗಳನು ॥
ಸುವಿಧಾನದೊಳು ನಡೆಸುತ ಮುಂದಕೆಯ್ದಿದ । ನವನೇನು ಮೋಸದ ದೊರೆಯೆ ॥ ೧೭ ॥

ಗುರುಹಂಸನಾಥನ ಭಾವಿಸುತಲ್ಲಲ್ಲಿ । ಪರಿಣಾಮದೊಳು ಬೀಡುಬಿಡುತ ॥
ತ್ವರಿತದೊಳೇಳುತ ಗುಹೆಯ ಗರ್ಭದೊಳಿಂತು । ಬರುತಿರ್ದನಾ ಭಾವಿತಾತ್ಮಾ ॥ ೧೮ ॥

ಎಂದಿನಂದದಿ ಹಿಂದೆ ಸತಿಯರೆಯ್ತಪ್ಪುದು । ಚಂದವಲ್ಲೆಂದು ರಾಜೇಂದ್ರಾ ॥
ಅಂದು ತನ್ನೊತ್ತಿನೊಳೆಲ್ಲರ ಕೂಡಿಕೊಂ । ಡೊಂದು ಲೀಲೆಯೊಳೆಯ್ದುತಿರ್ದಾ ॥ ೧೯ ॥

ಬುದ್ಧಿಸಾಗರನೊಡನರ್ಕಕೀರ್ತ್ಯಾದಿಸ । ಮೃದ್ಧಕುಮಾರರ ನಡೆಸಿ ॥
ಶುದ್ಧಕಾಂತೆಯರ ತಾನಾರಯ್ವುತಾತ್ಮವಿ । ಶುದ್ಧಿಯೊಳೆಯ್ತರುತಿರ್ದಾ ॥ ೨೦ ॥

ಪಡೆಯೆಲ್ಲ ಹಿಂದುಮುಂದಿನಿಸು ಬೇರ್ಪಟ್ಟು ಕಾ । ಲಿಡುವಂತು ನೇಮಿಸಿ ನಡೆಸಿ ॥
ಕಡುಜಾಣನಬಲೆಯರೊಡಗೂಡಿ ತಾ ನಟ್ಟ । ನಡುವೆ ಬಂದನು ವಿಲಾಸದೊಳು ॥ ೨೧ ॥

ಲಲನೆಯರಂಜುವರಲಸುವರೆಂದಾಗ । ಹಲವುರೂಪಾಂತೆಲ್ಲರೊಡನೆ ।
ಒಳುನುಡಿದೋರುತೆಯ್ತಂದನು ಹಿಂದುಮುಂ । ದೆಳಸಿದ ತೆರೆಯ ಕೋಟಿಯೊಳು ॥ ೨೨ ॥

ಗಾನಕಾಂತೆಯರಾತ್ಮಕಲೆಯ ಹಾಡುತಿರೆ ವಿ । ಮಾನದೊಳೆಲ್ಲರುವೆರಸಿ ॥
ಮಾನಿನಿಯರಿಗಭಿಪ್ರಾಯವ ಹೇಳುತೊಂ । ದಾನಂದದೊಳು ಬರುತಿರ್ದಾ ॥ ೨೩ ॥

ಎಲ್ಲರ್ಗೆ ಕೆಲವೆಡೆಯೊಳು ಸುಖ ಕೆಲವೆಡೆ । ಯಲ್ಲಿ ಮಹಾದುಃಖವಹುದು ॥
ಬಲ್ಲವಗೆಲ್ಲೆಲ್ಲಿ ಹೋದಲ್ಲಿ ಸುಖವೆಂಬು । ದಲ್ಲಿ ತೋರಿತು ಚಕ್ರಧರಗೆ ॥ ೨೪ ॥

ಪಾಲವ ದಾಂಟಿದನಲ್ಲಿಗಲ್ಲಿಗೆ ಮುಂದೆ । ಪಾಳೆಯಬಿಡುತ ಸೇನೆಯನು ॥
ಪಾಲಿಸುತೊಯ್ಯಾರದೊಳು ದಂಡು ತೆರಳೆ ಭೂ । ಪಾಲನಾ ಗುಹೆಯ ದಾಂಟಿದನು ॥ ೨೫ ॥

ಬಾಗಿಲೊಳ್ತೋರಣಗಟ್ಟಿ ದಂಡೇಶನೊಂ । ದಾಗಿ ಮುಂದಕೆ ಕೃತಮಾಲಾ ॥
ಹೋಗಿದ್ದನರಸಿಯರ್ವೆರಸಿ ಚಕ್ರೇಶನಾ । ಬಾಗಿಲ ನೋಡುತೆಯ್ದಿದನು ॥ ೨೬ ॥

ಲಾಯದೊಳಿದ್ದಶ್ವ ಬಯಲಿಗೆ ಬಂದು ವಿ । ಡಾಯದಿ ಹರಿದಾಡುವಂತೆ ॥
ಸ್ತ್ರೀಯರ ಕಂಗಳು ಗುಹೆಯಿಂದ ದಾಂಟಿ ನಿ । ಟ್ಟಾಯದೆಣ್ದೆಸೆಯ ನೋಡಿದುವು ॥ ೨೭ ॥

ರಾಣಿಯರೆಲ್ಲರು ಗುಹೆಯ ದಾಂಟಿದ ಮೇಲೆ । ಕ್ಷೋಣೀಶ ಹಲವುರೂಪಗಲಿ ॥
ಆಣಿವೆತ್ತೊಂದುರೂಪನೆ ತಾಳ್ದು ನಲವಿಂದ । ಕಾಣುತಿದ್ದನು ಬಪ್ಪ ಪಡೆಯಾ ॥ ೨೮ ॥
ಮದಗಡೊಳಗೆ ನೀರು ಗಳಗಳನಿಳಿವಂತೆ । ಮದಗಜಹಯರಥಸೇನೆ ॥
ಕದುಬಿ ಮೊತ್ತದಿ ಪೊರಮಡುತಿದ್ದುದಾ ಗುಹೆ । ಯುದರದಿಂದುತ್ತರಧರೆಗೆ ॥ ೨೯ ॥
ಕೆಲವುದಿವಸ ಗುಹೆಯೊಳಗಿದ್ದು ಸೂರ್ಯನಂ । ಡಲವ ಕಾಣದೆ ಪಡೆಯೆಲ್ಲ ॥
ಬಳಿಕ ಸೂರ್ಯನ ಕಂಡು ಸಂದಣಿಯೊಳು ಗಳ । ಬಳಿಸುತರ್ತಿಯೊಳು ನುಡಿದುದು ॥ ೩೦ ॥
ಕುವರರ ಮಂತ್ರಿಯ ಕೆಳೆಯರ ಕ್ಷತ್ರಿಯ । ಕವಿಗಾನಿವಿಪ್ರವೇಶ್ಯೆಯರಾ ॥
ಅವನಿಪಾಲರನೊಮ್ಮೆ ಮೊದಲೊಳಾರಯ್ದುಳಿ । ದವರ ಮತ್ತಾರಯ್ವುತಿರ್ದಾ ॥ ೩೧ ॥
ನಡುವಣ ಮ್ಲೇಚ್ಛಖಂಡವ ಮೆಟ್ಟಿ ಪಾಳೆಯ । ಬಿಡಿಸಿದನಾ ಚಕ್ರವರ್ತಿ ॥
ಪಡೆ ಬರುತಿರ್ದುದು ಸಾಲಾಗಿ ದಿನಚರಿ । ವಿಡಿದು ಗುಹಾಮುಖದಿಂದ ॥ ೩೨ ॥
ತೆರಪಿನ ಕಟಕವೊಂದೆ ಬಾರಿ ಬಹುದಕೆ । ತೆರಪು ಸಾಲದು ಗುಹೆಯೊಡಲು ॥
ಕಿರಿಕಿರಿದಾಗಿ ಮೆಲ್ಲನೆ ಬರುತಿರ್ದುದು । ತೊರೆಯ ನೀರೊತ್ತಿ ಬಹಂತೆ ॥ ೩೩ ॥
ನೆಲೆಯಿಲ್ಲದೀ ಸೇನೆಯೆಲ್ಲಿ ಹುಟ್ಟಿದುದಿದು । ನೆಲನೀದುದೊಯೆಂಬ ಮಾತು ॥
ಫಲಿಸುತಿರ್ದುದು ನೋಡಲಾ ವಿಜಯಾರ್ಧದ । ಬಿಲದಿಂದ ಪೊರಮಡುವಾಗ ॥ ೩೪ ॥
ಬೆಳ್ಳಿಚಿನ್ನದ ಗೋವಿನೊಳು ನುಗುಳಿಸಿ ವೇದ । ದಲ್ಲಿ ಕ್ಷತ್ರಿಯರು ಮಾಳ್ಪದನು ॥
ಸೊಲ್ಲಿಸುವಂತಿಳಿತರುತಿರ್ದುದಾ ಸೇನೆ । ಬೆಳ್ಳಿವೆಟ್ಟದ ಗರ್ಭದಿಂದ ॥ ೩೫ ॥
ಉಳಿಯದೆ ಬಲವೆಲ್ಲ ಬಂದುದ ಕೇಳ್ದಿದೆ । ಯೊಳು ರಾಯ ನಿಶ್ಚಿಂತನಾದಾ ॥
ತಿಲಮಾತ್ರ ಮರಹುಂಟೆ ಕೃತಮಾಲಗವನ ಪೆ । ರ್ಗಲಕಿತ್ತ ಕರೆದು ಮನ್ನಣೆಯಾ ॥ ೩೬ ॥

ಸರ್ವಬಲವ ನೋಡಿ ಸಂತವಿಟ್ಟಾ ಮಧ್ಯ । ದುರ್ವಿಯೊಳರಸನಿಪ್ಪಾಗ ॥
ಪೂರ್ವದೊಳಾರು ಕಂಡರಿಯದುದೊಂದು ವಿ । ಗುರ್ವಣೆಯಾದುದೇನೆಂಬೆ ॥ ೩೭ ॥
ಆ ವಸುಮತಿಗೆ ಚಿಲಾತರಾಜನು ಬಳಿ । ಕಾವರ್ತರಾಜನೆಂದೆಂಬ ॥
ಭೂವರರಿಬ್ಬರಗ್ಗಳರವರೆಸಗಿದ । ರಾ ವೇಳೆಯೊಳಗೊಂದು ಭಯವಾ ॥ ೩೮ ॥
ಎಂದುಯಿಲ್ಲದ ಚಕ್ರಿ ಬಂದನಿವನಿಗಾವು । ವಂದಿಸುವೆವೆ ಫಡಾಯೆಂದು ॥
ಮಂದಿಸಹಿತ ಕಾದಿ ತೆರಳಿಸಲರಿದು ಮ । ತ್ತೊಂದುತಂತ್ರವ ಕಂಡರವರು ॥ ೩೯ ॥
ಕಾಲಮುಖರು ಮೇಘಮುಖರೆಂಬ ತಮ್ಮ ವಿ । ಶಾಲಕುಲಾಧಿದೈವಗಳಾ ॥
ಆಲಸ್ಯವಿಲ್ಲದರ್ಚಿಸಿ ಭಜಿಸಿದರವು । ಮೇಲೆ ಮೈದೋರಿದುವೊಡನೆ ॥ ೪೦ ॥
ನಮ್ಮ ನೀವೇನು ಕಾರಣ ಜಪಿಸಿದಿರಿಯೆಂ । ದುಮ್ಮಿ ದೈವಗಳು ಕೇಳಿದುವು ॥
ನಿಮ್ಮ ಭಕ್ತರು ನಾವು ಪರರಿಗೆರಗುವುದು । ಸಮ್ಮತಾಂಗವೆಯೆಂದರವರು ॥ ೪೧ ॥

ಕಾಲಮುಖರ ಮೇಘಮುಖರ ಭಕ್ತರು ಹೋಗಿ । ಕಾಲವಶದಿ ನರಪತಿಯ ॥
ಕಾಲಿಗೆರಗಿದರೆಂಬುದು ಸಾಕೆ ನಿಮಗೆಂದು । ಕಾಲಿಗೆ ಬಿದ್ದರಾ ನೃಪರು ॥ ೪೨ ॥
ಏಳಿರೈ ಇವನ ಹಿಂದಕೆ ತೆರಳಿಸಿ ನಿಮ । ಗಾ ಲೋಲಸುಖವ ಮಾಡುವೆವು ॥
ಏಳೆಂಟುದಿನಮುಟ್ಟ ಸೈರಿಸಿಯೆನಲದ । ಕೇಳುತೆದ್ದರು ಹರುಷದೊಳು ॥ ೪೩ ॥
ಕಾದಿ ಜಯಿಸಲೆಮಗರಿದು ಪಾಯ್ದಳ ಬಂದ । ಹಾದಿಯೊಳ್ತಿರುಗಿ ಹೋಹಂತೆ ॥
ಭೇದವಿಲ್ಲದೆ ಮಳೆಗರೆದು ಬೇಸರಿಪೆವೆಂ । ದಾ ದೈವ ಕಳುಹಿದುವವರಾ ॥ ೪೪ ॥

ಒಡ್ಡಿತಾಗಳೆ ಮುಗಿಲಾಕಾಶತುಂಬಿ ಮಾ । ರೊಡ್ಡಿದಾನೆಯ ಹಿಂಡಿನಂತೆ ॥
ಅಡ್ಡಪಿಡ್ಡಗೆ ಸುಳಿದುವು ಕಾಲರಾಹುವಿ । ನೊಡ್ಡು ಸಂಚಲಿಸುವಂದದೊಳು ॥ ೪೫ ॥
ಕಾಳರಾಕ್ಷಸರು ಕಾಳಗಕೆಂದು ಮೇಲೊಡ್ಡಿ । ಪಾಳೆಯಬಿಟ್ಟರೆಂಬಂತೆ ॥
ಕಾಳಮೇಘಗಳೊಡ್ಡು ಕವಿದು ತೋರಿತು ಕಡೆ । ಗಾಲದ ಭಯವ ಸೂಚಿಸುತ ॥ ೪೬ ॥
ನೀಳಗಿರಿಗಳು ನೆಗೆದು ಚರಿಸುವುವೊ ತ । ಮಾಳಲತೆಗಳು ಹಬ್ಬಿದುವೊ ॥
ಭೀಳಾಂಧಕಾರದ ದಾಳಿಯೊಯೆನೆ ಮೇಘ । ಜಾಳ ಮೋಹರಿಸಿತೇಳ್ಗೆಯೊಳು ॥ ೪೭ ॥
ಮೊಗಸಿತು ಚಂದ್ರಸೂರ್ಯರಿಗೆ ಮುಸುಕು ಕಾರ । ಮುಗಿಲು ಸುತ್ತಲು ಪಸರಿಸಿತು ॥
ಹಗಲು ಕತ್ತಲೆ ಕವಿದಂತಾಯ್ತು ದುಷ್ಟದೈ । ವಗಳ ವಿಗುರ್ವಣೆಯಿಂದ ॥ ೪೮ ॥
ಮುಂಚಿ ಕಾರ್ಮುಗಿಲೊಡ್ಡು ಬಹುದೆಂದು ದೈವಗ । ಳಂಚಿನೊಳ್ಪಿಂದು ಸೂಚನೆಗೆ ॥
ಕುಂಚವ ಬೀಸುತಿದ್ದುವೊಯೆನೆ ಚೆಲುವಾಗಿ । ಮಿಂಚು ಮಿಂಚಿದುವಲ್ಲಿಗಲ್ಲಿ ॥ ೪೯ ॥
ಪಂಚವರ್ಣದ ಸುರಚಾಪಕೆ ಹೊಳೆವೆಳೆ । ಮಿಂಚಿನ ಹೆದೆಯ ಸಂಗೊಳಿಸಿ ॥
ಹೊಂಚಿ ದೈವಗಳು ಮಿಡಿದು ನೋಡಿದಂತೆ ಪ । ಳಂಚಿ ಮೊಳಗಿತಾಗ ಮೊಳಗು ॥ ೫೦ ॥
ಪಡಿಯನೊಡೆದು ದನಿದೋರಿ ಷಟ್ಖಂಡವ । ನಡುಗಿಸಿದರಸನ ಪಡೆಯ ॥
ನಡುಗಿಸಲಾರ್ಭಟಿಸಿದುವೊ ದೈವಗಳೆನೆ । ಸಿಡಿಲು ಚೀರ್ಚಿಟಿಸಿತಲ್ಲಲ್ಲಿ ॥ ೫೧ ॥
ತಾಳಲರಿದು ದೈವಕೃತವೃಷ್ಟಿ ಬರುತಿದೆ । ಯೇಳಿ ನೀವೆಂದು ಪಾಯ್ದಳಕೆ ॥
ಹೇಳಲೊದಗಿ ಮುಂದೆ ಬಂದ ದೂತನೊಯೆನೆ । ಗಾಳಿ ಬಿರ್ರೆಂದು ಬೀಸಿದುದು ॥ ೫೨ ॥
ಕೊಡದ ಸಾಲಂದದ ಮುಗಿಲ ಕಾಮನ ಬಿಲ್ಲ । ಬಡಿಗೆಯಿಂ ಬಡಿಯೆ ದೈವಗಳು ॥
ಒಡೆದಂತೆ ಗುಡುಗಾದುದೊಳಗಿದ್ದ ನೀರು ತೊ । ಟ್ಟಿಡುವಂತೆ ಕರೆದುದು ವೃಷ್ಟಿ ॥ ೫೩ ॥
ಮುಗಿಲೆಂಬ ಮದಗಜಗಳ ಮದಧಾರೆಯೊ । ಮಿಗೆ ಮೇಘವೆಂಬ ರಾಹುಗಳು ॥
ಉಗುಳುವ ವಿಷವೊಯೆಂಬಂತಾಗ ಕಪ್ಪುವೃ । ಷ್ಟಿಗಳ ಸೂಸಿದುವು ದೈವಗಳು ॥ ೫೪ ॥
ಎಲ್ಲಿಂದ ಬಂದುವೀ ಕಂಪುಗೆಟ್ಟಹ ಮೊಗ್ಗೆ । ಮಲ್ಲಿಗೆಯೆಳೆಯ ಮುತ್ತೆಂಪು ॥
ಎಲ್ಲರಚ್ಚರಿವಟ್ಟು ನೋಡುವಂತೊಡನಾಲಿ । ಕಲ್ಲು ಝಲ್ಲೆಂದು ಚೆಲ್ಲಿದುವು ॥ ೫೫ ॥

ಏನೆಂಬೆ ಪಡೆ ಬೆಚ್ಚುವಂತಾಲಿವರಲ ವು । ತ್ತಾನೆಯ ತೋರದೊಳ್ಕರೆಯೆ ॥
ಅನೆಕಲ್ಲೆಂದಿಂದುಮುಟ್ಟಲು ನುಡಿವರು । ಮಾನವರಾಲಿಕಲ್ಲುಗಳಾ ॥ ೫೬ ॥

ತಾರಕೋರ್ವಿಯ ಕಲ್ಪತರುಗಳಿಂದಿಳಿತಹ । ಬೇರುಗಳೆನೆ ನಭವೆಂಬ ॥
ಧಾರೆವಟ್ಟಲೊಳಿಳಿತಹ ಜಲವೆನೆ ಜಲ । ಧಾರೆಗಳ್ಧರಣಿಗಿಳಿದುವು ॥ ೫೭ ॥

ಅಗಣಿತದೈವಗಳೊಂದು ಹಬ್ಬವ ಮಾಡ । ಲಗಲದೊಳ್ನೆರೆದೊತ್ತಲಾಗಿ ॥
ಗಗನವೆಂದೆಂಬ ಸೇವಗೆಯೊರಳಿಂದ ಸೇ । ವಗೆಯಿಳಿವೊಲು ಮಳೆಯಾಯ್ತು ॥ ೫೮ ॥

ಕರೆದುದು ವೃಷ್ಟಿಯೇನೆಂಬೆನಂಬರವೆ ಬಾ । ಯ್ದೆರೆದುಗುಳಿದುದೊಯೆಂಬಂತೆ ॥
ಕಿರುಧಾರೆಯಲ್ಲ ತೆಂಗಿನ ಮರಗಳ ತೋರ । ದುರುವ ಧಾರೆಯೊಳೆಡೆವಿಡದೆ ॥ ೫೯ ॥

ಧಾರಿಣಿಯೊಳಗುಳ್ಳ ಪ್ರಜೆಯನಾ ನೃಪರಾಗ । ದೂರಕೆ ಗೂಳೆಯದೆಗೆಸೆ ॥
ಆ ರಾಜ್ಯದನಿತ ಬಿಟ್ಟರಸನ ಸೇನೆಗೆ । ಭೋರೆಂದು ಕರೆದುವು ಮಳೆಯಾ ॥ ೬೦ ॥

ನೆಲನೆಲ್ಲ ಜವುಗಾಯ್ತು ವೊದಲು ಮತ್ತುರೆ ತೇದು । ತೊಳೆದುಹೋದುವು ಬಡಬೆಟ್ಟಾ ॥
ಬಲುಬೆಟ್ಟ ಕಸಿದುಕುಸಿದು ಹಿಗ್ಗಿದುವು ಮರ । ವೊಳೆಗಳ ಸುದ್ದಿಯಿನ್ನೇನು ॥ ೬೧ ॥

ಕೆರೆಬಾವಿಹಳ್ಳಕೊಳ್ಳಗಳು ಬೆಂಚೆಗಳು ಹೆ । ದ್ದೊರೆ ಹೊಳೆ ತಗ್ಗು ತಿಟ್ಟೆಲ್ಲ ॥
ಮರೆಸಿಯೇಕಾರ್ಣವವಾಯ್ತು ದೈವಗಳುಬ್ಬಿ । ಕರೆವುತಿದ್ದುವು ಮತ್ತು ಮಳೆಯಾ ॥ ೬೨ ॥

ಬಳಸಿದ್ದ ಕೋಂಟೆಯ ವಿಾರಿ ಪಾಳೆಯಕೆ ನೀ । ರಿಳಿವುದ ಕಂಡು ಪಾಯ್ದಳವು ॥
ಗಳಬಳಿಸಲು ಛತ್ರಚರ್ಮರತ್ನಗಳನಾ । ಗಳೆ ಚಕ್ರಿ ಹರಹಹೇಳೆಂದಾ ॥ ೬೩ ॥

ಛತ್ರರತ್ನವ ಮೇಲೆ ಪಸರಿಸಿ ಚರ್ಮವ । ಧಾತ್ರಿಯೊಳಗೆ ಹರಹಿದರು ॥
ಶತ್ರುವಿಜಯನ ಪಾಯ್ದಳವಿದ್ದುದಲ್ಲಿ ಬ । ಹಿತ್ರದೊಳ್ಪರದರಿಪ್ಪಂತೆ ॥ ೬೪ ॥

ಅಗಲ ಮೂವತ್ತಾರುಗಾವುದ ನೀಟ ಸೇ । ನೆಗೆ ನಾಲ್ವತ್ತೆಂಟುಯೋಜನವು ॥
ತೆಗೆದವಷ್ಟನೊಳಕೊಂಡು ಛತ್ರಚರ್ಮಗಳಾಗ । ನೆಗೆದಿದ್ದುವಾ ನೀರ ಮೇಲೆ ॥ ೬೫ ॥

ಚರ್ಮರತ್ನಕೆ ವಜ್ರಮಯವೆಂಬ ಪೆಸರುಂಟು । ಚರ್ಮವಲ್ಲದು ಸುಪವಿತ್ರಾ ॥
ಒರ್ಮೆ ಸೂರ್ಯಪ್ರಭವೆಸರು ಛತ್ರಕೆ ಪುಣ್ಯ । ನಿರ್ಮಿತವವು ವಿಚಿತ್ರಗಳು ॥ ೬೬ ॥

ಮೇಲೆ ಬಪ್ಪುಪಸರ್ಗಗಳ ಛತ್ರರತ್ನ ವಿ । ಶಾಲದಿ ತಡೆದು ಕಳೆವುದು ॥
ಕೀಳುಗಡೆಯ ಬಾಧೆಗಳ ಚರ್ಮ ತಡೆವುದು । ಹೇಳಲಳವೆ ಚಕ್ರಿಪದವಾ ॥ ೬೭ ॥

ಹೊಳೆತು ಚಂದ್ರಸೂರ್ಯರ ಪ್ರಭೆ ಮಳೆಯಿಂದ । ಕಾಳಗತ್ತಲೆ ಹೆಚ್ಚಿತಾಗ ॥
ಥಾಳದ ಚಕ್ರಕಾಕಿಣಿಗಳ ಬೆಳಗಿಂದ । ಪಾಳೆಯವಿರ್ದುದಾ ನೃಪನ ॥ ೬೮ ॥

ಮೋಹಿದ ಚಿಂತೆಯ ಕೆಡಿಸೆ ಕಾಕಿಣಿಗೆ ಚಿಂ । ತಾಹತಿಯೆಂದಾಯ್ತು ಪೆಸರು ॥
ರೂಹುಗಾಣಿಸಿತಾಗಿ ಚಕ್ರರತ್ನಕೆ ಗುಣ । ದೂಹೆ ಸುದರ್ಶನನಾಮು ॥ ೬೯ ॥

ಕೇಡಿನ ಮಳೆ ಸೂಸುತಿದ್ದುದು ಚಕ್ರಿಯಿ । ನಾಡಿನ ಸಹಜವೊಯೆಂದು ॥
ನೋಡುತಿದ್ದನು ಹಡಗಿನೊಳಿದ್ದು ಜಲಧಿಯ । ನೋಡುವ ವಾಣಿಜ್ಯನಂತೆ ॥ ೭೦ ॥
ಕಾಲ ದೇಶದ ಗುಣದೊಳು ಮಳೆ ಬಹುದಿಂದು । ನಾಳೆ ನಾಡಿದು ಹೋಹುದೆಂದು ॥
ತಾಳಿ ಪರಾಕಿನೊಳಿದ್ದನಾ ಮಳೆ ಬಿಡ । ದೇಳುದಿವಸ ಬೇಸರಿಸಿತು ॥ ೭೧ ॥
ಹಗಲಿರುಳೆಡೆವಿಡದೀ ಮಳೆ ಕರೆದುದು । ತೆಗಹಿಲ್ಲ ಮುಂದೆ ಹೆಚ್ಚುತಿದೆ ॥
ತಗಹಿಕ್ಕಿದಂತಾಯ್ತು ಪಾಯ್ದುಳಕೆಂದು ಚ । ಕ್ರಿಗೆ ಮತ್ತೆ ಯೋಚನೆಯಾಯ್ತು ॥ ೭೨ ॥
ಗಗನಕೆ ಭೂಮಿಗೆ ಜಲವೆ ತೂಟಿಟ್ಟು ದಿ । ಟ್ಟಗೆ ನಸು ತೆರಪುದೋರದಿದೆ ॥
ಯುಗದ ಕಡೆಯ ಮಳೆಯಂತಾಗುತಿದೆಯಿದ । ರಗಡು ತಾನೇನೆಂದು ನೆನೆದಾ ॥ ೭೩ ॥
ನೂರಾರುಪೆಟಲ ಗುಂಡುಗಳ ಜೋಡಿಸಿ ಕಂಚ । ಗಾರರ ಪಸರಕಿಟ್ಟಂತೆ ॥
ಸೀರಿ ಸಿಡಿಲು ಬೀಳುತಿವೆಯೆಡಬಲದೊಳ । ಗೀ ರೂಢಿಯೇನೆಂದು ನೆನೆದಾ ॥ ೭೪ ॥
ಕೊಡುವನಲ್ಲವನ ಬಿಡೆಂದರೋಪನ ಮೆಚ್ಚಿ । ಬಿಡದಿರೆ ಮಗಳಿಗೆ ಮುದುಕಿ ॥
ಕಿಡಿಕಿಡಿವೋಗಿ ಪಲ್ಗಡಿವಂತೆ ಗುಡುಗೇಕೆ । ಗುಡುಗಾಡಿಸುವುದೆಂದು ನೆನೆದಾ ॥ ೭೫ ॥
ಉದಧಿಯಾದುದು ನೆಲನೆಲ್ಲವು ತಾಳವೃ । ಕ್ಷದ ತೋರಧಾರೆ ಬೀಳುತಿದೆ ॥
ಇದು ದೈವಗಳ ಚೇಷ್ಟೆಯಾಗಬೇಕೆಂದು ತ । ನ್ನದೆಯೊಳು ನೆನೆದನಾ ಜಾಣಾ ॥ ೭೬ ॥
ಹೋಗದೆ ಸುರಿವುತಿದ್ದುದು ಮಳೆಯಿದು ನೋಡು । ವಾಗ ದೈವಗಳ ಪ್ರೇರಣೆಯೊ ॥
ಮಾಗಧಾಂಕಿತ ಜಯನಾಮ ಹೊರಗೆ ಮೇಲು । ಭಾಗೆಯ ನೋಡಿರೈಯೆಂದಾ ॥ ೭೭ ॥
ಕಂಡರವರು ಮೇಲುಭಾಗೆಯೊಳಗೆ ಸಾಲು । ಗೊಂಡಿದ್ದ ದೈವಗಳೊಡ್ಡಾ ॥
ಮಂಡೆವಣಿದು ಚಕ್ರಿಗೊರೆದು ಬೆಸನವ ಕೈ । ಕೊಂಡು ಲಂಘಿಸಿದರಂಬರಕೆ ॥ ೭೮ ॥
ಅವರ ಹಿಂದುಳಿದ ವ್ಯಂತರಿಗರು ಗಣಬದ್ಧ । ರವಸರಗೊಂಡು ಸಾಲಾಗಿ ॥
ತಿವಿಯೆಸೆ ಪೊಡೆ ಪಿಡಿ ಸ್ವಾಮಿದ್ರೋಹರನೆನು । ತವಗಡಿಸುತ ಲಾಗಿಸಿದರು ॥ ೭೯ ॥
ಮಳೆಗೆ ವ್ಯಂತರರಳುಕರು ಕೆಲಬರು ಕೊಡ । ಮಳೆಯ ಮಂತ್ರದಿ ಲಾಗಿಸಿದರು ॥
ತಲೆವರಿಗೆಯನಿಕ್ಕಿ ಜಯರಾಜ ಕಿತ್ತ ಕೂ । ರಲಗುವೆರಸು ಮುಂದೆ ನೆಗೆದಾ ॥ ೮೦ ॥
ಖಚರರದೊಂದು ವಿಮಾನವ ಜಯರಾಜ । ಪ್ರಚುರದೊಳೇರಿ ದಾಳಿಟ್ಟಾ ॥
ಸಚರಖೇಚರರು ದಾಳಿಟ್ಟರು ಸ್ವರ್ಗಕೆ । ರಚಿಸಿ ದಾಳಿಡುವರೆಂಬಂತೆ ॥ ೮೧ ॥
ತಂಬಟ ಭೇರಿ ತಿತ್ತಿರಿ ಕಾಳೆ ನಿಸ್ಸಾಳ । ಚೆಂಬಕವರೆ ಪಟಹಗಳಾ ॥
ಬೆಂಬಳಿಯೊಳು ಬಡಿವುತ ಹೋಗಿ ತಾಗಿದ । ರಂಬರದೊಳಗೆ ದೈವಗಳಾ ॥ ೮೨ ॥
ದೂರದೊಳಗೆ ನಿಂದು ದೈವಗಳುಬ್ಬಿ ಕ । ಠೋರಯುದ್ಧಕೆ ಮನವಿಕ್ಕಿ ॥
ನೀರ ಸೂಸುವುದ ಮಾಣ್ದೊಡನೆ ಗುಂಡಿನ ಬಿರು । ಧಾರೆಯ ಸೂಸಿದುವಾಳ್ದು ॥ ೮೩ ॥

ಅವರಿಟ್ಟ ಗುಂಡ ತಪ್ಪಿಸುತಾಂತು ವ್ಯಂತರ । ರವರನಿಟ್ಟರು ಗುಂಡಿನಿಂದ ॥
ಸವಿಯ ಹರಿಗೆ ಜೋಡುಟೊಪ್ಪಳಿಯು ಬಲದಿಂದ । ವಿವಿಧಖೇಚರರು ನೂಂಕಿದರು ॥ ೮೪ ॥

ಹಿಂದಕೆ ಕಿರಿದುದೂರಕೆ ತೆಗೆದಾ ದೈವ । ವೃಂದ ಮತ್ತಲ್ಲಿ ಕೆಂಡಗಳಾ ॥
ನಿಂದು ಸೂಸಿದುವು ಖೇಚರಿಗರಗ್ನಿಸ್ತಂಭ । ದೊಂದು ವಿದ್ಯೆಯೊಳು ತಡೆದರು ॥ ೮೫ ॥

ತೆರಳಿ ವ್ಯಂತರಿಗರು ತೆರಪಾಗಿ ನಭದಲ್ಲಿ । ಹರಿದರದಕೆ ದೈವ ತಮ್ಮ ॥
ಪರಿವಾರಸಹಿತ ಮತ್ತೊಯ್ಯನೆ ಹಿಂದಕೆ । ತೆರಳಿ ನಿಂದುವು ಹೋಗದಲ್ಲಿ ॥ ೮೬ ॥

ಇನ್ನೊಂದನೇನೆಂಬೆನೀ ಕಡೆಯೊಳಗಿವ । ರುನ್ನತದಿಂದೊತ್ತುವಾಗ ॥
ಬೆನ್ನ ಕಡೆಯೊಳು ದೈವಗಳನೊತ್ತುತ ಬಂದ । ರಿನ್ನಾರೊ ಅವರೂ ವ್ಯಂತರರು ॥ ೮೭ ॥

ಇಬ್ಬರು ದೊರೆಗಳೆರಡುಬಲಗೂಡಿ ಮ । ತ್ತೊಬ್ಬಲವಾಗಿ ಮತ್ತೊಡನೆ ॥
ಕಬ್ಬಿಣಕೋಲೊಳಿಡುತ ದೈವಗಳ ಹಿಂಡ । ನೆಬ್ಬಟ್ಟುತೆಯ್ತಂದರಾಚೆ ॥ ೮೮ ॥

ಭರತೇಶನೊಳು ತೋಟಿ ಬೇಡೆಂದು ಮೊದಲೆ ಪೇ । ಳ್ದರೆ ಕೇಳದುಕ್ಕಿ ಕಾದಿದರು ॥
ಪರಮಸ್ವಾಮಿದ್ರೋಹಿಗಳ ಪೊಡೆ ಬಡಿಯೆನು । ತಿರದೊತ್ತಿ ಬರುತಿದ್ದರಾಲ್ದ ॥ ೮೯ ॥

ಜಯರಾಜನವರಾಚೆ ಬಪ್ಪುದ ಕಂಡು ಚ । ಕ್ರಿಯ ಪುಣ್ಯಕಚ್ಚರಿವಡುತ ॥
ಭಯವಿಲ್ಲದೀಚೆ ತಾನೊತ್ತಿದ ಮಾಗಧಾ । ದಿಯು ಗಣಬದ್ಧರಾರ್ಭಟಿಸೆ ॥ ೯೦ ॥

ಜೋಡಿಸಿ ಪೆಟಲು ತುಪಾಕಿ ಮುಸುಂಡಿ ಸಿಂ । ಗಾಡಿಯೊಳೆಚ್ಚೊತ್ತುವಾಗ ॥
ಮಾಡದ ಮೇಲಣ ಕಾಗೆಗಳಂತೆ ಕೆ । ಟ್ಟೋಡಿದುವಖಿಲದೈವಗಳು ॥ ೯೧ ॥

ಹಿಡಿಹಿಡಿ ಕಾಲಮುಖನ ಮೇಘಮುಖನನೆಂ । ದೊಡನೆ ಬೆನ್ನಟ್ಟೆ ವ್ಯಂತರರು ॥
ಕುಡಿಮಿಂಚಿನಂತೆ ಹೇಮಾದ್ರಿಯ ನೆಗೆದು ಕಂ । ಗೆಡುತೋಡಿಹೋದರಾ ಖಳರು ॥ ೯೨ ॥

ಕುಲದೈವ ಸೂಸವ ಮಳೆಯ ನೋಡುತ ಹೆಮ್ಮೆ । ಯೊಳಗಿದ್ದು ಮಳೆ ನಿಲ್ಲಲೊಡನೆ ॥
ತೊಲಗಿ ಚಿಲಾತಭೂವರನೊಂದು ದೆಸೆಯೊಳು । ತಲೆಮರೆಸಿದನು ಮುಂದರಿದು ॥ ೯೩ ॥

ಮಳೆ ನಿಂದರೇನೆಮ್ಮ ಕುಲದೈವಗಳು ಕಾದಿ । ಗೆಲವೆಯೆಂದಾವರ್ತರಾಜಾ ॥
ಕುಲಲಿಯೆನುತ ನೋಡುತಿದ್ದನಾತನ ಭೂತ । ಗಳು ತೋರೆ ಜಯರಾಜ ಪಿಡಿದಾ ॥ ೯೪ ॥

ಕಾಡಿನೊಳಡಗಿ ಚಿಲಾತನಿದ್ದರೆಯೇನು । ನಾಡೆ ಬಲ್ಲರು ವ್ಯಂತರಿಗರು ॥
ಓಡಿದವನ ಸುದ್ದಿಯಿಂದು ಬೇಡೆಂದೋರೆ । ಮಾಡಿ ಬಿಟ್ಟರು ವಿವೇಕಿಗಳು ॥ ೯೫ ॥

ಕಾಳಗದೊಳು ಕಾದಿದವರು ಹಲಬರಲ್ಲಿ । ಕೋಳುಸಿಕ್ಕಿದುದೊಬ್ಬ ಕಲಿಗೆ ॥
ತೋಳೆರಡನು ಕಟ್ಟಿ ಜಯರಾಜನಿತ್ತ ಚ । ಡಾಳಿಸಿ ತರುತಿದ್ದನತ್ತ ॥ ೯೬ ॥

ಧರೆಯು ಮುಸುಕಿದಂಧಕಾರ ಹರಿದು ಪೂರ್ವ । ಗಿರಿಯೊಳು ಸೂರ್ಯನಿಪ್ಪಾಗ ॥
ಭರದಿಂದ ಚರ್ಮರತ್ನವನೊತ್ತಿ ಜಲದಿಂದ । ತೆರಳಿಸಿ ತಂದರು ತಡಿಗೆ ॥ ೯೭ ॥

ಕರೆಯಲ್ಲಿ ಹಡಗಿಳಿವಂತೆ ನೀರಿಲ್ಲದ । ಧರೆಯೊಳಿಳಿಯೆ ಚರ್ಮರತ್ನಾ ॥
ಸುರಶಿಲ್ಪಿ ರಚಿಸಿದ ಚಾವಡಿಯೊಳಗಿದ್ದು । ಭರತೇಶನೋಲಗಗೊಟ್ಟಾ ॥ ೯೮ ॥
ಆವರ್ತನೃಪನ ತಂದಿದಿರಲ್ಲಿ ಕೆಡಹಿ ಸೇ । ನಾವರನುಬ್ಬಿ ಕೈಮುಗಿದು ॥
ದೇವ ಚಿತ್ತೈಸಿವನೀಗ ದೈವಗಳಿಂದ । ನೋವುಗಾಣಿಸಿದವನೆಂದಾ ॥ ೯೯ ॥
ಪದುಳದಿ ಬಂದೆರಗದೆ ನನಗಿದಿರಾಗಿ । ಕದನವನೆಸಗಿದನಿವನೆ ॥
ಒದೆಬದೆ ತೊಂಡನ ಮುಕುಟವನೆಂದು ಕೋ । ಪದಿ ನುಡಿದನು ಚಕ್ರಧರನು ॥ ೧೦೦ ॥
ಹಡಪಿಗನವನ ಮುಕುಟವ ತಾನೊದೆವೆನೆಂ । ದಡಿಯಿಡೆ ಕಂಡು ಚಕ್ರೇಶಾ ॥
ಜಡಿದು ನೀ ನಿಲ್ಲೆಂದು ನಿಲಿಸಿ ಹಾವುಗೆಗಳ । ಹಿಡಿದ ಬೋವಗೆ ಸೂಚಿಸಿದನು ॥ ೧೦೧ ॥
ಹಾವುಗೆಯಿಂದವ ಪೊಡೆವೆನೆಂದೆತ್ತಿದ । ರೋವದೊದೆದು ಕೆಡಹೆಂದಾ ॥
ಬೋವ ತನ್ನೆಡದ ಕಾಲೊಳು ತೊಟ್ಟನೊದೆದನಂ । ದಾವರ್ತನೃಪನ ಮುಕುಟವಾ॥ ೧೦೨ ॥
ಶಿರದಿಂದ ಮಣಿಮಯಮುಕುಟ ಕಳೆದು ಧರೆ । ಗುರುಳಿತು ಥಂಥಣರೆನುತ ॥
ಭರತೇಶಗಿದಿರಾಗಬೇಡವೆಂದಿಳೆಗೆ ಡಂ । ಗುರವ ಸಾರುತ ಸಾಗುವಂತೆ ॥ ೧೦೩ ॥
ಮುಟ್ಟಿಗೆ ಕಾವಲೊಳಿರಲಿವನೆಂದಾಗ । ಕೊಟ್ಟನು ದಳಪತಿಗವನಾ ॥
ಕಟ್ಟ ಬಿಡಿಸಿ ಭೃತ್ಯನೊಡನೊಂದು ಮನೆಗವ । ಕೊಟ್ಟು ಕಳುಹಿದನಾ ಕ್ಷಣವೆ ॥ ೧೦೪ ॥
ಲೇಸ ಮಾಡಿದಿರಿಂದು ಹೋಗಿ ನಾಡಿದು ನಿಮ್ಮ । ನೋಸರಿಸದೆ ಮನ್ನಿಸುವೆನು ॥
ಆಸರಾರಲಿ ಪಡೆಗೆಂದು ಸರ್ವರನು ನಿ । ವಾಸಕೆ ಬೀಳ್ಕೊಟ್ಟನೊಡನೆ ॥ ೧೦೫ ॥
ದುಷ್ಟಗೆ ಶಿಕ್ಷೆಯ ಮಾಡಿದನಿನ್ನು ವಿ । ಶಿಷ್ಟರ ಮುಂದೆ ರಕ್ಷಿಪನು ॥
ಇಷ್ಟಾರ್ಥದರಮನೆಗರಸನೆಯ್ದಿದನಿದು । ವೃಷ್ಟಿನಿವಾರಣಸಂಧಿ ॥ ೧೦೬ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೭ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೮ ॥
ಕರ್ಮದಾಸ್ರವವೆಂಬ ಮಳೆಯನಾತ್ಮಧ್ಯಾನ । ಮರ್ಮಛತ್ರದಿ ನಿವಾರಿಸುವ ॥
*ನಿರ್ಮಳಾಕಾರ ನನ್ನೆದೆಯೊಳಗಿರು ಶುದ್ಧ । ಧರ್ಮಾ ಚಿದಂಬರಪುರುಷಾ ॥ ೧೦೯ ॥

ವೃಷ್ಟಿನಿವಾರಣಸಂಧಿ ಸಂಪೂರ್ಣಂ

* ನಿಮರ್ಮಳಾಕಾರ

# ಸಿಂಧುದೇವಿಯಾಶೀರ್ವಾದಸಂಧಿ.

ಬಳಲಿದ ಕರಣಗಳಿಗೆ ಶಾಂತಿಮಾಡಿ ಮುಂ । ದಲಘುತಪಕೆ ಪಟುಮಾಳ್ಪ ॥
ಕಲಿವಂತ ನನಗೆ ಸನ್ಮತಿದೋರು ಜಗಕತಿ । ಬಲನೆ ನಿರಂಜನಸಿದ್ಧಾ ॥ ೧ ॥

ಏಳುದಿವಸ ಮಳೆಯೊಳಗಲಸಿದ ತನ್ನ । ಲೋಲನೇತ್ರೆಯರಸಾ ನೃಪತಿ ॥
ಲಾಲನೆಗೈದನೆರಡುದಿನ ಸರಸಸ । ಲ್ಲೀಲೆಯೊಳೇನು ಕೋವಿದನೊ ॥ ೨ ॥

ಮಿಗೆ ಮಂಜು ತಾಗಿದ ತಾವರೆಗಳ ಸೂರ್ಯ । ನಗಿಸುವಂತಲಸಿದ ತನ್ನ ॥
ಸೊಗಸುವೆಂಗಳ ಮನಕರ್ತಿಮಾಡಿದನೇನು । ಸುಗುಣನೊ ಭರತರಾಜೇಂದ್ರಾ ॥ ೩ ॥

ಒಳಗೆ ತನ್ನಬಲೆಯರೆಲ್ಲರ ಮನ್ನಿಸಿ । ಬಳಿಕ ಮೂರನೆಯ ದಿನದೊಳು ॥
ಹೊಳೆವ ಚಾವಡಿಯೊಳೋಲಗವಾಗಿ ಕದನದ । ಕಲಿಗಳೆಲ್ಲರ ಕರೆಯೆಂದಾ ॥ ೪ ॥

ಬಂದು ಕೈಮುಗಿದು ಸರ್ವರು ಕಂಡರಾನಂದ । ದಿಂದಾತನೆಲ್ಲರ ನೋಡಿ ॥
ದಂಡುಗಬಟ್ಟಿರೈ ಮೊನ್ನೆ ನೀವೆಲ್ಲರು । ಸಂದ ಸಂಗ್ರಾಮದೊಳೆಂದಾ ॥ ೫ ॥

ನವಗಾವ ದಂಡುಗ ನಿನ್ನೊಂದು ದಿವ್ಯನಾ । ಮವ ನೆನೆವುತ ನಡೆವಾಗ ॥
ಸುವಿಲಾಸವಾಗಿಹುದೆಂದೊಡೆಯನಿಗೆ ಬಿ । ನ್ನವಿಸಿದರೆಲ್ಲರರ್ತಿಯೊಳು ॥ ೬ ॥

ಹುಸಿಯಲ್ಲ ನಾವೀಚೆ ನಡೆವಾಗ ಮೊನ್ನೆ ತಾ । ಮಸದೈವಗಳನಿಬ್ಬರಾಚೆ ॥
ಅಸಮಸೇನೆಯೊಳೊತ್ತಿ ಬಂದರು ನಿನ್ನಯ । ಹೆಸರ ಹೇಳುತ ಹಿತವಾಗಿ ॥ ೭ ॥

ಅವರಾಚೆ ಬಂದರಾವೀಚೆ ನಡೆಯೆ ದೈವ । ನಿವಹ ಕೆಟ್ಟೋಡಿದುವರಸಾ ॥
ಬವರಕೆ ಹಿತದೋರಿ ತೊಲಗಿದರೆಂದು ಬಿ । ನ್ನವಿಸಿದನಾ ಜಯರಾಜಾ ॥ ೮ ॥

ಎನೆ ಚಕ್ರಿ ನಲಿದವರಾರೆಂದು ಮಾಗಧಾಂ । ಕನ ಕೇಳಿದನು ಕೇಳಲೊಡನೆ ॥
ಮನುಜೇಂದ್ರ ಚಿತ್ತವಿಸವರೆಮ್ಮ ವ್ಯಂತರ । ಜನತತಿಗಾರಾಧ್ಯರೆಂದಾ ॥ ೯ ॥

ಒಬ್ಬನು ಸಿಂಧುದೇವನು ಸ್ವಾಮಿ ಲಾಲಿಸಿ । ನ್ನೊಬ್ಬ ಗಂಗಾದೇವನವರು ॥
ಇಬ್ಬರು ಬಂದು ದೈವಗಳೊಡ್ಡನೊತ್ತಿದ । ರೊಬ್ಬುಳಿಯಾಗಿ ಜಾರಿದರು ॥ ೧೦ ॥

ನಾಳೆ ನಾಡಿದು ಬಂದು ಕಾಣ್ಬರೆಂದೊಡೆಯಗೆ । ಹೇಳಿದನಾ ಮಾಗಧೇಂದ್ರಾ ॥
ಕೇಳಿ ಚಕ್ರೇಶ್ವರನವರ ಮೇಲೊಲ್ಮೆಯ । ತಾಳಿದನಂತರಂಗದೊಳು ॥ ೧೧ ॥

ಒಲಿದು ಸರ್ವರಿಗೆ ಮನ್ನಣೆಯಿತ್ತು ಕುರುವಂಶ । ತಿಲಕಸೋಮಪ್ರಭಸುತಗೆ ॥
ಗೆಲವೆತ್ತ ಜಯರಾಜಗಿತ್ತನು ಮನ್ನಣೆ । ಗಳ ಸಭೆ ತಲೆದೂಗುವಂತೆ ॥ ೧೨ ॥

ಮೇಘಮುಖರ ಗೆಲ್ದ ಕಾರಣ ನಿನಗಿನ್ನು । ಮೇಘೇಶ್ವರನೆಂಬ ನಾಮ ॥
ಲಾಘವವೇಕೆ ವೀರಾಗ್ರಣಿ ನೀನೆಂದ । ಮೋಘದ ಬಿರುದ ಪಾಲಿಸಿದಾ ॥ ೧೩ ॥

ಕೀರ್ತಿಸಿದರು ಬುಧರೆಲ್ಲ ನೀನೆನಗರ್ಕ । ಕೀರ್ತಿಯೋಪಾದಿಯೆಂದೊಸೆದು ॥
ಸಾರ್ತೆಗೈದುರೆ ಮುಂಡೆದೆಡವಿದನಾ ಚಕ್ರ । ವರ್ತಿ ಕೋಮಲಹಸ್ತದಿಂದ ॥ ೧೪ ॥
ಧನ್ಯನಾದೆನು ಸ್ವಾಮಿಯೆಂದಡಿಗೆರಗಿ ಸೌ । ಜನ್ಯದೊಳಗೆ ನಿಂದನವನು ॥
ವಿನ್ಯಾಸವಾದುದು ಕೀರ್ತಿ ಚಕ್ರೇಶ್ವರ । ಮಾನ್ಯಗೈದರೆ ದಳಪತಿಯಾ ॥ ೧೫ ॥

ಆವರ್ತನನುಜ ಮಾಧವನು ಚಿಲಾತನು । ದೇವರ ಕಾಣಲೆಯ್ತಂದು ॥
ತಾವಂಜುತಿದ್ದರು ಕರುಣಿಸೆಂದೊಡೆಯನಿ । ಗಾ ವೇಳೆಯೊಳು ಪೇಳ್ದನವನು ॥ ೧೬ ॥
ದ್ರೋಹಿಗಳಹುದವರನು ನೋಡಲಾಗದು । ತ್ಸಾಹದಿ ನೀನೆಂದ ಮಾತಾ ॥
ಬಾಹಿರಮಾಡಬಾರದು ಕರೆಸೆಂದನು । ಮಾಹಾತ್ಮ್ಯನಲ್ಪಕೋಪಿಗನು ॥ ೧೭ ॥
ಕೊರಳಿಗೆ ಚಿಂದಿಯ ಹಾಕಿ ಬಂದವರಿಬ್ಬ । ರರಸನ ಮುಂದಡ್ಡಗೆಡೆದು ॥
ಶರಣಾಗತವಜ್ರಪಂಜರ ಪಾಲಿಸು । ಮರುಳರನೆಂದೊರಲಿದರು ॥ ೧೮ ॥
ಕರುಣೆಯೊಳೀಕ್ಷಿಸೈಯೆಂದನೆದ್ದರು ಕೂಡೆ । ಹಿರಿದುಕಪ್ಪವನೊಪ್ಪಿಸಿದರು ॥
ದೊರೆಯ ಕರ್ಣದೊಳು ಪೆಂಗಳ ನೀವೆಂದಿವ । ರೊರೆವರೆಂದನು ದಳಾಧಿಪನು ॥ ೧೯ ॥
ಇದು ವೇಳೆಯಲ್ಲೆಂದು ಕಿವಿಯೊಳೆ ದಳಪತಿ । ಗೊದವಿ ಪೆಳ್ದನು ಚಕ್ರಧರನು ॥
ಅದನರಿದವನು ಕೈಸನ್ನೆಯೊಳ್ತಾಳಿಯೆಂ । ದಿದಿರೊಳಿದ್ದರಿಗೆ ಸೂಚಿಸಿದಾ ॥ ೨೦ ॥
ಭಂಗಗಾಣಿಸಿದೆವಿನ್ನಾವರ್ತನನು ನೋಳ್ಪ । ದಂಗವಲ್ಲವನಿನ್ನು ಧರೆಯಾ ॥
ಪಿಂಗಿ ಬೇರುಂಬಳಿಯೊಳಗಿರಲೆಂದು ರಾ । ಜಾಂಗಲಕ್ಷಣ ನಿರೂಪಿಸಿದಾ ॥ ೨೧ ॥
ಮಾಧವ ಬಾರೈ ನಿನ್ನಣ್ಣಗುಂಬಳಿಯ ಕೊ । ಟ್ಟೇ ಧರಣಿಯನಾಳು ನೀನು ॥
ಕ್ರೋಧವಿಲ್ಲೆನಗೆ ನಿಮ್ಮೆಲ್ಲರ್ಗೆ ಮುಂದೆ ವಿ । ಶೋಧಿಸುಖವ ಮಾಳ್ಪೆನೆಂದಾ ॥ ೨೨ ॥
ವೇಳೆಯರಿದು ಮುಂದೆ ಬಹುದೆಂದು ನುಡಿದು ನೃ । ಪಾಲ ಚಿಲಾತಗವನಿಗೂ ॥
ಮೇಲೆ ಮನ್ನಣೆಯಿತ್ತನಾವರ್ತಸಹಿತ ನಿ । ರಾಲಸ್ಯದೊಳು ಕಳುಹಿದನು ॥ ೨೩ ॥
ಪಡೆಗೂಡಿ ವಿಜಯಾಂಕ ಮೂಡಣ ಖಂಡಕೆ । ನಡೆದವರನು ತಹುದೆಂದಾ ॥
ಪಡೆವಳ್ಗ ನೀನೆಯ್ದಿ ಪಡುವಣ ಖಂಡಕೆಂ । ದೊಡನೆ ಬೀಳ್ಕೊಟ್ಟನಿಬ್ಬರನು ॥ ೨೪ ॥

ವಿಜಯಾರ್ಧದೇವನಾ ಸಮಯದೊಳೆಯ್ದಿ ಭೂ । ಭುಜನ ಕಂಡನು ನಲ್ಮೆಯಿಂದ ॥
ತ್ರಿಜಗದೊಳೆಣೆಯಾರು ನಿನಗೆಂದು ಚಕ್ರಿಯ । ವಿಜಯದುನ್ನತಿಯ ಕೀರ್ತಿಸಿದಾ ॥ ೨೫ ॥
ಎಂತು ಪೇಳ್ವೆವಿಜಯಾರ್ಧನಾಮ ನಿಮ್ಮಯ ಹಿಮ । ವಂತ ತಾನೆಮ್ಮಯ ಬಳಿಗೆ ॥
ಸಂತೋಷದಿಂ ಬಂದು ಕಾಣ್ಬನೊ ಬೆಟ್ಟಿಯ । ಮುಂತೆ ಕಾಣಿಸಬೇಕೊಯೆಂದಾ ॥ ೨೬ ॥
ಬೆಟ್ಟಿಗಾಣಿಸಲೇಕೆ ಹಿಮವಂತದೇವನು । ಕಟ್ಟುಗ್ರದವನಲ್ಲ ಸ್ವಾಮಿ ॥
ತೊಟ್ಟನೆ ನಾನೆಯ್ದಿ ಕರೆತಹೆನೆಂದಿಚ್ಛೆ । ವಟ್ಟು ಬಿನ್ನವಿಸಿದನವನು ॥ ೨೭ ॥

ಹಾಗಾದರೊಳ್ಳಿತೆಂದರಸ ಬೀಳ್ಕೊಡಲವ । ನಾಗಸದತ್ತ ಲಂಘಿಸಿದಾ ॥
ಆಗಳೆ ಬಂದು ಕಂಡನು ನಾಟ್ಯಮಾಲನಿಂ । ಬಾಗಿ ಸಾಷ್ಟಾಂಗಪೂರ್ವದೊಳು ॥ ೨೮ ॥

ಕುಂಡಲವೈಕಕ್ಷಗಳ ಕೊಡಲೊಡನೀತ । ಖಂಡಪ್ರಪಾತಾಖ್ಯಗುಹೆಯ ॥
ಮುಂಡೆಯೊಳಿಹ ನಾಟ್ಯಮಾಲೇಂದ್ರನೆಂದೊಳ್ಪ । ಗೊಂಡೊರೆದನು ಮಾಗಧೇಂದ್ರಾ ॥ ೨೯ ॥

ಅಂತೆಯೆಂದವಗೆ ಮನ್ನಣೆಯಿತ್ತು ನೀನೆಲ್ಲ । ರಂತೆ ಪಾಳೆಯದೊಳಿರೆಂದಾ ॥
ಸಂತವಿಟ್ಟೆಲ್ಲರ ಬೀಳ್ಕೊಟ್ಟು ಮರುದಿನ । ಶಾಂತದೊಳೋಲಗವಾದಾ ॥ ೩೦ ॥

ಸಲೆ ಸಿಂಧುದೇವಗಂಗಾದೇವನವರು ಭೂ । ತಳದೊಡೆಯನ ಕಾಣಬಂದು ॥
ಸಲುಗೆವಂತಗೆ ಮಾಗಧೇಂದ್ರಗೊಂದನು ಪೇಳ್ವ । ಕಳುಹಿದರರಸನ ಬಳಿಗೆ ॥ ೩೧ ॥

ವ್ಯಂತರಪತಿಗಳೆಲ್ಲರ ಮಾಗಧೇಂದ್ರನು । ಪಿಂತಿಕ್ಕಿಕೊಂಡೆಯ್ದಿ ನಮ್ಮ ॥
ಅಂತಸ್ಥವೊಂದ ಪಾಲಿಪುದೆಂದು ರಾಯನ । ಮುಂತೆ ಸಾಷ್ಟಾಂಗವೆರಗಿದಾ ॥ ೩೨ ॥

ಏಳೇಳು ಮಾಗಧಾಂಕಿತ ವರತನು ಕೃತ । ಮಾಳ ಪ್ರಭಾಸ ನಾಟ್ಯಾಂಕಾ ॥
ಹೇಳಿರೈ ನಿಮ್ಮ ಮನದೊಳಿದ್ದ ಕಾರ್ಯವ । ಕೇಳುವೆನೆಂದನಾ ಚಕ್ರಿ ॥ ೩೩ ॥

ಎದ್ದರೆಲ್ಲರು ಕೂಡೆ ಮಾಗಧನರಸನ । ಹೊದ್ದಿ ತುಟಿಗೆ ಸಾರ್ಚಿ ಸೆರಗಾ ॥
ಸದ್ದು ದೂರಕೆ ತಾಗದೊಯ್ಯನೊಯ್ಯನೆ ತನ್ನೊ । ಳಿದ್ದುದನೊರೆದನಿಂತೆಂದು ॥ ೩೪ ॥

ದೇವ ಬಿನ್ನಹ ಸಿಂಧುದೇವನು ಗಂಗಾ । ದೇವನೆಂಬಿಬ್ಬರು ಜಿನನ ॥
ಭಾವನೆವಿಡಿದಿಹರೆಮ್ಮೆಲ್ಲರಿಗೆ ಪೂಜ್ಯ । ಭಾವರಾಗಿಹರನವರತ ॥ ೩೫ ॥

ನಿನ್ನೊಳು ಭಕ್ತಿಯುಳ್ಳವರಹುದದ ಪೇಳ । ಲಿನ್ನೇಕೆ ನೀನರಿಯದುದೆ ॥
ಮನ್ನಣೆಯೊಳಗೆ ಕಾಣಿಸಿಕೊಳ್ಳಬೇಕೆಂದು । ಬಿನ್ನವಿಸಿದನೊಡೆಯನಿಗೆ ॥ ೩೬ ॥

ಕಾಣಿಕೆಯಿಕ್ಕಿ ಕೈಮುಗಿವಷ್ಟು ತೇಜವ । ಕ್ಷೋಣೀಶ ಪಾಲಿಸಲೆಮ್ಮ ॥
ಶ್ರೇಣಿಗೆಲ್ಲಕೆ ಕೊಟ್ಟ ತೇಜವೆಂದೊಡೆಯಗೆ । ಕಾಣಿಸಿ ಬಿನ್ನವಿಸಿದನು ॥ ೩೭ ॥

ಆಗಲೈ ನೀವಿದಕಡ್ಡಬೀಳಲದೇಕೆ । ಮಾಗಧ ನೀನೆಂದ ನುಡಿಯಾ ॥
ಹೋಗಲಾಡುವೆನೆ ಕಾಣಲಿ ಕರೆಸೆಂದನು । ರಾಗಿಸಲೆಲ್ಲ ವ್ಯಂತರರು ॥ ೩೮ ॥

ಬಂದು ಕಾಣ್ಕೆಯನಿಕ್ಕಿ ಜಂಬುಕಾನದೊಳೋಜೆ । ಯಿಂದ ಭದ್ರಾಸನಾದಿಗಳ ॥
ಮುಂದೆ ಪಾಗುಡವಿತ್ತು ಕೈಮುಗಿದರು ಸನ್ನೆ । ಯಿಂದ ಚಕ್ಕಳದಿ ಕುಳಿತರು ॥ ೩೯ ॥

ಲೇಸುಗೈದವರ ನಾನರಿಯೆನೆ ನಿಮ್ಮನು । ದಾಸೀನಗಾಣ್ಬೆನೆ ನೀವು ॥
ಓಸಳುಕಿನೊಳಿಂತು ಬರಲೇತಕೆಂದು ವಿ । ಲಾಸದಿ ನುಡಿದನಾ ನೃಪತಿ ॥ ೪೦ ॥

ನಾವೇನು ಲೇಸುಗೈದೆವು ಸ್ವಾಮಿ ನಿನಗಿದಿ । ರಾವುದುಂಟದಕಲ್ಲ ನಿನ್ನ ॥
ಸೇವೆಯ ವ್ಯಂತರರೊಳು ಪೂಜ್ಯರೆಂಬೊಂದು । ಭಾವ ತಳ್ಪಿಸಿತೆಂದರವರು ॥ ೪೧ ॥

ಬಡದೊರೆಯಲ್ಲ ಷಟ್ಖಂಡವೆಲ್ಲವನೊಂದೆ । ಕೊಡೆಯೊಳಾಳ್ವನ ಕಾಣ್ಬರೆಮಗೆ ॥
ನಡುವಿಷ್ಟು ಯೋಚನೆಯಾಗದಿಹುದೆ ಜಾಣ । ರೊಡೆಯ ಚಿತ್ತೈಸೆಂದರೊಸೆದು ॥ ೪೨ ॥

ನಿನಗೆ ವಿರೋಧಿಯಾದವನೀಗ ತನ್ನ ತಾ । ತನಗೆ ವಿರೋಧಿಯಾದವನು ॥
ನಿನಗೆ ಹಿತವ ನೆನೆದವನೀಗ ಚೆನ್ನಾಗಿ । ತನಗೆ ಹಿತವ ನೆನೆದವನು ॥ ೪೩ ॥

ಮಲೆತವರನು ಮುರಿದಿಕ್ಕುವ ಮಣಿದರ । ಸಲಹುವ ಸಾಮರ್ಥ್ಯವುಳ್ಳ ॥
ಚೆಲುವರೊಡೆಯ ನಿನ್ನ ಕಾಣ್ಬುದು ಪುಣ್ಯದ । ಫಲವೆಂದು ನುಡಿದರಾ ಸುರರು ॥ ೪೪ ॥

ಒಡೆಯನ ಸಹಜಗುಣವನೆ ಬಣ್ಣಿಸಿದಿರೆಂ । ದೊಡನೆ ವ್ಯಂತರಿಗರಾಡಿದರು ॥
ಪೊಡವಿಗೊಡೆಯನದನಾಲಿಸುತೊಲವಿಂದ । ನುಡಿದನಿಂತೆಂದವರೊಡನೆ ॥ ೪೫ ॥

ಬಣ್ಣಗಾರಿಕೆಯಲ್ಲ ನಿಮ್ಮ ವಿನಯವದ । ಬಣ್ಣಿಸಲೇಕಾನು ಬಲ್ಲೆ ॥
ಬಿಣ್ಣಿತೇನೆಮಗೆ ನಿಮಗೆ ಬಂಧುತನದೊಂದು । ಬಣ್ಣಿಗೆಯಿರಲಿಯಿನ್ನೆಂದಾ ॥ ೪೬ ॥

ಕೊಡುವ ಕೊಂಬೊಂದು ಬೀಯಗತನ ಕೂಡದು । ನುಡಿಯೊಳೆ ಮಾಳ್ಪೆವಿನ್ನೆಮ್ಮ ॥
ಮಡದಿಯರ್ನಿಮ್ಮಕ್ಕಂದಿರು ನಿಮ್ಮ ಸತಿಯರೆ । ಮ್ಮೊಡಹುಟ್ಟಿದನುಜೆಯರೆಂದಾ ॥ ೪೭ ॥

ಪ್ರಭುವಿಗೆ ಮೈದುನರಾದರಿವರು ಮರ್ಥು । ಶುಭಶಕುನದಿ ಬಂದರೆಂದು ॥
ರಭಸದೋರಿದರು ವ್ಯಂತರರು ಮೈದುನರಿಗೆ । ವಿಭು ಕೊಟ್ಟನೊಲಿದುಡುಗೊರೆಯಾ॥ ೪೮ ॥

ನಿಮ್ಮೂರೊಳಿದ್ದ ಜಿನೇಂದ್ರಬಿಂಬವ ನೋಡ । ಲೆಮ್ಮ ಚಿತ್ತದೊಳರ್ತಿಯುಂಟು ॥
ಘಮ್ಮನೆ ನಾಳೆ ಬಪ್ಪೆವು ಮುಂದೆ ತೆರಳಿಯೆಂ । ದೊಮ್ಮೊದಲೊಳೆ ಬೀಳುಕೊಟ್ಟಾ ॥ ೪೯ ॥

ನಲಿದುಬ್ಬಿ ಕೈಮುಗಿದವರು ಹೋದರು ರಾಯ । ತಳುವದೆದ್ದನು ಮರುದಿವಸ ॥
ಹಲವುಪಯಣದಲ್ಲಿ ಸಿಂಧುಕೂಟವ ಸಾರಿ । ಕೆಲದಲ್ಲಿ ಪಾಳೆಯಬಿಟ್ಟಾ ॥ ೫೦ ॥

ದೇವವಾಹಿನಿಗೂಡಿ ಬಂದು ಸುವಸ್ತುಚ । ಯಾವಳಿಯುಲುಪೆಯ ತಂದು ॥
ಆ ವೀರಕಟಕವೆಲ್ಲವು ತಣಿವೊಲು ಸಿಂಧು । ದೇವ ಮನ್ನಿಸಿದ ಭಾವನನು ॥ ೫೧ ॥

ಬಂದ ದಿನದೊಳು ಮೈದುನ ಮಾಡಿದುಪಚಾರ । ದಿಂದ ತಡೆದು ಮರುದಿವಸ ॥
ಇಂದು ತೀರ್ಥವ ಮಿಂದು ಮುಂದಕೆ ತೆರಳುವೆ । ನೆಂದು ಯೋಚಿಸಿದನಾ ಚಕ್ರಿ ॥ ೫೨ ॥

ಗಗನವ ತುಡುಕುವ ಹಿಮಶೈಲದೊಳು ಪುಟ್ಟಿ । ನೆಗೆದು ದಕ್ಷಿಣಮುಖವಾಗಿ ॥
ಧಿಗಿಧಿಗಿನಿಳೆಗೆ ಬೀಳುವ ಸಿಂಧುನದಿಯನಾ । ಸುಗುಣಚಕ್ರೇಶ ನೋಡಿದನು ॥ ೫೩ ॥

ಮೇಲೆ ಕಿರಿದು ಬರಬರ ತೆರಪಾಗಿರೆ । ನೀಳವಾದೊಂದು ಮುತ್ತಿಡಿದ ।
ಕಾಳೆಯ ತಲೆಕೆಳಗಾಗೆ ಪಿಡಿದವೊಲು । ಬೀಳುತಿದ್ದುದು ಸಿಂಧುತಟನಿ ॥ ೫೪ ॥

ನೆಲದ ಮೇಲೊಂದು ವಜ್ರದ ಕಿರುಪರ್ವತ । ನೆಲಸಿಹುದದರ ತುದಿಯೊಳು ॥
ಪಳುಕಿನ ಜಿನಬಿಂಬವೆಸೆವುದಾ ಬಿಂಬದ । ತಲೆಯೊಳಾ ನದಿ ಬೀಳುತಿಹುದು ॥ ೫೫ ॥

ಬಿಂಬ ಸಿದ್ಧಾಸನದೊಳಗೆಸೆವುದು ಜೆಡೆ । ತುಂಬಿಹುದಲ್ಲಿ ನೀರೆಸೆಯೆ ॥
ಇಂಬಿನೊಳೀಶ್ವರ ಗಂಗೆಯ ಧರಿಸಿದ । ನೆಂಬರು ಭಕ್ತಿಭಾವಕರು ॥ ೩೬ ॥
ದ್ವಿಜರೊಡಗೂಡಿ ರಾಯನ ಮಂತ್ರಿ ತಾನಲ್ಲಿ । ಗಜದಂತೆ ಸ್ನಾನವ ಮಾಡಿ ॥
ಸುಜಿನೇಂದ್ರಬಿಂಬವ ನುತಿಸುತಿದ್ದನು ಪಾಪ । ರಜ ಹರಿವಂತೆ ಭಕ್ತಿಯೊಳು ॥ ೩೭ ॥
ಭೂಸುರರೆಲ್ಲರು ಪುಣ್ಯತೀರ್ಥವ ಮಿಂದು । ಸಾಸಿರನಾಮಮಂತ್ರದೊಳು ॥
ಶ್ರೀಸರ್ವಜ್ಞನ ಪ್ರತಿಮೆಯ ಜಪಿಸುವೊಂ । ದಾಸಕ್ತಿಗರಸ ಮೆಚ್ಚಿದನು ॥ ೩೮ ॥
ನಾಸಿಕವಿಡಿದು ಮುಳುಗುವರಾಚಮನವಿ । ನ್ಯಾಸವ ಮಾಳ್ಪರು ಮತ್ತೆ ॥
ಭೂಸುದತೀಶಗೆ ಜಯವಾಗಲೆಂದು ಮ । ಹಾಸೂತ್ರಘೋಷದೋರುವರು ॥ ೩೯ ॥
ಮಡುವಿಂದ ಪೊರಮಟ್ಟು ದೋತ್ರದ ನೀರು ತೊ । ಟ್ಟಿಡುತ ಸಿದ್ಧಾಂತ *ಸೂತ್ರಗಳಾ ॥
ಸಡಗರದಿಂದೋದುತರುಹನ ನುತಿಸುವ । ಕಡುಭಕ್ತಿಗರಸ ಮೆಚ್ಚಿದನು ॥ ೬೦ ॥
ಶಿಷ್ಟರಲ್ಲವೆ ಪುರುನಾಥನ ಪ್ರಥಮದ । ಸೃಷ್ಟಿಯೊಳಾದವರಲ್ತೆ ॥
ಇಷ್ಟು ವಿಶೋಧಿಯೆಲ್ಲರಿಗುಂಟೆಯೆಂದು ಸಂ । ತುಷ್ಟನಾದನು ನೋಡಿ ನೃಪತಿ ॥ ೬೧ ॥
ಸತಿಯರುವೆರಸಿ ಭೂವರನಿಲ್ಲಿಗೆಯ್ದಬೇ । ಕತಿಜೋಲಿ ಸಲ್ಲದೆಂದರಿದು ॥
ಚತುರವಿಪ್ರರು ಬೇಗ ಜಪಿಸಿ ಜಾರಿದರು ಭೂ । ಪತಿ ಹೊಕ್ಕನಾ ತೀರ್ಥದೆಡೆಗೆ ॥ ೬೨ ॥
ಮಾನಿನಿಯರಿಗೆ ತೀರ್ಥದ ಚೆಲ್ವ ಕಾಣಿಸಿ । ಜೈನಬಿಂಬವ ಸ್ತುತಿಗೈದು ॥
ಸ್ನಾನವ ಮಾಡಿ ಭೂಸುರರಿಗಿತ್ತನು ಭೂರಿ । ದಾನವ ಮನದಣಿವಂತೆ ॥ ೬೩ ॥
ಸತ್ರದೊಳಿವರಿಗೆ ತೃಪ್ತಿಗೆಯ್ಸೆಂದು ಚ । ರಿತ್ರಮಂತ್ರಿಗೆ ಬೆಸಸಿದನು ॥
ಪುತ್ರಪೌತ್ರಾದಿವೆರಸಿ ಸುಖಬಾಳೆಂದು । ಸೂತ್ರದಿ ಪರಸಿದರವರು ॥ ೬೪ ॥

ಶ್ರೀವಿಪ್ರಜನದ ಪರಕೆ ಕೇಳುತಿರೆ ಸಿಂಧು । ದೇವನೆಯ್ತಂದೊತ್ತ ಸಾರ್ದು ॥
ದೇವರ ತಂಗಿ ದೇವರ ಕಾಣ್ಬೆನೆಂಬಳೆಂ । ದೋವಿ ಕರ್ಣದೊಳು ಸೂಚಿಸಿದಾ ॥ ೬೫ ॥
ಲೇಸೆನುತೊಡಬಟ್ಟು ಬಳಿಕ ವಿನಯದಿಂದ । ಭೂಸುರರೆಲ್ಲರ ನಿಲಿಸಿ ॥
ಆ ಸುಖಿಯೊಳವೊಕ್ಕು ಸತಿಯರುವೆರಸಿ ವಿ । ಲಾಸದೊಳೋಲಗವಾದಾ ॥ ೬೬ ॥
ದೇವಕಾಂತೆಯರ ಬಳಸಿನಲ್ಲಿ ದಿವ್ಯರ । ತ್ನಾವಳಿಗಳ ತೊಡಿಗೆಯಲಿ ॥
ಕಾವನ ಪಡೆದವಳಿವಳೊಯೆಂದೆನೆ ಸಿಂಧು । ದೇವಿ ಬಂದಳು ವಿಲಾಸದೊಳು ॥ ೬೭ ॥
ಗರುವಿಕೆ ಗಾಡಿ ಶೃಂಗಾರ ಲಾವಣ್ಯ ವೈ । ಸಿರಿಗೂಡಿ ನಡೆದು ಬಹಾಗ ॥
ಭರತರಾಜೇಂದ್ರನ ತಂಗಿಯೆ ತಪ್ಪದೆಂ । ಬಿರವಿನೊಳ್ಬಂದಳಾ ದೇವಿ ॥ ೬೮ ॥

---

* ಮಂತ್ರವನು

ಕಲಸಕನ್ನಡಿವೊದಲಾದ ಸನ್ಮಂಗಲ । ದೆಳೆವೆಣ್ಣುಗಳ ಮುಂದೆ ನಡೆಸಿ ॥
ಕೆಳದಿಯರಿಂದ ನಿವಾಳಿಯಾರತಿಗಳ । ಸಲಿಸಿದಳಣ್ಣಗಾ ದೇವಿ ॥ ೧೯ ॥

ನೂತನದರ್ಶನದಣ್ಣನೊತ್ತಿಗೆ ಸಾರ । ಲಾ ತಂಗಿ ನಸು ಬೆದರುತಿರೆ ॥
ಭೀತಿಯೇತಕೆ ತಂಗಿ ಬಾರೆಂದು ತನ್ನನು । ಜಾತೆಯು ಕರೆದನಾ ಸುಮುಖಾ ॥ ೨೦ ॥

ಹತ್ತಿರ ಸಾರ್ದು ಹಸ್ತಗಳಲ್ಲಿ ಹೊಳೆವೆಳೆ । ಮುತ್ತಿನಕ್ಷತೆಗಳ ತುಂಬಿ ॥
ಎತ್ತಿ ನಿಂದಣ್ಣಾಜಿ ಸುಖಬಾಳು ಬಾಳೆಂದು । ಮುತ್ತೈದೆ ಹರಸಿ ಸೂಸಿದಳು ॥ ೨೧ ॥

ಅವಿಚಳಲೀಲೆಯೊಳಾರು ಖಂಡದ ರಾಜ । ನಿವಹದ ಸಂಪತ್ತನೆನ್ನ ॥
ತವರುಮನೆಯ ಚಂದಕಾರ ನೀನಾಳೆಂದು । ದಿವಿಜೆ ತಿಲಕವಿಟ್ಟಳೊಡನೆ ॥ ೨೨ ॥

ಅಂಬರಭೂಮಿಗೆಲ್ಲಕೆ ನಿನ್ನ ಕೀರ್ತಿ ಶು । ಭ್ರಾಂಬರವಾಗಲಿಯೆಂದು ॥
ಅಂಬುಜವದನೆ ತನ್ನಣ್ಣಗೆ ಹರಸಿ ದಿ । ವ್ಯಾಂಬರವನು ಹೊದೆಸಿದಳು ॥ ೨೩ ॥

ಆರಿದಿರಾದರ ತಲೆಯು ನಿನ್ನಯ ಪಾದ । ವಾರಿಜಗಳಿಗೆರಗಿಸುವ ॥
ವೀರಸಿರಿಯ ಜಯಸಿರಿಯ ನೀನಾಳೆಂದು । ವೀರಕಂಕಣವನಿಕ್ಕಿದಳು ॥ ೨೪ ॥

ಅಣ್ಣನ ಹರಸಿ ಮತ್ತಾತನೊತ್ತಿನೊಳಿದ್ದ । ಹೆಣ್ಣುಗಳೆಲ್ಲರನಾಕೆ ॥
ಕಣ್ಣಾರ್ತಿ ಮಿಗೆ ನೋಡಿ ನಗುತ ಹರಸಿದಳು । ಬಣ್ಣವಣ್ಣಿಗೆಯೊಳೇನೆಂಬೆ ॥ ೨೫ ॥

ಚಿಂತೆಯೆಂಬುದ ಕನಸಿನೊಳು ಹೊದ್ದದೆ ನಿಮ್ಮ । ಕಾಂತನ ನಿಮಿಷವಗಲದೆ ॥
ಸಂತಾನಸಿರಿಯು ಪೆತ್ತೋಲಾಡಿಯೆಂದೆಲ್ಲ । ಕಾಂತೆಯರ್ಗಿಟ್ಟಳಕ್ಷತೆಯಾ ॥ ೨೬ ॥

ಹರೆಯು ಜಾರದೆ ಮುಪ್ಪುದೋರದೆ ಸವತಿಮ । ತ್ಸರವಾಗದೆನ್ನಣ್ಣನೊಡನೆ ॥
ಸ್ಥಿರಬಾಳಿರೆಂದು ದೇವಾಂಗದ ಸೀರೆಯು । ಹರಸಿ ಸರ್ವರಿಗಿತ್ತಳಾಕೆ ॥ ೨೭ ॥

ಹರಕೆಯಿರಲಿ ವಸ್ತ್ರ ಬೇಡವೆಂದವರೊಲ್ಲ । ದಿರೆ ರಾಯ ನೋಡಿ ನಮ್ಮನುಜೆ ॥
ಹರಸಿ ಕೊಟ್ಟುದ ಕೊಳ್ಳಿ ಬಿಸುಡಸಲ್ಲೆಂದನೆಂ । ದರೆ ಕೇಳುತೊಡಬಟ್ಟರವರು ॥ ೨೮ ॥

ನಾನಿತ್ತ ತೆರದೊಳೆನ್ನಣ್ಣಾಜಿ ಕೊಂಡ ನೀ । ವೇನಿಂತುಟಿರವುಗಾಣುವರೆ ॥
ಮಾನಕಾತಿಯರಿರ ಕೊಳ್ಳಿರೆಂದೆನೆ ನಗು । ತಾ ನಾರಿಯರು ಕೊಂಡರೆಲ್ಲ ॥ ೨೯ ॥

ಹಾರಿದ ಸಖಿಯರ ಪೊರೆವಿರಿ ನೀವೊಂದ । ಹಾರಲಿಲ್ಲದ ಬಲ್ಲಿನೆನ್ನ ॥
ಹಾರದಂತೊಪ್ಪದಿ ಬಾಳಿರೆಂದೊಂದೊಂದು । ಹಾರವ ಹರಸಿಯಿಕ್ಕಿದಳು ॥ ೩೦ ॥

ಅಣ್ಣನ ರಾಣಿಯರಲ್ಲವೆ ನೀವೆಲ್ಲ । ಪೆಣ್ಣಿನ ತಿಲಕಗಳೆಂದು ॥
ಸಣ್ಣಬೊಟ್ಟಿಡುತ ಸರಸದಿ ಮನ್ನಿಸಿದಳಾ । ಹೆಣ್ಣುಗಳರಸಿಯೆಲ್ಲರನು ॥ ೩೧ ॥

ಬಂದುದುತ್ತಮವಾದುದಣ್ಣಾಜಿ ನೀನಿಂದು । ಮುಂದಕೆ ಪಯಣವೆಂದೆ ಗಡಾ ॥
ಒಂದುದಿವಸ ನನ್ನ ವಿನಯಕೆ ತಡೆಯಬೇ । ಕೆಂದಾಕೆ ಸನ್ಮಾನಿಸಿದಳು ॥ ೩೨ ॥

ಆಗಲಿ ತಂಗಿ ನಿನ್ನರ್ತಿ ಸಲಲಿ ನಾಳೆ । ಹೋಗುವೆವೆಂದನಾ ಸುರಸಾ ॥
ಸೋಗೆಗಣ್ಣಬಲೆ ಸಂತೋಷವೆಯ್ದಿದಳು ಭೂ । ಭಾಗವೆಲ್ಲವನಾಳಿದಂತೆ ॥ ೮೩ ॥
ನಾಕೆಂಟು ವ್ರತ ನವಗಿಲ್ಲ ನಾವಿತ್ತನ್ನ । ವೇಕೆ ಸಲ್ವುದು ನಿವಗೆಂದು ॥
ಆಕೆ ಸುವಸ್ತುವ ತರಿಸಿಕೊಟ್ಟಳು ಸ್ವಯಂ । ಪಾಕವಾದುದು ಚಕ್ರಧರಗೆ ॥ ೮೪ ॥
ಎರಡುಪೊತ್ತಬಲೆಯರ್ವೆರಸಿ ರಾಜೇಂದ್ರನಾ । ದರದೊಳಾರೋಗಣೆಗೈದು ॥
ಇರುಳ ಕಳೆದು ಮರುದಿನದಲ್ಲಿ ತಂಗಿಯ । ಕರೆದು ಮನ್ನಿಸಿದನೇನೆಂಬೆ ॥ ೮೫ ॥

ಬಾ ಸಿಂಧುದೇವಿ ಮುನ್ನೆನ್ನೊಬ್ಬ ತಂಗಿ ಕೈ । ಲಾಸದೊಳ್ತಪಸುದಾಳಿದಳು ॥
ವ್ಯಾಸಂಗದಾ ನೋವು ನಿನ್ನ ಕಂಡಗಲಿತೆಂ । ದಾ ಸುಮುಖರ ದೇವ ನುಡಿದಾ ॥ ೮೬ ॥
ಅವಳ ಪೆಸರು ಬ್ರಾಹ್ಮಿಲಾದೇವಿಯೆಂದು ನಿ । ನ್ನವಯುವದಂತವಳಿರವು ॥
ನವಗಿನ್ನು ಬ್ರಾಹ್ಮಿಲಾದೇವಿ ನೀನೆಂದು ಮಾ । ನವಪತಿ ನುಡಿದನಾಕೆಯೊಳು ॥ ೮೭ ॥
ಕೃತಕೃತ್ಯಳಾದೆನು ದೇವಾಧಿದೇವನ । ಸುತೆಯೆಂಬ ಷಟ್ಖಂಡಪತಿಯ ॥
ಹಿತದನುಜಾತೆಯೆಂಬುನ್ನತಿವೆತ್ತೆನೆಂ । ದತಿಮುದವಾಂತಳಾ ದೇವಿ ॥ ೮೮ ॥
ನವನಿಧಿಗಳಿಗೆ ಕಣ್ಣೊತ್ತಿ ತಂಗಿಯ ಸರ್ವ । ಭವನಗಳ್ತಿರಪೆಯ್ದುವೆನಿಸಿ ॥
ನವರತ್ನ ವಸ್ತ್ರವ ತುಂಬಿಸಿ ಬಿಟ್ಟನೇ । ನವನಲ್ಪತರದ ಸೋದರನೆ ॥ ೮೯ ॥
ಪರಿವಾರದೇವಿಯರಿಗೆ ತನ್ನ ವೈದುನ । ಗಿರದೆ ಮತ್ತವನ ಭೃತ್ಯರಿಗೆ ॥
ಸುರತರು ನಾಣ್ಚುವಂತುಡುಗೊರೆಯಿತ್ತನು । ಭರತೇಶನಂತೀವರಾರು ॥ ೯೦ ॥
ಅವ್ವ ನೀನೊಸಗೆಮಾಡಿದೆ ನವಗೆಲ್ಲರ್ಗೆ । ಸಮ್ಮಾನಗೆಯ್ದೆ ಮುಂದಿನ್ನು ॥
ನಮ್ಮೊಳೊಂದೊಸಗೆಯಹಾಗ ಸ್ತ್ರೀಪುರುಷರ । ನಿಮ್ಮ ಕರೆಸಿಕೊಂಬೆನೆಂದಾ ॥ ೯೧ ॥
ತಂಗಿ ನೀ ನಿಲ್ಲೆಂದು ನಿಲಿಸಿಯಾ ರಾಜಲೀ । ಲಾಂಗನಾ ಕ್ಷಣದೊಳಲ್ಲಿಂದ ॥
ಮುಂಗಡೆಗೆದ್ದನು ಪರನಾರೀಸೋದರ । ಚಾಂಗು ಭಲಾಯೆಂದು ಹೊಗಳೆ ॥ ೯೨ ॥
ನಾರಿಯರೆಲ್ಲರು ಸಿಂಧುದೇವಿಗೆ ಸರ । ಸಾರೂಢಿದೋರಿ ಮೌಕ್ತಿಕದ ॥
ಹಾರ ಮಾಣಿಕ್ಯದುಂಗುರ ಮೊದಲಾದುಪ । ಚಾರವಸ್ತುವ ಕೊಟ್ಟರೊಸೆದು ॥ ೯೩ ॥
ನಾನಿತ್ತರೊಲ್ಲದಾದಿರಿ ನಾನು ನಿಮಗೆ ಕೈ । ಯಾನೆನೆಂದಾಕೆ ಹೋರಿದಳು ॥
ಏನು ಸಾಮಾಂತುದಿಲ್ಲವೆ ಪಿಡಿಯೆಂದೊತ್ತಿ । ಸಾನಂದದೊಳು ಕೊಟ್ಟರವರು ॥ ೯೪ ॥
ಅನ್ಯೋನ್ಯವಿನಯವ ಬಿಡದಿರಿಯೆಂದು ತಾ । ವನ್ಯೋನ್ಯ ನೋಡಿ ಮಾತಾಡಿ ॥
ಮಾನ್ಯಕಾಂತೆಯರು ಮಾನ್ಯಾಂಗನೆಯಿಂದ ಸೌ । ಜನ್ಯದಿ ಬೀಳ್ಕೊಂಡರೊಡನೆ ॥ ೯೫ ॥
ಪಾವನತೀರ್ಥವ ಪಡೆಯಿಲ್ಲ ಮಿಂದು ಪು । ಣ್ಯಾವಹವೆಯ್ದಲಲ್ಲಿಂದ ॥
ತೀವಿ ಗಂಗಾಕೂಟಕೆಂದೆದ್ದನಿದು ಸಿಂಧು । ದೇವಿಯಾತಿಥ್ಯದಸಂಧಿ ॥ ೯೬ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೭ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೮ ॥

ತೀರ್ಥಕೆ ತೀರ್ಥವೆ ಸಕಲಶಾಸ್ತ್ರಗಳ ಸಾ । ರಾರ್ಥವೆ ಮುಕ್ತಿಯ ವೊದಲೆ ॥
ಆರ್ತಿಯೊಳೆನ್ನೆದೆಯೊಳಗಿರು ಸ್ವಪರಹಿ । ತಾರ್ಥಾ ಚಿದಂಬರಪುರುಷಾ ॥ ೯೯ ॥

ಸಿಂಧುದೇವಿಯಾಶೀರ್ವಾದಸಂಧಿ ಸಂಪೂರ್ಣಂ

## ಅಂಕಮಾಲಾಸಂಧಿ.

ಮಂಗಲಮಹಿಮ ಮನೋಹರರೂಪ ಸೌ । ಖ್ಯಂಗಳ ಸಾರ ಶೃಂಗಾರಾ ॥
ಕಂಗೊಳಿಸೆನಗೆ ಸನ್ಮತಿಯನು ಸರಸಕ । ಲಾಂಗಾ ನಿರಂಜನಸಿದ್ಧಾ ॥ ೧ ॥

ಸಿಂಧುದೇವನ ವಿನಯದಿ ನಿಲಿಸುತ ಗುಣ । ಸಿಂಧುಜಿನೇಂದ್ರನ ನೆನೆದು ॥
ದಾಂಧಣಂಧಾಣೆಂಬ ನಿಸ್ಸಾಳಧ್ವನಿಯ ಪ್ರ । ಬಂಧದೊಳೆದ್ದನಾ ರಾಯಾ ॥ ೨ ॥
ಅಂತರಿಸದೆ ರಾಜಕಟಕವ ಮುಂದೆ ಜ । ಯಂತರಾಜನು ಕೊಂಡು ನಡೆಯೆ ॥
ಪಿಂತೊಬ್ಬ ತೊಟ್ಟಿಲ ಕುವರನ ಪೌಜೆಯ್ದೆ । ತಾಂ ತೆರಳ್ದನು ಗಮಕದೊಳು ॥ ೩ ॥
ಒಂದೆರಳ್ಪಯಣವ ಸಿಂಧುವಿನೊತ್ತಿಂದ । ಮುಂದೆಯ್ದಿ ಬಿಟ್ಟ ಪಾಳೆಯಕೆ ॥
ಬಂದನು ಹಿಮವಂತದೇವನು ತನ್ನಯ । ಮಂದಿವೆರಸಿ ಗಮಕದೊಳು ॥ ೪ ॥
ಹಿಮಶೈಲದಗ್ರದಿ ಬಾಳ್ವಾತನೀತನು । ತ್ತಮನು ನೀನವಧರಿಸೆಂದು ॥
ಹಿಮವಂತದೇವನ ವಿಜಯಾರ್ಧದೇವನು । ಗಮನವೇಳೆಯೊಳು ಕಾಣಿಸಿದಾ ॥ ೫ ॥
ಮುಂದೆ ಯೋಚಿಸಿಕೊಂಬ ಹಿಮವಂತದೇವ ಮಾ । ತೊಂದ ಕೇಳ್ವಿಜಯಾರ್ಧದೇವಾ ॥
ಒಂದೆರಳ್ಬಿನ್ನಹದೊಳು ಕಾಣಿ ಸ್ವಾಮಿಯ । ನೆಂದರು ಮಂತ್ರಿಮಾಗಧರು ॥ ೬ ॥
ಸ್ಥೂಲಕಾಯನು ಶ್ವೇತವರ್ಣನು ರತ್ನಭೂ । ಷಾಳಿ ಮಕುಟದ ಪ್ರಕಾಶಾ ॥
ಢಾಳಿಸೆ ಹಿಮವಂತದೇವನೆಯ್ತಂದು ನಿ । ವಾಳಿಕಾಣಿಕೆಯನಿಕ್ಕಿದನು ॥ ೭ ॥
ಚಂದನ ಗಂಧ ಗೋಶೀರ್ಷ ಮಹೌಷಧ । ವೆಂದೆಂಬ ಸಾರವಸ್ತುಗಳಾ ॥
ಹಿಂದೆಲ್ಲರಿತ್ತುದಕಧಿಕದಾಭರಣವ । ಮುಂದೆ ಪಾಗುಡವಿರಿಸಿದನು ॥ ೮ ॥
ನೋಡುತ ಚಕ್ರಿಯ ಚೆಲ್ವನಾನಂದವ । ಮಾಡುತ ಸಾಷ್ಟಾಂಗವೆರಗಿ ॥
ಬೇಡಿನೊಂದನು ಬಹುದೃಷ್ಟಿಯ ಕೊಡು ನಿನ್ನ । ನೋಡಬೇಕೆಂದನಾ ಸುಮುಖಾ ॥ ೯ ॥
ನಸುನಗೆಯಿಂದ ಚಕ್ರೇಶನೇಳೇಳೆಂದ । ರೊಸೆದೆದ್ದು ನಿಂದನಿದಿರೊಳು ॥
ಕುಸುಮಾಸ್ತ್ರ ಕಬ್ಬುವಿಲ್ಲಿಲ್ಲದೆ ಜಗವ ನೀ । ನೆಸೆವುದಚ್ಚರಿ ಸ್ವಾಮಿಯೆಂದಾ ॥ ೧೦ ॥
ಕುಳ್ಳಿರೆಂದಾಸನಗೊಡಿಸೆ ಕುಳಿತನಿವ । ನೊಳ್ಳಿದನ್ಯೆಯೆಂದ ನೃಪತಿ ॥
ಮೆಲ್ಲಿತಾಸನಕೆ ಸೂಚನೆದೋರೆ ಕುಳಿತನು । ಗೆಲ್ಲದೊಳ್ವಿಜಯಾರ್ಧದೇವಾ ॥ ೧೧ ॥
ಮಿಾಟುಮನ್ನಣೆಯನಿರ್ವರ್ಗೆ ಪಾಲಿಸಿ ತೀರ್ಥ । ಕೂಟಕೆಯ್ದುವವೇಳೆಂದಾ ॥
ನಾಟಿದರ್ತಿಯನಾರು ತಡೆವರಾ ಕ್ಷಣವೆ ಕಿ । ರೀಟಿಯೆದ್ದನು ವಿಲಾಸದೊಳು ॥ ೧೨ ॥

ಪಡುವಣಿಂ ಮೂಡ ಮುಂತಾಗಿ ಗಂಗಾಕೂಟ । ಕಡಿಯಿಡುವಾಗ ಚಕ್ರೇಶಾ ॥
ಎಡದ ಭಾಗದ ಹಿಮಗಿರಿಯ ಕಂಡರ್ತಿಯೊ । ಳ್ನುಡಿದನಿಂತೆಂದು ಮಾಗಧಗೆ ॥ ೧೩ ॥

ಈ ಗಿರಿಯೊಳು ವಿಜಯಾರ್ಧದಂದದೊಳೊಂದು । ಬಾಗಿಲುಂಟಾದರೆ ಮುಂದೆ ॥
ಹೋಗುತಿದ್ದೆವು ನಾಡ ನೋಳ್ಪೆವಲ್ಲವೆ ಹೇಳು । ಮಾಗಧ ನನ್ನಾಣೆಯೆಂದಾ ॥ ೧೪ ॥
ಅಹುದು ನನ್ನೊಡೆಯ ಹಿಮಾದ್ರಿಯಿಂದಾಚೆಯು । ಮಹಿಯೊಳಿದ್ದವರಿಗೆಮ್ಮಂತೆ ॥
ಸ್ಪೃಹೆ ಮಿಗೆ ನಿನ್ನನೋಲೈಸುವ ಸಿರಿಯೇಕೆ । ಬಹುದೆಂದು ನುಡಿದನಾ ಸುರಸಾ ॥ ೧೫ ॥
ಗಿರಿಯಾಚೆ ಭೋಗಭೂತಳವಲ್ತೆ ಅಲ್ಲಿದ್ದ । ನರರು ಭೋಗಾಸಕ್ತರವರು ॥
ಒರೆಯೆ ಸಮ್ಯಕ್ತ್ವವ ತಾಳರು ವ್ರತವಿಲ್ಲ । ವರವ್ರತಿಕರ ಸಂಗವಿಲ್ಲ ॥ ೧೬ ॥
ವ್ಯಂತರರಿಗೆ ವ್ರತವಿಲ್ಲವಹುದು ವ್ರತ । ವಂತರ ಗೋಷ್ಠಿಯುಂಟೆಮಗೆ ॥
ಅಂತಾದ ಕಾರಣ ನಿನ್ನ ನಿರೂಪಿಸಿ । ದ್ಧಾಂತವ ಕೇಳ್ವುದಾಯ್ತೆಂದಾ ॥ ೧೭ ॥
ಈ ನೆಲದೊಳು ಧರ್ಮವಿಲ್ಲದಿದ್ದರು ಮ್ಲೇಚ್ಛ । ಮಾನವರಾರ್ಯೋರ್ವಿಗೆಯ್ದಿ ॥
ಮಾನಿತವ್ರತಗಳ ಕೈಕೊಂಬರದರಿಂದ । ಹೀನಪುಣ್ಯರು ಸ್ವಾಮಿಯೆಂದಾ ॥ ೧೮ ॥
ಸಮವಸರಣವ ಕಾಣ್ಬೆವು ಪೂಜೆಮಾಳ್ಪೆವು । ತ್ತಮದಾನಕರ್ತಿಮಾಡುವೆವು ॥
ಹಿಮಶೈಲದಾಚೆ ಬಾಳ್ವವರಿಗೆ ಸಂಪತ್ತು । ಸಮನಿಸುವುದೆ ಸ್ವಾಮಿಯೆಂದಾ ॥ ೧೯ ॥
ಚಿದ್ಧ್ವಜಕರಿಗನ್ನವಿಕ್ಕಿದ ಫಲದಿಂದ । ತದ್ಭೂಮಿಯೊಳು ತಾವು ಜನಿಸಿ ॥
ಉದ್ಭೂತಸುಖವನುಂಡಳಿವರಾ ನಾಡಿನೊಂ । ದದ್ಭುತವೇನು ಸಾಕೆಂದಾ ॥ ೨೦ ॥
ಸಾಕ್ಷಾಜ್ಜಿನನಗ್ರಸುಕುಮಾರ ತದ್ಭವ । ಮೋಕ್ಷಗಾಮಿಯ ನಿನ್ನ ಸೇವೆ ॥
ಈ ಕ್ಷೇತ್ರದವರಿಗಾದುದು ಪುಣ್ಯದಿಂದ ಮ । ತ್ತಾ ಕ್ಷೇತ್ರದವರಿಗೇಕಹುದು ॥ ೨೧ ॥
ಭೋಗಭೂಮಿಜರು ನಿನ್ನನು ಕಾಣ್ಬ ಪುಣ್ಯವಿ । ಲ್ಲಾಗಿ ಹೇಮಾದ್ರಿ ತನ್ನೊಳಗೆ ॥
ಬಾಗಿಲ ಕೊಟ್ಟುದಿಲ್ಲೆಂದೊಡೆಯನನುಬ್ಬಿ । ಮಾಗಧೇಂದ್ರನು ಪೊಗಳಿದನು ॥ ೨೨ ॥
ಪುರೆ ಮಾಗಧೇಂದ್ರಗೆ ಸರಿಯುಂಟೆ ಸ್ವಾಮಿಯು । ಪರಮಾರ್ಥಗುಣವನೆ ಕಂಡು ॥
ವಿರಚಿಸಿದನು ಲೇಸು ಲೇಸೆಂದು ಪೊಗಳ್ದರು । ವರತನು ಮೊದಲಾದರೆಲ್ಲ ॥ ೨೩ ॥
ಸಟ್ಟಾಟಕೆಂದೆನ್ನೈಯೆಂದು ಮತ್ತಾ ಮಾತ । ಬಿಟ್ಟು ಹಲವುಪಯಣದೊಳು ॥
ದಟ್ಟಡಿಕಾರ ಗಂಗಾಕೂಟವದು ಮುಟ್ಟ । ಮುಟ್ಟಲಾಯ್ತೆನೆ ಬರುತಿರ್ದಾ ॥ ೨೪ ॥

ತೋರಣಗಟ್ಟಿದರ್ಮವಲ್ಲಲ್ಲಿ ಕುರುಜ ಸಿಂ । ಗಾರಿಸಿರ್ದುವು ಕೆಲಬಲದಿ ॥
ಭೂರಿಪತಾಕೆಗಳ್ಗುಡಿಗಳಿದ್ದುವು ಬಹ । ದಾರಿಯೊಳಾ ಚಕ್ರಧರನ ॥ ೨೫ ॥
ಚೆಂದಳಿದೋರಣ ತಳಿಗೆದೋರಣ ಹೇಮ । ದಿಂದಾದ ಪುಷ್ಪದೋರಣದಿ ॥
ಅಂದವಡೆದ ರತ್ನದೋರಣದೊಳು ರಾಯ । ಬಂದನೊಂದೆರಡುಪಯಣವಾ ॥ ೨೬ ॥
ಗಂಗಾನದಿಯಿನ್ನು ಗಾವುದವೆಂಬಾಗ । ಗಂಗಾದೇವನು ತನ್ನ ॥
ಸಂಗಸಂಪದಗೂಡಿ ಬಂದಿದಿರ್ಗೊಂಡನು । ಸಿಂಗಾರಕಾರಭಾವನನು ॥ ೨೭ ॥

ನಡೆದು ಗಂಗಾನದಿಯೊತ್ತಿನೊಳ್ಪಾಳೆಯ । ಬಿಡಿಸಿದನಾ ಚಕ್ರವರ್ತಿ ॥
ಹಿಡಿದುದುಲುಪೆ ಸೇತುಗಟ್ಟಾಗಿ ಭಾವನ । ಪಡೆಯನಾ ಸುಖಿ ತಣಿಸಿದನು ॥ ೨೮ ॥

ವೈದುನ ಮಾಡಿದ ವಿನಯದಿಂದಾ ದಿನ । ಹೋದುದು ಮರುದಿನ ತನ್ನ ॥
ಸೋದರಿಗನ ಕಾಣ್ಬೆನೆಂದರ್ತಿಯಿಂದ ಗಂ । ಗಾದೇವಿ ಬಂದಳು ತಾನೆ ॥ ೨೯ ॥
ಸಲುಗೆಯೊಳಬಲೆಯರ್ವೆರಸಿ ಬಂದಣ್ಣನ । ಸಲೆ ಸಾರಲಳುಕುತಿರ್ದವಳಾ ॥
ಲಲನೆಯರೊಡನಿರ್ದು ತಂಗಿ ಬಾರೆಂದು ಭೂ । ತಳಪತಿ ಕರೆದನೋಜೆಯೊಳು ॥ ೩೦ ॥
ಸಾರಿದಳೊತ್ತನಣ್ಣಾಜಿ ನೀನಿಲ್ಲಿರ । ಲಾರು ಮೆಚ್ಚುವರು ನಾನೊಂದು ॥
ಚಾರುಗೃಹವ ಮಾಡಿಸಿದ್ದೆನೇಳಲ್ಲಿಗೆಂ । ದೋರಂತೆ ಕರೆದಳಾ ತಂಗಿ ॥ ೩೧ ॥
ನೀನಿಲ್ಲಿಗೆಯ್ತಹೆಯೆಂಬುದ ಕೇಳ್ದು ನ । ವೀನಗೃಹವ ಮಾಡಿಸಿದೆನು ॥
ಏನದು ನಿನಗೆ ಗಣ್ಯವೆ ನನ್ನದೊಂದು ಸ । ನ್ಮಾನವ ಸಲಿಸೆಂದಳೊಡನೆ ॥ ೩೨ ॥
ತೀರ್ಥವಂದನೆಯನು ನಾಳೆ ಮಾಡುರೆ ಗಮ । ನಾರ್ಥದಾಸರು ನಿಲಲಿಂದು ॥
ವ್ಯರ್ಥವಲ್ಲೊಡಹುಟ್ಟಿದಳ ಮಾತ ಮನ್ನಿಸೆಂ । ದರ್ತಿವಟ್ಟಾಡಿದಳಾಕೆ ॥ ೩೩ ॥
ಬಡವರಹುದು ನಾವು ಸಿರಿಯಲ್ಲಿ ಭರತೇಶ । ನೊಡನೆ ಹುಟ್ಟಿದಳೆಂಬ ತೇಜಾ ॥
ಪೊಡವಿಗಧಿಕವದರಿಂದಂಜೆನೇಳೆಂದು । ಹಿಡಿದಳು ಸೆರಗನಾ ದೇವಿ ॥ ೩೪ ॥
ಅಕ್ಕ ಬಪ್ಪೆನು ಬಿಡು ಸೆರಗ ನಿನ್ನಯ ಮನ । ದಕ್ಕರಕೆಡಿಪೆನೆಯೆಂದು ॥
ನಕ್ಕು ನುಡಿಯಲಾಕೆ ಸೆರಗ ಬಿಟ್ಟಳು ರಾಯ । ಚಿಕ್ಕನೆದ್ದನು ಬೆಡಗಿಂದ ॥ ೩೫ ॥
ಬನ್ನಿರೌ ನೀವು ನನ್ನಣ್ಣಾಜಿಯೊಡನೆನ್ನ । ಮನ್ನಿಸಿಯೆಂದು ರಾಣಿಯರಾ ॥
ಚೆನ್ನೆ ಸಮ್ಮನಿಸಿದಳವರು ನಗುತ ಸುಪ್ರ । ಸನ್ನ ಚಿತ್ತದೊಳಿದ್ದರೊಡನೆ ॥ ೩೬ ॥
ಸದಳವಿದ್ದಲ್ಲಿದ್ದುದರಸಿಯರ್ವೆರಸಿ ಸಾ । ರದೊಳಿರ್ದ ಪೊಸರಾಜಗೃಹಕೆ ॥
ಪದೆದೆದ್ದನಾ ರಾಯ ತಂಗಿಯ ಮಾತ ಮೀ । ರದೆ ಮರ್ಘು ವಿನಯವದೆಂತೊ ॥ ೩೭ ॥
ತುಂಗಭೂಪನ ನಾನು ಕರೆಯಲಂಜಿದೆ ತನ್ನ । ತಂಗಿಯೊಡನೆ ಪೋಪನಹಹ ॥
ಗಂಗೆಯ ಭಾಗ್ಯವೆಯೆಂದು ದೂರದಿ ನೋಡಿ । ಗಂಗಾದೇವನುಬ್ಬಿದನು ॥ ೩೮ ॥
ರಾಜೀವವನಕೆ ಪೆಣ್ಣಂಚೆಗಳೊಡಗೂಡಿ । ರಾಜಹಂಸವನೆಯ್ದಿಪಂತೆ ॥
ರಾಜಗೃಹವ ಹೊಗಿಸಿದಳಾಕೆ ಚೆಲ್ವ ಕಾಂ । ತಾಜನ ಕೂಡಿ ಚಕ್ರಿಯನು ॥ ೩೯ ॥

ಒಳಗೋಟೆ ಹೊರಗೋಟೆ ಮಾಡ ಚಾವಡಿ ಬಣ್ಣ । ಗೆಲಸದ ಬಾಗಿಲು ಜಗಲಿ ॥
ಲಲಿತಭೋಜನಶಾಲೆ ಚಂದ್ರಶಾಲೆಯ ರಾಜ । ನೊಳಹೊಕ್ಕು ನೋಡಿ ಮೆಚ್ಚಿದನು ॥ ೪೦ ॥
ತುಂಬಿ ಮೊರೆವ ಪರಿಮಳದ ಸಾರಣೆ ಚೆಲ್ವ । ಬೊಂಬೆಗಳೆಸೆವ ಗೋಡೆಗಳು ॥
ಕೆಂಬರಲೆಳೆಮುತ್ತುಪಚ್ಚೆಪವಳಗಳ । ಲಂಬಣವೆಸೆಯೆ ನೋಡಿದನು ॥ ೪೧ ॥

ಹಲವುಶಯ್ಯಾಗೃಹ ಮಣಿಮಂಚಹೂಮಂಚ । ಸೆಳಿಮಂಚತೂಗುಮಂಚಗಳು ॥
ತಳಿರುಯ್ಯಾಲಾಲವಟ್ಟಪ ಸೇವೆಗೆಸೆವ ವು । ತ್ತಳಿಯ ನಿಟ್ಟಿಸಿ ಮಂಡೆಯೊಲೆದಾ ॥ ೪೨ ॥
ದಿವ್ಯಾನ್ನಪಾನಕೆ ತಕ್ಕ ಸುವಸ್ತುಗ । ಳವ್ಯಯಹೇಮಭಾಂಡಗಳು ॥
ನವ್ಯಕರ್ಪೂರತಾಂಬೂಲವಿಲೇಪನ । ದ್ರವ್ಯ ತುಂಬಿರೆ ನಿರೀಕ್ಷಿಸಿದಾ ॥ ೪೩ ॥
ಮಂಗಲಮಯದ ಗೇಹವ ನೋಡಿ ರಾಯ ತ । ನ್ನಂಗನೆಯರ ಮೊಗನೋಡಿ ॥
ಭೃಂಗನೇತ್ರೆಯರಿರ ಕಂಡಿರೌ ನನ್ನಯ । ತಂಗಿ ಮಾಳ್ಪೊಸಗೆಯನೆಂದಾ ॥ ೪೪ ॥
ನಿಮ್ಮ ತಂಗಿಯದೇನ ಮಾಡಿದಳಿನಿತೆಲ್ಲ । ನಮ್ಮ ಸೋದರನ ತಿಟ್ಟಗಳು ॥
ಹಮ್ಮನಾಡಿದಿರಿ ಸಾಕೆಂದು ರಾಣಿಯರಾಡಿ । ತಮ್ಮೊಳಿಷ್ಟಾರ್ತಿಮಾಡಿದರು ॥ ೪೫ ॥
ಕಂಡೆಯಾ ತಂಗಿ ಈ ಹೆಂಗಳಾಟವನೆಂದ । ಕಂಡೆನಣ್ಣಾಜಿ ಹೆಣ್ಣಿಗಳು ॥
ಮಂಡಿಸಿ ತವರೂರಹೊಗಳುವರೆಂದಳಾ । ಮಂಡಲೇಶ್ವರನನುಜಾತೆ ॥ ೪೬ ॥
ಮಜ್ಜನಭೋಜನಗೈದು ಮತ್ತಾ ದಿನ । ಸೆಜ್ಜೆವನೆಯೊಳು ವಿಶ್ರಮಿಸಿ ॥
ಸಜ್ಜನಾನಂದನು ಮರುದಿನದೊಳು ತೀರ್ಥ । ದುಜ್ಜುಗಕಿಚ್ಚೆಮಾಡಿದನು ॥ ೪೭ ॥

ಬೆಟ್ಟದಿಂದುಬ್ಬಿ ಭೂಮಿಗೆ ಸಿಂಧುನದಿ ಬೀಳ್ವ । ತಿಟ್ಟದೊಳ್ಕೆಳಗೆ ಪ್ರತಿಮೆಯ ॥
ಬಿಟ್ಟ ಜೆಡೆಯ ಮೇಲೆ ಬೀಳ್ವ ಗಂಗಾಂಬುವ । ನಿಟ್ಟಿಸಿದನು ನರನಾಥಾ ॥ ೪೮ ॥
ಅರುಹನ ಪ್ರತಿಮೆಯೆಂಬಮಳಚಂದ್ರನ ಕಂಡು । ಕರಗಿ ಹಿಮಾದ್ರಿಯೆಂದೆಂಬ
ಸುರುಚಿರಶಶಿಕಾಂತ ಸೋರುತಿರ್ಪುದೊಯೆನೆ । ಬರುತಿರ್ದುದಾ ಪುಣ್ಯಗಂಗೆ ॥ ೪೯ ॥
ಆರ್ಭಕ್ತಿಯೊಳು ಮಿಂದರವರ ಪಾಪಗಳ ತಾ । ನಾರ್ಭಟಿದೋರುತಟ್ಟುವೊಲು ॥
ಭೋರ್ಭೋರು ಘುಮುಘುಮು ಝುಲ್ಲುಝುಲ್ಲೆಂಬ ಸಂ । ದರ್ಭದೊಳಿಳಿದುದಾ ತೀರ್ಥಾ ॥೫೦॥
ಮಾನಸಸರಸಿಯ ಹಂಸಗಳಂತೆ ಪ್ರ । ಧಾನನ ಕೂಡಿ ಭೂಸುರರು ॥
ಆ ನದಿಯೊಳು ಮಿಂದು ಜಿನನ ಕೀರ್ತಿಸುವದೊಂ । ದಾನಂದಕರಸನರ್ತಿಸಿದಾ ॥ ೫೧ ॥
ವಿಪ್ರರು ತೊಲಗೆ ಪೆಂಡಿರುಗೂಡಿ ಹೊಕ್ಕು ತೀ । ರ್ಥಪ್ರಸಿದ್ಧಿಯ ರಾಯ ತನ್ನ ॥
ಸುಪ್ರಿಯೆಯರಿಗೆ ಕಾಣಿಸಿದನದೇನು ಸ । ದಾ ಪ್ರಸನ್ನನೊ ಚಕ್ರವರ್ತಿ ॥ ೫೨ ॥
ಜಿನನ ಕೊಂಡಾಡಿ ತೀರ್ಥವ ಮಿಂದು ಭೂಸುರ । ಜನಕೆ ದಾನವನಿತ್ತು ತಣಿಪಿ ॥
ಅನುಜೆಯ ಹರಕೆಯ ಸಿಂಧುದೇವಿಯೊಳು ತಾ । ಳ್ದನುವಿನೊಳಾಂತನಾ ರಾಯಾ ॥ ೫೩ ॥

ಅರಮನೆಯೊಳಗೆ ಮತ್ತಾ ದಿನ ತಡೆದು ಶ್ರೀ । ಗುರುಹಂಸನಾಥನ ಭಜಿಸಿ ॥
ಹಿರಿದು ಕರ್ಮಗಳ ನಿರ್ಜರೆಮಾಡಿ ಮರುದಿನ । ತೆರಳಲೆಳಸಿದನೇನೆಂಬೆ ॥ ೫೪ ॥
ತಂಗಿ ಬಾ ನಾನಿಂತು ದಂಡುಮಾಡಿದ ನೋವು । ಹಿಂಗಿದುದಕ್ಕ ನಿನ್ನಾಣೆ ॥
ಗಂಗವ್ವೆ ಲೇಸುಮಾಡಿದೆಯೆಂದು ಮೃದುವಚ । ನಂಗಳಿಂದಣ್ಣ ಮನ್ನಿಸಿದಾ ॥ ೫೫ ॥

ಇಬ್ಬರುತಂಗಿಯರೆನಗೆ ಮುನ್ನಂಟವ । ರಿಬ್ಬರು ತಪಸುದಾಳಿದರು ॥
ಹಬ್ಬಿ ನಿಂದಾ ನೋವ ಸಿಂಧುದೇವಿಯು ನೀನು । ಜಬ್ಬಿ ಜಾರಿಸಿದಿರಿಯೆಂದಾ ॥ ೫೬ ॥
ಸೌಂದರಾದೇವಿಯೆಂಬವಳೊರ್ವಳಾಕೆ ನಿ । ನ್ನಂದವೆ ಬ್ರಾಹ್ಮಿಲಾದೇವಿ ॥
ಎಂದೊರ್ವಳುಂಟಾಕೆ ಸಿಂಧುದೇವಿಯ ರೀತಿ । ಯಿಂದು ಕೈಲಾಸದೊಳುಂಟು ॥ ೫೭ ॥
ಸಿಂಧುದೇವಿಯೆ ಬ್ರಾಹ್ಮಿಲಾದೇವಿ ನೀನೆ ಸಂ । ಬಂಧದಾ ಸೌಂದರಾದೇವಿ ॥
ಬಂಧುರದೊಸಗೆಯಹಾಗ ನಿಮ್ಮನು ಸುಪ್ರ । ಬಂಧದಿ ಕರೆಸುವೆನೆಂದಾ ॥ ೫೮ ॥
ಸರಿಯಾರು ನವಗಿನ್ನು ಜಿನನ ಕುಮಾರಿಯು । ರ್ಭರತೇಶನನುಜೆಯರೆಂಬ ॥
ಸಿರಿಯಾದುದೆಂದಾಕೆ ರೋಮಾಂಚ ಮೈಯೊಳಂ । ಕುರಿಸಲಾಡಿದಳಣ್ಣನೊಡನೆ ॥ ೫೯ ॥
ಚಿಂತಾಮಣಿಗೆ ಬೆಸಸಿ ಹೊಸಮನೆ ತುಂಬು । ವಂತೆ ಭೂಷಣವಸ್ತ್ರಗಳನು ॥
ಸಂತಸ ಮಿಗೆ ತಂಗಿಗಿತ್ತನು ಸೇವೆಯು । ಕಾಂತೆಯರನು ಮನ್ನಿಸಿದನು ॥ ೬೦ ॥
ಕರೆಸಿ ಗಂಗಾದೇವಗುಡುಗೊರೆಯಿತ್ತನು । ಪರಿವಾರಸುರರ ಮನ್ನಿಸಿದಾ ॥
ಇರು ತಂಗಿಯೆಂದು ನಿಲ್ಲಿಸಿ ಮುಂದಕೆದ್ದನಾ । ಭರತರಾಜೇಂದ್ರನಾ ಕ್ಷಣವೆ ॥ ೬೧ ॥
ಅರಸಿಯರೊಂದೊಂದುತೊಡವಿತ್ತರಾ ದೇವಿ । ಗರಸಿಯರಿಗೆ ಕೊಟ್ಟಳಾಕೆ ॥
ಸರಸದಿ ನುಡಿದಾಡಿ ಕಳುಹಿಸಿಕೊಂಡೆದ್ದ । ರರರೆ ವಿಲಾಸವಿನ್ನೆಂತೊ ॥ ೬೨ ॥

ಗಂಗಾದೇವನ ವಿನಯದಿ ನಿಲಿಸಿ ಜಿ । ನಂಗೆ ಕೈಮುಗಿದಾನೆಯೇರಿ ॥
ತ್ರಾಂಗು ತ್ರಾಂಗೆಂದು ನಿಸ್ಸಾಳ ಸೂಳೈಸಲು । ಮುಂಗಡೆಗೆದ್ದನಾ ಚಕ್ರಿ ॥ ೬೩ ॥
ಆ ಸಮಯದಿ ಮೂಡ ಪಡುವಣ ಖಂಡದ । ದೂಸರಿಂದಿಬ್ಬರೆಯ್ತಂದು ॥
ಆ ಸೀಮೆ ವಶವಾದುವೆಂದು ತಂದೋಲೆಯ । ಭೂಸುದತೀಶಗಿಕ್ಕಿದರು ॥ ೬೪ ॥
ಆ ನಾಡಿನರಸುಗಳ್ಪೆರಸಿ ನಮ್ಮವರು ಸು । ಮ್ಮಾನದಿ ಬರುತಿದ್ದರೆಂದು ॥
ಮಾನಿಸರೊಡನೆ ಬಿನ್ನವಿಸೆ ಮನ್ನಣೆಯಿತ್ತ । ನಾ ನೃಪ ಸಾಕುಸಾಕೆನಲು ॥ ೬೫ ॥
ಉತ್ತರಪೂರ್ವಪಶ್ಚಿಮಮುಖವಾಗಿ ದಂ । ಡೆತ್ತಿ ನಡೆವ ಕಾರ್ಯ ಮುಗಿದು ॥
ಮತ್ತಗಜವನೇರಿ ಮಧ್ಯಮಖಂಡದೊ । ಳ್ಮತ್ತೆ ದಕ್ಷಿಣಕೆ ತಿರುಗಿದಾ ॥ ೬೬ ॥

ನಡುವಣ ಖಂಡದ ನಟ್ಟ ನಡುವೆ ಕಳ । ದೆಡೆಯಲ್ಲಿ ಮೇಟಯಿಪ್ಪಂತೆ ॥
ನಿಡಿದಾದ ವೃಷಭಾದ್ರಿಯಿಹುದಲ್ಲಿಗಾ ಚಕ್ರಿ । ನಡೆತರುತಿರ್ದನುಬ್ಬಿನೊಳು ॥ ೬೭ ॥
ಉರ್ವಿಯೆಲ್ಲವು ತನ್ನ ವಶವಾಗಲುರುಗರ್ವ । ಪರ್ವತವೇರಿ ಬಪ್ಪಂತೆ ॥
ಕೊರ್ವಿದ ವಿಜಯಪರ್ವತವೇರಿ ಬಂದನು । ಗರ್ವಿತಾರಾತಿದಲ್ಲಣನು ॥ ೬೮ ॥
ಕರ್ಣದ ಮದಧಾರೆಗೆರಗಿ ಕವ್ವರೆಗೊಂಡು । ಘೂರ್ಣಿಸಿ ತುಂಬಿಗಳೆಸೆವ ॥
ಪೂರ್ಣಭವೇರಿ ಬಂದನು ನೀಲಗಿರಿಯ ಸು । ವರ್ಣಾದ್ರಿಯೇರಿ ಬಪ್ಪಂತೆ ॥ ೬೯ ॥

ಸುರಪತಿಯೆಂದೆನೆ ಬೆಂಗಡೆಯೊಳು ತನ್ನ । ತರುಣಿಯಿಲ್ಲೆಡೆಯಲುಗುತಿವೆ ॥
ನರಪತಿಯೆನೆ ಶಾಂತಿ ಪಸರಿಸುತಿದೆಯೆಂದು । ಪರಿಕಿಸಿ ಪಡೆ ಬೆರಗಾಯ್ತು ॥ ೭೦ ॥

ನೀರನ ಕಲೆಯ ಬಿನ್ನಾಣಕೆ ತಡೆಯುದೆ । ನೀರೆ ಮೈಗೊಡುವ ಲೀಲೆಯೊಳು ॥
ಏರಿದ ಗಜ ತೊಡೆಸನ್ನೆಯಿಂದಾ ರಾಯ । ತೋರಿದತ್ತೊದಗಿ ಸಾಗಿದುದು ॥ ೭೧ ॥

ಮೊಲೆಮುಡಿಪೊರವಾರಪೊರೆಯ ಲೆಕ್ಕಿಸದೆ ಕೋ । ಮಲೆ ಜಾಣನೊಡನಾಡುವಂತೆ ॥
ಬಲುಮೈಯ ಗಜ ಚಳಚಳನೊದಗಿದುದು ಭೂ । ತಳಪತಿ ತೆಗೆದತ್ತಲೊಸೆದು ॥ ೭೨ ॥

ಕೂರಂಕುಶವ ಕುಂಭಕಿಡುವನು ಮೊಲೆಗಳ್ಗೆ । ಕೂರುಗುರಿಡುವ ಮೋಡಿಯೊಳು ॥
ವಾರಸ್ತ್ರೀಯೊಲಿಯೆ ಝುಂಕಿಪ ವಿಟನಂತೆ ಹುಂ । ಕಾರವ ತೋರ್ಪನಾ ರಾಯಾ ॥ ೭೩ ॥

ಒರೊಮ್ಮೆ ಮೆಲ್ಲನೆ ನಡೆವುದು ಗಣಿಕೆ ಗಂ । ಭೀರದೋಲಗಕೆಯ್ದುವಂತೆ ॥
ಕೂರಾನೆ ಹರಿವುದು ನಲ್ಲನೆಡೆಗೆ ಸೂಳೆ । ಗೇರಿಯೊಳ್ಪರಿವ ಸೂಳೆವೊಲು ॥ ೭೪ ॥

ದಾಂಟುವುದಿಡುಗುಡ್ಡೆಗಳ ಗಿರಿಗಳನಿಕ್ಕಿ । ದಾಂಟುವ ಡಾಳೆಯಂದದೊಳು ॥
ಉಂಟಾದ ಸೇನೆಯ ನಡುವೆ ಹರಿವುದು ಪೂ । ದೋಂಟದೊಳ್ಗಾಳಿ ಪೋಪಂತೆ ॥ ೭೫ ॥

ಕೆಡದ ಕಾಮರ್ಮುಗಿಲೇರಿ ಸ್ಥಿರವೆತ್ತ ಮಿಂಚ ಕೈ । ವಿಡಿದೊಬ್ಬ ಖಚರ ಬಹಂತೆ ॥
ಎಡಬಲಕಪರಂಜಿಯಂಕುಶದೊಳು ಸನ್ನೆ । ಗೊಡುತ ರಾಜೇಂದ್ರನೆಯ್ದಿದನು ॥ ೭೬ ॥

ಆನೆಯ ಮೇಲೆ ಬಪ್ಪರಸನೊಪ್ಪವ ನೋಳ್ಪ । ಸೇನೆಯ ಕಣ್ ಮೈಯ ಮುಸುಕೆ ॥
ಆ ನರಪತಿಯಾಗ ಮೈಗಣ್ಣನೆಂಬಭಿ । ಧಾನಕೇನೊಪ್ಪಿ ತೋರಿದನೊ ॥ ೭೭ ॥

ನೀರ ಮೇಲೊಂದು ಬೆಂಡಿನ ತೇರ ತೆಗೆವಂತೆ । ಭೂರಾಮ ತೆಗೆವನಾನೆಯನು ॥
ವಾರಣವಲ್ಲಿದು ವಾರುವನೆನಿಸಿ ಸು । ಸಾರದಿ ಹರಿದುದಾ ಹಸ್ತಿ ॥ ೭೮ ॥

ಆನೆಯೊಳೊಮ್ಮೆ ತೇಜಿಯೊಳೊಮ್ಮೆ ಶಿಬಿಕಾವಿ । ಮಾನರಥಗಳೊಳೊಮ್ಮೊಮ್ಮೆ ॥
ಆನುತೇಳುತ ಬಂದು ಹಲವುಪಯಣದಲ್ಲಿ । ಭೂನಾಥ ಸಾರ್ದನಾ ಗಿರಿಯಾ ॥ ೭೯ ॥

ನೂರುಗಾವುದದುದ್ದ ಮೊದಲದಟ್ಟೆತು ತಾನು । ನೂರುಗಾವುದ ಮತ್ತೆ ಕ್ರಮದಿ ॥
ತಾರಿ ತಗ್ಗಿತು ನೋಡೆ ಪಗಡೆಯ ಕಾಯಂತೆ । ತೋರುತಿದ್ದುದು ವೃಷಭಾದ್ರಿ ॥ ೮೦ ॥

ಕಾಲಕಾಲದೊಳಾದ ಚಕ್ರವರ್ತಿಗಳಂಕ । ಮಾಲೆಯ ಬರೆಸುವರಲ್ಲಿ ॥
ಶೈಲವೆಲ್ಲವು ಲಿಪಿತುಂಬಿರೆ ನೋಡಿ ನೃ । ಪಾಲನ ಗರ್ವ ಸೋರಿದುದು ॥ ೮೧ ॥

ಎನಿಬರಾಳಿದರೊಯಿಾ ಗಿರಿಯಲ್ಲಿ ಬೆರಳಿಡು । ವನಿತಿಲ್ಲ ಬರೆಯುದ ತಾಣಾ ॥
ಜಿನ ಜಿನ ಭೂತಳ ನನ್ನದೆಂದುಬ್ಬುವ । ಮನುಜನೆ ಮರುಳೆಂದು ನೆನೆದಾ ॥ ೮೨ ॥

ಹಲಬರು ವಿಟರೊಡನಾಡಿ ಮತ್ತವರುಗು । ರ್ಗಲೆ ದಂತಹತಿಗಳ ತಾಳ್ದ ।
ಬೆಲೆವೆಣ್ಣಿನಂಗದಂತೆಸೆವುದೀ ಗಿರಿಯೆಂದು । ಸಲೆ ವಿದೂಷಕ ನಗಿಸಿದನು ॥ ೮೩ ॥

ಮಾತದು ಪೋಲದೀಧರೆ ಸೂಳೆಯಾ ಗಿರಿ । ದೂತಿ ತನ್ನೊಡತಿಗೆ ಬಪ್ಪ ॥
ಕಾತರಿಗರ ಕಲೆಯೊಂತ ಕುಂಟಣಿಯೆಂದು । ರೀತಿಯೊಳ್ನುಡಿದನು ವಿಟನು ॥ ೮೪ ॥

ತನ್ನಂಕಮಾಲೆಗೆ ತೆರಪಿಲ್ಲದಿರೆ ನೋಡಿ । ಮುನ್ನಿದ್ದದೊಂದುಶಾಸನವಾ ॥
ಉನ್ನತಶೌರ್ಯನು ದಂಡದಿಂದೊರೆಸೆಂದು । ಸನ್ನೆದೋರಿದನು ಕಿಂಕರಗೆ ॥ ೮೫ ॥

ಆತ್ಮತತ್ತ್ವವ ಮುಟ್ಟಿ ಬರೆದಿದ್ದ ಲಿಪಿಗಳ । ನಾತ್ಮನೊಳರ್ತಿವಟ್ಟೆರಿಸಿ ॥
ಆತ್ಮತತ್ತ್ವಕೆ ಹೊರಗಾದೊಂದುಲಿಪಿಯ ಮ । ಹಾತ್ಮನುಜ್ಜೆಂದು ತೋರಿದನು ॥ ೮೬ ॥

ತೊಡೆವೆನೆಂದೆಯ್ತರೆ ಶಾಸನದೈವಗ । ಳಡಗಿದ್ದು ಕೂಡೆ ಮೈದೋರಿ ॥
ತೊಡೆಯಬಾರದು ಪೂರ್ವಚಕ್ರಿಯ ನಾಮವ । ಬಿಡೆವೆನುತಾರ್ಭಟಿಸಿದುವು ॥ ೮೭ ॥

ಬಡಿಬಡಿ ತೊಂಡರ ಬಾಯನೆಂದನು ಚಕ್ರಿ । ಒಡನೆ ಮಾಗಧನ ಸೇವಕರು ॥
ಬಡಿದರು ಹಲ್ಲೆಲ್ಲ ಕವಡೆಯ ಚೀಲವ । ಕೊಡಹಿದಂತುದಿರ್ದುವು ಧರೆಗೆ ॥ ೮೮ ॥

ತೋಳ ಕಟ್ಟಿಸಿ ಮಾಗಧೇಂದ್ರನಿವರ ಹಿಮ । ಶೈಲದಾಚೆಗೆ ಹಾಕಿರೆಂದಾ ॥
ಗೋಳಿಡುತವರ ಪೆಂಡಿರು ಬಂದು ಚಕ್ರಿಯ । ಕಾಲ ಮುಂದಡ್ಡಗೆಡೆದರು ॥ ೮೯ ॥

ಮರುಳೆಂದು ದೈವಗಳೆಂದರೊಂದಲ್ಲವೆ । ಹುರುಳುಂಟೆ ನಮ್ಮೊಳು ಸ್ವಾಮಿ ॥
ಮರುಳರ ಚೇಷ್ಟೆಯ ನೋಡದೆ ಸಲಹೆಮ್ಮ । ಪುರುಷರನೆಂದೊರಲಿದರು ॥ ೯೦ ॥

ಹೆಂಗಳ ಮೊರೆಗೇಳ್ದು ಚಕ್ರಧರನು ಮಾಗ । ಧಂಗೆ ಪೇಳ್ದರೆ ಬಿಡಿಸಿದನು ॥
ತೊಂಗಿದ ಹಲ್ಲು ಬಹವೆ ಪೆಂಡಿರೊಡಗೂಡಿ । ಹಿಂಗಿದರವರು ಕಾಲ್ಗೆರಗಿ ॥ ೯೧ ॥

ಅಟಮಟಲಿಪಿಗಾಗಿ ಕಟಕವರಿಯೆ ಬಾಯ । ತಟಪೊಟನುರೆ ಹೊಯ್ಸಿಕೊಂಡು ॥
ತುಟಿಯ ಚುಂಬಿಸುವ ಹಲ್ಲುಗಳ ನೀಗಿದರೆಂದು । ವಿಟ ನಕ್ಕು ನುಡಿದನೆಲ್ಲರೊಳು ॥ ೯೨ ॥

ತರಣಿಯ ಮುಂದೆ ಚಂದ್ರಮನ ಪ್ರಕಾಶವೆ । ಭರತಚಕ್ರೇಶನ ಮುಂದೆ ॥
ಮರುಳರೆ ಲಿಪಿಗಾಗಿ ಮರುಳರು ನೊಂದರೆಂ । ದೊರೆದನೊಯ್ಯನೆ ದಕ್ಷಿಣಾಂಕಾ ॥ ೯೩ ॥

ಕೃತಮಾಲನಾಟ್ಯಮಾಲರು ಶಾಸನಾಂಕದೇ । ವತೆಗರಸುಗಳದರಿಂದ ॥
ಕ್ಷಿತಿಪ ನೀನಿಂತು ಕೋಪಿಸೆ ಮುಂದೆ ಲಿಪಿಯ ಕಾ । ವತುಳರಾರೆಂದರೊತ್ತಿನೊಳು ॥ ೯೪ ॥

ಹಂಸತತ್ತ್ವವ ಮುಟ್ಟಿ ಬರೆದ ಶಾಸನವನಾ । ರುಂ ಸವರುವ ದಕ್ಷರಿಲ್ಲ ॥
ಹಂಸತತ್ತ್ವವ ಹೊದ್ದದಧಮಶಾಸನವ ನೀ । ವೇಂ ಸಿರಿದೋರ್ಪಿರ್ರೈಯೆಂದಾ ॥ ೯೫ ॥

ನಾನೀಗ ಹಂಸತತ್ತ್ವವ ಮುಟ್ಟಿ ಬರೆಸುವೆ । ನೇನಿನ್ನು ಕೆಡಿಸುವರುಂಟೆ ॥
ಜೈನಶಾಸನವಿದು ಮಿಕ್ಕವು ಮಿಥ್ಯಾಭಿ । ಧಾನಶಾಸನಗಳ್ಗೆಯೆಂದಾ ॥ ೯೬ ॥

ನಾ ಕಾವೆ ತಾ ಕಾವೆ ಚಕ್ರಿಯ ಲಿಪಿಯನೆಂ । ದಾಕಾಶದೊಳು ಭೂತಕೋಟಿ ॥
ಕೂಕಿರಿದುವು ಹಂಸನಾಥನ ನೆನೆದು ಪ । ರಾಕುಮಾಡಿದನು ಚಕ್ರೇಶಾ ॥ ೯೭ ॥

ತೊಡೆ ತೊಂಡಲಿಪಿಯನೆಂದನು ಧೂಳಿಲಿಪಿಗಳ । ತೊಡೆವಂತೆ ತೊಡೆದನಾ ಭೃತ್ಯಾ ॥
ನೆಡುವಂತೆ ಬರೆಯೆನೆ ವಜ್ರಶಾಸನನೆಂಬ । ಕಡುಜಾಣಕರಣಿಕ ಬರೆದಾ ॥ ೯೮ ॥

॥ ಅಂಕಮಾಲಾಪಂಚಕಂ ॥

ಸ್ವಸ್ತಿ ಶ್ರೀಮನ್ಮಹಾತ್ರೈಲೋಕ್ಯರಾಜೇಂದ್ರ । ಮಸ್ತಕಮಣಿಗಣಕಿರಣ ॥
ಪ್ರಸ್ತಾರಿತಾಂಘ್ರಿಪಯೋಜನ ಪೂತಿಕ । ರ್ಮಸ್ತೋಮಮಥನವಿಕ್ರಮನ ॥ ೯೯ ॥

ತ್ರಿಜಗದಂತರ್ಬಹಿರವಗಮೇಕ್ಷಣನ ತ । ತ್ರಿಜಗದದ್ಭುತಶಕ್ತಿಯುತನ ॥
ಅಜರನನಂತಸೌಖ್ಯನ ವೃಷಭೇಶನ । ನಿಜಕುಮಾರನು ನಿರಾಮಯನು ॥ ೧೦೦ ॥

ಹಂಸೋಪಮಾನಸಾರಗ್ರಾಹಿ ಶ್ರೀಗುರು । ಹಂಸನಾಥೇಕ್ಷಣೋತ್ಸಾಹಿ ॥
ಸಂಸೇವ್ಯ ಸನ್ಮೋಹಿ ತದ್ಭವಕರ್ಮವಿ । ಧ್ವಂಸಿ ಸುಜ್ಞಾನಾವಗಾಹಿ ॥ ೧೦೧ ॥

ಶೃಂಗಾರಯೋಗಿ ಶುದ್ಧಾತ್ಮಾನುರಾಗಿ ರಾ । ಜ್ಯಾಂಗಸಾಗಿಯು ಸಂಗತ್ಯಾಗಿ ॥
ಅಂಗನಾಜನವನಮಧುಮಾಸ ದಿವ್ಯಮು । ಕ್ತ್ಯಂಗನಾಚಿತ್ತವಿಲಾಸಾ ॥ ೧೦೨ ॥

ಹುಂಡಾವಸರ್ಪಿಣಿಕಾಲದಾದಿಯೊಳು ಷ । ಟ್ಖಂಡವ ಭರತಚಕ್ರೇಶಾ ॥
ಚಂಡನಾಳ್ದನು ಸುಮಂಗಲ ಮಹಾಶ್ರೀಶ್ರೀ । ಮಂಡನಮಸ್ತುಹಿಸ್ವಾಹಾ ॥ ೧೦೩ ॥

ಮಣಿಮಾಲೆಯಂದದೊಳಕ್ಷರಗಳನು ಕಾ । ಕಿಣಿಯಿಂದ ಬರೆಯಲಾ ನೃಪತಿ ॥
ಗಣಕಗುಚಿತವಿತ್ತು ಶೈಲದೊತ್ತಿನೊಳು ಸಂ । ದಣಿ ಮಿಗೆ ಪಾಳೆಯಬಿಟ್ಟ ॥ ೧೦೪ ॥

ಲಾಲಿಸಿ ಸರ್ವರ ಬೀಡಿಗೆ ಬೀಳ್ಕೊಟ್ಟು । ಬಾಲನ ಪೌಜೆಯ್ದಿತೆನಲು ॥
ಲೀಲೆಯಿಂದರಮನೆವೊಕ್ಕನೆಂಬಿಡೆಗಂಕ । ಮಾಲೆಯಸಂಧಿ ಸುಗಂಧಿ ॥ ೧೦೫ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೬ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವ್ಯೆದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೭ ॥

ಪಂಕಜಷಟ್ಕದೊಳುಳಿದ ಸರ್ವಾಂಗದೊ । ಳಂಕಮಾಲೆಗಳಂತೆ ಲಿಪಿಯ ॥
ಅಂಕಿಸಿ ನೋಡುತೆನ್ನೆದೆಯೊಳಗಿರು ನಿಷ್ಕ । ಳಂಕಾ ಚಿದಂಬರಪುರುಷಾ ॥ ೧೦೮ ॥

ಅಂಕಮಾಲಾಸಂಧಿ ಸಂಪೂರ್ಣಂ

# ಮಂಗಲಯಾನಸಂಧಿ.

ಧ್ಯಾನಿಸುವವರಿಗೆ ದಿವ್ಯಭೋಗಗಳ ಸಂ । ಧಾನಿಸುವನುಪಮುಮಹಿಮಾ ॥
ಜ್ಞಾನಿಗಳೊಡೆಯ ಸನ್ಮತಿದೋರು ತಾಮಸ । ವೇನು ನಿರಂಜನಸಿದ್ಧಾ ॥ ೧ ॥
ವಿಜಯಪ್ರಶಸ್ತಿಯ ಬರೆಯಿಸಿ ಷಟ್ಖಂಡ । ವಿಜಯನಲ್ಲಿರಲೆಂಟುದಿವಸಾ ॥
ವಿಜಯಾರ್ಧದೊತ್ತಿನೊಳ್ಸೇನೆಯನಿಂಬಿಟ್ಟು । ವಿಜಯರಾಜನು ಬಂದು ಕಂಡಾ ॥ ೨ ॥
ಪಡೆಗಾರು ಕರ್ತರೆಲ್ಲಿರಿಸಿದೆ ವಿಜಯಾಂಕ । ಸಿಡಿದೇಕೆ ಬಂದೆ ನೀನೆನಲು ॥
ಪಡುವ ಮೂಡಣ ಖಂಡಕೆಯ್ದಿದ ಪಡೆಗಳೊಂ । ದೆಡೆಯಲ್ಲಿ ಕೂಡಿರ್ದುವೆಂದಾ ॥ ೩ ॥
ಖಂಡಪ್ರಪಾತಗುಹೆಯ ಸರಿತದ ಮಧ್ಯ । ಖಂಡದೊಳ್ಗಂಗೆಯೊತ್ತಿನೊಳು ॥
ದಂಡೆರಡೊಂದಾಗಿ ಮೇಘೇಶ್ವರನ ಮೈ । ಗೊಂಡಿರ್ದುವವಧಾನವೆಂದಾ ॥ ೪ ॥
ಮುಂದೆ ನಾವೆಯ್ದುವ ಹಾದಿಯನರಿದಲ್ಲಿ । ತಂದಿರಿಸಿದಿರೆ ಸೇನೆಯನು ॥
ಅಂದವಾಯ್ತದು ಸಾಕು ನೀನೀಗಳಿಲ್ಲಿಗೆ । ಬಂದುದೇನೆಂದನಾ ರಾಯಾ ॥ ೫ ॥
ಪೂರ್ವಪಶ್ಚಿಮಖಂಡದರಸರೊಳ್ಕೆಲಬರ । ಪೂರ್ವವಸ್ತುವ ತಂದರಲ್ಲಿ ॥
ನೇರ್ವಟ್ಟ ಪೆಂಗಳ ಕೆಲಬರು ತಂದಿರ್ದ । ರುರ್ವರಾಧೀಶ ಕೇಳ್ನಿನಗೆ ॥ ೬ ॥
ಕಲಿರಾಜ ಪಡುವಣ ಖಂಡಕಗ್ರಣಿ ಮೂಡ । ಣೆಳೆಗಧಿಪನು ಕಾಮರಾಜಾ ॥
ಚೆಲುವಿನೊಬ್ಬೊಬ್ಬಪುತ್ರಿಯರ ತಂದಿರ್ದರು । ಚೆಲುವರರಸ ನಿನಗೆಂದಾ ॥ ೭ ॥
ಅವರ ಕಾಣುತ ಮಧ್ಯಖಂಡದ ನೃಪರು ಮಾ । ಧವ ಚಿಲಾತರ ಬಳಿವಿಡಿದು ॥
ಯುವತಿಯರನು ಹಯಗಜವ ತಂದಿದ್ದರು । ತವೆ ನಿನ್ನ ಕಾಣಬೇಕೆಂದು ॥ ೮ ॥
ಇನ್ನೊಂದನವಧರಿಸುತ್ತರಶ್ರೇಣಿಯ । ತ್ಪನ್ನಖೇಚರಪತಿಗಳನು ॥
ಮೊನ್ನೆ ತಂದಣ್ಣನೊಳಿಂಬಿಟ್ಟು ಹೋದನು । ಗನ್ನದಿ ಸುಮತಿಸಾಗರನು ॥ ೯ ॥
ಬಂದೊಂದುಖಂಡದಿ ನಾನ್ನೂರುಪೆಂಗಳು । ಬಂದಿರ್ದರಂಬರೇಚರರು ॥
ತಂದಿದ್ದರೆಂಟುನೂರೆಳೆವೆಣ್ಣನೊಟ್ಟೈಸು । ವಂದೆರಳ್ಸಾವಿರವೆಂದಾ ॥ ೧೦ ॥
ಇದು ಚೋದ್ಯವಲ್ಲವಿನ್ನೊಂದನಾಲಿಸು ನಿನ್ನ । ಮದುವೆಗೆ ಪೆಂಗಳ ತರಲು ॥
ಪದೆದು ಚಾರಣರೆಮ್ಮ ಪಾಳೆಯಕೆಳತಪ್ಪ । ದದೆ ಚೋದ್ಯವಲ್ತೆ ರಾಜೇಂದ್ರಾ ॥ ೧೧ ॥
ಆದರಿಂದ ನಿನ್ನ ಪುಣ್ಯಕೆ ಸರಿಯಿಲ್ಲ ನಾ । ವೆದೆಯೊಳಾನಂದವೆಯ್ದಿದೆವು ॥
ಸುದತಿಯರೆಲ್ಲರು ವ್ರತವಡೆದಿರ್ದರಾ । ಹದನಸೂಚಿಸಬಂದೆನೆಂದಾ ॥ ೧೨ ॥
ಸತಿಯರ ಸುದ್ದಿಯೇನಣ್ಣತಮ್ಮದಿರು ನೀ । ವತಿಸಾಹಸಂಬಟ್ಟಿರದರ ॥
ಸ್ಥಿತಿಯ ಬಲ್ಲೆನು ಬಳಲ್ದೈ ಮುಂದೆ ನಡೆಯೆಂದ । ಸ್ಮಿತಮುಖದಿಂದ ಭೂವರನು ॥ ೧೩ ॥

ಗುಹೆಯು ಕವಾಟವನೊಡೆದಗ್ನಿ ಕೆಡುವನ್ನ । ಬಹುಕಾರ್ಯಗಳ ಮಾಳ್ಪವದಕೆ ॥
ವಹಿಲದಿಂದಗಳ ನೀವೆಸಗಿ ಮೆಲ್ಲನೆ ಹಿಂದೆ । ಬಹೆವು ನಾವೆಂದನಾ ನೃಪತಿ ॥ ೧೪ ॥
ನಿಟ್ಟುಡುಗೊರೆಯಿತ್ತು ನಾಟ್ಯಮಾಲನ ಕೂಡಿ । ಕೊಟ್ಟು ಮುಂದವನ ಕಳುಹಿದಾ ॥
ಕುಟ್ಟುವ ಭೇರಿಯಾರ್ಭಟಿಯೊಳಿದ್ದನು ಹಿಂದೆ । ಬಿಟ್ಟ ಬೀಡಿಂದ ಮುಂಗಡೆಗೆ ॥ ೧೫ ॥
ತಳುಮಾಡದಲ್ಲಲ್ಲಿ ಬಿಡುತೆತ್ತಿ ನಡೆವುತ । ಹಲವುಪಯಣದಲ್ಲಿ ಬಂದು ॥
ನೆಲೆಸಿದ ಕಟಕದ ಕೆಲದೊಳಾನೆಯನೇರಿ । ಬಲುವಿಡಾಯದೊಳೆಯ್ದುತಿರ್ದಾ ॥ ೧೬ ॥

ಇದಿರ್ವಂದ ಮೇಘೇಶ್ವರನಿಗಿಂಪ ನುಡಿದು ಗಾ । ಢದೊಳರಮನೆಗೆಯ್ದುವಾಗ ॥
ಮದುವೆಯ ಹೆಂಗಳು ಮಾಡವನೇರಿ ನೋ । ಡಿದರು ಚಕ್ರೇಶನ ಸೊಬಗಾ ॥ ೧೭ ॥
ಪೊರಗೆ ತಮ್ಮಯ ರೂಪು ತೋರದಂತೊಂದೊಂದು । ಮರೆಯೊಳು ನಿಂದು ನೀರೆಯರು ॥
ಮಿರುಮಿರುಗುವ ಚೆಲ್ವಿನರಸನ ನೋಡಿ ಸೈ । ವೆರಗಾದರೇನ ಹೇಳುವೆನು ॥ ೧೮ ॥
ಈತನೆ ಚಕ್ರೇಶನೆಂಬರೆದೆಯೊಳದ । ಮಾತಿನೊಳಾಡೆ ನಾಣ್ಚುವರು ॥
ಕಾತರ ಕವಿವುತಿಹುದು ರೋಮ ನೆಗೆದು ಮೈ । ಬಾತಿಪ್ಪು ಕಂಪಿಸುತಿಹುದು ॥ ೧೯ ॥
ಸೋಲವೆತ್ತರಸನ ರೂಪ ನೋಳ್ಪಾಗ ಕ । ಣ್ಣಾಲಿಗಡ್ಡೈಸಿದುವೆಂದು ॥
ಘಾಳಿಪ ಚಮರಕೆ ಮುನಿವರೆದೆಯೊಳದ । ಪೇಳೆ ನಾಣ್ಚುವರನ್ಯಜನಕೆ ॥ ೨೦ ॥
ಪರರಿಲ್ಲದಿರ್ದರೊಂದೆಡೆಯೊಳಿರ್ದೆ ದೊಡ್ಡ । ಕರಿಯೇರಿ ಬರೆ ಛತ್ರ ಸಾಕು ॥
ನರೆದಲೆಯಂದದ ಚವರವೇಕೆಂದು ಸಾ । ರ್ದೊರೆದರು ತಾವು ತಮ್ಮೊಳಗೆ ॥ ೨೧ ॥
ಸಂದಿಸಿ ಕೆಲಬರು ಕಾಣ್ಬಾಗ ಗಜವಿಪ್ಪು । ನಿಂದರರ್ತಿಯೊಳು ನೋಡುವರು ॥
ಮುಂದೆಯ್ಪಲಿನ್ನೊಬ್ಬರೇಕಿದಿರಾಗಿ ಸಾ । ರ್ತಂದು ಕಾಣರೊಯೆಂಬರೊಡನೆ ॥ ೨೨ ॥
ಆನುತಾನುತ ಗಜ ಪೋಪಾಗ ಲೇಸೆಂದ । ರಾನದೆ ಮುಂದೆಯ್ದುವಾಗ ॥
ಆನೆಗೆ ಮಂದಗಮನವೆಂಬರಿದು ಬೇಗ । ದಾನೆ ಲೇಸಲ್ಲೆಂದರೊಡನೆ ॥ ೨೩ ॥
ಮದಗಜದಿಂದಿಳಿದೆಲ್ಲರ ಕಳುಹಿ ಭೂ । ಸುದತೀಶನರಮನೆವೊಕ್ಕಾ ॥
ಬೆದೆಬೆದೆಗೊಳುತಿರ್ದರಬಲೆಯರೆಂದಿಗೆ । ಮದುವೆಯಹುದೊ ನವಗೆಂದು ॥ ೨೪ ॥

ವಿಶ್ವಭೂಪರ ತಂದು ಬಂದ ದಿನದೊಳೆ ಮೇ । ಘೇಶ್ವರ ಕಾಣಿಸಲವರ ॥
ಅಶ್ವಗಜಾದಿವಸ್ತುವನೊಪ್ಪುಗೊಂಡು ಭೂ । ಮೀಶ್ವರನೊಲ್ದು ಮನ್ನಿಸಿದಾ ॥ ೨೫ ॥
ಖ್ಯಾತತಮಿಸ್ರಗುಹೆಯವೊಲು ಖಂಡಪ್ರ । ಪಾತಗುಹೆಯೊಳಿದ್ದ ಕದವಾ ॥
ಘಾತಿಸಿ ಮರುದಿನದೊಳು ರಾಜಗೃಹವನಾ । ಭೂತಳಪತಿ ಬಂದು ಹೊಕ್ಕಾ ॥ ೨೬ ॥
ಸುರಪುರದಂದದಿ ಕಟಕ ಸಿಂಗರವಾಗೆ । ಶರಧಿವೊಲ್ವಾದ್ಯಗಳುಲಿಯೆ ॥
ಎರಡುಸಾವಿರಪೆಣ್ಣುಗಳನೊಂದೆ ಹಸೆಯೊಳು । ಕರವಿಡಿದಿಂಬಿಟ್ಟುಕೊಂಡಾ ॥ ೨೭ ॥

ಕಲಿರಾಜಸುತೆ ರಾಜಮತಿ ಕಾಮರಾಜನು । ಜ್ವಲಸುತೆ ಮೋಹಿನೀದೇವಿ ॥
ಎಳೆವೆಂಗಳೆಲ್ಲರೊಳರಸನ ಮನವ ಜ । ಕ್ಕುಲಿಸಿದರಿಂಪುಸೊಂಪಿನೊಳು ॥ ೨೮ ॥
ಮಾಧವರಾಜಚಿಲಾತರಾಜರ ಮೃದು । ಮಾಧುರ್ಯದಷ್ಟಪುತ್ರಿಯರು ॥
ಭೂಧವಗಂಡು ತಮ್ಮಯ್ಯಂದಿರಿಟ್ಟಪ । ರಾಧವ ಜಡಿದು ನೂಂಕಿದರು ॥ ೨೯ ॥
ಅಂಬರೇಚರಿಯರೆಲ್ಲರು ಸೊಗಸಿದರು ಮ । ತ್ತಂಬುಜಾಕ್ಷಿಯರನೆಲ್ಲರನು ॥
ಇಂಬರಿದೊಂದಿರುಳೊಳೆ ಚಕ್ರಿ ತವರೂರ । ಹಂಬಲೆಲ್ಲವ ಮರೆಯಿಸಿದಾ ॥ ೩೦ ॥
ಹೆಂಗಳ ಜನಕರೆಲ್ಲರನು ಮನ್ನಿಸಿ ಸರ । ಸಾಂಗದೊಳಿರೆ ರಾಯನಿತ್ತ ॥
ಸಂಗಲಿಸಿದುದತ್ತ ನಮಿರಾಜಗಾಪ್ತಜ । ನಂಗಳ ವಾಕ್ಯವೇನೆಂಬೆ ॥ ೩೧ ॥

ಕೊಡುವುದುತ್ತಮ ದೇವರನುಜೆಯ ಚಕ್ರಿಗೆಂ । ದೊಡಬಡಿಸಿದರು ಬಾಂಧವರು ॥
ಒಡನದು ಲೇಸೆಂದು ಸುಮತಿಸಾಗರನೂ ತ । ನ್ನೊಡಹುಟ್ಟಿದವನೂ ನುಡಿದರು ॥ ೩೨ ॥
ಕೊಡಬಾರದೆಂದೆನೆ ನಾನಾತನೆನ್ನೂರ್ಗೆ । ನಡೆದು ಬಂದರೆ ಕೊಡಬಹುದು ॥
ಕುಡಿಯರಂದದಿ ಹೆಣ್ಣ ಕೊಂಡೆಯ್ದಿ ಕೊಡುವುದು । ನಡೆಯೆ ರಾಜರಿಗೆಂದನವನು ॥ ೩೩ ॥
ಸಿರಿ ಹೆಚ್ಚಿತಹುದಾತಗೇನಿರ್ದೈ ನಾನೇನು । ಸರಿಯಲ್ತೆ ರಾಜವಂಶದೊಳು ॥
ಬರಲಿ ತಾನಿಲ್ಲಿಗೆ ನೀವೆಲ್ಲ ಮೆಚ್ಚುವಂ । ತಿರೆ ಧಾರೆಯೆರೆದೀವೆನೆಂದಾ ॥ ೩೪ ॥
ನುಡಿಯಲಂಜುವೆವಂಜಿದರೆ ಕಾರ್ಯ ಕೆಡುತದೆ । ಪೊಡವಿಯೊಳೆಲ್ಲರಾ ನೃಪಗೆ ॥
ಕೊಡುವಾಗ ಪೆಂಗಳ ತಮ್ಮೂರ್ಗೆ ಕರೆದರೆ । ಕೊಡಬೇಕು ನೀನವರಂತೆ ॥ ೩೫ ॥
ಅವರು ಕ್ಷತ್ರಿಯರಲ್ತೆ ಚಕ್ರಿಯು ಮುಂದೆ ಗ । ರ್ವವ ತೋರಲಂಜಿತ್ತರರಿಯ ॥
ಅವನ ಸೀಮೆಯೊಳು ನಾವಿದ್ದಿಂತು ನುಡಿವುದು । ವಿವರವೆಯೆಂದರಾಪ್ತಿಗರು ॥ ೩೬ ॥
ನಿನ್ನ ತಮ್ಮನ ಕೂಡೆ ಮಂತ್ರಿಯು ಕೂಡಾತ । ಮೊನ್ನೆ ತೋರಿದ ಮಾತ ಮರೆದೈ ॥
ಚೆನ್ನಲ್ಲ ಕೊಡು ಕೊಡು ಚಕ್ರಿಯು ಬಳಿಗೆಯ್ದಿ । ಬನ್ನವಲ್ಲೆಂದರುತ್ತಮರು ॥ ೩೭ ॥
ಮಾನಹಾನಿಯ ನೋಡದಾ ನೃಪರಿತ್ತರು । ನಾನಂತು ಕೊಡೆನದಂತಿರಲಿ ॥
ಏನ ಮಾಡುವನೆನ್ನ ತಮ್ಮನೊಳ್ನುಡಿದಾತ । ತಾನು ಗೆಯ್ವುದ ಕಾಣ್ಬೆನೆಂದಾ ॥ ೩೮ ॥
ಬಲ್ಲೆನಾವರ್ತರಾಜನ ಕಿತ್ತು ಮಾಧವ । ಗಿಲ್ಲದ ಪಟ್ಟಗಟ್ಟಿದುದಾ ॥
ಗಲ್ಲಿಸಿ ನನ್ನನಂಜಿಪ ತಂತ್ರವದಕೆ ನಾ । ನಲ್ಲಾಡಿದವನಲ್ಲವೆಂದಾ ॥ ೩೯ ॥
ಎರಡುಶ್ರೇಣಿಯ ಖಚರರ ಕಳುಹಿದೆನು ತಾ । ಬರಲೊಡನೆನ್ನ ತಮ್ಮನನು ॥
ತ್ವರಿತದೊಳಟ್ಟಿದೆನೆನ್ನಲ್ಲಿ ತಪ್ಪೇನು । ಭರತೇಶನೇನ ಮಾಡುವನು ॥ ೪೦ ॥
ತಾಳಿಬಂದಿಯ ಮುನ್ನ ಕಟ್ಟಿಸಿ ಮದುವೆಗೆ । ಲೀಲೆಯೊಳ್ಬಹ ಕಾರ್ಯವುಂಟೆ ॥
ಹೇಳಿ ನೀವಲ್ಲದಿದ್ದರೆ ಸುಮ್ಮನಿರಿ ತನ್ನ । ತೋಳ ಬಲ್ಮೆಯ ತೋರಲೆಂದಾ ॥ ೪೧ ॥

ಆಪ್ತರು ತಿಳುಹಲಾರದೆ ಯಶೋಭದ್ರೆಗೆ । ಗುಪ್ತದಿ ಸೂಚಿಸಲಾಕೆ ॥
ಪ್ರಾಪ್ತರ ಕಳುಹಲಿದ್ದನು ತಾಯ ಮನೆಗತಿ । ದೀಪ್ತದೊಳಾ ನಮಿರಾಜಾ ॥ ೪೨ ॥
ಏನಣ್ಣ ಭರತೇಶಗನುಜೆಯ ಕುಡಿನೆಂದು । ನೀನತಿರಭಸದೋರ್ಪ ಗಡಾ ॥
ಆ ನೃಪಗೆಂದೆ ಬಳೆದ ಪೆಣ್ಣ ಕೊಡಬೇಕು । ಗ್ಲಾನಿದೋರದಿರೆಂದಳಾಕೆ ॥ ೪೩ ॥
ಕುಡೆನೆಂದುದಿಲ್ಲವ್ವ ಭರತೇಶ ತಾನಿಷ್ಟು । ಪೊಡವಿಗಗ್ಗಳನಾದೆನೆಂದು ॥
ಹಿಡಿಬಿಟ್ಟಿಯೊಳು ಪೆಣ್ಣ ಬೇಡಿದರದಕೆ ನಾ । ನೊಡಬಟ್ಟುದಿಲ್ಲೆಂದನವನು ॥ ೪೪ ॥
ಕೊಳುಕೊಡೆಗುಳ್ಳುದು ತಾಳಿಬಂಧಿಯ ಕಟ್ಟಿ । ಬಳಿಕ ಹೆಣ್ಣಿನ ಮನೆಗೆಯ್ದಿ ॥
ಲಲಿತಧಾರೆಯನೆರೆಯಿಸಿಕೊಳಬೇಕಲ್ತೆ । ಎಲೆ ತಾಯೆ ನೀನರಿಯದುದೆ ॥ ೪೫ ॥
ಭರತೇಶನಿದ್ದ ಬೀಡಿಗೆ ಹೆಣ್ಣ ಕೊಂಡೆಯ್ದಿ । ಭರದಲ್ಲಿ ಕೊಡುಕೊಡೆಂದೆನಗೆ ॥
ಒರೆದರು ಮಂತ್ರಿ ವಿನಮಿಬಾಂಧವರು ನಾನು । ಶಿರಗೊಡಹಿದೆನದಕೆಂದಾ ॥ ೪೬ ॥
ಚಕ್ರಿ ಬಪ್ಪನೆ ನಿನ್ನ ಮನೆಗದು ನೃಪರ ಯ । ಥಾಕ್ರಮವಲ್ತೆ ನೀನರಿಯ ॥
ವಕ್ರವಿಲ್ಲದೆ ಕೊಡು ಕೊರತೆಯಿಲ್ಲೆಂದು ನೀ । ತಿಕ್ರಮದೋರಿದಳಾಕೆ ॥ ೪೭ ॥
ಹೆಣ್ಣು ಬೇಕಾದರೆ ಬರಬೇಕು ನಾವೆಮ್ಮ । ಬಣ್ಣಿಗೆದಪ್ಪಿ ಕೊಡುವೆವೆ ॥
ಹೆಣ್ಣುಗಂಡಿನ ಕೊಳುಕೊಡೆಯ ವ್ಯೆಸಿರಿತಪ್ಪಿ । ಬಣ್ಣಿಸಲಾಗದಿಂತೆಂದಾ ॥ ೪೮ ॥
ಮಗನೆ ನೋಯದಿರಾರುಖಂಡದ ನೃಪರು ಚ । ಕ್ರಿಗೆ ತೊಂಡರವನೆಮ್ಮ ಮನೆಗೆ ॥
ಧಿಗಿಲನೆಯ್ದುವನೇನು ಚಕ್ರಿಯಿರ್ದೆಡೆಗೆ ನಾ । ವಗಲದೆಯ್ದಿದರೇನು ಕೊರತೆ ॥ ೪೯ ॥
ನಿನಗಾತ ಸೋದರದತ್ತೆಯ ತನುಜನಾ । ತನ ಮಾವನಾತ್ಮಜ ನೀನು ॥
ಕುನಯವ ಬಿಡು ಹೆಣ್ಣ ಕೊಟ್ಟು ನೋಡರ್ತಿಯ । ಮನುವಂಶತಿಲಕಗೆ ಮಗನೆ ॥ ೫೦ ॥
ಅಂತೆನಬೇಡೆಂದ ಬೇಡವೆ ನಿನ್ನ ಗೃ । ಹಾಂತದೊಳಿರಲಿ ನಿನ್ನನುಜೆ ॥
ನಾಂ ತೆರಳ್ವೆನು ಬ್ರಾಹ್ಮಿಸೌಂದರಿಯರ ಗೋಷ್ಠಿ । ಸಂತೋಷವೆನಗೆಂದಳಿನ್ನು ॥ ೫೧ ॥
ಹೆಣ್ಣೊಂದ ಪಡೆದುದ ಭರತೇಶಗಿತ್ತೆನ್ನ । ಕಣ್ಣ ಹಬ್ಬವ ಕಾಣ್ಬೆನೆಂದು ॥
ಕಣ್ಣೊಳಿಟ್ಟಿದ್ದೆನಿನ್ನಾತ್ಮಕಾರ್ಯವ ಮಾಳ್ಪೆ । ನಣ್ಣ ನೀನೊಪ್ಪೆಂದಳೊಡನೆ ॥ ೫೨ ॥
ಗಾಡಿಯೊಳಿಂದ್ರನ ನಗುವ ಚಕ್ರಿಗೆ ಶಚಿ । ಪಾಡಲ್ಲವೆಂಬೆನ್ನ ಮಗಳಾ ॥
ಜೋಡಿಸಲೊಲ್ಲೆಯ ತಣ್ಣಗಿರಾನೊಮ್ಮೆ । ನೋಡುವೆ ಕೈಲಾಸಗಿರಿಯಾ ॥ ೫೩ ॥
ನೀವೆಯ್ದಬೇಡ ನಿಮ್ಮಳಿಯಗೆ ಮಗಳ ಕೊ । ಟ್ಟೀ ವಿನಮಿಯ ಕೂಡಿಕೊಂಡು ॥
ಶ್ರೀವಿಲಾಸದೊಳಿರಿ ನಾನು ಪೋಗುವೆನು ತ । ಪೋವನಕೆಂದನಾ ನೃಪತಿ ॥ ೫೪ ॥
ರಾಜಗೌರವತಪ್ಪಿ ಬಾಳುವ ಸಿರಿಯಿಂದ । ಶ್ರೀಜಿನದೀಕ್ಷೆಯೆ ಲೇಸು ॥
ಓಜೆಯಲ್ಲದುದ ಪೇಳ್ದವ ನಾನೆ ಪೋಪೆನ । ವ್ಮಾಜಿ ತಪ್ಪಗಿರಿ ನೀವೆಂದಾ ॥ ೫೫ ॥

ಅಳುಕಿದಳದಕೆ ಕೇಳ್ಮಗನೆ ನೀನಿಷ್ಟು ವೆ । ಗ್ಗಳಿಸದಿರಾ ಚಕ್ರಿ ನಿನ್ನ ॥
ನಿಳಯಕೆ ಬಾರನು ತಾಳಿಬಂದಿಯು ಕಟ್ಟ । ಲೊಲಿದೀವೆಯಾಯೆಂದಳೊಡನೆ ॥ ೫೬ ॥

ಮನೆಗೆ ಬಾರೆಂದರೆ ಬಾಹನಹುದು ನಿನ್ನ । ಜನಕನಿಲ್ಲಿದ್ದರಾತನವನ ॥
ಮನವ ಬಲ್ಲೆನು ನಿನ್ನ ಮನೆಗೆ ಬಾರನು ಕೊಡು । ನನಗದು ಛಲವೆಂದಳಾಕೆ ॥ ೫೭ ॥

ಇಲ್ಲಿಗಾಪ್ತರನಟ್ಟಿ ಬಂದಿಗಟ್ಟಿಸನು ತ । ನ್ನಲ್ಲಿಗೆ ಬರಲೆಂಬನನ್ಮಾ ॥
ಇಲ್ಲಿ ತನ್ಮಂಗಲವೆಸಗಿದರದೆ ಸಾಕು । ಸಲ್ಲೀಲೆಯೊಳಗೀವೆನೆಂದಾ ॥ ೫೮ ॥

ನನ್ನ ಹೆಗ್ಗಡತಿಯು ನಿನ್ನ ಮಂತ್ರಿಯನಟ್ಟಿ । ಯೆನ್ನಳಿಯಗೆ ಹೇಳಿಸುವೆನು ॥
ಮನ್ನಣೆಯಾದರೆ ಮತ್ತೇಕೆ ಕೊಡೆನದ । ಕಿನ್ನಾಗಲೊಪ್ಪಿದೆನೆಂದಾ ॥ ೫೯ ॥

ಬಾಲತ್ವದೊಳು ಭರತೇಶನ ಬಲ್ಲಳೀ । ಕಾಳಿಂದಿ ಮತ್ತೆನ್ನ ಮಗಳ ॥
ಮೇಳದ ಮಧುವಾಣಿ ಕಡುಜಾಣೆಯುವರಿಂದ । ಹೇಳಿಪೆನೆಂದೆಣಿಸಿದಳು ॥ ೬೦ ॥

ಗನ್ನವ ಕಲಿಸಿಕೊಟ್ಟಳಿಯಗೆ ತಕ್ಕಂತೆ । ಚಿನ್ನುಡುಗೊರೆಗಳ್ಕೊಟ್ಟು ॥
ಸನ್ನುತಮಂತ್ರಿಯೊಡನೆ ಕಳುಹಿದಳು ಪ್ರ । ಸನ್ನೆ ಯಶೋಭದ್ರಾದೇವಿ ॥ ೬೧ ॥

ಭರದಿ ವಿಮಾನವನೇರಿ ಬಂದೋಲಗ । ಹರಿವಾಗ ನೃಪತಿಯು ಕಂಡು ॥
ಬರವೇನು ಕಾರಣವೆಂದು ಭೂವರ ಕೇಳ । ಲೊರೆದನಾ ಮಂತ್ರಿ ಕರ್ಣದೊಳು ॥ ೬೨ ॥

ಏನು ಕಾರ್ಯವೊ ದೇವರತ್ತ್ಯಾಜಿಯರು ತಮ್ಮ । ಮಾನಿನಿಯರ ಕಳುಹಿದರು ॥
ನಾನೊಡಗೊಂಡು ಬಂದೆನು ಹೊರಗಿರ್ದರೆಂ । ದಾ ನರ್ಮಸಚಿವ ನುಡಿದನು ॥ ೬೩ ॥

ಅರಿದನಾಗಳೆ ಹೆಣ್ಣಿನೊಸಗೆಯೆಂದದನರಿ । ದರಿಯದಂತವನನಿಂಬಿಟ್ಟು ॥
ಹೊರಸಭೆಯಿಂದೊಳಚಾವಡಿಗೆಯ್ದಿ ಜೆ । ಲ್ವೆರಕದೊಳೋಲಗವಾದಾ ॥ ೬೪ ॥

ಒಳಗಿದ್ದ ಪಂಡಿತೆ ಬರಲೆನುತತ್ತ್ಯಾಜಿ । ಕಳುಹಿದವರ ಕರೆಯೆಂದಾ ॥
ಘಳಿಲನೆ ಬಂದಳು ಪಂಡಿತೆ ಖಚರಿಯು । ರೊಳಹೊಕ್ಕರರಸನೋಲಗಕೆ ॥ ೬೫ ॥

ಬಹುಕಾಲಕಾಗಿ ನನ್ನೊಡೆಯನ ಕಂಡೆನೊ । ಮಹಿಮೆವೆತ್ತೆನೊಯೆನುತೆಯ್ದಿ ॥
ಮಹಿಪನ ಮುಂದುಡುಗೊರೆಯನಿರಿಸಿ ಗಹ । ಗಹನೆರಗಿದಳು ಕಾಳಿಂದಿ ॥ ೬೬ ॥

ಚಿಕ್ಕಪಾದಗಳನಂದೀಕ್ಷಿಸಿದ್ದೆನು ದೊಡ್ಡ । ಚೊಕ್ಕಪಾದಗಳಾದುವೆಂದು ॥
ಚಿಕ್ಕಚಿಕ್ಕನೆ ತೆಗೆದೊತ್ತಿಕೊಂಡಳು ದಿಟ್ಟ । ಗಕ್ಕರಿಂದರಸನಂಘ್ರಿಗಳಾ ॥ ೬೭ ॥

ಬಲ್ಲೆಯ ಸ್ವಾಮಿ ನಾನಾರೆನೆ ಕಾಳಿಂದಿ । ಯಲ್ಲವೆಯೆಂದನಾ ರಾಯಾ ॥
ಬಲ್ಲರ ಬಲ್ಲಹನಲ್ಲವೆ ನಸುಮರ । ಹಿಲ್ಲೆನುತೆರಗಿದಳತ್ತ ॥ ೬೮ ॥

ನಿನ್ನತ್ತೆ ಕಳುಹಿದಳುಡುಗೊರೆಗಳನೆಂದು । ಬಿನ್ನವಿಸಿದಳಷ್ಟರೊಳಗೆ ॥
ಚಿನ್ನದಾವರೆಯ ಕಾಣ್ಕೆಯನಿಕ್ಕಿ ಮಧುವಾಣಿ । ತನ್ನ ಕೈಮುಗಿದಳರ್ತಿಯೊಳು ॥ ೬೯ ॥

ಈಕೆ ನಿನ್ನತ್ತೆಯ ಮಗಳ ವಿಳಾಸಿನಿ । ಶ್ರೀಕಲಾವಾಸಿನಿಯಿವಳ ॥
ವಾಕೆಲ್ಲ ಕಲ್ಯಾಣಿ ಮಧುವಾಣಿಯೆಂಬಳೆಂ । ದಾಕೆ ಕಾಣಿಸಿದಳಾ ನೃಪಗೆ ॥ ೭೦ ॥
ಅವರ ಕುಳ್ಳಿರವೇಳುತತ್ತ್ಯಾಜಿಯರಿಗೆ ಕ್ಷೇ । ಮವೆ ನಮಿವಿನಮಿನಾಮರಿಗೆ ॥
ಭವನದೊಳೆಲ್ಲರ್ಗೆ ಪದುಳವೆ ಕಾಳಿಂದಿ । ವಿವರಿಸೆಂದನು ಚಕ್ರಧರನು ॥ ೭೧ ॥
ಪರಿಣಾಮ ಮೊದಲು ನಿಮ್ಮತ್ತೆಗೆ ಸ್ವಲ್ಪವೀ । ಧರೆಗೆ ನೀನೆಯ್ದಿದಂದಿಂದ ॥
ಪಿರಿದಾಯ್ತು ನಮಿರಾಜವಿನಮಿರಾಜರಿಗೆ ಸ । ರ್ವರಿಗೆ ಸಂತಸವೆಂದಳವಳು ॥ ೭೨ ॥
ಅತ್ತ್ಯಾಜಿಗಾನಿತ್ತ ಬರಲರ್ತಿಯಹುದದು । ಸತ್ಯದ ನುಡಿ ಮಿಕ್ಕ ಮಾತು ॥
ಸತ್ಯವಲ್ಲೆಂದನಂತೆನದಿರು ಸರ್ವರಿ । ಗತ್ಯಂತಮುದವೆಂದಳವಳು ॥ ೭೩ ॥
ಅಧಿಕಸೌಭಾಗ್ಯ ನೀನೆಯ್ತರೆ ಒಡವರ್ಗೆ । ನಿಧಿ ಬಂದವೊಲು ಮತ್ತೆ ಕಡಲು ॥
ವಿಧುವ ಕಂಡಂತೆಮ್ಮ ದೊರೆಗಳರ್ತಿಪರಲ್ತೆ । ಮಧುವಾಣಿ ಪೇಳೆಂದಳೊಡನೆ ॥ ೭೪ ॥
ನೃಪನೊಳುತ್ತಮನೆಂಬರೀತನ ಸಾದು್ರ ಭಾ । ವಿಸೊಡಿಲ್ಲಿ ಗುಣಗ[illegible]ಂಟು ॥
ಕಪಟದ ದೊರೆಯೊಳು ನುಡಿವೆನೆಯೆಂದಳಾ । ಚಪಳೆ ರಾಜೇಂದ್ರನ ಮುಂ[illegible] ॥ ೭೫ ॥
ಆವುದು ಕಪಟ ನನ್ನೊಳು ನುಡಿಯೆಂದನು । ಭೂವರನಾಕೆಯೊಳ್ನಗುತ ॥
ಆವುದೆಂಬೆಯ ಕ್ಷೇಮವಾರ್ತೆಯ ಕೇಳ್ವೊಂದು । ಭಾವ ಪೇಳ್ದಪುದೆಂದಳವಳು ॥ ೭೬ ॥
ಅತ್ತೆಯ ಕೇಳ್ದಿ ಮೈದುನರ ಕ್ಷೇಮವ ಕೇಳ್ದಿ । ಮತ್ತೊಬ್ಬರನದೇಕೆ ಕೇಳೆ ॥
ಚಿತ್ತಶುದ್ಧಿಯೊಯಿದು ಕಪಟವೊಯೆಂದಳು । ಬಿತ್ತುವಂತಧಿಕಮೋಹನವಾ ॥ ೭೭ ॥
ಮತ್ತದಾರುಂಟೆಂದನಿಲ್ಲವಲ್ಲವೆಯೆಂದ । ಳುತ್ತರಂದೋರುಳ್ಳರೆಂದಾ ॥
ವೃತ್ತಭಾರೋನ್ನತಕುಚೆಯಿಹಳರಿಯ ನಿ । ಮ್ಮತ್ತೆಯ ಮಗಳೆಂದಳೊಡನೆ ॥ ೭೮ ॥
ಮಗಳೊಬ್ಬಳುಂಟೆ ನಮ್ಮತ್ತ್ಯಾಜಿಯರಿಗೆಂದು । ನಗುತ ರಾಜೇಂದ್ರ ನುಡಿದನು ॥
ಜಗಕತಿಕುಟಿಲನಲ್ಲವೆ ನೋಡು ನೋಡೆಂದು । ಬಗೆಯರಿದೊತ್ತಿದಳ್ಕತ್ತೆ ॥ ೭೯ ॥
ನಾಲಗೆಯೊಳಗಿಲ್ಲ ನಿನ್ನೆದೆಯೊಳಗೆ ವಿ । ಶಾಲಾಕ್ಷಿಯಿದ್ದು ನೀನೆನ್ನಾ ॥
ಚಾಳಿಸುತಿದ್ದೆಯ ಠಕ್ಕರ ದೇವಯೆಂ । ದಾ ಲೇಸುಗಾತಿಯೊತ್ತಿದಳು ॥ ೮೦ ॥
ಅತ್ತೆಯ ಮಗಳ ವಿಲಾಸಿನಿಯೆಂದೋಜೆ । ವೆತ್ತೆನ್ನನಿವಳು ತೋರ್ಪಾಗ ॥
ಅತ್ತಿತ್ತ ತುಟಿ ಮಿಸುಕಿದೆಯ ನಿನ್ನೆದೆಯೊಳಾ । ಮತ್ತಕಾಶಿನಿಯಿರ್ದಳಲ್ತೆ ॥ ೮೧ ॥
ಆಗಲೌ ಭವನದೊಳೆಲ್ಲರ್ಗೆ ಮುದವೆಯೆಂ । ದಾಗ ಕೇಳಿದೆನದೇಕರಿಯ ॥
ಆ ಗುಣವಚನದೊಳಡಕವಲ್ಲವೆ ಬೇರೆ । ತೂಗಿ ಕೇಳಲದೇತಕೆಂದಾ ॥ ೮೨ ॥
ಅಹುದಹುದಾಗೆಮ್ಮ ಸ್ವಾಮಿ ಕೇಳಿದನಲ್ತೆ । ಗೃಹದೊಳೆಲ್ಲರಿಗೆ ಕ್ಷೇಮವನು ॥
ಮಹಿತಿಲಕನ ನುಡಿಯೆದಿರೆಂದು ಕಾಳಿಂದಿ । ವಹಿಸಿ ಕೊಂಡೊತ್ತಿದಳವಳಾ ॥ ೮೩ ॥

ದೇವ ಕೇಳದಕಲ್ಲ ನಿನ್ನ ಚೆಲ್ವನು ನಮ್ಮ । ದೇವಿಯು ಚೆಲ್ವನು ನೋಡಿ ॥
ಲಾವಣ್ಯ ಸರಿಯಾಗೆ ನಲಿದೊಂದ ನುಡಿದೆನೆಂ । ದಾ ವಿಲಾಸಿನಿ ಸೂಚಿಸಿದಳು ॥ ೮೪ ॥
ಒಂದುರತ್ನವನೆರಳ್ಮಾಡಿ ಸ್ತ್ರೀಪುರುಷರೂ । ಪೆಂದು ನಿರ್ಮಿಸಲವಕಾತ್ಮಾ ॥
ಬಂದಂತೆ ನಿಮ್ಮಿಬ್ಬರಂದವೊಪ್ಪಿರಲದ । ರಿಂದ ಮೆಚ್ಚಾಯ್ತೆಂದಳೆನಗೆ ॥ ೮೫ ॥
ಆರು ಮತ್ತನ್ಯರಿಲ್ಲೀಕಾಂತವೈಸೆ ಕೇ । ಳ್ಮಾರಿದೆ ನಿನಗೆನ್ನ ಸಖಿಗೆ ॥
ತೋರವೊಲೆಗಳಿವು ಪುಣ್ಯನಿರ್ಮಿತವಲ್ತೆ । ಸಾರಲಿನ್ನೆಂತೊ ಸೌಭಾಗ್ಯ ॥ ೮೬ ॥
ಹೊನ್ನಬಳ್ಳಿಗಳಂತೆ ಹೊಳೆವ ನಿಮ್ಮಿಬ್ಬರ । ಚೆನ್ನತೋಳುಗಳ ನೋಡಿದೆನು ॥
ರನ್ನದ ಬೊಂಬೆಯಂದದ ವೈಯನೀ ತೋಳ್ಗ । ಳಿನ್ನು ಸುತ್ತಲದೆಂತೊ ಸೊಗಸು ॥ ೮೭ ॥
ಕೆಂಬಲ್ಲು ಚೆಂದುಟಿ ನಗೆಮೊಗ ನಿಡುಗಣ್ಣ । ಳಿಂಬನಿಬ್ಬರೊಳು ನೋಡಿದೆನು ॥
ಅಂಬುಜಕಂಬುಜವೆರಸೆ ಮತ್ತೊಂದರ । ಹಂಬಲಿಹುದೆ ನಿವಗಿನ್ನು ॥ ೮೮ ॥
ಅಡಿ ಮಡ ತೊಡೆ ಕಟಿ ನಡು ಬಸುರೆದೆ ತೋಳು । ಮುಡಿ ಮೊಗ ಕೊರಳ ನೋಳ್ಪಾಗ ॥
ಕಡೆದು ಸೇರಿಸಿದಂತೆ ನಿಮ್ಮಿಬ್ಬರಿರವಿದೆ । ಪೊಡವಿಗಚ್ಚರಿಯೆಂದಳವಳು ॥ ೮೯ ॥
ನೀನೀಗ ಹಲಬರು ಪೂಜಿಸುತಿಪ್ಪ ನ । ವೀನದೇಹಾರದಂತೆಸೆವೈ ॥
ಆ ನೀರೆಯಿಹಳಾರ ಪೂಜೆಗೆ ಸಿಕ್ಕದೊಂ । ದಾನೊಂದು ದೇವತೆಯಂತೆ ॥ ೯೦ ॥
ಆರ ಪೂಜೆಗು ಸಿಕ್ಕಿತಿಲ್ಲ ನೀನೆದೆಯೊಳಿ । ಟ್ಟೋರಂತೆ ಧ್ಯಾನಿಸುವಾಗ ॥
ಬಾರದಿರಳು ಬಲುಸುಖವ ಪಾಲಿಪಳು ವು । ಹಾರಾಯುಸಾದೆಯ್ಯೆ ಬದುಕು ॥ ೯೧ ॥
ಮುಗುಳ್ನಗೆ ನಕ್ಕನದಕೆ ರಾಯ ನಿನಗಿನ್ನು । ನಗೆಯಲ್ತೆ ಸುರಸುದತಿಯರಾ ॥
ನಗುವ ರೂಪಿನ ನೀರೆ ಕೈಸಾರುವಾಗೆಂದು । ನಗುತೆದೆಗೊಳಿಸಿದಳೊಡನೆ ॥ ೯೨ ॥
ಬಳೆವಂದುವೊದಲಾಗಿ ನಿಮ್ಮತ್ತೆಯಿವಳನೆ । ನ್ನಳಿಯಗಲ್ಲದೆ ಕೊಡೆನೆಂದು ॥
ಸಲಹಿದಳವಳೀಗ ನಿನ್ನ ಮನವ ಸೂರೆ । ಗೊಳುವಂತೆ ರಂಜಿಸುತಹಳೆ ॥ ೯೩ ॥
ಕೋಟಿಮನ್ಮಥರ ಬಾಣಂಗಳ ಮಸಕವ । ನೋಟದೊಳಗೆ ತೋರುತಹಳೆ ॥
ಪಾಟಿಯೂರವಳಿಗೆ ನಾಳೆ ನಿನ್ನೆದೆ ಧೂಳಿ । ಗೋಟೆಯಹುದು ಕಾಣಲೊಡನೆ ॥ ೯೪ ॥
ಆರು ಸೂಡದ ಮಾಲೆ ತೊಡದ ಪೊಂದೊಡಿಗೆ ಚ । ಕೋರ ತುಡುಕದಚ್ಚಜೊನ್ನಾ ॥
ಸೇರಿ ನೋಡದ ಚಿತ್ರವೆನೆ ಕಚ್ಛನೃಪನ ಕು । ಮಾರಿಯಿಹಳು ಮಿಸಲಾಗಿ ॥ ೯೫ ॥
ತುಂಬಿ ವಾಸಿಸದ ತಾವರೆಯಂತೆ ಗಿಳಿ ನಸು । ಚುಂಬಿಸದಿನಿವಣ್ಣಿನಂತೆ ॥
ತುಂಬುಜವ್ವನೆ ಮಿಸಲಾಗಿಹಳರಸ ನೀ । ನೇಂ ಬಲುಪುಣ್ಯನೊ ಧರೆಗೆ ॥ ೯೬ ॥

ತಾಗುತಿದ್ದುದು ಮಧುವಾಣಿಯ ನುಡಿ ರುಚಿ । ಯಾಗುತಿದ್ದುದು ರಾಯ ನಗುತ ॥
ಈಗ ನೀವೆಯ್ತಂದ ಕಾರ್ಯವೇನತಿಜೋಲಿ । ಯಾಗದೆ ಪೇಳೆಂದನೊಡನೆ ॥ ೯೭ ॥

ನವಗೇನು ಕಾರ್ಯ ನಿಮ್ಮತ್ತೆ ನಿವಗೆ ತನ್ನ । ಕುವರಿಯ ಕುಡುವೆನೆಂದೆಮ್ಮಾ ॥
ಅವಸರದಿಂದಟ್ಟಲೆಯ್ತಂದೆವಾಕೆಯು । ಸುವಿವೇಕವೊಂದ ಕೇಳಿನ್ನು ॥ ೯೮ ॥
ವಿನಮಿರಾಜನು ಮಂತ್ರಿಬಂಧುಗಳೆಲ್ಲರು । ನಿನಗೆ ಪೆಣ್ಗೊಡುವರೊಪ್ಪಿದರು ॥
ಘನತರಭಾಗ್ಯವಂತಗೆ ಕೊಡಲವ್ಮ್ಮವೆಂ । ದನುವಾನಿಸಿದನು ದೊಡ್ಡರಸು ॥ ೯೯ ॥
ಸಿರಿ ಸರಿಯಿಲ್ಲದಿದ್ದರೆ ನಾವು ಕುಲದಲ್ಲಿ । ಸರಿಯಲ್ಲವೆಂಬನಾ ನೃಪತಿ ॥
ಸರಿಗಾಣದವನಿಗೆ ಹೆಣ್ಣ ಕೊಟ್ಟಕಟ ಕಿಂ । ಕರರಾಗಲೇಕೆಂದು ನುಡಿದಾ ॥ ೧೦೦ ॥
ಮಗನ ಕರೆಸಿ ತಾಯಿ ಬುದ್ಧಿವೇಳುತ ಮದು । ವೆಗೆ ಜೋಕೆಮಾಡೆಂದಳದಕೆ ॥
ಬಗೆ ಬಾರದವ್ವಾಜಿ ಪೆಣ್ಣನಾವಿತ್ತಾಗ । ನಗೆಗೆಡೆಯಹುದೆಂದು ನುಡಿದಾ ॥ ೧೦೧ ॥
ಸೇರದಿ ತಾಳಿಬಂದಿಯ ಕಟ್ಟಿ ಮನೆಗೆಯ್ದಿ । ಧಾರೆಯೆರೆದು ಕೊಡಬಹುದು ॥
ಕೂರಸಿವೊನೆದೋರಿ ಕೊಡು ಕೊಡೆಂದರೆ ಹೆಣ್ಣ । ನಾರೀವರವ್ವಾಜಿಯೆಂದಾ ॥ ೧೦೨ ॥
ಆತನಿಂದಧಿಕಬಂಧುಗಳಿಲ್ಲವಹುದೆಮ್ಮ । ನೇತಕೂ ಸರಿಗಾಣನಾತಾ ॥
ಮಾತೆ ನೀವಾತನೊಳ್ಪ್ರೀತಿಮಾಡೆಂಬುದು । ಮಾತೆಯೆಂದನು ಮಾತೆಯೊಡನೆ ॥ ೧೦೩ ॥
ತನ್ನ ಮಾತುಳನಿರ್ದರಿಲ್ಲಿಗೆನ್ನಳಿಯನು । ಸನ್ನದ್ಧದೊಳು ಬಹನಹುದು ॥
ನಿನ್ನ ಮನೆಗೆ ಬಾರ ಚಕ್ರೇಶನಲ್ಲವೆ । ಇನ್ನೊಂದ ಕೇಳೆಂದಳಾಕೆ ॥ ೧೦೪ ॥
ತಾಳಿಬಂದಿಯ ಕಟ್ಟಿಸುವನಾತ ಬಳಿಕಾತ । ನಾಲಯಕೆಯ್ದಿ ಪೆಣ್ಗೊಡುವ ॥
ಲೀಲೆಗೊಪ್ಪೆಂದರೊಪ್ಪಿದನದನಾವೊಲ್ದು । ಹೇಳಲೆಯ್ದಿದೆವೆಂದಳವಳು ॥ ೧೦೫ ॥
ರಾಜಾಂಗರೂಢಿಯ ನಮಿರಾಜನೆಣಿಕೆಗ । ತ್ಯ್ಯಾಜಿಯ ಗುಣಕೆ ಚಿತ್ತದೊಳು ॥
ರಾಜಶಿರೋಮಣಿ ಮೆಚ್ಚಿದನಹುದದ । ಮಾಜಿಕೊಂಡೊಡನಿಂತು ನುಡಿದಾ ॥ ೧೦೬ ॥
ಮುನ್ನ ಸರ್ವರು ಪೆಣ್ಣ ಕೊಟ್ಟಂತೆ ಕೊಡಪೇಳು । ಬಿನ್ನಾಣವಿದು ಸಲ್ಲದೆಂದಾ ॥
ನಿನ್ನತ್ತೆಯಿಾ ಮಾತ ಕೇಳ್ದಳಾದರೆ ಮುಖ । ಖಿನ್ನಳಾಗಳೆಯೆಂದಳವಳು ॥ ೧೦೭ ॥
ಅಂತಹುದತ್ಯ್ಯಾಜಿಯುರ ಮಾತ ಮುರಿವೆನೆ । ಸಂತತಿಭೂಪರ ಕಳುಹಿ ॥
ನಾಂ ತಾಳಿಬಂದಿಗಟ್ಟಿಸುವೆನೆಂದನು ಮುಖ । ಕಾಂತಿಯಾಯ್ತವರಿಗಾ ಕ್ಷಣವೆ ॥ ೧೦೮ ॥
ಇಂದಿವರ್ಗೂಟ ವಿಾಹವ ಜೋಕ್ಕಮಾಡಿಸು । ಬಂದಲಸಿಕೆ ಹಿಂಗಲೆಂದು ॥
ಮುಂದಿರ್ದಳೊಬ್ಬಳಿಗೊರೆದು ಮನ್ನಣೆವೆರ । ಸೊಂದು ಮನೆಗೆ ಕಳುಹಿದನು ॥ ೧೦೯ ॥
ಪಂಡಿತೆಯೊಡನೊಂದುಕಾರ್ಯವ ಯೋಚಿಸಿ । ಕೊಂಡೆದ್ದನೊಡನರಮನೆಗೆ ॥
ಮಂಡಿತಾಸನದಲ್ಲಿ ಮೊಗವನಲ್ಪವ ಮಾಡಿ । ಕೊಂಡು ಕುಳ್ಳಿರ್ದನಾ ಚದುರಾ ॥ ೧೧೦ ॥
ಸೌಂದರಿಯರು ಬಂದು ಸಟೆಯಲ್ಲ ನೃಪತಿ । ಗಿಂದೊಂದು ಕಲ್ಯಾಣದ ವಾರ್ತೆ ॥
ಬಂದಿತೆಂಬುದ ಕೇಳ್ದವಿದರೊಳೇತಕೆ ಚಿಂತೆ । ಯೆಂದು ಪಂಡಿತೆಯ ಕೇಳಿದರು ॥ ೧೧೧ ॥

ಒಸಗೆಯ ನುಡಿ ಬಂದುದಹುದದರಲ್ಲಿ ಮಾ । ರಸಮಾನವಾಕ್ಯ ಪುಟ್ಟಿದುವು ॥
ಬಿಸುಡಬಾರದು ಕೈಯಕೊಳಬಾರದಾಗಿ ಚಿಂ । ತಿಸುತಿರ್ದ ನೃಪನೆಂದಳವಳು ॥ ೧೧೨ ॥
ಪಡೆಯಲೊಡನೆ ನಮ್ಮ ಸ್ವಾಮಿಗೆಂದಾ ಹೆಣ್ಣ । ನುಡಿದಿದ್ದರೊಲ್ದು ಪೆತ್ತವರು ॥
ಕೊಡುವೆವೆಂದರು ತಾಳಿಬಂದಿಯ ಮೊದಲು ಸಂ । ಗಡಿಸಬೇಕೆಂದರದೊಂದು ॥ ೧೧೩ ॥
ಪಟ್ಟಬಾಸಿಗಗಟ್ಟ ಮದುವೆಯುಪ್ಪದದೊಂದು । ಪಟ್ಟಗದ್ದುಗೆಯೊಳು ನೃಪನಾ ॥
ಮುಟ್ಟ ಕುಳ್ಳಿರುವುದೊಂದಾಗಬೇಕೆಂದರು । ಹುಟ್ಟಿತಿಂತಿದರಿಂದ ಚಿಂತೆ ॥ ೧೧೪ ॥
ಲಲನೆಯರೆಲ್ಲರಿರ್ದಂತಿರಲೆಂದನು । ನೆಲದಾಣ್ಮನದಕೊಪ್ಪರವರು ॥
ಬಲವ ಕಾಣ್ಬನೆ ಸತಿಯರೊಳದರಿಂದಲೀ । ಬಲುಚಿಂತೆಯಾಯ್ತೆಂದಳವಳು ॥ ೧೧೫ ॥
ಸುಮ್ಮನಾಕೆಗೆ ತೇಜವಿತ್ತು ತಂದಾಳ್ದರೆ । ಹೆಮ್ಮಕ್ಕಳೇನ ಮಾಡುವೆವು ॥
ನಮ್ಮ ಮೇಲರಸಗಿಷ್ಟೊಲ್ಮೆಯಿದ್ದುದೆಯೆಂದು । ತಮ್ಮ ಚಿತ್ತದೊಳು ಮೆಚ್ಚಿದರು ॥ ೧೧೬ ॥
ತಾಯೊಡಹುಟ್ಟಿದವನ ಮಗಳುತ್ತಮು । ನಾಯಿಕೆ ತನಗೆಂದೆ ಬಳೆದ ॥
ಸ್ತ್ರೀಯಹುದವಳ ಮೇಲಾಸೆಯುಂಟೆಮಗಳ್ಕಿ । ದಾಯುವಿದೆಂದು ಮೆಚ್ಚಿದರು ॥ ೧೧೭ ॥
ಇದಕೇಕೆ ಚಿಂತೆ ಬೇಡಿದ ತೇಜಗಳ ಕೊಟ್ಟು । ಮದುವೆಯಾಗಲಿ ಸುಖದಲ್ಲಿ ॥
ಅದು ನಮ್ಮ ಸರ್ವರ ಸಮ್ಮತವೆಂದು ತ । ಪ್ಪದೆ ನುಡಿದರು ತವತವಗೆ ॥ ೧೧೮ ॥
ಸರಿಯಾಗಿ ಸರ್ವರು ಬಾಳ್ವರೊಬ್ಬಳು ಪಟ್ಟ । ದರಸಿಯಿಹಳು ಕ್ಷತ್ರಿಯರಿಗೆ ॥
ಧರಣಿಯೊಳುಳ್ಳುದಿದಕೆ ನಾವು ನೋವೆವೆ । ತರಲಿ ರಾಜೇಂದ್ರನಾಕೆಯನು ॥ ೧೧೯ ॥
ಬಳ್ಳಮಾನದ ಬಣಜಿಗರ ಪುತ್ರಿಯರೆ ನಾ । ವೆಲ್ಲ ಶೂದ್ರತಿಯ ಸುತೆಯರೆ ॥
ಸಲ್ಲದೆಂಬೆವೆ ಪಟ್ಟ ಕ್ಷತ್ರಿಯಾತ್ಮಜೆಗೆ ನಾ । ವಲ್ಲವೆಂಬೆವೆಯೆಂದರೆಲ್ಲ ॥ ೧೨೦ ॥
ಆಕೆಗೆ ಬಂದ ತೇಜವೆ ನಮ್ಮ ತೇಜ ನಾ । ವೇಕವರ್ಣಜೆಯರೇನಲ್ತೆ ॥
ಬೇಕೆಂಬ ತೇಜ[illegible] ಕೊಟ್ಟು ತರಲಿ ಚಿಂತೆ । ಯೇಕೆ ನಮ್ಮರಸಗಿದರೊಳು ॥ ೧೨೧ ॥
ಅದು ಬೇಡ ವಲ್ಲಭಗೇನಿಚ್ಛೆಯಾಯ್ತದ । ಕಿದಿರಾಗುವಳು ರಾಜಸುತೆಯೆ ॥
ಎದೆಯೊಳೊಂದಿದ್ದು ಮಾತಿನೊಳೊಂದ ನುಡಿಯೆವು । ಪದುಳದಿ ತರಲೆಂದರೆಲ್ಲ ॥ ೧೨೨ ॥
ಬಳಿಕ ಭೂಪಾಲ ಸಮ್ಮುಖವೆತ್ತು ಕೇಳಿರೌ । ಲಲನೆಯರಿರ ನನಗೆಂದು ॥
ಬಳೆದಳೆಂದೊಂದುವಾರ್ತೆಯ ಹರಹಿದರಿಂದ । ಗೆಲುವಂದವೆಂತೆಂದು ನುಡಿದಾ ॥ ೧೨೩ ॥
ಎಂತವರೆಂದಂತೆ ಮದುವೆನಿಲ್ವುದೆ ಕಾರ್ಯ । ಕಾಂತ ಲಾಲಿಸು ನಿನ್ನ ಮೊಗಕೆ ॥
ಚಿಂತೆ ಬಂದಾಗೆಮ್ಮನಲೆದೆ ನೀನೆಂದಾಪ್ತ । ಕಾಂತೆಯರೊಪ್ಪಿ ನುಡಿದರು ॥ ೧೨೪ ॥

ಸಂದುದಾ ದಿನ ಮರುದಿನ ತನ್ನ ಮಂತ್ರಿಯ । ಮುಂದುಮಾಡೆಲ್ಲರ ಕೂಡೆ ॥
ಬಂದ ಪೆಂಗಳಿಗೆ ಖೇಚರಮಂತ್ರಿಗುಚಿತವಿ । ತ್ತೊಂದೆ ಲಗ್ಗೆಯೊಳು ಕಳುಹಿದಾ ॥ ೧೨೫ ॥

ಭಂಡಾರವತಿಯೆಂಬ ಪೆರ್ಗಡತಿಗೆ ಪೆಣ್ಣು । ತಂಡ ನಂಬುಗೆವಂತರೆಸೆಯೆ ॥
ತೊಂಡಿಲುಂಗುರ ತಾಳಿಬಂದಿ ಭೂಷಣದ ಕ । ರಂಡಗೆಗೊಟ್ಟು ಕಳುಹಿದಾ ॥ ೧೨೬ ॥

ಅಂತಿಂತುಟಿನಲೇಕೆ ಪಡೆಯು ರಕ್ಷಣೆಗೆ ಜ । ಯಂತಾಂಕನಿರಲೊಬ್ಬನೆಂದು ॥
ವ್ಯಂತರಮ್ಲೇಚ್ಛವಿದ್ಯಾಧರಮುಖ್ಯರೆ । ಲ್ಲಂತರಿಸದೆ ಹೋಗಲೆಂದಾ ॥ ೧೨೭ ॥

ಒಲಿದೆಡೆಗೆಡೆಗಟ್ಟಿ ಛಪ್ಪನ್ನದೇಶದ । ಗ್ಗಳರ ಮತ್ತರಸುಮಕ್ಕಳನು ॥
ಕೆಳೆಯರು ಮೊದಲಾಗಿ ಕಳುಹಿದನತ್ತ್ಯಾಜಿ । ಸಲೆ ನೋಡಿ ಮನಹಿಗ್ಗಲೆಂದು ॥ ೧೨೮ ॥

ಮಂಗಲವಸ್ತುವೆರಸು ತಾಳಿಬಂದಿಯು । ನಂಗನೆಗಟ್ಟಿ ಮತ್ತಿತ್ತು ॥
ತಂಗಿಯರಿಗೆ ಬಳಿಯಟ್ಟಿದನಿಲ್ಲಿಗೆ । **ಮಂಗಲಯಾನದ ಸಂಧಿ** ॥ ೧೨೯ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೩೦ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವ್ವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೩೧ ॥

ತೆರೆಯು ಮೇಲ್ತೆರೆಗಳ ತೋರುವಿಂಗಡಲಂತೆ । ಸಿರಿಯು ಮೇಲ್ಸಿರಿಯ ಸೂಚಿಸುವ ॥
ಚರಿತಾರ್ಥ ನನ್ನಂತರಂಗದೊಳಿರು ಮನೋ । ಹರನೆ ಚಿದಂಬರಪುರುಷಾ ॥ ೧೩೨ ॥

ಮಂಗಲಯಾನಸಂಧಿ ಸಂಪೂರ್ಣಂ

## ಉಂಗುರುಡಿಗೆಯ ಸಂಧಿ.

ಉತ್ಸಾಹವರ್ಧನ ಉನ್ಮಾರ್ಗಮರ್ದನ । ಚಿತ್ಸುಖಿ ಚಿತ್ರಾರ್ಥಚರಿತಾ ॥
ಸತ್ಸಾರಮತಿದೋರು ಸನ್ಮುನಿಹೃದಯಶ್ರೀ । ವತ್ಸಾ ನಿರಂಜನಸಿದ್ಧಾ ॥ ೧ ॥

ದುರ್ಧರರಿಪುರಾಯುಮಥನನ ದೊರೆಗಳು । ವರ್ಧಿತರಾಜಲೀಲೆಯೊಳು ॥
ಸ್ಪರ್ಧಿತವಾದ್ಯಕೋಟಿಯ ರವದೊಳು ವಿಜ । ಯಾರ್ಧಪರ್ವತವ ಹತ್ತಿದರು ॥ ೨ ॥

ನೆಲನ ಮೇಲೆಯ್ದುವಂತೆಲ್ಲ ವಿಮಾನಸಂ । ಕುಳವೇರಿ ಗಗನಮಾರ್ಗದೊಳು ॥
ಚಳಚಳನೆಯ್ದಿದರಂಗಶೃಂಗಾರಾಂಶು । ತಳತಳನತ್ತಿತ್ತ ಕೆದರೆ ॥ ೩ ॥

ಬರುತ ಚಕ್ರಿಯ ಮಂತ್ರಿ ಮುಂದರಿದಂಬರೇ । ಚರಮಂತ್ರಿ ಕೇಳೆಮ್ಮ ನೃಪರು ॥
ಕರವ ಮುಗಿವರು ಕಾಣ್ಕೆಯನಿಕ್ಕರೊಡನೆ ನಿ । ಮ್ಮರಸ ಕೈಮುಗಿಯಬೇಕೆಂದಾ ॥ ೪ ॥

ಕೆಳೆಯರು ನಾನು ಕಾಣ್ಕೆಯನಿಕ್ಕಿ ಕೈಮುಗಿ । ದೆಳಸಿ ಕಾಣ್ಬೆವು ನೋಡುತಿರಲು ॥
ಉಳಿದವರೆಮ್ಮಂತೆ ಕಾಣಬೇಕೆಂಬೊಡೆ । ಸಲುವುದೆ ಚಕ್ರಿಯೊಲ್ತನಗೆ ॥ ೫ ॥

ನಾನು ವಿಪ್ರನು ಮಿತ್ರರರಸನಿಚ್ಛೆಗರು ಸಂ । ಧಾನಿಪೆವಿಷ್ಟು ತೇಜವನು ॥
ಮಾನಿಗಳಲ್ತೆ ರಾಜರು ವ್ಯಂತರೇಂದ್ರರು । ನೀನದನುಸುರಬೇಕೆಂದಾ ॥ ೬ ॥

ಮದುವೆಗೆ ಬಂದರನಾಳಂತೆ ಕಾಣ್ಬರೆ । ಸದನಕೆಯ್ದಿದ ತೇಜ ಕಿರಿದೆ ॥
ಇದಕೆ ನೀವೊಪ್ಪಬೇಕೆನಲವನೊಪ್ಪಿದ । ನದು ಕಾರ್ಯವಹುದು ಲೇಸೆಂದು ॥ ೭ ॥

ಸುಮತಿಸಾಗರ ಮುಂದೆ ಭರದಿ ವಿಮಾನವ । ತೆಮುಳಿಕೊಂಡೆಯ್ದಿ ವಾರ್ತೆಯನು ॥
ನಮಿರಾಜಗರುಹೆ ಸಂತೋಷಿಸಿ ಮಂತ್ರಿ ಸಂ । ಭ್ರಮಿಸಿದೆ ಬಳಲಿದೆಯೆಂದಾ ॥ ೮ ॥

ಕಾಳಿಂದಿಮಧುವಾಣಿಯರು ಪೇಳಲೊಸಗೆಯ । ಕೇಳಿ ಯಶೋಭದ್ರಾದೇವಿ ॥
ಓಲಾಡಿ ಹರುಷದೊಳವರನಾಗಳೆ ತನ್ನ । ತೋಳೆರಳ್ತುಂಬಿಯಪ್ಪಿದಳು ॥ ೯ ॥

ಪುರದ ಸಮೀಪಕೆ ಬಂದರೆಂಬುದ ಕೇಳಿ । ಗರುವಿಕೆ ಮಿಗೆ ನಮಿರಾಜಾ ॥
ದೊರೆಗಳುವೆರಸಿ ಮಂತ್ರಿಯನಿದಿರಾಗಿ ಸಿಂ । ಗರ ಠೀವಿ ಮಿಗೆ ಕಳುಹಿದನು ॥ ೧೦ ॥

ಧರೆಯಗಲದ ದೊರೆಗಳುಗೂಡಿ ಬುದ್ಧಿಸಾ । ಗರಮಂತ್ರಿ ನೂಂಕಿ ಬಪ್ಪಾಗ ॥
ಶರನಿಧಿಗಿದಿರಾಗಿ ಬಪ್ಪ ಪೆರ್ದೊರೆಯಂತೆ । ಬರುತಿದ್ದನಿತ್ತಲೀ ಮಂತ್ರಿ ॥ ೧೧ ॥

ಸ್ವಾಮಿಯ ಮಂತ್ರಿಗೆ ತನ್ನ ಮಂತ್ರಿಯೆ ನಮ್ಮ । ಭೂಮೀಶರಿಗೆ ತನ್ನ ನೃಪರೆ ॥
ಪ್ರೇಮದಿ ತನ್ನನುಜನನಟ್ಟಬೇಡವೆ । ಹೋ ಮಾಣೆರೆಂದನಾ ಶಠನು ॥ ೧೨ ॥

ಖೋಡಿಯೇನದರಿಂದ ನಮ್ಮ ಸ್ವಾಮಿಗೆ ಹೆಣ್ಣ । ಜೋಡಿಪುದೊಂದೆ ಕಾರ್ಯವನು ॥
ನೋಡಬೇಕಿವ ನೋಡಲಾಗದೆಂದೇಕಾಂತ । ಮಾಡಿದಾ ಕ್ಷಣ ನಿಲಿಸಿದನು ॥ ೧೩ ॥

ಮೊದಲೆ ಪೆಣ್ಗೊಡಲೊಲ್ಲದತಿಡೊಂಕುಮಾಡಿ ದೇ । ಶದ ಹಂಗ ತೊರೆದಾಡಿದ ಗಡ ॥
ಇದನೀಗ ನೆನೆವರೆ ಸೈರಿಸೆಂದದನೊತ್ತಿ । ಚದುರನಾಗರ ನಿಲಿಸಿದನು ॥ ೧೪ ॥
ದೊರೆಯು ಸೋಲಿಪ ನೀರೆ ದೊರೆಯು ಕೈಸಾರುವಾ । ಗರರೆ ಸೋಲವೆ ನವಗಿನಿತು ॥
ಸರಸವೋಹಕೆ ಮೊನೆಗಾರಿಕೆ ಸಲ್ಲದೆಂ । ದೊರೆದು ನಿಲಿಸಿದನಾ ವಿಟನು ॥ ೧೫ ॥
ಸೊಕ್ಕಿದನ್ಯೆ ತನ್ನ ತಂಗಿಗೆಮ್ಮರಸು ಕ । ಣ್ಣಿಕ್ಕಿದರಿಷ್ಟು ಹಮ್ಮಾಯ್ತು ॥
ದಕ್ಕಿತವನ ಪಂಥ ಹೋಗಲೆನುತ ಪಜ್ಜೆ । ಯಿಕ್ಕಿದ ಕುಟಿಲನಾಯಕನು ॥ ೧೬ ॥
ನೃಪನ ಸೋದರದ ಮಾವನ ಮಕ್ಕಳಲ್ಲವೆ । ನೃಪನ ತೇಜವೆ ನವಗವರು ॥
ನೃಪಗಿದಿರ್ವಪ್ಪರು ನವಗೇಕೆ ಬಹರೆನು । ತುಪದೇಶಿಸುತ ಮಂತ್ರಿ ನಡೆದಾ ॥ ೧೭ ॥
ಪದುಳದಿಂದಿವರೆಯ್ದಲಾ ಮಂತ್ರಿ ಬಂದು ತಾ । ನಿದಿರ್ವಂದು ವಿನಯವ ನುಡಿದು ॥
ಪುದಿದೊಯ್ಯೆ ಗಗನವಲ್ಲಭಪುರದೊಳಪೊಕ್ಕ । ರುದಧಿಯಂತುಲಿವ ವಾದ್ಯದೊಳು ॥ ೧೮ ॥
ಭೂರಿವಿಮಾನದಿಂದಿಳಿದಿವರ್ ಕಡೆಯ ಹ । ಜಾರಕೆ ಬರೆ ಗೃಹದಿಂದ ॥
ಆ ರಾಯ ಬಂದನು ಕಂಡರೆಲ್ಲರು ಮುನ್ನ । ದಾರಿಯೊಳೆಣಿಸಿ ಬಂದಂತೆ ॥ ೧೯ ॥
ಪಟ್ಟಗದ್ದುಗೆಯೊತ್ತಿನೊಳು ನಿಂದು ನಮಿರಾಜ । ನಿಟ್ಟಿಸುತಿರೆ ಬಂದ ನೃಪರಾ ॥
ಕಟ್ಟೆಗೆಕಾರರು ದೊರೆಗಳ ನಾಮವ । ಕುಟ್ಟೆ ಕಾಣಿಸಿದರೇನೆಂಬೆ ॥ ೨೦ ॥
ಭರತರಾಜನ ಭಾಗ್ಯಕಾಧಾರನು ಸರ್ವ । ನರಲೋಕಕನಿಮಿಷಾಚಾರ್ಯರ್ ॥
ಅರಸ ಚಿತ್ತೈಸೀತ ಬುದ್ಧಿಸಾಗರಮಂತ್ರಿ । ವರನೆಂದರಾ ವೇತ್ರಧರರು ॥ ೨೧ ॥
ಮೋಘವಲ್ಲಿವರಿಬ್ಬರಾ ಚಕ್ರಧರನ ಮ । ಹಾಘನಭುಜಯುಗೋಪಮರು ॥
ಮೇಘೇಶ್ವರರಾಜವಿಜಯರಾಜರ ಸ್ವಾಮಿ । ಶ್ಲಾಘನಂಗೈಯೆಂದರೊಡನೆ ॥ ೨೨ ॥
ಎರವಿಲ್ಲದಧಿಕವಿಶ್ವಾಸಿಯಿಾತನು ಚಕ್ರ । ಧರನ ಮೆಚ್ಚಿನ ವ್ಯಂತರೇಂದ್ರಾ ॥
ಪರಪುರುಷಾರ್ಥಕೋವಿದ ಮಾಗಧೇಂದ್ರನು । ಪರಿಕಿಸೆಂದೊಡನೆ ತೋರಿದನು ॥ ೨೩ ॥
ವರತನುದೇವನೀತನು ದಕ್ಷಿಣಾಬ್ಧಿಯೊ । ಳಿರುತಿಹನರಸ ಮತ್ತೀತಾ ॥
ವರುಣದಿಕ್ಕಿನ ಜಲಧಿಯ ಪ್ರಭಾಸೇಂದ್ರನಾ । ದರಿಸೆಂದು ಕೇರಿ ತೋರಿದರು ॥ ೨೪ ॥
ಧ್ರುವಗತಿದೇವನು ಸುರಕೀರ್ತಿದೇವನೊ । ಪ್ಪುವ ಪ್ರತಿಭಾಸೇಂದ್ರನೆಂಬ ॥
ಇವರು ಮೂವರು ಮಾಗಧೇಂದ್ರಾದಿಮೂವರ । ಯುವರಾಜರೆಂದು ತೋರಿದರು ॥ ೨೫ ॥
ಲಾಲಿಸು ರಾಯ ತಮಿಸ್ರಗುಹೆಯ ಕೃತ । ಮಾಲೇಂದ್ರನೀತ ಮತ್ತೀತಾ ॥
ಆಲೀಢಖಂಡಪ್ರಪಾತಗುಹೆಯ ನಾಟ್ಯ । ಮಾಲೇಂದ್ರನೆಂದು ತೋರಿದರು ॥ ೨೬ ॥
ಈ ಗಿರಿಯೊಳು ನಾವು ನಡುವಿಹೆವೆಮ್ಮಿಂದ । ಮೇಗೆ ಪರ್ವತದ ಮೇಲೆಸೆವ ॥
ನಾಗೇಂದ್ರನಿಭನೀತ ವಿಜಯಾರ್ಧದೇವನೆಂ । ದಾ ಗೌರವನ ಕಾಣಿಸಿದರು ॥ ೨೭ ॥

ಹಿಮಶೈಲದಗ್ರದೊಳ್ನಾಗಯಕ್ಷಾದಿಯಾ । ದಮರರಿಗರಸಾಗಿ ಬಾಳ್ವ ॥
ಹಿಮವಂತದೇವನೀತನು ಪರಾಂಬರಿಸೆಲೆ । ನಮಿರಾಜಯೆಂದು ತೋರಿದರು ॥ ೨೮ ॥
ಬಡಗಣ ಪೂರ್ವಖಂಡದ ಕಾಮನೃಪನ ನೋ । ಡೊಡನಿದ್ದ ನೃಪರ ಚಿತ್ತೈಸು ॥
ಪಡುವಣ ಖಂಡದ ಕಲಿರಾಜ ಮೊದಲಾದ । ಪೊಡವಿಪಾಲರನವಧರಿಸು ॥ ೨೯ ॥
ಈ ತೋರ್ಪ ನೃಪರು ಮಧ್ಯಮಖಂಡದವರು ಮ । ತ್ತೀತನಲ್ಲಿಯ ಮಾಧವೇಂದ್ರಾ ॥
ಈತ ಚಿಲಾತೇಂದ್ರನೆನೆ ನಮಿರಾಜನ । ಖ್ಯಾತಂಕಗೊಳುತ ನೋಡಿದನು ॥ ೩೦ ॥
ತೆಂಕಣ ಪೂರ್ವಖಂಡದ ರಾಜರಿವರಿಲ್ಲಿ । ಸೋಂಕಿಲ್ಲ ವೇತಂಡರಾಜಾ ॥
ಅಂಕೆಯುಳ್ಳುದ್ದಂಡರಾಜನಿವರು ಪಶ್ಚಿ । ಮಾಂಕಖಂಡದ ಧರಣಿಪರು ॥ ೩೧ ॥
ಆರ್ಯಾಖಂಡದೈವತ್ತಾರುದೇಶದ । ಶೌರ್ಯಭೂಮಿಪರಿವರರಸಾ ॥
ಸೂರ್ಯವಂಶಾದಿಯಾದರಸುಮಕ್ಕಳ ನೋಡು । ಕಾರ್ಯಕೌಶಲನಮಿರಾಜಾ ॥ ೩೨ ॥
ದಕ್ಷಿಣೋತ್ತರಶ್ರೇಣಿಯಂಬರೇಚರರಿವ । ರೀಕ್ಷಿಸೆ ನಮ್ಮವರೈಸೆ ॥
ದಕ್ಷಿಣನಾಯಕಶತನಾಯಕಾದಿಯಾ । ದಕ್ಷಣ್ಣಸಖರ ಚಿತ್ತೈಸು ॥ ೩೩ ॥
ಕಡೆಗೆಂಟುಮಂದಿಯೆಂದೆನಬೇಡ ಚಕ್ರೇಶ । ನೊಡಲಿಗಷ್ಟಾಂಗದಂತಿವರು ॥
ಬಿಡವಿಲ್ಲದೆಸೆವರಾಭರಣದಂತಿಹರೆಂದು । ಪಡಿಹಾರರೊಲ್ದು ತೋರಿದರು ॥ ೩೪ ॥
ಅರಸರೊಳತಿಭಕ್ತಿವಂತರು ಬುದ್ಧಿಸಾ । ಗರಮಂತ್ರಿಗನುಕೂಲರಿವರು ॥
ಧರೆಯೊಳಿಲ್ಲದ ಜಾಣರೆನೆ ನಮಿರಾಜ ಹ । ತ್ತಿರಕೆ ಕರೆದುಕೊಂಡನವರಾ ॥ ೩೫ ॥

ತರವರಿದೆಲ್ಲರಿಗಾಸನಗೊಡಿಸಿ ಕು । ಳ್ಳಿರವೇಳಿದೊಡನೆ ಕುಳಿತನು ॥
ಹರಿಪೀಠದೊತ್ತಿನ ಹಸೆಯಲ್ಲಿ ಬುದ್ಧಿಸಾ । ಗರಮಂತ್ರಿಯನು ಕುಳ್ಳಿರೆಂದಾ ॥ ೩೬ ॥
ಬುದ್ಧಿಸಾಗರಮಂತ್ರಿ ಕೇಳ್ಪೊರೆಗಳು ವ್ಯಂತ । ರೋದ್ಧಾರರಿವರಲ್ಪರಲ್ಲ ॥
ವೃದ್ಧಿಸಂಪದವಲಾ ಭರತೇಶಗಹೊ ಜಿನ । ಸಿದ್ಧಯೆಂದನು ನಮಿರಾಜಾ ॥ ೩೭ ॥
ಒರ್ವೊರ್ವವ್ಯಂತರೇಂದ್ರರ ನೋಡುವಾಗ ಮ । ತ್ತೊರ್ವೊರ್ವನೃಪರ ಕಾಣ್ಬಾಗ ॥
ಪರ್ವತದಂತಿಪ್ಪರಿವರ ಮಧ್ಯದೊಳಿಪ್ಪ । ಸಾರ್ವಭೌಮಗೆ ಸರಿಯುಂಟೆ ॥ ೩೮ ॥
ಕೌಶಲವೆತ್ತ ಹಿಮಾದ್ರಿಯೆತ್ತುರೆ ತ್ರಿವಾ । ರಾಶಿಮಧ್ಯದ ಮಹೀತಳವಾ ॥
ವೈಶಿಕವಾಳ್ಪುದೆತ್ತಮಮ ಭಾಗ್ಯವ ಭರ । ತೇಶನಂತಾರ್ಪಡೆದವರು ॥ ೩೯ ॥
ಎಲ್ಲರು ಬಯಸಿದರೇಕೆ ಬಹುದು ಪೂರ್ವ । ದಲ್ಲಿ ಪುಣ್ಯವ ಮಾಡಬೇಕು ॥
ಬಲ್ಲಿತಾತನ ಸಿರಿ ಗುಣಕೆ ಹುರುಡೆ ಜಿನ । ಬಲ್ಲನೆಂದೊಲೆದನು ಶಿರವಾ ॥ ೪೦ ॥
ಎನೆ ಮಂತ್ರಿ ಕೇಳ್ದಹುದಹುದೆಂತು ನಿಮ್ಮ ಭಾ । ವನ ಭಾಗ್ಯಕೆಣೆಯಿಲ್ಲವದರ ॥
ಘನತೆಯ ನೋಡಿ ನೀನೆ ಮೆಚ್ಚಬೇಕೆಂದು । ವಿನಯವ ತೋರಿ ನುಡಿದನು ॥ ೪೧ ॥

ಸಿರಿಯ ಪೆರ್ಚ್ಚೊಂದಲ್ಲ ಜಾಣ್ಮೆಗೆ ಜಸಕೆ ಸೌಂ । ದರಕೆ ಶೃಂಗಾರವಿಕ್ರಮಕೆ ॥
ಸುರಲೋಕ ತಲೆದೂಗುವುದು ನಿನ್ನ ಭಾವನೀ । ನರಲೋಕದೊಳಗಣ ದೊರೆಯೆ ॥ ೪೨ ॥

ಪುರುಷರೊಳೆಣೆಯಿಲ್ಲದವನಿಗೆ ನೀನು ಸೌಂ । ದರಿಯರೊಳೆಣೆಯಿಲ್ಲದೊಬ್ಬ ॥
ತರುಣಿಯ ಸೇರಿಸಲೆಣಿಸಿದ ಜಾಣ್ಮೆಗೆ । ಸರಿಯುಂಟೆ ನಮಿರಾಜಯೆಂದಾ ॥ ೪೩ ॥

ಜನಕರ ಕಾಲದೊಳ್ನಡೆದ ಬೀಯುಗತನ । ತನುಜರೊಳ್ಕಿಡಬಾರದೆಂದು ॥
ನೆನೆದೆ ನೀನುತ್ತಮಕಾರ್ಯವ ನಿನ್ನ ವ । ರ್ತನೆಗೆಣೆಯಿಲ್ಲ ಹೋಗೆಂದಾ ॥ ೪೪ ॥

ನಾನೇನ ನೆನೆದೆನಾತನ ಪುಣ್ಯವದು ತನ್ನ । ತಾನೆ ಪ್ರೇರಿಸಿತು ಮತ್ತದನು ॥
ಈ ನೃಪರೆಲ್ಲರ ಮುಂದಿಷ್ಟು ನೆಗಳುವೊಂ । ದಾನಂದಕೆಳಸಿದೆನೆಂದಾ ॥ ೪೫ ॥

ಇವರೆಲ್ಲ ನಮ್ಮ ಬಂಧುಗಳಹುದೆಮ್ಮಯ । ಭವನಕೆ ಕರೆದರೆ ಬಹರೆ ॥
ನವಗಿವರನು ಕಾಣಬೇಕಾಗಿ ಮದುವೆಯ । ನೆವದೋರಿ ಬರಿಸಿದೆನೆಂದಾ ॥ ೪೬ ॥

ಆ ನುಡಿಗೆಲ್ಲರರ್ತಿಸಿದರಿಂದಿಗೆ ನೀವು । ಸ್ನಾನಭೋಜನಕೇಳಿರೆಂದು ॥
ಪೀನಶೃಂಗಾರದ ಬೀಡಾರಗಳಿಗೆ ಸ । ಮ್ಮಾನದಿ ಕಳುಹಿದನವರಾ ॥ ೪೭ ॥

ನರರಿಗೆ ತಕ್ಕನ್ನಪಾನವಸ್ತ್ರವ ವಸ್ತು । ಪರಿಕರದುಲುಪೆಯ ಕಳುಹಿ ॥
ಪರಿಮಳವಸ್ತ್ರಭೂಷಣದುಲುಪೆಯೊಳು ವ್ಯಂ । ತರಿಗರೆಲ್ಲರ ತಣಿಪಿದನು ॥ ೪೮ ॥

ಭಂಡಾರವತಿ ಮೊದಲಾದರ ಕಾಣಿಸಿ । ಕೊಂಡು ಯಶೋಭದ್ರಾದೇವಿ ॥
ಉಂಡುದ ಮೆಚ್ಚದುಟ್ಟುದ ಮೆಚ್ಚದಿಂಬಿಟ್ಟು । ಕೊಂಡಿದ್ದಳರಮನೆಯೊಳಗೆ ॥ ೪೯ ॥

ಒಸೆದೆಲ್ಲ ಮರುದಿನ ಬಂದಿನ್ನು ನಾವು ಬಂ । ದೊಸಗೆಗುಜ್ಜುಗಿಸೆಂದರದಕೆ ॥
ನಸುನಕ್ಕು ನಮಿರಾಜ ತವಕವಿಷ್ಟೇಕೆ ಸೈ । ರಿಸಿ ನಾಲ್ಕುದಿವಸವೆಂತೆಂದಾ ॥ ೫೦ ॥

ಎಂದಿಗೆ ಬಪ್ಪಿರಿ ನೀವೆಮ್ಮ ನಗರಿಗಿಂ । ದೊಂದುಹೆಣ್ಣಿನ ನೆವದಿಂದ ॥
ಬಂದಿರಂತದು ನನ್ನ ಪುಣ್ಯವಿನ್ನೆನ್ನರ್ತಿ । ಸಂದ ಬಳಿಕ ಹೋಗಿರೆಂದಾ ॥ ೫೧ ॥

ಗಾನಗೋಷ್ಠಿಯೊಳು ಸಾಹಿತ್ಯಗೋಷ್ಠಿಯೊಳು ನ । ವೀನನಾಟಕಶಾಲೆಯಲ್ಲಿ ॥
ತೇನತೇನದೊಳು ಲೀಲೆಯ ತೋರಿ ಬಂದು ಸಂ । ತಾನವ ಮನ್ನಿಸುತಿಹನು ॥ ೫೨ ॥

ವಾದ್ಯಾವಳಿ ಮಾಹೇಂದ್ರಜಾಲಿನಿ ವಸಂ । ತೋದ್ಯೋಗಿಯೆಂಬ ಗೋಷ್ಠಿಯೊಳು ॥
ವಿದ್ಯಾಧರರಾಜನಲ್ಲವೆ ಒಂದೊಂದು । ಚೋದ್ಯಗಾಣಿಸಿ ಮನ್ನಿಸಿದನು ॥ ೫೩ ॥

ಸಾಕುಂಗುರುಡಿಗೆಯಾಗಲಿ ಮತ್ತೆ ಸಕಲವಿ । ದ್ಯಾಕಲೆದೋರೆಂದರವರು ॥
ಆ ಕಾರ್ಯವಾದಾಗ ನೀವು ನಿಲ್ಲಿರೆ ತಾಳಿ । ರೇಕೆ ತತ್ತರಗೊಂಬಿರೆಂದಾ ॥ ೫೪ ॥

ಒಡೆಯನ ಕಾರ್ಯವ ಮರೆದರ್ತಿಗಾಣ್ಬುದು । ನಡೆಯೆಯೆಂದರು ನೃಪನದಕೆ ॥
ತಡವುಂಟು ಲಗ್ನ ನಿಮ್ಮೊಡೆಯನ ಕಾರ್ಯಕೆಂ । ದಡಿಗಡಿಗುಸುರಿ ನಿಲ್ಲಿಸನು ॥ ೫೫ ॥

ಏತಕೆ ತಂತ್ರದೋರುವೆಯೆಂದರುದ್ದಂಡ । ವೇತಂಡರಾಜರ ಬಳಿಗೆ ॥
ದೂತರ ಕಳುಹಿದ್ದೆ ನಮ್ಮವರ್ಬರಬೇಕು । ಮಾತಾಡಿಕೊಳಬೇಕೆಂದೆಂಬಾ ॥ ೫೬ ॥

ದಿನದಿನಕೊಂದೊಂದು ಪರಿಯ ಭೂಷಣ ವಸ್ತ್ರ । ಘನತರದುಲುಪೆಯನಿರಿಸಿ ॥
ದಿನದಿನಕೊಂದೊಂದು ಗೋಷ್ಠಿಯೊಳ್ಪದಿನಾರು । ದಿನಮುಟ್ಟೆ ತಡೆದು ಮನ್ನಿಸಿದಾ ॥ ೫೭ ॥

ಆಯ್ವಾರು ಬಾರಿ ತನ್ನರಮನೆಗೆಲ್ಲರ । ನೊಯ್ದು ಮಾಡಿಸಿದನೌತಣವಾ ॥
ಮೆಯ್ದೊಡಿಗೆಯ ದುಗುಲವನಿತ್ತನಿವನಂತೆ । ಕೆಯ್ದೊರೆವವನಾವನೆನಿಸಿ ॥ ೫೮ ॥

ಸಖರು ಮೆಚ್ಚಿದರು ಪ್ರಧಾನಿ ಭಾಪೆಂದನು । ನಿಖಿಳವ್ಯಂತರರು ಭೂಮಿಪರು ॥
ಸುಖಮುಖರಾದರು ನಮಿರಾಜ ತವಗೆ ಸ । ಮ್ಮುಖವೆತ್ತು ಮಾಳ್ಪ ಸನ್ಮಾನಕೆ ॥ ೫೯ ॥

ಉದ್ದಂಡರಾಜವೇತಂಡರಾಜರು ಬಂದ । ರಿದ್ದವರೆಲ್ಲರಿನ್ನೆಮ್ಮ ॥
ಮುದ್ದುಗಜ್ಜವನೆಸಗೆನಲೆಸಗಿದನೆಲ್ಲ । ಬಿದ್ದಿನರನುಮತದಿಂದ ॥ ೬೦ ॥

ಹಗಲು ಜಿನೇಂದ್ರಪೂಜೆಯ ಮುನಿಭುಕ್ತಿಯ । ಪ್ರಗುಣಭೂಸುರರ ತರ್ಪಣವಾ ॥
ಜಗದೊಳಿನ್ನಿಲ್ಲವೆಂಬಂತೊಲ್ದು ಮಾಡಿ ರಾ । ತ್ರಿಗೆ ತೊಡಗಿದನು ಮಂಗಲವಾ ॥ ೬೧ ॥

ಸಿಂಗರಿಸಿದ ಪುರದೊಳು ಗಜ ತೇರು ತು । ರಂಗ ಪತಾಕೆ ವಿಮಾನಾ ॥
ಸಂಗಡಿಸಿರೆ ವಾದ್ಯರವದೊಳು ಮೆರೆದುವಂ । ದುಂಗುರತಾಳಿಬಂದಿಗಳು ॥ ೬೨ ॥

ಮಂಗಲಮುಖಿಯೆಂಬ ಪೆಣ್ಣಾನೆ ನೃಪತಿಯ । ತಂಗಿಯರ್ತಿಗೆ ಕುರಿತಹುದು ॥
ಉಂಗುರತೊಂಡಿಲುಬಂದಿಗಳದರ ಕುಂ । ಭಂಗಳ ಮೇಲೆ ಮೆರೆದುವು ॥ ೬೩ ॥

ಹೆಂಗಳು ಗಂಡಾನೆಯೇರಿದೊಡಭಿಮಾನ । ಭಂಗವೆಂಬುದ ಬಲ್ಲರವರ ॥
ಭಂಗಾರಗಳ ಪಟ್ಟದಾನೆಯೊಳ್ಮೆರೆಸರು । ತ್ತುಂಗವಲ್ಲವೆ ಕ್ಷತ್ರಿಯಾಂಗಾ ॥ ೬೪ ॥

ಪುರುಷ ಗಂಡಾನೆಯನೇರಿದಾಗಬಲೆ ತ । ತ್ಪುರುಷನ ಕೂಡೇರಿ ಬಹುದು ॥
ಪುರದೊಳೊಪ್ಪಿದುದಾಗಿ ಮಂಗಲಮುಖಿಯ ಸಿಂ । ಗರಿಸಿ ಮೆರೆಸಿದರದರೊಳು ॥ ೬೫ ॥

ಮಾಣಿಕದೊಟ್ಟಾನೆಯೇರಿ ಚಿನ್ನದ ಹರಿ । ವಾಣದೊಳ್ತೊಡಿಗೆಯನಾಂತು ॥
ಕಾಣಿಸಿ ಕೇರಿಕೇರಿಯೊಳಾಚೆಯೊಳು ಮಧು । ವಾಣಿ ಮೆರೆಸಿ ತಂದಳೊಸೆದು ॥ ೬೬ ॥

ಜಗಲಿಮಾಡದೊಳು ಕೇರಿಯೊಳಿದ್ದು ಪಂಜುದೀ । ವಿಗೆಗಳು ಚೆಲ್ಲಿದಂತೆಸೆಯೆ ॥
ಗಗನವಲ್ಲಭಪುರ ಮೇಲೆ ತಾರಗೆ ತಳ್ತ । ಗಗನವ ನಗುತಿದ್ದುದಾಗ ॥ ೬೭ ॥

ದುಂದುಭಿ ಡಿಂಡಿಮ ನಿಸ್ಸಾಳ ಕಾಳೆ ಭೋ । ರೆಂದು ಕೋಟಾಕೋಟಿ ಮೊಳಗೆ ॥
ವೃಂದಾರಕಲೋಕಮುಟ್ಟಿತು ಚಕ್ರಿಯ । ಸೌಂದರಿಯುದ್ವಾಹ ಕಿರಿದೆ ॥ ೬೮ ॥

ಪಾತ್ರನಿವಾಳಿಗಳಲ್ಲಲ್ಲಿಗಾರತಿ । ಸ್ತೋತ್ರ ಶೋಭನ ಛತ್ರ ಚಮರಾ ॥
ವೇತ್ರಾಂಕರುಲುಹಿಂದ ಮೆರೆಸಿ ಭೂಷಣಗಳ । ಕ್ಷತ್ರಿಯಾಲಯಕೊಯ್ದರೊಡನೆ ॥ ೬೯ ॥

ಇನಿಸಿಲ್ಲಿ ನೀವು ನಿಂದಿಹುದೆಂದು ನಮಿರಾಜ । ವಿನಯದೊಳೆಲ್ಲರ ನಿಲಿಸಿ ॥
ವಿನಮಿರಾಜನ ತನ್ನ ಮಂತ್ರಿಯು ನಿಲಿಸಿ ಹೊ । ಕ್ಕನು ತನ್ನ ರಾಜಮಂದಿರವಾ ॥ ೭೦ ॥
ಶೃಂಗಾರವಡೆದ ತಂಗಿಯು ತೆರೆಮರೆಯೊಳು । ಹೆಂಗಳೊಳ್ತಾಯಿಗೂಡಿರಿಸಿ ॥
ಮಂಗಲಗೃಹದೊಳು ನಿಂದ ದಿಬ್ಬಣದ ಜ । ನಂಗಳೆಲ್ಲರ ಕರೆಯೆಂದಾ ॥ ೭೧ ॥
ತೊಡಿಗೆಯು ಕಿರಣವ ಕೆದರುತೆಲ್ಲರು ಬಂದು । ಕಡುದೀರ್ಘಗೃಹವೆಂಬ ಕೊಳದ ॥
ನಡುವೆ ತಾವರೆಯಂತೆ ಬಂದಿಯು ಹರಿವಾಣ । ಬೆಡಗುವಟ್ಟರೆ ನಿಟ್ಟಿಸಿದರು ॥ ೭೨ ॥
ಕ್ಷೋಣೀಶರೇನು ಜಾಣರೊ ತಮ್ಮ ಸ್ವಾಮಿಯು । ಪ್ರಾಣಕಾಂತೆಯು ತೊಡವೆಂದು ॥
ಕಾಣಿಕೆಯಿಕ್ಕಿದರ್ಬಂದಿಗುಬ್ಬಿದಳದ । ಕಾಣುತ ಹೆಣ್ಣಿನ ತಾಯಿ ॥ ೭೩ ॥
ಆಸನಾವಳಿಯನೆಲ್ಲರಿಗೀಯೆ ಪರಮವಿ । ಲಾಸದೊಳ್ನಮಿರಾಜ ಕುಳಿತಾ ॥
ಭೂಸುರರೋದಿದರೊಡನೆ ಸಿದ್ಧಾಂತವಿ । ನ್ಯಾಸದೊಳ್ಮಂಗಳಾಷ್ಟಕವಾ ॥ ೭೪ ॥
ಮಂಗಲಕೌಶಿಕೆಯೊಳು ಪಳಮಂಜರಿ । ಸಂಗದೊಳೆಸೆದುದು ಗಾನಾ ॥
ಹೆಂಗಳು ಧವಳಶೋಭನವ ಪಾಡಿದರು ಕ । ರ್ಣಂಗಳ ಬರ ಬರೆವಂತೆ ॥ ೭೫ ॥
ವರಲಗ್ನವಾಯ್ತೆನೆ ನಮಿರಾಜನೆಲ್ಲರ । ಮುರಿದು ನೋಡಿದನನಿತರೊಳು ॥
ಭರತೇಶ ಕಳುಹಿದ ಭಂಗಾರ ಸಲಲಿ ದೇ । ವರ ತಂಗಿಗೆಂದನಾ ಮಂತ್ರಿ ॥ ೭೬ ॥
ಭಂಗಾರ ಹಲವುಂಟು ದೇವರ ಗೃಹದೊಳೀ । ವುಂಗುರ ತೊಂಡಿಲು ಬಂದಿ ॥
ಹೊಂಗರೆಯಂಬರವೀ ನಾಲ್ಕು ಹೆಚ್ಚು ಪು । ಣ್ಯಾಂಗನೆಗಿವು ಸಲಲೆಂದಾ ॥ ೭೭ ॥
ಜನಪರೆಲ್ಲರೊಳು ಕಪ್ಪವ ಕೊಂಡ ಚಕ್ರಿ ನಿ । ನ್ನನುಜೆಗಟ್ಟಿದನು ಕಪ್ಪವನು ॥
ಮೊನೆಗಾರ ನೀನೊ ನಮ್ಮರಸನೊಯೆಂದಿಷ್ಟು । ಬಿನದವ ನುಡಿದರು ಸಖರು ॥ ೭೮ ॥
ಹರುಷದೊಳೊಲಿದೆತ್ತಿ ಹರಿವಾಣವನು ರಾಯ । ಕರೆದಿತ್ತ ಮಧುವಾಣಿಗವಳು ॥
ಸಿರಿವೆಣ್ಣಿಗರುಣಪದ್ಮವನೊಯ್ದು ಸಖಿಯಂತೆ । ತೆರೆಯಾಚೆಗೊಯ್ದಳೋಜೆಯೊಳು ॥ ೭೯ ॥
ಜಯ ಜಯ ಶೋಭನ ಶೋಭನವೆಂಬ ವಾ । ಜ್ಯಯದೊಳು ಗೀತವಾದ್ಯದೊಳು ॥
ಪ್ರಿಯಸಖಿಯರು ತೊಂಡಿಲುಂಗುರ ಸೀರೆ ಬಂ । ದಿಯ ನೀರೆಗನುಗೊಳಿಸಿದರು ॥ ೮೦ ॥
ಮುತ್ತಿನ ತೊಂಡಿಲು ಮುಡಿಯೊಳೊಪ್ಪಿತು ಪದ್ಮ । ಕತ್ತಲೆಯೊಳಗಲರ್ದಂತೆ ॥
ಉತ್ತುಂಗಚಕ್ರಿಯ ಪುಣ್ಯಸಾಮರ್ಥ್ಯವ । ನೆತ್ತಿ ತೋರ್ಪಂತೆ ಭೂತಳಕೆ ॥ ೮೧ ॥
ನಾಳೆ ಚಕ್ರೇಶನೀ ಕೊರಳ ತಾವುಜ ತಳ್ತ । ತೋಳೊಳಿಂತಪ್ಪವನೆಂದು ॥
ಹೇಳುವಂತೆಸೆದುದು ತಾಲಿವೆರಸಿ ರತ್ನ । ಕೀಲಣೆಗುಣಿಕೆಯ ಬಂದಿ ॥ ೮೨ ॥
ದೊರೆಗಳೊಡೆಯನಿನ್ನು ನಿನ್ನ ಕೈವಶವಾಗಿ । ಸ್ಥಿರ ಬಾಳಲೆಂದು ಪೇಳ್ವಂತೆ ॥
ಅರಸನ ರೂಪಿನ ರತ್ನಮುದ್ರಿಕೆ ಸಣ್ಣ । ವೆರಳೊಳೊಪ್ಪಿತು ಚಂದ್ರಮುಖಿಗೆ ॥ ೮೩ ॥

ಮನ್ನಿಸಿ ತರಹೇಳಿ ಕೀರ್ತಿವೀರವ ಚಕ್ರಿ । ಕನ್ನೆಯ ಬಳಿಗಟ್ಟಿದಂತೆ ॥
ಚಿನ್ನದ ಬಹಳಮುತ್ತಿನ ಸೆರಗಿನ ಸೀರೆ । ಚೆನ್ನೆಯರರಸಿಗೊಪ್ಪಿದುದು ॥ ೮೪ ॥
ಹೇಳಲಳವೆ ಚಕ್ರಿಯಾ ಮಹಿಮೆಯ ಮುದ್ದು । ಬಾಲೆ ಮುನ್ನವೆ ಚೆನ್ನೆಯಹುದು ॥
ತಾಳಿಬಂದಿಯ ಕಟ್ಟಲೊಡನೊಂದು ಹೊಸಕಾಂತಿ । ಥಾಳಿಸಿತಿದು ಚಿತ್ರವೆನಿಸಿ ॥ ೮೫ ॥
ಶ್ರೀಸುಭದ್ರಾದೇವಿ ಭರತರಾಜನ ರಾಣಿ । ವಾಸಕೆ ತಲೆವಣಿಯಾಗಿ ॥
ಭಾಸುರಸುಖದೊಳೋಲಾಡೆಂದು ಮುತ್ತಿನ । ಸೇಸೆಯನಿಟ್ಟಳಾ ತಾಯಿ ॥ ೮೬ ॥
ನಮಿರಾಜನರಸಿಯರ್ವಿನಮಿರಾಜನ ಪೆಂಡಿ । ರಮಳಬಾಂಧವರ ಕಾಂತೆಯರು ॥
ಸುಮನದಿ ಹರಸಿ ಸೇಸೆಯನಿಟ್ಟರೊಡನೆ ಸಂ । ಭ್ರಮವಾದ್ಯರವ ಸುಮ್ಮನಾಯ್ತು ॥ ೮೭ ॥
ತಾಂಬೂಲವಸ್ತ್ರಭೂಷಣವಿತ್ತು ನಮಿರಾಜ । ತುಂಬಿದ್ದ ಜನವ ಬೀಳ್ಕೊಟ್ಟಾ ॥
ಮುಂಬಾಗಿಲೆಡೆ ಮುಟ್ಟ ಹೋಗಿ ತಿರುಗಿ ಬಂದ । ನೇಂ ಬಲ್ಮೆಕಾರನೊ ಮಂತ್ರಿ ॥ ೮೮ ॥
ಸ್ವಾಮಿ ಕಳುಹಿದನತ್ತ್ಯಾಜಿಗೆ ಮೈದುನ । ಗೀಗ ಮನೆವೆಂಗಳಿಗೆಂದು ॥
ಕ್ಷೌಮವಸ್ತ್ರಾಭರಣವ ಬೇಗ ತರಿಸಿ ತಾ । ನಾ ಮನೆಯನು ತುಂಬಿಬಿಟ್ಟಾ ॥ ೮೯ ॥
ನಿಲ್ಲುನಿಲ್ಲೆನುತ ಬಪ್ಪರಸನ ಕಾಣುತ । ನಿಲ್ಲದೆ ಬೇಗ ಸಾಗಿದನು ॥
ಒಲ್ಲೆಯೆಂದೆನಬಾರದವರು ಕೈಕೊಂಡರ । ದಲ್ಲವೆಂದುತ್ಸಾಹದಂಗಾ ॥ ೯೦ ॥

ಹರುಷದೊಳಗೆ ಹೋದುದಾ ರಾತ್ರಿ ಬೆಳಗಾಗೆ । ಕರೆದೆಲ್ಲರ್ಗೌತಣವಮಾಡಿ ॥
ಪರಮಬಂಧುಗಳು ನೀವಿನ್ನೊಂದು ಕಾರ್ಯಕೆ । ನೆರವಾಗಬೇಕೆನಗೆಂದಾ ॥ ೯೧ ॥
ನಡೆಯಲಿ ಮುಂದೆ ಚಕ್ರಿಯ ಮಂತ್ರಿ ನಾವು । ಹಿಂಗಡೆಯೊಳೊಯ್ಯನೆ ಪೋಪವೆಂದು ॥
ಒಡನೆ ನೀವಿರಬೇಕು ಹೆಣ್ಣಕೊಟ್ಟವರೆಲ್ಲ । ರೊಡಗೂಡಿ ತೆರಳುವವೆಂದಾ ॥ ೯೨ ॥
ಪಕ್ಕಗೊಂಡೆಲ್ಲರೊಪ್ಪಿದರು ಚಕ್ರಿಯ ಮಂತ್ರಿ । ದಕ್ಕಿತು ಛಲ ನಿನಗೆಂದಾ ॥
ಮಿಕ್ಕರೆಲ್ಲರಿಗೆ ಮನ್ನಣೆಯಿತ್ತು ವ್ಯಂತರ । ರಿಕ್ಕೆಗೆ ಹೋದನಾ ಮಂತ್ರಿ ॥ ೯೩ ॥
ಹಿಮವಂತದೇವಗೆ ವಿಜಯಾರ್ಧದೇವಗು । ತ್ತಮಮಾಗಧಾದಿಸರ್ವರಿಗೆ ॥
ಮಮತೆಯ ನುಡಿದು ಮನ್ನಣೆಯಿತ್ತು ಬಂದನಾ । ನಮಿರಾಜನೇಂ ವಿಚಕ್ಷಣನೊ ॥ ೯೪ ॥
ಒಳಗಣ ಚಾವಡಿಯಲ್ಲಿ ಕುಳಿತು ಕೂಡೆ । ಕೆಳೆಯರ ಮಂತ್ರಿಯ ಕರೆಸಿ ॥
ಗೆಲವಾದುದಲ್ತೆ ನಿಮ್ಮರಸನ ಕಾರ್ಯವೆಂ । ದೊಳುನುಡಿನುಡಿದನು ನಗುತ ॥ ೯೫ ॥
ಇಳೆಗೊಡೆಯನ ದೊಡ್ಡ ದೊರೆಗಳ ನಿನ್ನ ಬಾ । ಗಿಲಿಗೆ ಬರಿಸಿಕೊಂಡ ಮೇಲೆ ॥
ಗೆಲವು ನಿನ್ನದೊ ನಮ್ಮ ನೃಪನದೊಯೆಂದವ । ರೆಳಸಿ ನುಡಿದರಾತನೊಡನೆ ॥ ೯೬ ॥
ಅದು ಸಾಕು ನಾಳೆ ವಿನಮಿ ಬಂದು ಚಕ್ರಿಗೆ । ಮದುವೆಯ ಮಾಡಿ ಕೊಡುವನು ॥
ಪದುಳದಿ ನೀವಿಂದು ತೆರಳುವುದೆಂದಿಷ್ಟು । ಗದಕಿನ ಮಾತನಾಡಿದನು ॥ ೯೭ ॥

ಹದಿನಾರುದಿನ ನೀನು ಹೇಳಿದಂದದೊಳಿದ್ದು । ತುದಿಗೆ ನೀನಿಲ್ಲದೆಯ್ದುವೆವೆ ॥
ಮದುವೆ ನೀನಿಲ್ಲದಿದ್ದರೆ ರಮ್ಯವಹುದೆ ನೀ । ನದ ನುಡಿವರೆಯೆಂದರವರು ॥ ೯೮ ।
ನಾನೆಂತು ಬರಲಿ ನಿಮ್ಮರಸನ್ನ ಕಾಣುತ । ಬಾ ನಮಿನಾವಾಯೆಂದೆಂಬಾ ॥
ಏನಿಕ್ಕೆ ನಮಿರಾಜಯೆಂಬ ನಾಮುವ ಬಿಟ್ಟು । ತಾನಂತು ಕರೆವುದು ಗುಣವೆ ॥ ೯೯ ॥
ರಾಜವಂಶೋದ್ಭವರನು ರಾಜರೆನ್ನದೆ । ಪೂಜಿತಗೆಡಿಸಿ ಪೇಳ್ವಾಗ ॥
ರಾಜತ್ವಕದು ಭಂಗವಲ್ಲವೆ ಬಾರೆನೆಂ । ದಾ ಜಾಣ ತೋರಿ ನುಡಿದನು ॥ ೧೦೦ ॥
ಷಡುಖಂಡಪತಿಗೆ ಕಾಣಿಕೆಯಿಕ್ಕಿ ಕೈಮುಗಿ । ದಡರಿ ಕುಳ್ಳಿರುವೆನು ಬೇರೆ ॥
ನುಡಿಗಳೊಳ್ನೀವುತಾವೆನಬೇಕು ರಾಜನೆಂ । ದೊಡರಿಸಬೇಕೆನಗೆಂದಾ ॥ ೧೦೧ ॥
ಮುನ್ನಾರು ಕರೆಸಿಕೊಂಡವರಿಲ್ಲ ಕರೆಸುವೆ । ವಿನ್ನು ನಿನ್ನನು ರಾಜನೆಂದು ॥
ಬನ್ನಿ ಕುಳ್ಳಿರಿಯೆಂಬ ಪೆಂಡಿರ ಜನಕರ । ನಿನ್ನಂತೇನೇನೆಂದರವರು ॥ ೧೦೨ ॥
ನೀವದ ಬಿಡಿಸಬೇಡನೆಯೆಂದ ನಮಿರಾಜ । ನಾವಳುಕುವೆವು ಕೇಳ್ನಿನ್ನ
ಭಾವ ದೇವೇಂದ್ರನ ನಡೆಯ ನಗುವನು ಬೇ । ಡಾ ವಾಕ್ಯ ನಿನಗೆಂದರೊಡನೆ ॥ ೧೦೩ ॥
ನರಪತಿ ತಾನಾಗಿ ಸುರಪನ ನಗುವನೆಂ । ದೊರೆದುಬ್ಬಿಸುವಿರಿ ಲೇಸಾದರೆ ॥
ಸುರಪ ತದ್ಭವವೋಕ್ಷಗಾಮಿಯೆ ಅವನಿಗೆ । ಗರುವಿಕೆಯಿಲ್ಲ ಕೇಳದನು ॥ ೧೦೪ ॥
ಅಂಭೋಧಿ ತಾನೆಣೆಯುಲ್ಲವೆಮ್ಮರಸನ । ಗಂಭೀರವೆಂಬೊಂದು ಗುಣಕೆ ॥
ಜಂಭಾರಿಯನು ನಗುವನು ಜಿನನಿದಿರಲ್ಲಿ । ಜೃಂಭಿಸಿ ನಟಿಸುವನೆಂದು ॥ ೧೦೫ ॥
ತಾಂ ತೆಪ್ಪಗರ್ಚಿಸಿ ನುತಿಸಲಿ ನಟ್ಟುವ । ರಂತುಟು ಕುಣಿದಾಡಲೇಕೆ ॥
ಇಂತಲ್ಲದಾಗವೆ ಜಿನಭಕ್ತಿ ಸರ್ವಾಂಗ । ಭ್ರಾಂತಿಯ ತೋರಲೇಕೆಂಬಾ ॥ ೧೦೬ ॥
ನೀರೆನೆರಸಿ ಜಿನಸಭೆಗಿಂದ್ರನಾನೆಯ । ನೇರಿ ಬಪ್ಪಾಗ ಸರ್ವರಿಗೆ ॥
ತೋರಬೇಕೆ ತನ್ನ ನಲ್ಲಳ ಲಜ್ಜೆಯ । ಮಾರಬೇಕೆಯೆಂದು ನಗುವಾ ॥ ೧೦೭ ॥
ಪೆಂಡತಿ ಮರೆಸಿ ವಿಮಾನದೊಳೆಯ್ತಂದು । ಕಂಡರೇನಾಗದೆ ಜಿನನಾ ॥
ಪುಂಡಪೋಕರು ದಂಡುಪೋಪಾಗ ನಲ್ಲಳ । ಕೊಂಡೆಯ್ದುವಂದವೇಕೆಂಬಾ ॥ ೧೦೮ ॥
ಆತನ ಗಂಭೀರಕಾತನೆ ಸಾಟಿ ಸಂ । ಪ್ರೀತಿಯೊಳ್ನಮಿರಾಜಯೆಂಬ ॥
ಮಾತು ಸಾಲದೆ ನೀವುತಾವೆಂದು ನುಡಿಯ ನೀ । ನೋತು ಬಾ ಸಾಕೆಂದರವರು ॥ ೧೦೯ ॥
ಒಪ್ಪಿದನದಕೆಂದು ನೀವು ತೆರಳಿ ನಾಳೆ । ಬಪ್ಪೆವು ನಾವೆಂದನಕೆ ॥
ಕುಪ್ಪಸ ಹಿಸಿವಂತೆ ಮೈಯುಬ್ಬಿ ಕೈಮುಗಿ । ದೊಪ್ಪದಿ ಸಾಗಿದರವರು ॥ ೧೧೦ ॥

ನಂಬುಗೆವಂತರ್ಗೆ ಭಂಡಾರವತಿಗೆ ನಿ । ತಂಬಿನೀಜನಕೆ ಮನ್ನಣೆಯಾ ॥
ಅಂಬಿಕೆ ಕೈಮುಟ್ಟಿ ಕೊಡಲೆಂದು ಕಳುಹಿದ । ರಂಬಿನೊಳಣ್ಣತಮ್ಮದಿರು ॥ ೧೧೧ ॥

ಸುತರಿಬ್ಬರಟ್ಟಿದ ವಸ್ತುವ ಕೊಟ್ಟಿತ್ತ । ಅತುಳವಸ್ತುವ ಬೇರೆ ತಾಯಿ ॥
ನುತಸುಭಧ್ರಾದೇವಿಯನು ನೋಡಿ ಭಂಡಾರ । ವತಿ ನುಡಿದಳು ಕೈಯ ಮುಗಿದು ॥ ೧೧೨ ॥
ಏಳಿ ದೇವಿಯರೆಯೆಮ್ಮೂರಿಗೆ ಪೋಪ ನೃ । ಪಾಲರೆಲ್ಲರ ಕೂಡಿ ಮಂತ್ರಿ ॥
ವೇಳೆಯು ಕಾದು ಪೆರ್ಬಾಗಿಲೆಡೆಯೊಳು ನಿಂ । ದಾಲಿಸುತಿಹನೆಂದಳವಳು ॥ ೧೧೩ ॥
ಪೊಡವಡು ತಾಯಿಗಷ್ಟಕೆ ತಂದು ಪಲ್ಲಕ್ಕಿ । ಹಿಡಿವುದು ಚಕ್ರಿ ನಿಮ್ಮತ್ತ ॥
ಕಡುಗಿ ಹಾದಿಯ ನೋಡುತಿಹನತಿಜೋಲಿ ಬೇ । ಡೊಡತಿಯೆಂದಳು ನಲ್ಮೆಕಾತಿ ॥ ೧೧೪ ॥
ನಗುತಾಕೆ ತಲೆಗುಸಿದಳು ಕೂಡೆ ಬಂದು ನಂ । ಬುಗೆವಂತರೊಲ್ದು ಕೈಮುಗಿದು ॥
ಮಿಗೆಜೋಲಿಯೇಕೆಂದು ಬಂದಾರು ಸ್ವಾಮಿ ಊ । ಳಿಗದವರಿಗೆಯೆಂದರೊಸೆದು ॥ ೧೧೫ ॥
ಅಮ್ಮ ಚಿತ್ತೈಸಿ ಲೋಗರ ಮನೆಯೇಕಿನ್ನು । ನಮ್ಮ ಮನೆಗೆ ನಾವು ಪೋಪಾ ॥
ನಿಮ್ಮ ಮೇಲರಸ ಕೋಪಿಸನೇಕೆ ತಡೆದಿರೆಂ । ದೆಮ್ಮ ಕೋಪಿಪನೆಂದರೊಡನೆ ॥ ೧೧೬ ॥
ನಾಳೆ ಬಂದರೆ ನಾಡಿದಹುದು ಮದುವೆಯದ । ತಾಳಲಾಪನೆ ನಮ್ಮ ಸ್ವಾಮಿ ॥
ಏಳು ನೀನಿಂದೆ ನಮ್ಮೊಡನೆಂದಳೊರ್ವಳಾ । ಚಾಳೆಯೆಲ್ಲರು ಗಹಗಹಿಸೆ ॥ ೧೧೭ ॥
ನಾಳೆ ನೀವೆಯ್ದಿ ನಿಮ್ಮರಸಗಿಂದೇನೆಂದು । ಪೇಳುವೆವದ ಪೇಳಿಯೆಂದು ॥
ಕೇಳಿದಳೊರ್ವಳದಕೂ ನಗುತಿದ್ದಳಾ । ಥಾಳದುಂಗುರವ ನಿಟ್ಟಿಸುತ ॥ ೧೧೮ ॥
ಉಂಗುರದೊಳಗಿದ್ದ ರೂಪು ನಿಮಗೆ ಸುಖ । ಸಂಗವ ಮಾಳ್ಪುದೆ ನನ್ನ ।
ಸಂಗಡ ಬನ್ನಿ ಸ್ವಾಮಿಯ ತೋರ್ಪೆನೆಂದೊರ್ವ । ಳಂಗಜರಸಿಕೆ ನುಡಿದಳು ॥ ೧೧೯ ॥
ಇಂತೊರ್ವರೊರ್ವರು ಬಿನದವ ನುಡಿದರಂ । ತಿಂತೆನದಾಲಿಸಿ ನಗುತ ॥
ಕಂತುಮಾರಾಧಿಪ ಮೋಹನದೇವಿಯೆಂ । ಬಂತಿದ್ದಳಾ ಗಾಡಿಕಾತಿ ॥ ೧೨೦ ॥
ಇನ್ನೇಕೆ ತವಕ ನಿಮ್ಮೊಡತಿ ನಿಮ್ಮೊಡೆಯನ । ಸನ್ನಿಧಿಗೆಯ್ದುವಳ್ನಾಳೆ ॥
ಖಿನ್ನವಹುದು ನಮ್ಮ ಮನೆಯೆಂದು ನುಡಿದಳಾ । ಚೆನ್ನೆಯ ತಾಯಿ ನಲ್ಮೆಯೊಳು ॥ ೧೨೧ ॥
ಮೃದುಪಾದಪದ್ಮಗಳಿವು ನಾಳೆ ಚಕ್ರಿಯ । ನೊದೆದು ಲೀಲೆಯ ಮಾಳ್ಪವೆಂದು ॥
ಪದೆದು ಹೆಂಗಳು ಕಣ್ಣಿಗೊತ್ತಿಕೊಂಡರು ವಿನೋ । ದದೊಳು ಬೀಳ್ಕೊಂಡರಾಕೆಯನು ॥ ೧೨೨ ॥
ಸಾಷ್ಟಾಂಗವೆರಗಿ ನಂಬುಗೆವಂತರೆದ್ದು ಸಂ । ತುಷ್ಟದಿ ಬೀಳ್ಕೊಂಡರೊಡನೆ ॥
ದೃಷ್ಟಿಸಿ ಜನನಿಗೆ ಕೈಮುಗಿದೆದ್ದರ । ಭೀಷ್ಟದೊಳಿದ್ದರಲ್ಲಿಂದ ॥ ೧೨೩ ॥

ಭಂಡಾರವತಿ ಮೊದಲಾದವರ್ಬರೆ ಕೂಡಿ । ಕೊಂಡು ಸಾಗಿದನತ್ತ ಮಂತ್ರಿ ॥
ಪಿಂಡಿತಾನಂದದಿ ತಾಯರಮನೆಗೆಯ್ದಿ । ಕಂಡನು ನಮಿರಾಜನತ್ತ ॥ ೧೨೪ ॥
ಕೊಡು ಕೊಡು ಭರತೇಶಗನುಜೆಯನೆಂದೊತ್ತಿ । ನುಡಿದಿರಮ್ಮಾಜಿ ನೀವಂದು ॥
ಕೊಡುವ ಮೈಸಿರಿತಪ್ಪಿ ಕೊಡಬಾರದೆಂದೆನು । ಕಡೆಗಾವುದೊಳ್ಳಿತಾಯ್ತೆಂದಾ ॥ ೧೨೫ ॥

ಸರ್ವಭೂಪಾಲರ ಬರಿಸಿಕೊಂಡುತ್ಸವ । ಪೂರ್ವಶವಾಗಿಂತು ಕೊಡದೆ ॥
ಗರ್ವಕಾತನಿಗಂಜಿ ಕೊಡುವಾಗ ಪರದರೆ । ಉರ್ವಿಯ ಕುಡಿಯರೆ ನಾವು ॥ ೧೨೬ ॥

ದೊಡ್ಡ ದೊಡ್ಡವರೆಯ್ದಲುಂಗುರುಡಿಗೆಮಾಡಿ । ದೊಡ್ಡಿತಾಗಿರೆ ಹೆಣ್ಣ ಕೊಡದೆ ॥
ಅಡ್ಡೆಯ ಹೊರೆಯಂತೆ ಕೊಂಡೆಯ್ದಿ ಕೊಡುವಾಗ । ಕಡ್ಡಾಯದೊಡವೆಯೆಯೆಂದಾ ॥ ೧೨೭ ॥

ಲೋಭವ ತೊರೆದು ದಿಬ್ಬಣಿಗರ ಹೇಮವ । ಸ್ತ್ರಾಭರಣದೊಳೊಲ್ದು ತಣಿಪಿ ॥
ಶೋಭನವಮಾಡದೆ ಚೂರ್ಣಿಕೆ ಮಾಳ್ಪಾಗ । ಲಾಭದ ಪರದರುತ್ಸವವೆ ॥ ೧೨೮ ॥

ತಾನಿತ್ತ ಬಾರದಾದನು ಬಂದರುರೆ ತನ್ನ । ಸೇನೆಯ ತಣಿಯಿಸುತಿದ್ದೆ ॥
ಭೂನಾಥರೊಳಗಗ್ರಗಣ್ಯನಲ್ಲವೆ ಸಮಾ । ಧಾನದೊಳ್ಸುಖವಿರಲೆಂದಾ ॥ ೧೨೯ ॥

ಇಷ್ಟುಸಾಲದೆಯೆಲೆ ಮಗನೆ ನೀನಾತನು । ತ್ಕೃಷ್ಟದ ರಾಜರೆಲ್ಲರಿಗೆ ॥
ತುಷ್ಟಿಮಾಡಿದೆ ಚಂದವಾದುದು ಸಂದುದೆ । ನ್ನಿಷ್ಟಾರ್ಥವೆಂದಳಾ ಜನನಿ ॥ ೧೩೦ ॥

ಇಂತು ನಾನೊಸಗೆ ಮುಂತಾಗಿ ಪೆಣ್ಗೊಡದೆಯೇ । ಕಾಂತದೊಳ್ಕೊಟ್ಟೊಡಾ ಚಕ್ರಿ ॥
ಮುಂತೆನ್ನ ತಂಗಿಯ ಹೆಚ್ಚುಗಾಣ್ಬನೆ ತನ್ನ । ಕಾಂತೆಯರೊಳು ಸರಿಗಾಣ್ಬಾ ॥ ೧೩೧ ॥

ಹಲಬರ ಬರಿಸಿಕೊಂಡೊಸಗೆಯೊಳ್ಕೊಡದಾನು । ತಲೆಹೊರೆಯಾಗಿ ಕೊಟ್ಟಾಗ ॥
ಬಳಿಕೆನ್ನ ತಂಗಿಯ ಹೆಚ್ಚುಗಾಣ್ಬನೆ ಹತ್ತ । ರೊಳಗೆ ಹನ್ನೊಂದಾಗಿ ಕಾಣ್ಬಾ ॥ ೧೩೨ ॥

ಲೆಕ್ಕವಿಲ್ಲದ ಸವತಿಯರ ನಡುವೆ ನಾಳೆ । ಹೊಕ್ಕು ಬಾಳ್ವವಳೆನ್ನ ತಂಗಿ ॥
ಕಕ್ಕಸದ ಮಾತು ಬಂದಾಗ ನಾಲಗೆ । ಸಿಕ್ಕುವಂತಿದನೆಸಗಿದೆನು ॥ ೧೩೩ ॥

ಇದ ನೀವು ನೋಡದೆ ನನ್ನಳಿಯಗೆ ಹೆಣ್ಣ । ಮದುವೆಯ ಮಾಡು ಮಾಡದಿರೆ ॥
ಸದನವ ಬಿಟ್ಟುಹೋಗುವೆನೆಂದಿರೀಗ ಸ । ಮ್ಮುದವಾಯ್ತೆಯಿಲ್ಲವೆಯೆಂದಾ ॥ ೧೩೪ ॥

ಉದ್ಭೂತವೆನೆ ನಕ್ಕಳಹುದಣ್ಣ ಹೆಣ್ಣಿನ । ಬುದ್ಧಿ ಬೂದಿಯ ಕೂಡಿತೆಂಬ ॥
ಸುದ್ದಿಯುಂಟರಿಯೆಯ ನೀನೆಮ್ಮ ವಂಶವ । ನುದ್ಧರಿಸಿದೆಯೆಂದಳೊಸೆದು ॥ ೧೩೫ ॥

ತಂಗಿಗೆ ಸರಿಯಾಯ್ತು ನನಗರ್ತಿಯಾಯ್ತು ರಾ । ಜಾಂಗಗೌರವವಾಯ್ತು ನಿನಗೆ ॥
ತುಂಗಭಾಗ್ಯದಿ ಸುಖಬಾಳೆಂದು ಹರಸುತಾ । ಲಿಂಗಿಸಿದಳು ತಾಯಿ ಮಗನಾ ॥ ೧೩೬ ॥

ಅಡಿಗಡಿಗೆರಗಿ ಬೀಳ್ಕೊಂಡು ತನ್ನರಮನೆ । ಗೊಡನೆದ್ದನಾ ನಮಿರಾಜಾ ॥
ಸಡಗರದೊಳು ಮಾತೆಯಿದ್ದಳೆಂಬೆಡೆ**ಗುಂಗು । ರುಡಿಗೆಯ ಸಂಧಿ** ಸುಗಂಧಿ ॥ ೧೩೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೩೮ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೩೯ ॥

ನಿಮಿಷಮಾತ್ರವು ದುಃಖವಿಲ್ಲದೆ ಸೌಖ್ಯಸಂ । ಭ್ರಮದೊಳೊಪ್ಪುವ ಮಹಾದೇವಾ ॥
ಅಮೃತವ ಸೂಸುತೆನ್ನೆದೆಯೊಳಗಿರು ಸುಖೋ । ತ್ತಮನೆ ಚಿದಂಬರಪುರುಷಾ ॥ ೧೪೦ ॥

ಉಂಗುರುಡಿಗೆಯ ಸಂಧಿ ಸಂಪೂರ್ಣಂ.

# ನವಿುರಾಜವಿನಯಸಂಧಿ.

ವಿವಿಧಸಿದ್ಧಿಗಳ ನೆರಹಿಕೊಂಡು ಸಂಸಿದ್ಧಿ । ಯುವತಿಯ ಹಸೆನಿಲ್ವ ನೀರಾ ॥
ಸವಿಯ ಸಾಲಿಡುವ ಸನ್ಮತಿದೋರು ಭವ್ಯಬಾಂ । ಧವನೆ ನಿರಂಜನಸಿದ್ಧಾ ॥ ೧ ॥

ಸಚಿವ ದಿನಂಪ್ರತಿ ಕಳುಹಿದೋಲೆಗಳಿಂದ । ಖಚರೇಂದ್ರ ವಾಳ್ವ ಮಂಗಲದ ॥
ರಚನೆಯನರಿದು ಮೆಚ್ಚುತ ಕಟಕದೊಳಿದ್ದ । ನುಚಿತಾರ್ಥವೋಹಿಯಾ ಚಕ್ರಿ ॥ ೨ ॥

ಬಂದಿಯೊಸಗೆಯಿರುಳಾಯ್ತಿಲ್ಲಿಗೆಯ್ತಹ । ನಿಂದೆನ್ನ ಮಂತ್ರಿಯೆಂದರಿದು ॥
ಒಂದನು ಪರರಿಗುಸುರದೆ ಗುಟ್ಟಿನೊಳಿದ್ದ । ನಂದು ಮತ್ತೊಂದಾದುದೊಸಗೆ ॥ ೩ ॥

ಬಡಗಲಾಗುದಯಕಾಲದೊಳಾಚೆ ಪೊಯ್ಯೆಂದು । ತುಡುವು ತುಡುವು ದಾಂಥಳೆಂದು ॥
ಸಡಗರದನಿಯಾಯ್ತು ಕೇತುವಿಮಾನದ । ಪಡೆ ತೋರಿತಾಕಾಶದಲ್ಲಿ ॥ ೪ ॥

ಅದು ಸಿಂಧುದೇವಗಂಗಾದೇವನವರು ಬ । ಪ್ಪುದವೆಂದು ನಲಿದು ಚಕ್ರೇಶಾ ॥
ಇದಿರಾಗಿ ಹೋಗು ಜಯಂತಾಂಕಯೆಂದಟ್ಟಿ । ಪದೆದಿರ್ದ ಪೊರಚಾವಡಿಯೊಳು ॥ ೫ ॥

ಹಲವುವಿಮಾನ ದೂರದಿ ಬರುತಿದ್ದುವು । ಕೆಲವು ವಿಮಾನದ ಪೌಜಾ ॥
ತೊಲಗಿ ಮುಂದೆಯ್ತರುತಿದ್ದುವು ವಾದ್ಯದ । ಗಲಭೆಯಿಲ್ಲದೆ ಮಹಾಭರದಿ ॥ ೬ ॥

ಇವು ನನ್ನ ಸೋದರಿಯರ ವಿಮಾನಗಳಿಂದ । ನವನೀಶನದ ಕೇಳಲೊಡನೆ ॥
ತವೆ ಪುರುಷರು ತೊಲಗಿದರು ಸೇವೆಗೆ ತಕ್ಕ । ಯುವತಿಯರೆಡೆಗೊಂಡರೊಡನೆ ॥ ೭ ॥

ತಂದು ನಂಬುಗೆವಂತರೊಡನೆ ಕಟ್ಟಿದರಾಗ । ಮುಂದೊಂದು ತೆರೆಯ ಕೋಟೆಯನು ॥
ಬಂದೊಳವೊಕ್ಕು ವಿಮಾನದಿಂದಿಳಿದರಾ । ನಂದದಿಂದಮರಕಾಂತೆಯರು ॥ ೮ ॥

ಹಲವುಮಂಗಲವಸ್ತುಗಳ ಮಧ್ಯದೊಳಗಿರ್ಪ । ಕಲಸಕನ್ನಡಿಗಳೆಂಬಂತೆ ॥
ಸಲೆ ಸಿಂಧುದೇವಿಗಂಗಾದೇವಿಯರು ಸುರ । ಲಲನೆಯರೆಡೆಯೊಳೊಪ್ಪಿದರು ॥ ೯ ॥

ಅಣ್ಣನ ಕಂಡರ್ಶಿವಡುತ ಬಂದರು ಕಣ್ಣ । ವೆಣ್ಣುಗಳ್ವೆರಸಿ ತಂಗಿಯರು ॥
ಅಣ್ಣನಿರ್ದನು ತಂಗಿಯರ ನೋಡಿ ನಲಿವುತ । ಬಣ್ಣವಡೆದ ಗದ್ದುಗೆಯೊಳು ॥ ೧೦ ॥

ಕೆಳದಿಯರಿಂದ ನಿವಾಳಿಯನಿಡಿಸಿದ । ರೆಳಸಿ ತಾವಿರ್ವರು ಸಾರ್ದು ॥
ತಳುವಿಲ್ಲದಾಗಲಿ ವೈವಾಹವೆಂದೊಲ್ದು । ತಳಿದರು ಮುತ್ತಿನಕ್ಷತೆಯಾ ॥ ೧೧ ॥

ಮಂಗಲಾಸನಗಳ ಕೊಡಿಸಿ ಕುಳ್ಳಿರಿರಮ್ಮ । ತಂಗಿಯರಿರಯೆಂದ ನೃಪತಿ ॥
ಮಂಗಲಾಂಗಿನಿಯರು ಕುಳಿತರು ಹೊಸತೊಂದು । ಮಂಗಲ ಬಂದವೊಲಾಯ್ತು ॥ ೧೨ ॥

ಒಸಗೆಗೊದಗಿದರೆನ್ನನುಜೆಯರೊಲವ ನಿ । ಟ್ಟಿಸಿದೆಯ ಪಂಡಿತೆಯೆಂದಾ ॥
ಹಸೆನಿಲ್ವ ಹಿರಿಯಣ್ಣನೆಡೆಗೆಯ್ದದವರು ತಾ । ಮಸವ ಮಾಳ್ಪರೆಯೆಂದಳವಳು ॥ ೧೩ ॥

ತವರೂರ ವಿಭವಕೆ ಕಿವಿಗೊಟ್ಟ ಹೆಂಗಳು । ಲವಲವಿಸುವರಲ್ತೆ ಸ್ವಾಮಿ ॥
ತವಕದೊಳೆಯ್ದದೆ ತಡೆವರೆ ನಿನ್ನ ಗೌ । ರವದ ಮಂಗಲಕೆಂದಳವಳು ॥ ೧೪ ॥

ಹೆಣ್ಣೊಡಹುಟ್ಟಿಲ್ಲದವರ ಮದುವೆಯದು । ಬಣ್ಣವಾಗಿಹುದೆ ಹೇಳೆಂದಾ ॥
ಬಣ್ಣವಾಗಿಹುದು ಬೆಳ್ಳಿಲೆಯಿಲ್ಲದವರಿಗೆ । ಸಣ್ಣೆಲೆಯಂತೆಂದಳವಳು ॥ ೧೫ ॥

ಸೋದರಿಯರು ಹೊರಗಾದ ಮದುವೆಯದು । ಬೂದಿಯೋಕುಳಿಯಾಡಿದಂತೆ ॥
ಸಾದಿಲ್ಲದವರು ದೂಪದ ತಿಲಕವನಿಟ್ಟ । ಗಾದೆಯಂತೆಂದು ನುಡಿದಳು ॥ ೧೬ ॥

ನಗುತೊಂದುಸೀರೆಯನಿಟ್ಟನವಳ ಮೇಲೆ । ಮೊಗನೋಡಿ ಮತ್ತೆ ತಂಗಿಯರ ।
ಮುಗಿಲ ಸೋಂಕಿನೊಳೆಯ್ದಿ ಬಳಲಿದಿರಕ್ಕ ಗಾ । ಳಿಗೆ ಕುರುಳ್ಕೆದರಿದುವೆಂದಾ ॥ ೧೭ ॥

ಬಳಲಿಕೆಯಿಲ್ಲ ಮುಗಣ್ಣಾಜಿ ಸೆನ್ನಯ । ನಿಳಯಕಿನ್ನೆಯ್ದಿಬಹಾಗ ॥
ತೆಳುಗಾಳಿಯಲ್ಲದೆ ಬಿರುಗಾಳಿಯಿಲ್ಲ ನಿ । ರ್ಮಲದೊಳೆಯ್ದಿದೆವೆಂದರವರು ॥ ೧೮ ॥

ಅಂತರಿಕ್ಷದೊಳಾವು ಬಪ್ಪಾಗಲಲ್ಲಿಯ । ವ್ಯಂತರಸತಿಯರು ಕಂಡು ॥
ನೋಂತವರಾರು ನಿಮ್ಮಂತೆಂದು ನಮ್ಮನೋ । ರಂತೆ ಕೀರ್ತಿಪರು ನಿನ್ನಾಣೆ ॥ ೧೯ ॥

ಭರತರಾಜನ ತಂಗಿಯರು ನೀವು ನಮ್ಮೊಳು । ಕರುಣವ ಬಿಡದಿರಿಯೆಂದು ॥
ಕರವ ಮುಗಿವರಣ್ಣ ನಿನ್ನಾಣೆ ನಾವು ಸೈ । ತಿರಿಸಿ ಬಂದೆವು ವಿನಯದೊಳು ॥ ೨೦ ॥

ಹಲಬರೆಮ್ಮೊತ್ತಿಗೆ ಬಂದು ಹೋದರು ಮುಂದೆ । ಕೆಲಬರು ದೂರದೊಳ್ನಿಂದು ॥
ತಲೆಯೆರಗಿದರು ಸುಮ್ಮನೆ ಸಾಗಿ ಹೋದರು । ಕುಲಹೀನನಾರಿಯರಂತೆ ॥ ೨೧ ॥

ಇವರೇಕೆ ಸುಮ್ಮನೆಯ್ದಿದರೆಂದು ನಾವು ನ । ಮ್ಮವಧಿಯೊಳಾರಯ್ಯುವಾಗ ॥
ಅವರ ಗಂಡರ ಹಲ್ಲ ನಿಮ್ಮ ಬಂಟರು ಕುಟ್ಟಿ । ದವಲಂಬವೆನೆ ನಕ್ಕನೊಡನೆ ॥ ೨೨ ॥

ಬಲ್ಲಿದನಂಕವಮಾಲೆಗೆ ತಡೆಯಿಡಲೇಕೆ । ಹಲ್ಲ ಹೋಗಾಡಲದೇಕೆ ॥
ಖುಲ್ಲರ ನಗುತೆಯ್ದಿ ಬಂದೆವೆಂದಣ್ಣನ । ಗೆಲ್ಲಕೆ ಬೇಗಿ ನುಡಿದರು ॥ ೨೩ ॥

ಒಳಗಣಿಂದಷ್ಟರೊಳರಸಿಯರಟ್ಟಿದ । ಕೆಳದಿಯರೆಯ್ದಿ ಸಂಭ್ರಮದಿ ॥
ಘಳಿಲನೇಳೇಳಿಯೆಂದೆಬ್ಬಿಸೆ ದೇವಿಯ । ರೊಳಹೊಕ್ಕರಣ್ಣನರ್ತಿಸಲು ॥ ೨೪ ॥

ಅಂತವರತ್ತೆಯ್ದೆ ತೆರೆಕೋಟೆ ಹೋಯ್ತು ಜ । ಯಂತರಾಜನು ಬಳಿಕಿತ್ತ ॥
ಸಂತಸದಿಂದಿದಿರ್ಗೊಂಡನು ತಮ್ಮ ಭೂ । ಕಾಂತನಗ್ಗಳದ ಮೈದುನರಾ ॥ ೨೫ ॥

ಸಡಗರಗೊಂಡು ಮದುವೆಗೆಂದು ಕಟಕದ । ಕಡೆಮುಟ್ಟ ಸಿಂಗರಿಸಿದ್ದ ॥
ಕಡೆಕಟ್ಟ ನೋಡುತ ಬಂದು ಮೈದುನರು ಪೆ । ರ್ಪಡೆ*ಗೂಡಿ ಭೂಮಿಗಿಳಿದರು ॥ ೨೬ ॥

ಮಣಿಮಾಡ ಕುರುಜು ಪತಾಕೆ ವಿಚಿತ್ರತೋ । ರಣಗಳ ನುಗುಳುತೆಯ್ತಂದು ॥
ಮಣಿಯ ಕಾಣಿಕೆಗೊಟ್ಟು ಕೈಮುಗಿದರು ಗುಣ । ಮಣಿಗಳು ನೃಪಶಿರೋಮಣಿಗೆ ॥ ೨೭ ॥

ಪಟ್ಟಗದ್ದುಗೆಗಳ ಕೊಡಿಸಿ ಕುಳ್ಳಿರಲರ್ತಿ । ವಟ್ಟು ಚಕ್ರೇಶನೊತ್ತಿನೊಳು ॥
ನಿಟ್ಟಿಸಿ ಕೈಮುಗಿದೊಡನೆ ಭರಾಭರಿ । ಗೊಟ್ಟು ನಿಂದುದು ಸುರಸೇನೆ ॥ ೨೮ ॥

ಇವರೂರ್ಗೆ ಹೋದಾಗ ತೋರಣಗುಡಿಗಳ । ನವಗಿವರ್ಪಿರಿದೆಸಗಿದರು ॥
ಅವರು ಬಪ್ಪಾಗಂತುಟೆಸಗೆಂದೆನಂತುಟಾ । ದುವೆ ಜಯಂತಾಂಕ ಪೇಳೆಂದಾ ॥ ೨೯ ॥

ಇವರೆರಳ್ಳೂರುಗಾವುದವ ಸಿಂಗರಿಸಲೊ । ಪ್ಪುವ ನಾಲ್ವತ್ತೆಂಟುಗಾವುದವಾ ॥
ದಿವಿಜಪುರವ ಮಾಡಿದೆನು ಸ್ವಾಮಿ ನೀನೇ ನೋ । ಡವಧರಿಸದಕೊ ಮುಂದೆಂದಾ ॥ ೩೦ ॥

ನಗುತ ಭೂವರ ನಿಳ್ಕಿ ನೋಡಿ ಚೆನ್ನಾಯ್ತು ಬೀ । ಯಗರು ಮಾಡಿದ ಮುಯ್ಗೆ ಮುಯ್ಯಾ ॥
ಮಿಗಿಲೆನೆ ಕಾಣಿಸಬೇಕು ಚೆನ್ನಾಯ್ತೆಂದ । ಮುಗುಳ್ನಗೆ ನಗಲು ಮೈದುನರು ॥ ೩೧ ॥

ಅಂದು ದೇವರಿಗೆ ನಾವೊಡರಿಸಿತಿಲ್ಲಮ್ಮ । ಮಂದಿರದೊಳಗೆ ಬಾಳ್ವವರು ॥
ಸಂದಣಿಗೊಂಡೆಸಗಿದರು ನವಗಿದೇತ । ಕೆಂದರು ನಗುತ ಮತ್ತವರು ॥ ೩೨ ॥

ನಿಮ್ಮ ಮನೆಯೊಳು ಬಾಳ್ವವರಂದು ರಚಿಸಿದ । ರೆಮ್ಮ ಮನೆಯೊಳು ಬಾಳ್ವವರು ॥
ಸುಮ್ಮನಿಪ್ಪರೆ ಇಂದು ರಚಿಸಿದರೆಂದನು । ಸುಮ್ಮಾನ ಸೂಸೆ ಚಕ್ರೇಶಾ ॥ ೩೩ ॥

ಸರಸವನಾಡಿ ಬಳಿಕ ನೀವು ಬಂದುದು । ಸಿರಿಗೆ ಸಿಂಗರವಾದುದೆಮಗೆ ॥
ಸುರರಿಲ್ಲಿ ರಚಿಸಿದ ಗೃಹಗಳಿಗೊಯ್ಯನೆ । ತೆರಳಿ ವಿಶ್ರಮಿಸಿರಿನ್ನೆಂದಾ ॥ ೩೪ ॥

ದೇವರ್ಗೆ ಕಡಮೆಯಿಲ್ಲಾದರೇನೆಮ್ಮಿಷ್ಟ । ಭಾವವ ಸಲಿಸಬೇಕೆಂದು ॥
ವೈವಾಹದೊಳಗಿವ ತೊಡಬೇಕೆನುತ ಭೂಷ । ಣಾವಳಿಗಳ ಕೊಟ್ಟರೊಸೆದು ॥ ೩೫ ॥

ದಿವ್ಯವಸ್ತ್ರವ ದಿವ್ಯಭೂಷಣಗಳ ಗಂಧ । ದ್ರವ್ಯವ ಹೊರೆಹೊರೆಗೊಡಲು ॥
ಕಾವ್ಯಕರ್ಣಾವತಂಸನು ಕೈಯಕೊಂಡನು । ನವ್ಯಸಂಪ್ರೀತಿಪೂರ್ವಕದಿ ॥ ೩೬ ॥

ಇನ್ನೆಯ್ದಿ ನಿಮ್ಮರಮನೆಗೆಂದರವರು ಪ್ರ । ಸನ್ನದೊಳೆಯ್ದಿದರೊಡನೆ ॥
ಉನ್ನತವಸ್ತುಗಳುಲುಪೆಯ ಕಳುಹಿದ । ತನ್ನ ಮೈದುನರಿಗಾ ಕ್ಷಣವೆ ॥ ೩೭ ॥

ಸುರಸೇನೆಯನು ಜಯಂತಾಂಕ ನೀನರಿದು ಸ । ತ್ಕರಿಪುದೆಂದೊಡನೆ ಬೀಳ್ಕೊಟ್ಟಾ ॥
ಅರಮನೆಗೆದ್ದನು ಪಾದವೆಚ್ಚರಿಕೆ ಪೈ । ಸರ ಪರಾಕವಧಾನವೆನಲು ॥ ೩೮ ॥

---

* ನೆರಸಿಳಿದರು ಧರೆಗೆ ॥

ರಾಣಿಯರೆಡೆಯೊಳಿರ್ದನುಜೆಯರನು ರಾಯ । ಕಾಣುತ ಹೊತ್ತಾದುದಕ್ಕಾ ॥
ಮಾಣದಿನ್ನೆಯ್ದಿ ನಿಮ್ಮರಮನೆಗೆಂದನು । ರಾಣಿಯರದಕೊಯ್ಯನೊಪ್ಪೆ ॥ ೩೯ ॥
ಮಂಗಲಾಭರಣವ ಮುಂದಿರಿಸಿದರಿವು । ಮಂಗಲಾರ್ಥಕೆ ಸಲಲೆಂದು ॥
ಅಂಗನೆಯರು ನೀವು ಬಂದವೋಲುಪಚಾರ । ದಂಗ ಬೇರೇಕವ್ವಯೆಂದಾ ॥ ೪೦ ॥
ಮುತ್ತೈದೆಯರು ಹರಸಿತ್ತುದಿರಲಿ ನನ । ಗುತ್ತಮವೆಂದು ಕೈಕೊಂಡು ॥
ಹೊತ್ತಾದುದಿನ್ನೆಯ್ದಿ ನಿಮ್ಮರಮನೆಗೆಂದ । ರತ್ತಲೆಯ್ದಿದರವರೊಡನೆ ॥ ೪೧ ॥
ಅನ್ನಪಾನವ ಕೊಂಬ ತಂಗಿಯರಾದರೆ । ತನ್ನ ಮಂದಿರದೊಳೆ ತಡೆವಾ ॥
ಇನ್ನೇನ ಮಾಡಬಹುದು ಸುರಸತಿಯರ । ಭಿನ್ನಗೃಹಕೆ ಕಳುಹಿದನು ॥ ೪೨ ॥
ಕುಸುಮಸುಗಂಧವಸ್ತ್ರಾಭರಣಂಗಳ । ಮುಸಕದಿ ಕಳುಹಿದನೊಡನೆ ॥
ಒಸೆದು ರಾಣಿಯರೆಲ್ಲ ತಮತಮಗುಲುಪೆಯ । ನಸದಳವೆನೆ ಕಳುಹಿದರು ॥ ೪೩ ॥

ಹಗಲು ಸಂತಸದಲ್ಲಿ ಸಾಗಿತು ರಾತ್ರಿಗೆ । ಪ್ರಗತವಾದ್ಯದ ಘೋಷಣದೊಳು ॥
ನಗೆಯ ಸೂಸುತ ಸರ್ವರೊಡಗೂಡಿ ಬಂದು ಕೈ । ಮುಗಿದನು ಮಂತ್ರಿ ಭೂವರಗೆ ॥ ೪೪ ॥
ಕೆಳೆಯರು ವ್ಯಂತರಾಮರರೆಲ್ಲ ಬಂದಿರ್ದ । ರುಳಿದವರೊಳಗೆ ನೋಳ್ಪಾಗ ॥
ಕೆಲಬರಿದ್ದರು ಕೆಲರಿಲ್ಲದಿದ್ದರು ರಾಯ । ನೊಲಿದು ಕೇಳಿದನು ಮಂತ್ರಿಯನು ॥ ೪೫ ॥
ದಕ್ಷನಲ್ಲವೆ ನಮಿರಾಜನು ಪೆಣ್ಣಿನ । ಪಕ್ಷದ ನೃಪರನೆಲ್ಲರನು ॥
ದಾಕ್ಷಿಣ್ಯವಿನಯದೊಳಗೆ ತಡೆಗೊಂಡನೆಂ । ದಾ ಕ್ಷಿತಿಪಗೆ ಮಂತ್ರಿ ನುಡಿದಾ ॥ ೪೬ ॥
ಜೋಲಿಮಾಡಿದನಿಷ್ಟು ದಿನವಿನ್ನು ತಡವಿಲ್ಲ । ನಾಳೆ ಬಹರು ಸ್ವಾಮಿಯೆಂದಾ ॥
ಓಲೆಯೊಳ್ಮನ್ನಡಿಗಡಿಗೆಲ್ಲ ಕಾರ್ಯವ । ಹೇಳಿದ್ದನಿನ್ನೆಂಬುದೇನು ॥ ೪೭ ॥
ಬಾ ಮಾಗಧಾಂಕ ಪ್ರಭಾಸಾಂಕ ಹಿಮವಂತ । ನಾವು ಕೇಳ್ವಿಜಯಾರ್ಧನಾವಾ ॥
ಸ್ತೋಮವ್ಯಂತರರೆಲ್ಲ ಬಳಲಿದಿರ್ಪೆ ನೀವು । ಕ್ಷೇಮಕಾರಿಗಳಲಾಯೆಂದಾ ॥ ೪೮ ॥
ಬಳಲಿದ್ದೈ ಮೇಘೇಶ್ವರಾಂಕ ಕೇಳ್ವಿಜಯಾಂಕ । ಲಲಿತವಂಶದ ರಾಜಸುತರು ॥
ಬಳಲಿದಿರವರಿವರೆನಲೇಕೆ ಸರ್ವರೆಂ । ದೊಳುನುಡಿದೋರಿ ಮನ್ನಿಸಿದಾ ॥ ೪೯ ॥
ನುಡಿಯೊಳೆ ತಣಿದರೆಲ್ಲರು ಮತ್ತೆ ಸರ್ವರಿ । ಗುಡುಗೊರೆಯಿತ್ತು ಬೀಳ್ಕೊಟ್ಟಾ ॥
ಹಿಡಿ ಮಂತ್ರಿ ನೀನುಡುಗೊರೆಯನೆಂದನು ಸ್ವಾಮಿ । ತಡವುಂಟೆನಿಸು ಸೈರಿಸೆಂದಾ ॥ ೫೦ ॥
ಮಿತ್ರರು ತಾವು ಯೋಚಿಸಿಕೊಂಡು ಸಾಷ್ಟಾಂಗ । ಮಾತ್ರದೊಳ್ದೊರೆಗೆರಗಿದರು ॥
ಧಾತ್ರೀಶ ನಮ್ಮ ಬಿನ್ನಹವ ಪಾಲಿಪುದೆಂದು । ಧಾತ್ರಿಯೊಳೆರಗಿದರವರು ॥ ೫೧ ॥
ಏನಿವರೆಣಿಸಿದ ಕಾರ್ಯವೆಂದೆದೆಯೊಳು । ಜಾನಿಸಿದನು ತೋರದಾಯ್ತು ॥
ಜ್ಞಾನಿಗಳಿವರಲ್ಲದುದ ಪೇಳರೆಂದದಿ । ನ್ನೇನು ಕೇಳ್ವೆನು ಪೇಳಿರೆಂದಾ ॥ ೫೨ ॥

ಎಲ್ಲರೆದ್ದರು ಮಂತ್ರಿ ಚಕ್ರಿಯ ಸಾರ್ದೊಂದು । ಸೊಲ್ಲಿನ ತೇಜವಂತದನು ॥
ಸಲ್ಲದೆಂಥೆನಬೇಡ ನಮಿರಾಜನೆಂದು ನೀ । ನೊಲ್ಲಗೆ ಕರೆಯಬೇಕೆಂದಾ ॥ ೫೩ ॥

ಬಲುಮಾನಿಯವನು ನಿನ್ನೊತ್ತಿಗೆ ಬಹುದಕೆ । ಷ್ಟಳುಕುತಿರ್ದನು ನಾವು ಪೇಳ್ದು ॥
ಕಲಿಮಾಡಿ ಬಂದೆವು ರಾಜಾಂಕ ನಿನ್ನ ಮಾ । ತುಳನ ಮಗನಿಗಿರಲೆಂದಾ ॥ ೫೪ ॥

ನೀವುತಾವೆನಿಸಬೇಕೆಂದವನೆಳಸಿದ । ನಾವದ ಬಿಡಿಸಿದೆವರಸಾ ॥
ಈ ವಚನವ ಕೊಡಬೇಕೆಂದು ಮಿತ್ರರು । ತಾವೊಡನೊತ್ತಿ ಪೇಳಿದರು ॥ ೫೫ ॥

ತಲೆದೂಗಿದನು ನಮಿರಾಜನ ಗುಣಕೆ ತ । ನ್ನೊಳಗೆ ಮೆಚ್ಚಿದನು ಕ್ಷತ್ರಿಯರ ॥
ಕುಲದೋಜೆಯಿವಗಲ್ಲದಿಲ್ಲೆಂದು ತನ್ನೆದೆ । ಯೊಳಗಿಟ್ಟು ಹೊರಗಿಂತು ನುಡಿದಾ ॥ ೫೬ ॥

ರಾಜ ನಾನೊಬ್ಬನಲ್ಲದೆ ಷಡುಖಂಡಕೆ । ರಾಜರಿಬ್ಬರೆ ಸರ್ವರವನಾ ॥
ರಾಜನೆಂದಾಡಲಿ ನಾನಂತು ಕರೆವುದ । ದೋಜೆಯೆ ಪೇಳಿ ನೀವೆಂದಾ ॥ ೫೭ ॥

ಕಾಣಿಕೆಯಿಕ್ಕಿ ವೈಮುರಿದ ಮೋಲವನಿಗೆ । ಕ್ಷೋಣಿಯೊಳೊಡೆತನವುಂಟೆ ॥
ರಾಣಿಯಗ್ರಜಗೊಂದು ತೇಜವ ಕೊಡು ನಿನ । ಗೂಣೆಯುವಿಲ್ಲೆಂದರೊಡನೆ ॥ ೫೮ ॥

ಕೊಡಬಾರದೀ ತೇಜವನು ನಿಮ್ಮ ನುಡಿಗಳ । ಕೆಡಿಸಬಾರದು ಕೊಟ್ಟೆನೆಂದಾ ॥
ಒಡನಡಿಗೆರಗಿದರುಡುಗೊರೆವಿಡಿದೆಲ್ಲ । ರೊಡಗೂಡಿ ಸಾಗಿದರತ್ತ ॥ ೫೯ ॥

ಭಂಡಾರವತಿ ಬಂದಳೊಡೆಯ ನಮ್ಮೊಡತಿಯ । *ಕಂಡೆನು ನಿನ್ನ ಚಿತ್ತವನು ॥
ಅಂಡಲೆವಂತಿಹಳಿನ್ನು ನೀ ಮರೆವೆ ಷ । ಟ್ಖಂಡರಾಜ್ಯವನೆಂದಳವಳು ॥ ೬೦ ॥

ಬಣ್ಣಿಸಲರಿಯೆನಾಕೆಯ ರೂಪ ನೋಡಿದ । ಹೆಣ್ಣುಗಳೆವೆ ಮೋಹಿಸುವುದು ॥
ಹೆಣ್ಣುಗಳರಸಿಯ ಕಂಡ ಮೋಲನ್ಯರ । ಕಣ್ಣಿಟ್ಟು ನೋಳ್ಪೆಯ ನೀನು ॥ ೬೧ ॥

ಪೂರ್ಣಾಂಗ ಪೂರ್ಣಕುಂಭಾಯತಕುಚಗಳು । ಪೂರ್ಣಕಟಿಗಳಲ್ಪಮಧ್ಯಾ ॥
ಕರ್ಣಾಂಕಿತಾಕ್ಷಿಗಳಿಂದೊಪ್ಪುತಹಳೆ ಸು । ವರ್ಣಲತಾಂಗಿ ಬೆಡಂಗಿ ॥ ೬೨ ॥

ಬೆರಳು ಸಾಲವೆ ತೋಳು ಸಾಲವೆಯವಳ ನು । ಣ್ಗುರಳು ಸಾಲದೆ ನಿನ್ನ ಗೆಲಲು ॥
ಸಿರಿಮುಡಿ ಸಾಲದೆ ಸ್ವರ್ಗತರುಣಿಯರ । ತರಳೆ ಗೆಲ್ವಳು ಜಿನನಾಣೆ ॥ ೬೩ ॥

ನಡೆಯ ಮುಂದಾನೆಯ ನಡೆಯ ಚಲ್ವಿಕೆಯೆ ನು । ಣ್ನುಡಿದೋರೆ ವೀಣೆ ಮೋಹಿಪುದೆ ॥
ಬಿಡು ಬೆಳುದಿಂಗಳಾಕೆಯ ನಗೆಗಿದಿರೆ ಕ । ನ್ನಡಿಯೆ ಮತ್ತವಳ ಕದಪಿಗೆ ॥ ೬೪ ॥

ಪುರುಷರೊಳ್ನಿನ್ನನೆ ಕಂಡೆ ಪೆಂಡಿರೊಳಾ ಸೌಂ । ದರಿಯನೆ ಕಂಡೆ ನಿನ್ನಾಣೆ ॥
ಎರಡಕೆರಡೆ ಸರಿಯಲ್ಲದಿನ್ನಿಲ್ಲೆಂದು । ಪುರೆಯಿಟ್ಟು ಪೋದಳಾ ಜಾಣೆ ॥ ೬೫ ॥

---

*ಕಂಡೆನವಳ ನಿನ್ನ ಮನವಾ ॥

ಬರಿದೆ ಹೋಗದಿರು ಬಾ ಬಾರೆಂದು ಕರೆದೊಂದು । ಮಿರುಗುವ ಪದಕವ ಕೊಟ್ಟಾ ॥
ಪಿರಿಚಿ ಮತ್ತವಳೊಡನಿದ್ದರ ಮನ್ನಿಸಿ । ನೆರೆ ಜಾಣ ಬೀಳ್ಕೊಟ್ಟನೊಡನೆ ॥ ೬೬ ॥

ಚಾವಡಿಯಿಂದೆದ್ದನೊಡನರಮನೆಗೆ ಲೀ । ಲಾವಾಕ್ಯದೊಳು ಹೋಯ್ತು ರಾತ್ರಿ ॥
ಭೂವರಾಗ್ರಣಿ ಮರುದಿನ ಸಭೆಯೊಳು ಬಲು । ಠೀವಿಯೊಳಿರ್ದನಿಪ್ಪಾಗ ॥ ೬೭ ॥
ಅನಿಮಿಷರಂತೆ ವಿಮಾನಪತಾಕೆ ತೆ । ಕ್ಕನೆ ತುಂಬಲಂಬರದಲ್ಲಿ ॥
ಘನಗಾಢವಾದ್ಯಘೋಷದೆ ನಮಿರಾಜ ಮೂ । ರನೆಯ ಜಾವದೊಳೆಯ್ದುತಿರ್ದಾ ॥ ೬೮ ॥
ಉತ್ತಮಬಂಧುಗಳಾಯೋರ್ವಿಜರು ನೂರ । ಹತ್ತು ಪಟ್ಟಣದ ಖೇಚರರು ॥
ಸುತ್ತಣ ಮ್ಲೇಚ್ಛರಾಜರುಗೂಡಿ ನೆಲನೆಲ್ಲ । ಕಿತ್ತೆತ್ತಿ ಬರುತಿರ್ದನಾಗ ॥ ೬೯ ॥
ಸುಮ್ಮಾನದಿಂದ ಷಟ್ಖಂಡದ ದೊರೆಗಳ । ತಮ್ಮವರನೆ ಮಾಡಿಕೊಂಡು ॥
ದಿಮ್ಮೆಂಬ ವಾದ್ಯಕೋಟಿಗಳಲ್ಲಿ ದೊರೆಮೋಡಿ । ಬಿಮ್ಮನುತೆಯ್ತರುತಿರ್ದಾ ॥ ೭೦ ॥
ತಾಯ ತಂಗಿಯು ಕೆಳದಿಯರ ವಿಮಾನಮೊ । ಳೊಯ್ಯಾರದಿಂದಿಟ್ಟು ತನ್ನ ॥
ಸ್ತ್ರೀಯರ ಮನೆಯೊಳಿರಿಸಿ ಬಂದನೇನು ವಿ । ಡಾಯಕಾರನೊ ನಮಿರಾಜಾ ॥ ೭೧ ॥
ಭರತೇಶ ಸರಿಗಾಣನೆನ್ನನಿನ್ನಾತನ । ತರುಣಿಯರೆನ್ನ ನಾರಿಯರಾ ॥
ಸರಿಗಾಣ್ಬರಲ್ಲೆಂದು ಪುರದೊಳಿರಿಸಿ ಬಂದ । ನರರೆ ರಾಜಾಂಗವದಲ್ತೆ ॥ ೭೨ ॥
ನಂಟರು ಸರಿಗಂಡರೊಡಗೂಡಬಹುದವ । ರ್ಗಂಟರಂದದಿ ಕಾಣುವಾಗ ॥
ಗೆಂಟಿನೊಳಿಹುದೆ ಲೇಸೆನುತ ಬಂದನು ತನ । ಗುಂಟಾದ ಪರಿವಾರಸಹಿತ ॥ ೭೩ ॥

ಗಗನದೊಳ್ಬರುತಿರ್ದ ನಮಿರಾಜ ನೋಡಿದ । ನೆಗೆದ ತೋರಣಗುಡಿಗಳನು ॥
ಬಗೆಬಗೆಯಾಗಿ ಸಿಂಗರಿಸಿದ ಕುರುಜುಮಾ । ಡಗಳ ಚಕ್ರಿಯ ಕಟಕದೊಳು ॥ ೭೪ ॥
ಝಲ್ಲಿಪಟ್ಟೆಗಳ ನಾಲ್ವತ್ತೆಂಟುಗಾವುದ । ದಲ್ಲಿ ಪಾಳೆಯವೆತ್ತ ನೋಡೆ ॥
ಉಳ್ಳ ಕೆಮ್ಮುಗಿಲು ಬೆಳ್ಮುಗಿಲು ಬಾನದೊಳಿರ್ದು । ವೆಲ್ಲ ಭೂತಳಕೆ ಬಿದ್ದಂತೆ ॥ ೭೫ ॥
ಮಾಣಿಕಗನ್ನಡಿ ಹೊನ್ನಕಲಸಗಳು । ಕಾಣಿಸುತಿರೆ ನೃಪಕಟಕಾ ॥
ಏಣಾಂಕಮಂಡಲ ಸೂರ್ಯಮಂಡಲಗಳ । ಠಾಣೆಯಮನೆ ಸೊಗಸಿದುದು ॥ ೭೬ ॥
ಪಚ್ಚೆ ಮಾಣಿಕ ಪವಳದ ಮಾಲೆ ಮುತ್ತಿನ । ಕುಚ್ಚು ಪಾಳೆಯತುಂಬಿ ತೋರೆ ॥
ಅಚ್ಚರಿವಟ್ಟನು ನಮಿರಾಜನೀಕ್ಷಿಸಿ । ನುಚ್ಚುನೂರಾಯ್ತು ವಿಡಾಯಾ ॥ ೭೭ ॥
ಕುಂಕುಮ ಸಾದು ಜವಾದಿ ಕಸ್ತೂರಿಯ । ಪಂಕ ಪಾಳೆಯತುಂಬಲದಕೆ ॥
ಝೇಂಕರಿಸುವ ತುಂಬಿಗಳ ಕಂಡು ನಮಿರಾಜ । ಮಂಕುವೊಯ್ದಂತಾದನೊಡನೆ ॥ ೭೮ ॥
ಹಯಗಜರಥಪದಾತಿಗಳು ಸಿಂಗರಿಸೆ ರೂ । ಢಿಯ ಜನವಾರ್ಧಿಯಂತೆಸೆಯೆ ॥
ನಯಘನವೆರಡು ಸಾಲವನೆ ಸುತ್ತ ನೋಡಿ ವಿ । ಸ್ಮಯವಟ್ಟನಾ ನಮಿರಾಜಾ ॥ ೭೯ ॥

ಬಿಟ್ಟ ಬೀಡಿನೊಳಿಷ್ಟು ಸಿರಿಯಿದೆ ತನ್ನಯ । ಪಟ್ಟಣದೊಳಗಿರ್ದರೆಂತೊ ॥
ಹುಟ್ಟಬೇಡವೆ ಇವನಂತೆಂದು ಮತ್ತರ್ತಿ । ವಟ್ಟು ನೆನೆದನು ಭಾವನನು ॥ ೮೦ ॥
ನುಡಿಯಸಲ್ಲದೆ ಈತನವನಿವನೆಂದೆಮ್ಮ । ಕಡೆಗೀತಗಿಂದ್ರ ತಾನೆಣೆಯೆ ॥
ಸುಡುಸುಡು ನಮ್ಮೊಂದು ಮೂಳಗರ್ವವನೆಂದು । ನುಡಿಯದೆ ನೆನೆದನೆದೆಯೊಳು ॥ ೮೧ ॥
ಕಂಡಲ್ಲದಾವುದು ಸೊಗಸಲ್ಲ ಬಹುಹೆಮ್ಮೆ । ಗೊಂಡಿರ್ದರಿವಗೆ ನಾನೆಣೆಯೆ ॥
ಗಂಡೆಂದರಿವನಲ್ಲದಿಲ್ಲೆಂದು ನಮಿರಾಜ । ಮಂಡೆದೂಗಿದನೆದೆಮೆಚ್ಚಿ ॥ ೮೨ ॥
ಕುಲದೊಳು ಸರಿಯೆಂಬ ತೇಜಕೀತನೊಳಾನು । ಛಲವ ಮಾಡಿದೆನಿನ್ನು ನನಗೆ ॥
ಸಲುವುದೆ ಇವನಿದಿರೊಳು ಗರ್ವವೆಂದು ತ । ನ್ನೊಳಗೆ ತಾ ಸೋಲಿದನೊಡನೆ ॥ ೮೩ ॥
ಬಿಡುವೆನು ಗರ್ವವ ಕೊಡುವೆನೀಗವನಿಗೆ । ನ್ನೊಡಹುಟ್ಟಿದವಳನಿನ್ನಾಕೆ ॥
ಪಡೆದ ಭಾಗ್ಯಕೆ ಸರಿಯಿಲ್ಲೆಂದು ಮತ್ತರ್ತಿ । ವಡುತ ಬಂದನು ನಮಿರಾಜಾ ॥ ೮೪ ॥
ಅಳಿಯನ ಪಡೆಯು ನಾಲ್ವತ್ತೆಂಟುಗಾವುದ । ದಳತೆಯೊಳೊಡ್ಡಿ ರತ್ನಗಳ ॥
ಬೆಳೆವೊಲದಂತೆ ಸಿಂಗರಿಸಿರ್ದ ಕಟಕದ । ಗ್ಗಳವ ಕಂಡತ್ತ ಬೀಗಿದಳು ॥ ೮೫ ॥

ಇದೆ ಮುಟ್ಟಲೆಯ್ದಿದರೆನೆ ಚಕ್ರಿ ರಾಜಸಂ । ಪದಕೆ ಮುಖ್ಯರ ಕೂಡಿಕೊಟ್ಟು ॥
ಇದಿರಾಗಿ ಮಂತ್ರಿಯು ಕಳುಹಿದರವರು ಬಂ । ದಿದಿರ್ಗೊಂಡರಧಿಕಲೀಲೆಯೊಳು ॥ ೮೬ ॥
ಅಂಬರೇಚರರ ವಾದ್ಯಗಳ ಘೂರ್ಣನೆಯಿಂದಿ । ರ್ಗೊಂಬರ ಬಹುವಾದ್ಯನಾದಾ ॥
ಡೊಂಬಿಯೊಳ್ಕಟಕದೊಳಿದ್ದ ವಾದ್ಯದ ಘೋಷ । ತುಂಬಿತು ಭೂರಿಭೂತಳವಾ ॥ ೮೭ ॥
ಮುನ್ನವೆ ನಮಿರಾಜಗತ್ತ್ಯಾಜಿಗೆಂದಿರ್ದ । ಹೊನ್ನರಮನೆಗೆ ಹೆಂಗಳನು ॥
ಸನ್ನೆಯೊಳ್ಕಳುಹಿ ವಿಮಾನದಿಂದಿಳಿದು ವ್ಯ । ತ್ಪನ್ನ ಬಂದನು ಭಾವನೆಡೆಗೆ ॥ ೮೮ ॥
ಕರೆ ಬಂಧುಗಳ ಕರೆ ವಿನಮಿಯು ಸುಮತಿಸಾ । ಗರಮಂತ್ರಿ ಪಕ್ಷದ ನೃಪರು ॥
ಬರಲಿಯೆಂದೆಲ್ಲರ ಕೂಡಿಕೊಂಡೋಜೆಯೊ । ಳ್ಬರುತಿರ್ದನಾ ನಮಿರಾಜಾ ॥ ೮೯ ॥
ಬೆರಗಾದ ಸಿಂಗರ ಬೆರಗಿನ ನಗೆನೋಟ । ದೊರೆವೋಡಿಗೂಡಿ ಬಪ್ಪಾಗ ॥
ಭರತರಾಜಗೆ ತಕ್ಕ ಮೈದುನನಿವನೆನೆ । ಬರುತಿರ್ದನಾ ಕಟಕದೊಳು ॥ ೯೦ ॥
ಅಂಗದ ಚೆಲ್ವ ನಿಟ್ಟಿಸಿದರೀ ಭೂಪನೊ । ಬ್ಬಂಗಜನಂತಿರ್ಪನಿವನ ।
ತಂಗಿ ಸೌಂದರಿಯೆಂದು ಹೇಳಲೇಕೆಂದಂತ । ರಂಗದೊಳ್ನೆನೆದುದಾ ಕಟಕಾ ॥ ೯೧ ॥
ಪಂಜುಸೊಡರಿಗಧಿಕದ ಪ್ರಭೆಯಿಹುದದು । ರಂಜಿಸುವುದೆ ಪಗಲಿನಲಿ ॥
ರಂಜಿಸಿತಾತನ ರೂಪು ಚಕ್ರಿಯ ಮುಂದೆ । ರಂಜಿಸುವುದೆ ಬರುತಿರ್ದಾ ॥ ೯೨ ॥
ದೇವೇಂದ್ರಸಭೆಯ ಜಕ್ಕುಲಿಸುವ ರತ್ನದ । ಚಾವಡಿಯೊಳವೊಕ್ಕು ಬರುತ ॥
ದೇವಸಿಂಗರಗೂಡಿ ಸಿಂಹಪೀಠದೊಳಿರ್ದ । ಭಾವನ ಕಂಡ ದೂರದೊಳು ॥ ೯೩ ॥

ಕೊಡು ನಮಿರಾಜ ನಿನ್ನನುಜೆಯರ್ಲಕ್ಷವು । ಳ್ಕೊಡೆ ಕೊಟ್ಟೆ ಬಳಿಕೊಬ್ಬಪುರುಷಾ ॥
ಮಡದಿಯೊಬ್ಬಳನಾಳುವಂತಾಳ್ವೆನೆಂದು ಸೂ । ಳ್ನುಡಿವೊಲಿರ್ದುದು ನೋಡಿ ನೃಪನ ॥ ೯೪ ॥
ದೊಡ್ಡವನೇಳ್ಗೆಗೆ ದೊಡ್ಡವ ಸೋಲ್ವಂತೆ । ಹೆಡ್ಡ ಸೋಲ್ವನೆ ಕಾಣುತವನು ॥
ಅಡ್ಡಬೀಳಲ್ಪಾಟಿಯಲ್ಲದಾನಿವಗೆ ವ್ಯೆ । ಯೊಡ್ಡತಕ್ಕನೆಯೆಂದು ನೆನೆದಾ ॥ ೯೫ ॥

ಚಿತ್ತೈಸು ರಾಜಾಧಿರಾಜಮಾರ್ತಾಂಡ ರಾ । ಜೋತ್ತಂಸ ವಿಭವದೇವೇಂದ್ರಾ ॥
ಹತ್ತಿರಕೆಯ್ದುತಿರ್ದನು ನಮಿರಾಜನೆಂ । ದೊತ್ತಿ ಪೇಳ್ದರು ವೇತ್ರಧರರು ॥ ೯೬ ॥
ಭಾವಜಾಯುತದ ಭಾವನ ಕಾಣ್ಬೆನೆಂದು ಸ । ದ್ಭಾವಕನವನೀಗ ನಿನ್ನ ।
ಮಾವನ ಮಗನು ಮೈದುನನದೆ ಬಂದನು । ದೇವ ಪರಾಕೆಂದರೊಡನೆ ॥ ೯೭ ॥
ಪಾಡುವ ಗಾನವ ನಿಲಿಸಿ ಮತ್ತೊರಗುವ । ಮೂಡೆಯನೊರಗಿ ಚಕ್ರೇಶಾ ।
ನೋಡುತಿರ್ದನು ಸಾರ್ದ ನಮಿರಾಜ ಕಾಣ್ಕೆಯ । ನೀಡಿ ಕೈಮುಗಿದನೋಜೆಯೊಳು ॥ ೯೮ ॥
ತೆಗೆದಪ್ಪಿಕೊಂಡು ತನ್ನೊತ್ತಿನೊಳ್ಪಟ್ಟಗ । ದ್ದುಗೆಯ ಕೊಡಿಸಿ ಕೈಯ ಪಿಡಿದು ॥
ನಗುತ ಕುಳ್ಳಿರಿಸಿ ಮೈದುನನ ಮನ್ನಿಸಿದನೇಂ । ಸುಗುಣನೊ ಭರತರಾಜೇಂದ್ರಾ ॥ ೯೯ ॥
ಬಳಿಬಂದರೆಲ್ಲರ ಕಂಡು ಚಕ್ಕಳದಲ್ಲಿ । ಕುಳಿರಿಸಿ ಮತ್ತೆ ಚಕ್ರೇಶಾ ॥
ಹಲವುದಿನಕೆ ಸಲವಾಗಿಂದು ಕಂಡೆವೈ । ಸಲೆ ನಮಿರಾಜನನೆಂದಾ ॥ ೧೦೦ ॥
ತಕ್ಕೈಸಿಕೊಂಡು ಗದ್ದುಗೆಗೊಡಿಸಿದನು ಮ । ತ್ತಕ್ಕರಿಂ ನಮಿರಾಜಯೆನಲು ॥
ಉಕ್ಕಿತು ಹರುಷವುಕ್ಕದೆ ಕೊಟ್ಟ ಗದ್ದುಗೆ । ಚಿಕ್ಕದಹುದು ತೇಜ ಕಿರಿದೆ ॥ ೧೦೧ ॥
ಭಾವ ನಿನ್ನನು ಬಹುಕಾಲಕೆ ಕಂಡೆನೆಂ । ಬಾ ವಾಕ್ಯವಾಡಲದೇಕೆ ॥
ದೇವರ ದರುಶನ ಬಹುಕಾಲಕಾಗಿ ಸಂ । ಭಾವಿಸಿತೆನಗೆಂದು ನುಡಿದಾ ॥ ೧೦೨ ॥
ನೀನೆನ್ನ ಕಾಣಬೇಕೆಂದು ಭಾವಿಸಿತಿಲ್ಲ । ನಾ ನಿನ್ನ ನೋಡಬೇಕಾಗಿ ॥
ನಾನಾ ತಂತ್ರವನೊಡ್ಡಿದೆ ಸ್ನೇಹ ತಾ । ನೇನ ಮಾಡಿಸದೆಂದ ಚಕ್ರಿ ॥ ೧೦೩ ॥
ದೇವರ ಮೇಲಾಸೆಯಿಲ್ಲವೆ ಉಂಟು ಮ । ಹಾವಿಭವನು ಬಂಧುವೆಂದು ॥
ಭಾವಿಪೊಡಾನಂಜಿ ದೂರದೊಳಿರ್ದೆನು । ದೇವರರಿಯದುದೆಯೆಂದಾ ॥ ೧೦೪ ॥
ಬಡವ ಬಲ್ಲಿದನ ನಮ್ಮವನೆಂದು ನುಡಿವಾಗ । ಪೊಡವಿ ನಗುವುದು ಬಲ್ಲಿದನು ॥
ಬಡವನ ತನ್ನವನೆನೆ ಮೆರೆವುದು ಸಿರಿ । ಯೊಡನಹುದೆಂದ ಭಾವನೊಳು ॥ ೧೦೫ ॥
ದೊಡ್ಡವರೆಂತಾಡಿದಂತೆ ಸಲುವುದದ । ಕಡ್ಡಾಕೆಯಿಲ್ಲದರಿಂದ ॥
ಗುಡ್ಡದ ಮೇಲಿರ್ದೆ ಬರಹೇಳಲೊಡನೆ ನಾ । ನೊಡ್ಡಿ ನಿಂದೆನೆ ಬಂದೆನೆಂದಾ ॥ ೧೦೬ ॥
ನುಡಿಜಾಣನೈ ಲೇಸು ಲೇಸೆಂದು ನುಡಿದರ್ಥಿ । ವಡುತ ಚಕ್ರೇಶ ನೋಡಿದನು ॥
ನುಡಿಜಾಣ್ಮೆ ನಡೆಜಾಣ್ಮೆ ನನಗೊ ದೇವರಿಗೊ ಸಂ । ಗಡದ ಭೂಪರು ಪೇಳಲೆಂದಾ ॥ ೧೦೭ ॥

ಸ್ವಾಮಿಯೆ ನುಡಿಜಾಣ ನಡೆಜಾಣನಹುದು ಮ । ತ್ತಾ ಮಹಾತ್ಮನೆ ಜಾಣನೆನಲು ॥
ಭೂಮಿಗೆ ನೀವಿನ್ನು ಜಾಣರೆಂದಾಡಿದ । ರಾ ಮಾಗಧಾಂಕಾದಿ ನೃಪರು ॥ ೧೦೮ ॥

ಮುಯ್ದುನನೆಂಬ ಸೊಕ್ಕಿನೊಳುಬ್ಬಿ ನುಡಿಯದೆ । ಬಾಯ್ದೆರೆದುರೆ ತಾನೆ ಸೋತು ॥
ಆಯ್ದಾಯ್ದು ಸವಿನುಡಿಗಳನಾಡೆ ಸರ್ವರಾ । ರಯ್ದು ಮೆಚ್ಚಿದರು ತಮ್ಮೊಳಗೆ ॥ ೧೦೯ ॥

ಭೂತಳಾಗ್ರಣಿಯೊಳು ಸೋತು ನುಡಿದ ಮಾತು । ಮಾತೆಯೊಲ್ಪೊರೆವುದು ತನ್ನಾ ॥
ಭೂತನಂತುಬ್ಬಿ ನುಡಿದ ಮಾತು ಬಲುವಜ್ರ । ಘಾತದಂತಾಗದೆ ತನಗೆ ॥ ೧೧೦ ॥

ಪರಿವ ಪೆರ್ದೊರೆಯು ಮೈವಳಿಗಾದ ಗೇಕೆಲ್ಲ । ಸ್ಥಿರಬಾಳ್ವವದಕಿದಿರಾದ ॥
ಮರಗಳು ಬೇರ್ಗಿತ್ತು ಬಿದ್ದುಹೋಹುವು ದೊಡ್ಡ । ದೊರೆಗಿದಿರಹರೆ ಬಲ್ಲವರು ॥ ೧೧೧ ॥

ಎರವುಗಾಣದೆ ಚಕ್ರಿ ಸ್ನೇಹಭಾವವ ತೋರಿ । ವಿರಚಿಸಿದರು ನಮಿರಾಜಾ ॥
ಸರಿಯೊಡ್ಡದೊಯ್ಯನೆ ಸೋತಾಡಿದುದಕೆ ಸ । ರ್ವರು ಮೆಚ್ಚಿದರು ಚಕ್ರಿಯೊಲಿದಾ ॥ ೧೧೨ ॥

ಮಾವಾಜಿಯರ ಬಸುರೊಳು ಬರತಕ್ಕನೈ । ಭಾವಜ್ಞನೈ ಗುಣಾನ್ವಿತನೈ ॥
ಸಾವಿರಮಾತೇನು ನಮಿರಾಜ ನೀನೆ ರಾ । ಜಾವಲಂಬನದಕ್ಷನೆಂದಾ ॥ ೧೧೩ ॥

ಚಕ್ರರತ್ನವ ತಳೆದವ ನಾನು ರಾಜಪ । ರಾಕ್ರಮದೊಳು ಬಾಳಬಹುದು ॥
ವಿಕ್ರಮದೊಳು ಕ್ಷತ್ರಿಯಾಂಗದೊಳ್ಪಂದೆ ನೀ । ವಿಕ್ರಮಾನ್ವಯಶುದ್ಧನೆಂದಾ ॥ ೧೧೪ ॥

ಹಿಡಿತೆಬಿಡಿತೆ ಕೊಳುಕೊಡೆಯು ವೈಸಿರಿ ನಡೆ । ನುಡಿಯು ಬೆಡಗು ಪಾಡುಪಂಥಾ ॥
ಜಡಿಮುಡಿಗಾಡಿಮೋಡಿಗಳು ಕ್ಷತ್ರಿಯಗೆ ಸಂ । ಗಡಿಸಿರಬೇಕು ಲೇಸೆಂದಾ ॥ ೧೧೫ ॥

ಮರುಳುನಡೆಗೆ ನಾನು ಮೆಚ್ಚೆನು ನೀನೆನ್ನ । ಶಿರದೂಗಿಸಿದೆಯೆನಲೊಡನೆ ॥
ಸುರುಚಿರಾಭರಣವಸ್ತ್ರಗಳುಡುಗೊರೆಯ ಮುಂ । ದಿರಿಸಿದನಾ ನಮಿರಾಜಾ ॥ ೧೧೬ ॥

ನಿನಗಾನು ಮೆಚ್ಚಿದೆನೆಂದರೆ ಮೆಚ್ಚ ನೀ । ನೆನಗೆ ತಂದೀವುದೇಕೆಂದಾ ॥
ಮನಕರಗಿತು ನಿನ್ನ ನುಡಿಗೆ ಚಿತ್ತೈಸಿವು । ವಿನಯಾರ್ಥ ಸಲಲಿಂದಿಗೆಂದಾ ॥ ೧೧೭ ॥

ಬಂದ ಮೈದುನನ ಮನ್ನಿಪೆನೆಂದು ನೆನೆದೆನೆ । ನ್ನಿಂದ ಮುಂಚಿದೆಯು ನೀನೆನುತ ॥
ಬಂದಕಿಮ್ಮಡಿಯುಡುಗೊರೆಯನಾತನಿಗಿತ್ತು । ವೃಂದಬಂಧುಗಳ ಮನ್ನಿಸಿದಾ ॥ ೧೧೮ ॥

ಸ್ವಾಮಿಯು ನಮಿರಾಜ ಸಂದಿಸೆ ಸಿರಿಗಾಣ್ಬ । *ಕಾಮವಿದ್ದಿತು ಮೊದಲೆಮಗೆ ॥
ಕಾಮಾರ್ಥವಿಂದು ಸಂದುದು ಲೇಸು ಲೇಸೆಂದ । ರಾಮೋದದಿಂದಾಗ ಸಖರು ॥ ೧೧೯ ॥

ಹೊದ್ದಿದವರಿಗೆಮ್ಮ ಸ್ವಾಮಿ ಕ್ಷೀರಾಬ್ಧಿಯ । ಹೊದ್ದಿದಂತಿಂಪುದೋರುವನು ॥
ಇದ್ದಿದ್ದು ಲಾಲಿಸು ದಿನದಿನಕಾನಂದ । ಹೊದ್ದುವುದಿನ್ನೆಂದರೊಡನೆ ॥ ೧೨೦ ॥

*ಪ್ರೇಮವಿದ್ದಿತು ಮನದೊಳಗೆ ॥

ಬುದ್ಧಿಸಾಗರನುಬ್ಬಿ ಲೇಸುಲೇಸೆನ್ನುತ್ತ । ಸಿದ್ಧಿಯಾದುದು ಪೂತುರೆಂದಾ ॥
ಉದ್ಧಕೆತ್ತಿದರಹೊ ಭಾವವ್ಯೆದುನರ ಸ । ಮೃದ್ಧಲೀಲೆಯೆಯೆಂದನವನು ॥ ೧೨೧ ॥
ನಾಳೆ ವಿವಾಹದರ್ತಿಯು ಕಾಣ್ಬೆವಿಂದು ಭೂ । ಪಾಲರ ಕಳುಹೆಂದ ಮಂತ್ರಿ ॥
ವೇಳೆಯಾದುದು ಹೋಸಕೆನೆ ನಮಿರಾಜನ । ನಾ ಲೋಲ ಬೀಳ್ಕೊಟ್ಟನೊಡನೆ ॥ ೧೨೨ ॥
ಹತ್ತೆಂಟುಹಜ್ಜೆಯು ನಮಿರಾಜ ಪೋಪಂದು । ಮತ್ತೆ ಸರ್ವರಿಗೆ ಕೈವೀಸಿ ॥
ಮುತ್ತಿನ ಗದ್ದುಗೆಯಿಂದೆದ್ದು ಮಂದಿರ । ಕತ್ತ ಕಾಲಿಟ್ಟನಾ ಚಕ್ರಿ ॥ ೧೨೩ ॥
ಒಂದೆರಳ್ಪಜ್ಜೆಯುಸಿಡೆ ದಾದಿಯೊರ್ವಳೆ । ಯ್ತಂದು ಚಕ್ರಿಯ ಕರ್ಣದಲ್ಲಿ ॥
ಬಂದನು ನಮಿರಾಜ ತಾನೆ ತನ್ನರಸಿಯು । ಬರ್ಂದುದಿಲ್ಲೆಂದು ಪೇಳಿದಳು ॥ ೧೨೪ ॥
ಅಲ್ಲಿಯೆ ನಿಂದನು ಕರೆ ನಮಿರಾಜನ । ನಿಲ್ಲಿಮುಟ್ಟಿನಲು ಮತ್ತವನು ॥
ಎಲ್ಲರುಗೂಡಿತ್ತ ಬರುತಿದ್ದನೊಬ್ಬನೆ । ಮೆಲ್ಲನೆ ಬಾರೆನುತ್ತಿಗೆಂದಾ ॥ ೧೨೫ ॥
ದೂರಕೆ ಸಾರ್ದರೂಳಿಗದವರ್ ತಾನು ಮ್ಯೆ । ಸಾರಲೊಡನೆ ಚಕ್ರಿ ತನ್ನ ॥
ತೋರಗ್ಯೆಯಿಂದ ತಾನಾತನ ಕೈವಿಡಿ । ದಾರಯ್ದು ಮೆಲ್ಲನಿಂತೆಂದಾ ॥ ೧೨೬ ॥
ಚೆನ್ನಾಯ್ತು ನೀನೆಯ್ದಿದ್ಯೆ ನಿನ್ನ ಸತಿಯುರ । ನಿನ್ನೂರೊಳಿರಿಸಿ ಬಂದೆ ಗಡಾ ॥
ನನ್ನ ತಂಗಿಯರಿತ್ತ ಬಾರದಿರ್ದಡೆ ಹೇಳು । ನನ್ನರ್ತಿ ಸಲುವುದೆಯೆಂದಾ ॥ ೧೨೭ ॥
ಅಮ್ಮಾಜಿಯಿದ್ದಳಾನಿದ್ದೆನನುಜನಿದ್ದ । ನೆಮ್ಮ ಬಂಧುಗಳಿದ್ದರೀಗ ॥
ನಿಮ್ಮ ವೈಭವಕೇನು ಕಡಮೆಯಾದುದು ಸಾಕು । ಹೆಮ್ಮಕ್ಕಳವರೇತಕೆಂದಾ ॥ ೧೨೮ ॥
ಬಿಡೆಯಲಾ ನಿನ್ನ ಪ್ರಪಂಚವ ನಾನು ನ । ನ್ನೊಡಹುಟ್ಟಿದವರೆಂದ ಮೇಲೆ ॥
ಕಡುಬೇಗ ಕರೆಸುವೆನೆನ್ನದೆ ನೀನಿದ । ನುಡಿವರೆ ನಮಿರಾಜಯೆಂದಾ ॥ ೧೨೯ ॥
ಬೇಡಮ್ಯೆ ಕರೆಸು ನೀನೆರವುಗಾಣ್ಬುದಕಾನು । ಮಾಡಿದ ನೋವಿಲ್ಲ ನಿನಗೆ ॥
ನೋಡಬೇಕೆನ್ನನುಜೆಯರೆನ್ನ ಲೇಸನೆಂ । ದಾಡಿದನಾ ಚಕ್ರಿ ನೊಂದು ॥ ೧೩೦ ॥
ಬೀಡುಬಿಟ್ಟೆಡೆಗಿವರೇಕೆಂದು ನಾನೋರೆ । ಮಾಡಿ ಮನೆಯೊಳಿಟ್ಟು ಬಂದೆ ॥
ನೋಡಬಾರದೆ ರಾತ್ರಿಯೊಳೆ ಕರೆಸುವೆನೆಂದ । ಕೂಡೆ ತಕ್ಕಿಸಿದನಾ ಚಕ್ರಿ ॥ ೧೩೧ ॥
ಅಲ್ಲಮ್ಯೆ ನಮಿರಾಜ ಅತ್ತಾಯ್ತಿವೆರಸಿ ನೀ । ವೆಲ್ಲರಿಲ್ಲಿಗೆ ಬಂದ ಹಿಂದೆ ॥
ಅಲ್ಲಿರ್ದ ಪೆಂಗಳು ಮರುಗರೆ ಅದು ಸೊಗ । ಸಲ್ಲವಿನ್ನಾಯ್ತು ಲೇಸೆಂದಾ ॥ ೧೩೨ ॥
ನಮ್ಮ ಹೆಂಗಳು ನಿಮ್ಮ ಹೆಂಗಳ ಕಂಡಿಷ್ಟು । ಸುಮ್ಮಾನದೊಳಗರ್ತಿ ಸಲಲಿ ॥
ಹೆಮ್ಮಕ್ಕಳಿಚ್ಛೆಯನರಿಯೆಯುವೊಸಗೆಗೆ । ಸುಮ್ಮಾನಗೊಳುತಿಹರೆಂದಾ ॥ ೧೩೩ ॥
ಇಬ್ಬರಲ್ಲದೆ ತಮ್ಮ ನುಡಿಗಳ ಕೆಲದೊಳಿ । ದ್ದೊಬ್ಬರು ಕೇಳದಂತಾಡಿ ॥
ಒಬ್ಬ ಭೂಪತಿ ಹೊರಗೃಹಕಡಿಯಿಟ್ಟ ಮ । ತ್ತೊಬ್ಬನೆಯ್ದಿದನೊಳಗೃಹಕೆ ॥ ೧೩೪ ॥

ಸಿಂಧುದೇವಾಂಕಗಂಗಾದೇವನವರೆಯ್ದಿ । ಬಂಧುತನವ ಖಗೇಂದ್ರನಿಗೆ॥
ಸಂಧಾನಿಸಿ ಮಗುಳ್ದರು ನಮಿರಾಜ ಸು । ಗಂಧವಾಸಕೆ ಹೊಕ್ಕನೊಡನೆ ॥ ೧೩೫ ॥

ಉಲುಪೆಯ ಹೊಸತಾಗಿ ಕಳುಹಬೇಡತ್ತೆಯ । ನಿಳಯುವ ಮೊದಲೆ ತುಂಬಿಸಿದಾ ॥
ಒಳಗಣೂಳಿಗವೆಣ್ಣುಗಳ ಕಳುಹಿದ್ದನಾ । ಗಳೆ ಬೋನಗುಡಿಕೆಯಟ್ಟಿದರು ॥ ೧೩೬ ॥

ವಿಮಲಾನ್ನಪಾನವ ಕೊಂಡು ಚಕ್ರೇಶನು । ನಮಿರಾಜ ಮೊದಲಾದರೆಲ್ಲ ॥
ಅಮಲಲೀಲಾಂಗದೊಳಿರುತಿರ್ದರಿಲ್ಲಿಗೆ । **ನಮಿರಾಜವಿನಯದ ಸಂಧಿ** ॥ ೧೩೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೩೮ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ।
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೩೯ ॥

ಮನಮುಟ್ಟಿ ನೋಡುವ ಸುಖಿಗೆಡೆಬಿಡವಿಲ್ಲ । ದನುಪಮಸುಖವೀವ ಸುಲಭಾ ॥
ಅನುದಿನ ಚಲಿಸದೆನ್ನೆದೆಯೊಳಗಿರು ಸುಖ । ವನಧಿ ಚಿದಂಬರಪುರುಷಾ ॥ ೧೪೦ ॥

ನಮಿರಾಜವಿನಯಸಂಧಿ ಸಂಪೂರ್ಣಂ

# ಮದುವೆಯ ಸಂಭ್ರಮಸಂಧಿ.

---

ಮುಕ್ತಿಕಾಂತೆಯ ಮದುವೆಗೆ ಮುನ್ನ ಜಗವ ಸು । ಖೋಕ್ತಿಯೊಳ್ಮನ್ನಿಪ ಸೊಬಗಾ ॥
ವ್ಯಕ್ತಮತಿಯ ತೋರು ಜಯ ಜಯ ಪರಮವಿ । ರಕ್ತಾ ನಿರಂಜನಸಿದ್ಧಾ ॥ ೧ ॥

ಒಡಹುಟ್ಟಿದವರೆಂದು ಭರತೇಶ ತಾನೆಮ್ಮ । ನುಡಿದ ಗಡೆಂದು ತಮ್ಮೊಳಗೆ ॥
ಗುಡಿಗಟ್ಟಿ ತೆರಳಿಸಿ ಬಂದರು ನಮಿರಾಜ । ಮಡದಿಯರಾ ತೇಜ ಕಿರಿದೆ ॥ ೨ ॥

ವಿನಮಿರಾಜನ ತಾಯಿ ಶುಭದೇವಿಯಾತನ । ವನಿತೆಯರೈನೂರ್ವರೊಡನೆ ॥
ತೊನೆದೆಂಟುಸಾವಿರ ನಮಿರಾಜನರಸಿಯು । ರಿನನುದಯಕೆ ಬಂದರೊಸೆದು ॥ ೩ ॥

ಕಚ್ಛರಾಜನು ಯಶಸ್ವತಿಯರಣ್ಣನು ಮಹಾ । ಕಚ್ಛ ಸುನಂದಾದೇವಿಯರ ॥
ಸ್ವಚ್ಛದಣ್ಣನು ಕಚ್ಛನೃಪಗೆ ತಮ್ಮನು ಮಹಾ । ಕಚ್ಛ ತಾವಮೃತಭೋಗಿಗಳು ॥ ೪ ॥
ಕಚ್ಛರಾಜಗೆ ಸುಭದ್ರಾದೇವಿವಿನಮಿರಾಜ । ರಚ್ಛದಿಂದುದಯಿಸಿದವರು ॥
ಇಚ್ಛಾಮಹಾದೇವಿವಿನಮಿರಾಜರು ಮಹಾ । ಕಚ್ಛರಾಜನಿಗೊಗೆದವರು ॥ ೫ ॥

ಸ್ಮರನಿಗಿಚ್ಛಾದೇವಿ ಸತಿಯಾಗಿ ಪೌದನ । ಪುರದಲ್ಲಿ ಸುಖವಾಳುತಿಹಳು ॥
ಭರತೇಶಗೀ ಹೆಣ್ಣ ಕೊಡುವ ಸಂಭ್ರಮಕೆ ತಾ । ವಿರದೆಲ್ಲರೊಗ್ಗಾಗದರಂದು ॥ ೬ ॥

ಬಂದರೆಂಬುದ ಕೇಳಿ ಭರತೇಶ ಮನದೊಳಾ । ನಂದವೆಯ್ದಿದನಿನ್ನು ಮದುವೆ ॥
ಚಂದವೆಂದನು ಬೆಳಗಾಗಲೊಡನೆ ಜಿನ । ಮಂದಿರದೊಸಗೆಗೆ ನಡೆದಾ ॥ ೭ ॥

ಮದುವೆಯುತ್ಸವಕೆಂದು ಕಟಕದ ನಡುವೆಯೊ । ಡ್ಡಿದುದೊಂದು ಹೊಸ ಜಿನವಾಸಾ ॥
ಅದಕೆ ನೃಪರ ಮನೆದೇಹಾರಗಳು ನೆಲ । ಸಿದುವವಸರಕೆ ತಕ್ಕಂತೆ ॥ ೮ ॥

ಭೂರಾಮ ತಾನೆ ಪೂಜಿಪೊಡಂದು ಮೋಕ್ಷಶೃಂ । ಗಾರ ತನಗೆ ಸಲ್ಲದಾಗಿ ॥
ಭೂರಿವಿಪ್ರರು ಪೂಜೆಗೈಯೆ ಮೋಹನದ ಶೃಂ । ಗಾರದೊಟ್ಟಿದ್ದನೀಕ್ಷಿಸುತ ॥ ೯ ॥

ಬಾಜಿಪ ವಾದ್ಯಕೋಟಿಗಳೊಪ್ಪೆ ಬಹುವಸ್ತು । ರಾಜಿಯೊಳ್ಜಿನಪೂಜೆಯಾಯ್ತು ॥
ಆ ಜನಪತಿಗದು ಸಂಕಲ್ಪಪೂಜೆ ನಾ । ನಾಜನಪರಿಗದು ಮೇರು ॥ ೧೦ ॥

ಜಿನಪೂಜೆಯಾಗಲಭ್ಯಂಗಪೂರ್ವಕ ವಿಪ್ರ । ಜನಕೆ ಸತ್ರದೊಳನ್ನವಾಯ್ತು ॥
ಕನಕವಸ್ತುಗಳ ಕರ್ಪೂರವೀಳೆಯವ ಚಂ । ದನವನಿತ್ತನು ತಣಿವಂತೆ ॥ ೧೧ ॥

ಸತಿಸುಭದ್ರಾದೇವಿ ಪತಿಭರತೇಶನೂ । ರ್ಜಿತಸುಖದೊಳು ಬಾಳಲೆಂದು ॥
ಹಿತದಿಚ್ಛಾಭೋಜನವುಂಡು ದಾನವ ಕೊಂಡು । ವಿತತವಿಪ್ರರು ಪರಸಿದರು ॥ ೧೨ ॥

ಉಂಡುದಿಲ್ಲಿಂತುಟೂಟವ ಮುನ್ನ ದಾನವ । ಕೊಂಡುದಿಲ್ಲಿಂತುಟೆಂದೊಸೆದು ॥
ಮಂಡೆಯಾಡಿಸುತ ಕಣ್ಮುಚ್ಚುತೊಲೆವುತೊಲ್ಮೆ । ಗೊಂಡು ಹರಸಿದರು ದ್ವಿಜರು ॥ ೧೩ ॥
ಪುರದರ ರಾಯಸದವರ ಗಣಿಕೆಯರ । ಪರಿವಾರದೊಳಗೆ ಸರ್ವರನು ॥
ಪರಮಾನ್ನಪಾನದೊಳಗೆ ತೃಪ್ತಿವಡಿಸಿದ । ಭರತೇಶಗೇನದು ಘನವೆ ॥ ೧೪ ॥
ಸಾಲುಗೇರಿಗಳೊಳಗಲ್ಲಲ್ಲಿ ಭೋಜನ । ಶಾಲೆಯ ಸುರಶಿಲ್ಪಿ ರಚಿಸೆ ॥
ಪಾಲನ್ನಭಕ್ಷ್ಯವ ಗೃಹಪತಿ ಪ್ರೇರಿಸೆ । ಪಾಳೆಯ ತಣಿದುದು ಕ್ಷಣಕೆ ॥ ೧೫ ॥
ಇಡಿಸಿದನಲ್ಲಲ್ಲಿ ದುಗುಲವೆಟ್ಟಗಳಿಲೆ । ಯಡಕೆ ಕಪ್ಪುರದ ಬೆಟ್ಟಗಳಾ ॥
ಕೊಡಿಸಿದನೆಲ್ಲರ್ಗೆ ಕ್ಷಣದೊಳು ಬಯಲಾಯ್ತು । ಕೆಡೆಮುಟ್ಟೆ ತಣಿದುದು ಕಟಕಾ ॥ ೧೬ ॥
ಎಡೆಪಟ್ಟು ಮನೆಯೊಳುಂಬುವರುಂಡು ಮನ್ನಣೆ । ವಿಡಿದರು ನೀಚರೆಲ್ಲರಿಗೆ ॥
ಹೆಡಗೆಯೊಳ್ಕಜ್ಜಾಯ ಕೂಡಲೆಯಡಕೆ ಕ । ಪ್ಪಡವೀಯೆ ಕೊಂಡೊಯ್ದರತ್ತ ॥ ೧೭ ॥
ಒಟ್ಟಗೆ ಮರುತಮಾವಾನೆ ಕುದುರೆಗೆತ್ತಿ । ಗೊಟ್ಟಾದ ಕೀಲಾರಗಳಿಗೆ ॥
ಒಟ್ಟಿಸಿದನು ಮಡ್ಡಿ ಬಾಣಾ ಕಡಲೆ ಕಬ್ಬು । ಬೆಟ್ಟಗಳಡ್ಡಲಾದಂತೆ ॥ ೧೮ ॥
ಪರಿವಾರ ತಣಿಯೆ ವ್ಯಂತರರನು ಭೂಷಣ । ಪರಿಮಳ ವಸ್ತ್ರದೊಳ್ತಣಿಸಿ ॥
ದೊರೆಗಳ ಸನ್ಮಾನದೊಳು ಕರೆಕೊಂಡು ತ । ನ್ನರಮನೆಗೆದ್ದನಾ ಚಕ್ರಿ ॥ ೧೯ ॥
ನರಪತಿ ಖಗಪತಿ ಖಗಮಂತ್ರಿ ಸಖರ ತ । ನ್ನರುಮಂತ್ರಿಯನು ತೃಪ್ತಿವಡಿಸಿ ॥
ಕರಮುಟ್ಟೆ ಮನ್ನಣೆಯಿತ್ತು ಬೀಳ್ಕೊಟ್ಟನೇಂ । ಸುರಸನೊ ಭರತರಾಜೇಂದ್ರಾ ॥ ೨೦ ॥
ಅರಸುಮಕ್ಕಳಿಗವರಬಲೆಯರೆಲ್ಲರಿ । ಗೆರವುಗಾಣದೆ ತನ್ನ ಮನೆಗೆ ॥
ಕರೆದುಣಲಿಕ್ಕಿ ಮುತ್ತುಡಲಿತ್ತು ತೊಡಲಿತ್ತು । ಪಿರಿದರ್ತಿವಮಾಡಿ ಬೀಳ್ಕೊಟ್ಟಾ ॥ ೨೧ ॥
ಗಂಗಾದೇವಿಗೆ ಸಿಂಧುದೇವಿಗೆ ತನ್ನ । ತಂಗಿಯರ್ಗುಚಿತವಸ್ತುಗಳಾ ॥
ಸಾಂಗಿಕದೊಳಗಿತ್ತು ಸುರಪರಿವಾರಜ । ನಂಗಳೆಲ್ಲರ ಮನ್ನಿಸಿದನು ॥ ೨೨ ॥
ಏನೆಂಬೆ ವಿನಯವನತ್ತೆಯರಿಬ್ಬರಿ । ಗಾ ನಮಿರಾಜಗಾ ನೃಪನ ॥
ಮಾನಿನಿಯರಿಗಾತನನುಜನ ಸತಿಯರ್ಗೆ । ಬೋನಗುಡಿಕೆಗಳೆಯ್ದಿದುವು ॥ ೨೩ ॥
ಜನಪ ನಾಲ್ವತ್ತೆಂಟುಗಾವುದದೊಳಗೆ ತೆ । ಕ್ಕನೆ ತುಂಬಿದೆಲ್ಲರ ತಣಿಸಿ ॥
ಮುನಿಭುಕ್ತಿಯೊಂದರ ಕಡಮೆಯಾದುದೆಂದು ಭಾ । ವನೆಯೊಳಗದನು ತೀರ್ಚಿದನು ॥ ೨೪ ॥
ನಮಿರಾಜ ಬಾರನಿಂದಿಗೆ ವಿನಮಿಯನಿಂದು । ಮುಮತೆಯಿಂ ಕಳುಹಹೇಳೆಂದಾ ॥
ಕ್ರಮದಿಂದ ಕರೆಸಿಕೊಂಡೊಂದುಪಂತಿಯೊಳಾಗ । ಸುಮುಖನಾರೋಗಣೆಗೈದಾ ॥ ೨೫ ॥
ಕಣ್ಣು ತಣಿಯೆ ಚಕ್ರಿ ಮಾಳ್ಪುಪಸಗೆಯ ನೋಡಿ । ಹಣ್ಣಾದುದತ್ತೆಯ ಚಿತ್ತಾ ॥
ಬಣ್ಣವೇರಿದ ನಮಿರಾಜನೊಂದಾನೊಂದು । ಹೆಣ್ಣ ಕೊಡರ್ತಾಗದುದೇನು ॥ ೨೬ ॥

ಮುಂಬಗಲಿಂತು ಲೀಲೆಯೊಳು ಸಾಗಿತು ಮತ್ತೆ । ಹಿಂಬಗಲಿನೊಳು ಚಕ್ರೇಶಾ ॥
ತುಂಬಿದ ಕಟಕದೊಳ್ಕುಂಕುಮಗಂಧಕ । ದಂಬದೋಕುಳಿಯಾಡಿಸಿದನು ॥ ೨೭ ॥
ಚಾರುಕಸ್ತೂರಿಕರ್ಪೂರವೆರಸಿದ ಪ । ನ್ನೀರಕೊಪ್ಪರಿಗೆದೋಣಿಗಳಾ ॥
ಕೇರಿಕೇರಿಯೊಳಿಡೆಗಟ್ಟಿನೊಳಿಡೆ ಪರಿ । ವಾರ ವಸಂತವಾಡಿದುದು ॥ ೨೮ ॥
ಗುಂಡಿದುಳ್ಳಾಡಿ ಸರ್ವರು ಹೊಕ್ಕು ಕೂಡೆ ಪೊ । ನ್ನಂಡೆ ಜೀರ್ಕೋಳವೆಯೊಳ್ಕೊಗೆದು ॥
ಸುಂಡಿಲೊಳ್ಸೂಸುವಾನೆಗಳಂತೆ ಚಲ್ಲಿದ । ರ್ಮಂಡೆ ಮೈ ನನೆಯಲೆಲ್ಲರಿಗೆ ॥ ೨೯ ॥
ಬೊಂಬುಳಿ ಪಟಹ ಮೃದಂಗ ತಿತ್ತಿರಿ ಕಾಳೆ । ಬೆಂಬಳಿಯೊಳು ಗಳಬಳಿಸೆ ॥
ತುಂಬಿ ತೆಗೆದು ಹರಿದಿಟ್ಟಾಡಿ ಕುಣಿದು ಸೇ । ನಾಂಬುಧಿ ಲೀಲೆಮಾಡಿದುದು ॥ ೩೦ ॥
ಕುಸುಮಶ್ರೀಗಂಧಕುಂಕುಮದಲ್ಲಿ ಪನ್ನೀರೊ । ಳಸಮಕಟಕವೆಲ್ಲ ನೆನೆದು ॥
ಕೆಸರಾಯ್ತು ನೆಲನೆಲ್ಲ ಬೇಸಗೆಯೊಳಗೆ ತಂ । ಪೆಸೆವ ಪೆರ್ಮಳೆಗರೆದಂತೆ ॥ ೩೧ ॥
ಆನೆಯ ಮೇಲರಸನ ಮನೆ ದೇಹಾರ । ಗಾನನರ್ತನವಾದ್ಯವೆಸೆಯೆ ॥
ಸೇನೆಯೊಳ್ಕೈರೆದು ಬಂದರಮನೆಗೆಯ್ದಿತೊಂ । ದಾನಂದದೊದವನೇನೆಂಬೆ ॥ ೩೨ ॥

ಸುರಗಂಗಾದೇವನು ಸಿಂಧುದೇವನು ನಮಿ । ಧರಣೀಶನರಮನೆಗೆಯ್ದಿ ॥
ಉರುತರಮಂಗಲಾಭರಣವ ತಂದು ಸೋ । ದರಿಗಿತ್ತು ಮಗುಳ್ದರರ್ತಿಯೊಳು ॥ ೩೩ ॥
ಆದ ಕಾಣುತವರ ಪೆಂಡಿರು ನಾವು ಹೋಗಿಯಾ । ಮದವಳಿಗೆಗೆ ಸುವಸ್ತುಗಳಾ ॥
ಪದಿಸಬೇಡವೆಯೆಂದರದಕೆ ನಿಮ್ಮಣ್ಣನೊ । ಪ್ಪಿದರೆಯ್ದಿರೆಂದರಂತವರು ॥ ೩೪ ॥
ಒದವಿ ಗಂಗಾದೇವಿಸಿಂಧುದೇವಿಯರು ರಾ । ಗದೊಳಣ್ಣನೊತ್ತಿಗೆ ಬಂದು ॥
ಮದುವೆಗೆ ಸಿಂಗರಿಸಿದ ಪೆಣ್ಣ ನಾವು ನೋ । ಡಿದರಾಗದೆಯೆಂದರೊಡನೆ ॥ ೩೫ ॥
ತ್ವರಿತವಿಷ್ಟೇಕಕ್ಕ ಸೈರಿಸಿ ರಾತ್ರಿಗೆ । ಮ್ಮರಮನೆಯೊಳು ನೋಡಬಹುದು ॥
ಪರರ ಮನೆಗೆ ನೀವು ನುಗ್ಗಿಕೊಂಡೆಯ್ದುವು । ದರರೆ ಬಲ್ಲವಿಕೆಯೆಯೆಂದಾ ॥ ೩೬ ॥
ಪರಗೃಹವಾವುದು ಗಗನವಲ್ಲಭವೆಂಬ । ಪುರವೆ ನಿಮ್ಮಯ ಕಟಕದೊಳು ॥
ಬರಹೇಳಿದಂತೆ ಬಂದಿದ್ದರು ನಾವೆಯ್ದಿ । ಪರಿಭವವೇನಣ್ಣ ನವಗೆ ॥ ೩೭ ॥
ಸ್ವೀಕಾರಬಟ್ಟು ಕರೆಸಿಕೊಂಡು ಹೋಗದೆ । ನೂಕಿ ಬಂಧುಗಳೆಯ್ದಲವರು ॥
ಏಕವರ್ಬಂದರೊ ಕರೆದೆನೆಯೆಂಬರು । ತೂಕ ತಗ್ಗುವುದಕ್ಕಯೆಂದಾ ॥ ೩೮ ॥
ನೀನೊಲ್ದು ನಂಟರೆಂದರೆ ನಂಟರುರೆ ಬಂಟ । ಮಾನಸರೆನೆ ಬಂಟರೆಲ್ಲ ॥
ಏನ ಮಾಡುವರಣ್ಣ ಪರರೆಮಗವರ ಸ । ನ್ಮಾನವೇನೊಲಿದಿಟ್ಟುದೇನು ॥ ೩೯ ॥
ತಿಣ್ಣವೇನಾರುಖಂಡದೊಳು ಬಾಳ್ವರೊಳೊಂದು । ಪೆಣ್ಣ ಕೂರ್ತಿವರಿಷ್ಟು ಸಿರಿಯಾ ॥
ಹಣ್ಣಿದರಾ ಹೆಣ್ಣ ನೋಳ್ಪರ್ತಿಯಾಯ್ತೆಮ । ಗಣ್ಣಾಜಿ ಹೇಳೆಂದರೊಡನೆ ॥ ೪೦ ॥

ಸಲಲಿ ನಿಮ್ಮರ್ತಿಯೆಂದೊಡನೆ ಬೀಳ್ಕೊಟ್ಟನಾ । ಗಳೆ ಹೋಗಿ ಹೊಕ್ಕರಾ ಗೃಹವಾ ॥
ಅಳಿಯನ ತಂಗಿಯರೆಯ್ತಂದರೆಂದತ್ತೆ । ನಲಿದು ಸನ್ಮಾನವಮಾಡಿದಳು ॥ ೪೧ ॥

ಕಾಲ ತೊಳೆಯಿಸಿ ಸೇವಕಿಯರಿಂದೊಡನೆ ನಿ । ವಾಳಿಯಿಡಿಸಿ ಕುಳ್ಳಿರಿಡಿಸಿ ॥
ಲೋಲನೇತ್ರೆಯರಿರಾ ಕುಳ್ಳಿರಿಯೆಂದಳಾ । ಲೋಲೆ ಯಶೋಭದ್ರಾದೇವಿ ॥ ೪೨ ॥

ಇಲ್ಲಿ ಬೇಡಾವು ನಮ್ಮತ್ತಿಗೆಯೊತ್ತಿನೊ । ಳಲ್ಲದೆ ಕುಳ್ಳಿರೆವಾಕೆ ॥
ಎಲ್ಲಿಹಳೀಕ್ಷಿಸಬೇಕೆನೆ ಮಣಿಮಾಡ । ದಲ್ಲಿಗೇರಿಸಿದಳರ್ತಿಯೊಳು ॥ ೪೩ ॥

ಸೂಸುವೋಹಸದ ಸಿಂಗರದೊಟ್ಟು ತನ್ನ ವಿ । ಲಾಸಿನಿಯರ ಬಳಸಿನೊಳು ॥
ಪೂಸರಲನ ಪುಣ್ಯದೇವತೆಯಂತಿರ್ದ । ಭಾಸುರಾಂಗಿಯ ಕಂಡರಾಗ ॥ ೪೪ ॥

ನಿನ್ನರಸನ ತಂಗಿಯರು ಬಂದರೇಳಕ್ಕ । ಮನ್ನಿಸೆಂದಳು ತಾಯಿ ಮಗಳಾ ॥
ಚೆನ್ನೆಯೆದ್ದಿದಿರಾಗಿ ಬಂದಳನ್ಯೋನ್ಯಪ್ರೇ । ಮನ್ನೆಡಲಾಲಿಂಗಿಸಿದರು ॥ ೪೫ ॥

ಕಲಶಕೆ ಕಲಶ ಸೇರಿದವೊಲೊಬ್ಬೊಬ್ಬರ । ವೊಲೆ ಸೋಂಕೆ ತಕ್ಕೆಗೆ ತೋಳು ॥
ಬಳಸದಾದುವು ಬಡನಡು ಸೋಂಕಿತಿಲ್ಲ ಕಂ । ಗಳೊಳಪ್ಪಿದರು ನಸುನಗುತ ॥ ೪೬ ॥

ಮೂವರೊಂದಾಗಿ ಕುಳಿತರು ಯಶೋಭದ್ರಾ । ದೇವಿ ಕೆಲದೊಳು ಕುಳಿತಳು ।
ಸೇವೆಯ ನರಸುರಸತಿಯರು ಬಳಸಿಯುಂ । ದಾ ವಿಭವದೊಳಿರ್ದರಾಗ ॥ ೪೭ ॥

ಪಡೆವ ತೇಜವೆ ದೊಡ್ಡಿತಲ್ಲವೆ ಚಕ್ರಿಯ । ಮಡದಿಯಂತಮರಕಾಂತೆಯರ ॥
ಒಡನೆ ಕುಳ್ಳಿರಲಾಯ್ತೆ ಜನನಿಗೆ ಪುಣ್ಯದ । ನಡೆವಳಿ ಬೇರಲ್ತೆ ಜಗಕೆ ॥ ೪೮ ॥

ಮಂಡೆ ವೈಗಹ ಮುತ್ತ ಪಡೆದ ಬಿದಿರು ಕರೆ । ವಂಡೆಗಹುದು ಮಂಡೆಗಹುದೆ ॥
ಮಂಡಲೇಶಗೆ ತಕ್ಕ ಪೆಣ್ಣ ಪೆತ್ತವಳೊತ್ತು । ಗೊಂಡು ಕುಳಿತರರ್ತಿವಡುತ ॥ ೪೯ ॥

ನೋಡಿದರಾಕೆಯ ಹಾವಭಾವಗಳ ಮಾ । ತಾಡುವಂತೆಸೆವ ಸಿಂಗರವಾ ॥
ನಾಡಾಡಿಪೆಣ್ಣಲ್ಲ ಚಕ್ರವರ್ತಿಯ ಮರು । ಳ್ಮಾಡುವಳೆಂದು ನೆನೆದರು ॥ ೫೦ ॥

ಕಾರಿರುಳೊಳು ಮಿನುಮಿನುಗಿ ಕಾಣಿಸುತಿಹ । ತಾರಗೆಗಳ ಬಂಬಲಂತೆ ॥
ತೋರಮುಡಿಯೊಳೆಸೆಮುತ್ತಿನ ಬಲೆಯ ಶೃಂ । ಗಾರವೊಪ್ಪಿರೆ ನಿಟ್ಟಿಸಿದರು ॥ ೫೧ ॥

ಕಾಳಿಂದಿಯಿದಿರೊಳು ಸುರಗಂಗೆ ಹರಿವುದ । ಕೇಳಿತಿಲ್ಲದೆ ಕಂಡೆವೆಂದು ॥
ನೀಲಕುಂತಳೆದೆಳೆಮುತ್ತಿನ ಬೈತಲೆ । ಗಾ ಲಲನೆಯರು ಮೆಚ್ಚಿದರು ॥ ೫೨ ॥

ಹರಳೋಲೆ ಮಕರಿಕಾಪತ್ರ ಮೂಕುತಿ ಸಣ್ಣ । ಗೆರೆಯ ತಿಲಕ ಚವಿಚವಿಸೆ ॥
ಸುರಸತಿಯರು ನೋಡಿ ಸೋತರಾ ಪೊಗಕಿನ್ನು । ನರಸತಿಯರು ಸೋಲ್ವುದರಿಂದೆ ॥ ೫೩ ॥

ವಸ್ತುಕವರ್ಣಕಕೃತಿಯ ಲಿಪಿಯ ಸಾಲು । ಪುಸ್ತಕದೊಳಗೆಸೆವಂತೆ ॥
ಫುಸ್ತಿಯ ಚಿಂತಾಕು ಮಣಿಸರ ಬಂದಿ ಪ್ರ । ಶಸ್ತವಡೆದುವು ಕಂಠದೊಳು ॥ ೫೪ ॥

ಹಸ್ತ ಕಡಗ ಗೌಳಸರ ಬಳೆ ಭುಜಕೀರ್ತಿ । ಪ್ರಸ್ತುತದುಂಗುರ ತಾತಿ ॥
ಹಸ್ತಿಯ ಸುಂಡಿಲ ನಗುವ ಹಸ್ತಗಳಲ್ಲಿ । ಹಸ್ತಿಗಮನೆಗೆ ಮೆರೆದುವು ॥ ೫೫ ॥

ಪದಕಹಾರವ ಹೇರಲಡಕದಿ ಬಳೆದುವ । ಲ್ಲದರಿನ್ನು ಹೆಚ್ಚುವುವೆನಲು ॥
ಎದೆತುಂಬಿ ಬಳೆದ ಬಲ್ಮೊಲೆಗಳಾ ಹಾರವ । ಪದಕವನಾಂತು ಮೆರೆದುವು ॥ ೫೬ ॥

ತೂಕದ ಮೊಲೆಗಳ ಬಡನಡು ತಾಳದೆಂ । ದಾ ಕಾಂತೆ ಚಿನ್ನದ ಕಟ್ಟಾ ॥
ಜೋಕೆಗೈದಳೊಯೆನೆ ನವರತ್ನಮಯದ ಚಿಂ । ತಾಕು ತೋರಿತು ನಡುವಿನೊಳು ॥ ೫೭ ॥

ಎರಡುಬೆಟ್ಟವ ಮುಟ್ಟಿ ಕಾಮನ ಬಿಲ್ಲು ಶೇ । ಖರಿಸಿ ಮೂಡಿದುದೊಯೆಂಬಂತೆ ॥
ಬೆರಕೆವರಲ ಹೊನ್ನ ನೇವಳ ಹೊಳೆದುದಾ । ತರುಣಿಯ ಕಟಿತಟಾಗ್ರದೊಳು ॥ ೫೮ ॥

ಕರಿಗೊಂಡ ಬೆಳ್ಮುಗಿಲೊಳು ಚಿತ್ರವೆಸೆ ದಿಟ್ಟಿ । ಗುರಿವ ಮಿಂಚಿನ ಗೊಂಚಲಂತೆ ॥
ನಿರಿವಿಡಿದುಟ್ಟ ದೂವಟದ ಸೀರೆಯ ಮೇಲೆ । ಮೆರೆದುದು ಹೊನ್ನ ಗೊಂಡೆಯವು ॥ ೫೯ ॥

ರಾಗರಸಾಬ್ಧಿಯ ತೆರೆಗಳೊ ಮದುವೆಗೆ । ಸೀಗುರಿಗಳ ಮಾಳ್ಪೊಡೀಕೆ ॥
ತೂಗಿ ಮೇಲ್ಪಂತಿದೋರ್ಪಳೊಯೆನೆ ನಿರಿಗಳ । ಸಾಗಿಸಿದುಡಿಗೆ ಮೋಹಿಸಿತು ॥ ೬೦ ॥

ಚಂಡಮಾನರ ವೀರವಿತರಣಗುಣಕೀರ್ತಿ । ಗೊಂಡ ಕಲಾಪಟ್ಟವೆನಲು ॥
ಪೆಂಡೆಯ ಪಾದವಟ್ಟಗಳೊಪ್ಪಿದುವು ಚಂದ್ರ । ಮಂಡಲಮುಖಿಯಡಿಗಳೊಳು ॥ ೬೧ ॥

ಬೆಳ್ಳುಗುರ್ಗಳಗಲತಗೆಯೂಡಿ ಮಿಂಚಿಕ್ಕಿ । ಪಿಲ್ಲಿಯುಂಗುರವು ಕಣ್ಗೆಸೆಯೆ ॥
ಸಲ್ಲಲಿತಾಂಗಿಯ ಕೆಂಬಜ್ಜೆ ಮೆರೆದುವು । ಚೆಲ್ಲುವಂತನುರಾಗರಸವಾ ॥ ೬೨ ॥

ಅಂಜನವರ್ಣದ ಸಣ್ಣರವಕೆಯುಪ । ರಂಜಿಯುಂದದ ವ್ಯೆಗೆ ಮೆರೆಯೆ ॥
ಮಂಜುವಸ್ತ್ರದ ಮೇಲುಸೆರಗು ಬೆಡಂಗಿಳಿ । ದೇಂ ಜಾಣೆ ದಿಟ್ಟಿಗೊಪ್ಪಿದಳೊ ॥ ೬೩ ॥

ಕಂಗೊಳಿಪೊಳವಸ್ತ್ರದೊಂದು ಕೆಂಪಿಂದ ಶು । ಭ್ರಾಂಗವಸ್ತ್ರಕೆ ಕೆಂಪು ರಮಿಸೆ ॥
ರಂಗು ಮಾದಲದ ಸೀರೆಯನುಟ್ಟಳೆಂಬ ಬೆ । ಡಂಗಿನೊಳೆಸೆದಳಾ ನೀರೆ ॥ ೬೪ ॥

ಜೂಳೆಯ ಚಿನ್ನಪೂ ಕಮಲ ಪೂಚಳಿಕಿಗೆ । ತಾಳೆಹೂ ಬೆಂಬಜ್ಜೆದಂಡೆ ॥
ತೋಳೊಂಕೆ ಕರ್ಣಿಕೆ ಸರಪಣಿ ಮೊದಲಾಗಿ । ಬಾಲೆಗಾಭರಣವೊಪ್ಪಿದುವು ॥ ೬೫ ॥

ಗಂಡನ ಬಾಸಿಗದೊಡನೆ ರಾತ್ರಿಗೆ ತನ್ನ । ಕೊಂಡಿಲು ಮೆರೆವುದಿನ್ನದನು ॥
ಮಂಡಿಪುದೊಂದಲ್ಲದುಳಿದ ಭೂಷಣವೆಲ್ಲ । ಮಂಡಳಿಸಿದ್ದುವಂಗನೆಗೆ ॥ ೬೬ ॥

ವೈವಾಹದುಚಿತವಲ್ಲದೆ ತೊಡವೇಕೆ ಸ್ವ । ಭಾವಶೃಂಗಾರಾಂಗಿಯವಳು ॥
ಹೂವಿಂದ ನಾರೊಪ್ಪುವಂತೆಯಾಕೆಯ ಸೋಂಕಿ । ಪಾವನವಾದುವು ತೊಡಿಗೆ ॥ ೬೭ ॥

ಆಭರಣಗಳಾಕೆಯಂಗವ ಸೋಂಕಿ ಕ । ಳಾಭರಿತಗಳಾದುವಿನ್ನು ॥
ಆ ಭಾವೆ ಭರತರಾಜೇಂದ್ರನ ಸೋಂಕಿ ಮ । ಹಾಭೂಷಣಾಂಗಿನಿಯಹಳು ॥ ೬೮ ॥

ಸಖಿಯರು ಕೊಡುವೆಲೆಘಳಿಗೆಯ ಕೊಳುತ ಸ । ಮ್ಮುಖದೊಳಿದ್ದಮರಕಾಂತೆಯರ ॥
ಮುಖವ ನೋಡುತ ಸುಮ್ಮನಿರ್ದಳು ಗಂಭೀರ । ಸುಖಿಯು ಪಟ್ಟದ ರಾಣಿಯಲ್ತೆ ॥ ೬೯ ॥
ನೀನೇ ನಮ್ಮಣ್ಣನ ಸೋಲಿಸಿದಳೆಂದವ । ರಾನಂದದಿಂದ ಕೇಳಿದರು ॥
ಏನದು ದೊಡ್ಡಿತೆ ನನಗೆಂದು ನಗುವಂತೆ । ಮೋನದೊಳ್ನಗುತಿರ್ದಳಾಕೆ ॥ ೭೦ ॥
ಈ ತಿಲಕವೆ ಚಕ್ರಧರನ ಸೋಲಿಪುದು ಪೇ । ಳೀ ತುರುಬೆ ಮತ್ತೀ ಪೂವೆ ॥
ಮಾತಾಡು ಹೆಣ್ಣೆಯೆಂಬರು ಲಜ್ಜೆಯಿಂದಾಕೆ । ಸೋತಂತೆ ತಲೆಗುಸಿದಿಹಳು ॥ ೭೧ ॥
ಕೈಯ್ಯಿಂದ ಮೊಗವಿಡಿದೆತ್ತಿ ನಗುತ ನೋಳ್ಪ । ರಯ್ಯಯ್ಯೊ ನಿನ್ನಯ ಜಾಣ್ಮೆ ॥
ಮೆಯ್ಯುಳ್ಳ ಮದನ ನಿನಗೆ ಮೆಚ್ಚುವನೆ ನವ್ಮೊ । ಳೊಯ್ಯನೆ ನುಡಿಯೆಂಬರೊಸೆದು ॥ ೭೨ ॥
ಕಡೆಗಡ್ಡಮೊಗವಿಕ್ಕಿ ಸುಮ್ಮನಿಹಳು ನೋಡಿ । ನುಡಿಗೆಟ್ಟ ಹೆಣ್ಣಿಗೆಮ್ಮಣ್ಣ ॥
ಕಡುಸೋತುದಾಯ್ತಲ್ಲಯೆಂದೊತ್ತಿ ಚುನ್ನವ । ನುಡಿವರದಕೆ ನಗುತಿಹಳು ॥ ೭೩ ॥
ಸರಸಗುಣಗಳಿಲ್ಲದಿವಳ ರೂಪೇನು ಕಾ । ಸರಕನ ಹಣ್ಣಿನಂತೆಂದು ॥
ಕೆರಳಿಸಿ ನುಡಿವರು ಮಾತಾಡಬೇಕೆಂದು । ಶಿರಬಾಗಿ ನಗುತಿಹಳಾಕೆ ॥ ೭೪ ॥
ಇಂದು ನುಡಿಯಳಾಕೆ ನಾಳೆ ನಾಡಿದು ನೀವು । ಬಂದೊಮ್ಮೆ ಮಾತಾಡಿ ನೋಡಿ ॥
ಒಂದೊಂದು ನುಡಿಯೊಳೆ ಕಟ್ಟಿಬಿಡುವಳು ಸಾ । ಕಿಂದಿಗೆಂದಳು ಮಧುವಾಣಿ ॥ ೭೫ ॥
ನಿಮ್ಮ ಪಾಡೇನು ನಿಮ್ಮಣ್ಣನ ನುಡಿಗಳ । ನೊಮ್ಮೊಮ್ಮೆ ಕಟ್ಟಿ ನಿಲ್ಲಿಪಳು ॥
ನಮ್ಮದೇವಿಯ ಮುಂದೆ ಪರರಿಗೆ ಜಾಣ್ಮೆಯೇ । ನಮ್ಮ ಸೈರಿಸಿರೆಂದಳವಳು ॥ ೭೬ ॥
ಅಲ್ಲವೆ ಪೇಳೀಕೆಗುರೆ ತನ್ನ ಪತಿಯೊಡ । ನಲ್ಲದೆ ನುಡಿಯದ ಛಲವೆ ॥
ಒಳ್ಳಿತಾಯ್ತದ ಪೇಳ್ವೆವೆಮ್ಮಣ್ಣಗೆಂದರು । ನಲ್ಲಿವೆಣ್ಣೆದೆನಾಚಿ ಬೆದರೆ ॥ ೭೭ ॥
ಏಕೆ ಕಾಡುವಿರಿ ನಿಮ್ಮಣ್ಣನೊಳ್ನಿಮ್ಮೊಡ । ನೀ ಕನ್ನೆ ನುಡಿದು ಗೆಲ್ವವಳೆ ॥
ಸಾಕು ಸೈರಿಸಿರೆಂದು ವಿನಯದಿಂದವರಿಗಿ । ಚ್ಛಾಕಾರಗೈದಳಾ ತಾಯಿ ॥ ೭೮ ॥
ನಿಮ್ಮಣ್ಣನಗ್ಗಳ ನೀವು ದೇವಸ್ತ್ರೀಯ । ರೆಮ್ಮೊಳೇನುಂಟಕ್ಕಂದಿರಿರಾ ॥
ನಿಮ್ಮವರೆಂದೆಮ್ಮ ಕೂಡಿಕೊಂಡಿರಿಯೆಂದು । ಹಮ್ಮಳಿದೊರೆದಳಾ ಜನನಿ ॥ ೭೯ ॥
ಸುರಸತಿಯರಿಗಧಿಕದ ಪೆಣ್ಣ ಪೆತ್ತೆ ಭೂ । ವರಕುಲೋತ್ತಂಸನಿಗಿವಳಾ ॥
ಪರಿಣಯನವ ಮಾಳ್ಪ ಸಿರಿವೆತ್ತೆ ನೀನೆ ಭಾ । ಸುರಪುಣ್ಯವತಿಯೆಂದರವರು ॥ ೮೦ ॥
ಇವಳ ವಿವಾಹಕಾರಣವಾಗಿ ನಾವಿಂದು । ತವರುಮನೆಯ ಕಂಡೆವಾಗಿ ॥
ಇವಳಲ್ಲದೆಮಗಾರು ಹಿತವೆಯರೆಂದು ಮ । ತ್ತವರು ಸಂತಸದೊಳಾಡಿದರು ॥ ೮೧ ॥

ವಿನಯವಾಕ್ಯವನಿಂತು ನುಡಿದು ಮತ್ತಣ್ಣನ । ವನಿತೆಗಾಭರಣವಸ್ತ್ರಗಳಾ ॥
ಅನುರಾಗದಿಂದಿತ್ತು ಪೋಪೆವೆಂದಂದೊಂದು । ಬಿನದವ ತೊಡಗಿದರೊಡನೆ ॥ ೮೨ ॥

ಅತ್ತಿಗೆ ನೋಳ್ಪೆವುಂಗುರಗಳ ತೋರೆನು । ತೊತ್ತಿ ತೆಗೆದು ಬೆರಳಿಂದ ॥
ಇತ್ತಳು ಕುರುಹನೆಂದಿವ ನಿನ್ನ ಪುರುಷನಿ । ಗಿತ್ತಪೆವೆನುತೆದ್ದರೊಡನೆ ॥ ೮೩ ॥

ಏಳೇಳಲಿಬ್ಬರ ಕೈವಿಡಿದಳು ಕುಳಿ । ತೇಳದೆ ಕೈಗಳ ನೀಡೆ ॥
ಚಾಳಿಸಿ ಪೋಪೆವೆಂದತ್ತಿತ್ತಲೊಲೆದರು । ಬಾಲೆ ಬಲ್ವಿಡಿದು ತೆಗೆದಳು ॥ ೮೪ ॥

ಪೆಣ್ಣಾನೆಯೊಂದು ಚಲ್ಲದೊಳು ತೆಗೆದೊಡೆರ । ಳ್ಪೆಣ್ಣಾನೆ ಬರ್ಪ ತೆರದೊಳು ॥
ಪೆಣ್ಣುಗಳಿಬ್ಬರು ಮಿಸುಕದೆ ಕುಳಿತರಾ । ಪೆಣ್ಣಿನ ಶಕ್ತಿಯಿನ್ನೆಂತೊ ॥ ೮೫ ॥

ಭೂರಿನಾರಿಯರ ಕೂಡಿದರು ಚಕ್ರಿಗೆ ತೃಪ್ತಿ । ಸ್ತ್ರೀರತ್ನದೊಳಗಲ್ಲದಿಲ್ಲ ॥
ಸ್ತ್ರೀರತ್ನವಿವಳೆನಲಾಕೆಯ ಶಕ್ತಿ ಗಂ । ಭೀರ ಶೃಂಗಾರವಾರ್ಗುಂಟು ॥ ೮೬ ॥

ತಮ್ಮ ಶಕ್ತಿಗೆ ಮಿಕ್ಕ ಶಕ್ತಿಯು ಕಾಣುತ । ಹೆಮ್ಮಕ್ಕಳೊರೆದರಾ ಕ್ಷಣವೆ ॥
ನಮ್ಮ ಚಕ್ರಿಯು ಸೊಕ್ಕ ನಿಲಿಪಳೆಂದರು ನಕ್ಕು । ಹೆಮ್ಮಕ್ಕಳೆಲ್ಲರರ್ತಿಸಲು ॥ ೮೭ ॥

ಸಂಧಾನಕೆಂದೆಯ್ದಿ ಸೂರೆಮಾಡಿದರೆಂಬ । ಅಂದದೋರ್ಪಿರೆಯೆಂದು ನಗುತ ॥
ಸಿಂಧೂರದಂತಾಯ್ದುಕೊಂಡಳುಂಗುರಗಳ । ತಾಂ ದನಿದೋರುತವರೊಳು ॥ ೮೮ ॥

ನುಡಿ ಪೊಣ್ಮಲಾಕೆಯ ಧ್ವನಿ ಸ್ವರ್ಗವೀಣೆಯು । ನುಡಿಸಿದಂತಿಂಪಾಯ್ತು ಕಿವಿಗೆ ॥
ನುಡಿಗೇಳಬೇಕೆಂದು ತೊಡಗಿದ ಕಾರ್ಯ ಸಂ । ಗಡಿಸಿತೆಂದವರು ನಲಿದರು ॥ ೮೯ ॥

ಎಂತೆಂತುಟಿನ್ನೊಮ್ಮೆ ಹೇಳೆಂದರಾಕೆ ಮು । ನ್ನೆಂತಿದ್ದಳಂತೆ ಮೋನದೊಳು ॥
ತಾಂ ತೆಪ್ಪಗಿದ್ದಳಾ ಗಂಭೀರಕಾ ದೇವ । ಕಾಂತೆಯರರ್ತಿಮಾಡಿದರು ॥ ೯೦ ॥

ಪ್ರವರಶಕ್ತಿಯು ನಿನ್ನ ತವರುಮನೆಯೊಳು ತೋ । ರುವೆಯ್ಯೈಸೆ ಸೈರಿಸಿನ್ನೆಮ್ಮ ॥
ತವರುಮನೆಗೆ ನೀನು ಬಂದಾಗ ಪೇಳ್ವೆವೆಂ । ದವರೆದ್ದರುರೆ ಪಚಾರಿಸುತ ॥ ೯೧ ॥

ಬಳಿಸಂದು ನಗುತ ಯಶೋಭದ್ರಾದೇವಿ ಮಂ । ಗಳವಸ್ತುವಿತ್ತಳವರಿಗೆ ॥
ನಲಿದುಚಿತವನಾಕೆಗವರಿತ್ತರುತ್ಸಾಹ । ಬಳೆಯೆ ಬೀಳ್ಕೊಂಡರತ್ತಿತ್ತ ॥ ೯೨ ॥

ಮುದದಿಂದ ಚಕ್ರೇಶನೆಡೆಗೆಯ್ದಿ ಕಂಡೆವಾ । ಮದುವೆಯ ಪೆಣ್ಣನಣ್ಣಾಜಿ ॥
ಮೊದಲು ನೀನೆಸಗಿದುತ್ಸವ ಪಿರಿದೆಂದಿದ್ದೆ । ವದು ತಕ್ಕುದೆಂದರಾ ಸತಿಗೆ ॥ ೯೩ ॥

ಆಕೆಯ ಶೃಂಗಾರವಾಕೆಯ ಗಂಭೀರ । ಸಾಕು ಮತ್ತಾಕೆ ನೋಡಿದರೆ ॥
ಲೋಕದಂಗನೆಯೆ ಪೆಣ್ಣೆನಲೊಂದು ರತ್ನಶ । ಲಾಕೆ ಹುಟ್ಟಿದುದೆಂದರೊಡನೆ ॥ ೯೪ ॥

ಹಂಸನಾಥನೆ ಬಲ್ಲ ಬರಿದೆ ನೀವಿಷ್ಟು ಪ್ರ । ಶಂಸಿಸಲೇಕಕ್ಕಯೆಂದಾ ॥
ಸಂಶಯ ಬೇಡಣ್ಣ ನಿನ್ನಾಣೆ ಕಂಡು ನಾ । ವುಂ ಸೋತೆವೆಂದರರ್ತಿಯೊಳು ॥ ೯೫ ॥

ಅಣ್ಣ ಕೇಳೆಲ್ಲ ಸಂಭ್ರಮವಾದುದಮ್ಮಾಜಿ । ಬಣ್ಣವಟ್ಟೆಯ್ತಂದರೆಮ್ಮ ॥
ಕಣ್ಣ ಹಬ್ಬಕೆ ಸರಿಯುಂಟೆ ಹೇಳೆಂದರು । ಹೆಣ್ಣುಗಳಾತ್ಮಯನಿಚ್ಛೈಸಿ ॥ ೯೬ ॥

ನಾನು ನಿಮ್ಮಂತೆ ನೆನೆದೆನಕ್ಕ ಮೊದಲೆ ವಿ । ಮಾನವನಟ್ಟಿ ಬರಿಸೆನೆ ॥
ಏನ ಮಾಡಲಿ ಕೇಳಿರಮ್ಮಾಜಿ ಬಹುದಕೊಂ । ದಾನೊಂದು ತಳ್ಳಿಯುಂಟಲ್ಲಿ ॥ ೯೭ ॥

ಅಮ್ಮ ಬಹಾಗ ಚಿಕ್ಕಮ್ಮನು ಬರಬೇಕು । ಕಮ್ಮಗಣೆಯನೊಪ್ಪನದಕೆ ॥
ತಮ್ಮನ ಕಠಿಣಗುಣಗಳ ಹರಹಲೇಕೆ । ಸುಮ್ಮನಿಂದಿಗೆ ತಾಳಿರೆಂದಾ ॥ ೯೮ ॥

ಇರುಳಾಯಿತಷ್ಟಕೆ ಹುಣ್ಣಿಮೆಯೆಂದು ಚಂ । ದಿರನ ಪ್ರಕಾಶ ಬಿಂಬಿಸಿತು ॥
ನರಲೋಕವಲ್ಲ ಜ್ಯೋತಿರ್ಲೋಕವೆಂಬಂತೆ । ಹರೆದುವು ಸೊಡರುಪಂಜುಗಳು ॥ ೯೯ ॥

ವಿಜಯಪರ್ವತದ ಮೇಲರಸನ ಬಾಸಿಗ । ಧ್ವಜ ಚಾಮರಾಳಿಗಳ್ಮೆರೆಯೆ ॥
ಗಜಗಮನೆಯ ರನ್ನದೊಂಡಿಲು ಮೆರೆದುದು । ಧ್ವಜಿತಮಂಗಲಮುಖಿಯಲ್ಲಿ ॥ ೧೦೦ ॥

ಪರರೇರಬಾರದು ಪಟ್ಟದಾನೆಯನದ । ಕರಸನ ಭಾವಚಿತ್ರವನು ॥
ಸುರಶಿಲ್ಪಿ ಕೀಲಿಸಿ ಪಟ್ಟಬಾಸಿಗದ ಮುಂ । ದಿರಿಸೆ ಮೆರೆಸಿದರರ್ತಿಯೊಳು ॥ ೧೦೧ ॥

ಮಂಗಲಮುಖಿಯನಡರಿ ಮಧುವಾಣಿ ರ । ತ್ನಾಂಗಪಟ್ಟದ ತೊಂಡಿಲಾಂತು ॥
ಬೆಂಗಡೆಯೊಳು ಬರೆ ವಿಜಯಪರ್ವತ ಮುಂದೆ । ಶೃಂಗಾರವಡೆದು ನಡೆದುದು ॥ ೧೦೨ ॥

ಮಾನವಲೋಕಮಂಗಲದ ದಂಪತಿಗಳ । ನೂನಭೂಷಣಗಳ ತಳೆದ ॥
ಆನೆಗಳ್ತೊಂಡಿಲುಬಾಸಿಗದೊಟ್ಟೈದರ್ಗ । ವೇನೆಂಬೆನಾ ವಿನೋದವನು ॥ ೧೦೩ ॥

ಕುಂಭಗಳೊಳು ತಮ್ಮ ತೊಂಡಿಲುಬಾಸಿಗ । ಹಿಂಭಾಗವಡೆದ ಬೆನ್ನೊಳಗೆ ॥
ಶುಂಭಿತಮಿಥುನದ ತೊಂಡಿಲುಬಾಸಿಗ । ಸ್ತಂಭಿಸೆ ನಡೆದುವಾನೆಗಳು ॥ ೧೦೪ ॥

ಅರಸಿಯರರಸನ ಮದುವೆಯಾಗಲದನೆಲ್ಲ । ರರಮನೆಯೊಳು ಕಾಣಲರಿದು ॥
ಕರಿಗಳ ಮದುವೆಯ ಕಣ್ಣಾರೆ ಕಂಡರೇಂ । ಸರಸಗಾರನೊ ಸಾರ್ವಭೌಮೊ ॥ ೧೦೫ ॥

ಮೊಳಗಿತು ವಾದ್ಯಕೋಟಾಕೋಟಿ ದಿವಿಜರ । ಪೊಳಲು ಮಾರ್ದನಿಗೊಡುವಂತೆ ॥
ಕಲಕಲಿಸಿತು ಸೇನೆ ಜಯಜಯಯೆಂದುಬ್ಬಿ । ಘುಳುಘುಳಿಸುವ ವಾರ್ಧಿಯಂತೆ ॥ ೧೦೬ ॥

ಪೂರದೊಳುರಿಬಾಣ ಪುಷ್ಪಬಾಣವ ಪರಿ । ವಾರ ಸೂಸುವದೊಂದು ಸೊಬಗು ॥
ತಾರಗೆಗಳು ಮದುವೆಯ ನೋಡಲೊಗ್ಗಾಗಿ । ಧಾರಿಣಿಗಿಳಿದವೊಲಾಯ್ತು ॥ ೧೦೭ ॥

ಕಟಕದೊಳೊಡೆಯನ ಬಾಸಿಗ ಮೆರೆವಾಗ । ಪುಟವೆದ್ದು ಹಿಮವಂತದೇವಾ ॥
ಕಿಟತೋಂಗ ದಿಮಿಕೆನೆ ನಾಗಯಕ್ಷಿಣಿಯರ । ನಟನವಾಡಿಸಿದ ಬಾನದೊಳು ॥ ೧೦೮ ॥

ನಾಗಯಕ್ಷಿಣಿಯರ ನೃತ್ಯವನವ ತೋರೆ । ರಾಗಿಸಿ ವಿಜಯಾರ್ಧದೇವಾ ॥
ಬೇಗ ಮಯೂರಗಂಧರ್ವಗಣಿಕೆಯರ । ಲಾಗುದೋರಿಸಿದನಂಬರದಿ ॥ ೧೦೯ ॥

ಖೇಚರನೃಪರು ಖೇಚರಿಯರ ನೃತ್ಯವ । ನಾಚರಿಸಿದರೊಲ್ದು ಮೇಲೆ ॥
ಭೂಚರಿಯರು ನೆಲದೊಳು ಕುಣಿದರು ಮಝು । ಶ್ರೀಚಕ್ರಧರನ ಮಂಗಲಕೆ ॥ ೧೧೦ ॥

ಆಳಾಪ ಲೆಕ್ಕವೆ ವಾದ್ಯ ಲೆಕ್ಕವೆ ನಾಟ್ಯ । ಕೇಳಿ ಲೆಕ್ಕವೆ ಕಟಕದೊಳು ॥
ತೂಳವೆದ್ದಲ್ಲಲ್ಲಿ ಜನಗಳು ಕುಣಿವುದ । ಹೇಳಲಳವೆ ಮಹೋತ್ಸವವಾ ॥ ೧೧೧ ॥
ಲೆಕ್ಕವೆ ಇಡುವ ನಿವಾಳಿಗಾರತಿಗೆ ಪು । ಷ್ಪಕ್ಕೆ ಫಲಕೆ ಕಡೆಯುಂಟೆ ॥
ದಿಕ್ಕೆಲ್ಲ ಜಯಜಯಯೆನೆ ಮೆರೆದಾ ರಾಯ । ನಿಕ್ಕೆಗೆ ಮಗುಳ್ವಾನೆಗಳು ॥ ೧೧೨ ॥
ಬಾಸಿಗತೊಂಡಿಲ ಮನೆಗೊಯ್ದುರೊಡನೆ ಮ । ತ್ತಾ ಸಖರರಸನಾಜ್ಞೆಯೊಳು ॥
ಆ ಸೇನೆಯರಿಯೆ ಪೆಣ್ಣಾನೆಯ ಗಜಕೆ ವಿ । ಲಾಸದಿ ಮದುವೆಮಾಡಿದರು ॥ ೧೧೩ ॥
ಪರಮದಂಪತಿಗಳ ಸೇವೆಗೈದವರಿಗೆ । ಸಿರಿಸುಖ ಬಪ್ಪುದೊಂದರಿದೆ ॥
ಕರಿಣಿಯ ಕರಪಿಡಿದೊಯ್ಬುದಾ ಕರಿ ಸರ್ವ । ಪರಿವಾರ ಖೋಯೆಂದು ನಲಿಯೆ ॥ ೧೧೪ ॥
ಸರಸಕಾನೆಗಳ ವೈವಾಹವ ಮಾಡಿ ಸ । ರ್ವರು ಹೊರಗಿರೆ ಮನೆಯೊಳಗೆ ॥
ತರುಣಿ ತೊಂಡಿಲ ಮುಡಿಗಿಡಲೊಪ್ಪಿತಂಜನ । ಗಿರಿಯ ಸಾರಿದ ಚಂದ್ರನಂತೆ ॥ ೧೧೫ ॥
ಪಟ್ಟದ ಸತಿಯಾಕೆ ಚಕ್ರೇಶಗೆಂಬುದ । ನಿಟ್ಟಿಸಿದವರರಿವಂತೆ ॥
ಕಟ್ಟೆ ಪಟ್ಟವ ಸುಭದ್ರಾದೇವಿ ಬಲು ಕಡೆ । ಕಟ್ಟೆ ರಂಜಿಸುತಿರ್ದಳತ್ತ ॥ ೧೧೬ ॥
ಭರತೇಶನಿತ್ತ ಸಿಂಗರಿಸಿದ ನವರತ್ನ । ವಿರಚನೆವೆತ್ತ ಬಾಸಿಗವಾ ॥
ಧರಿಸಲದರ ಕಾಂತಿ ಮುಖವೆಂಬ ಚಂದ್ರಗೆ । ಪರಿವೇಷದಂತೆ ರಂಜಿಸಿತು ॥ ೧೧೭ ॥
ರಾಜ್ಯಪಟ್ಟವ ತಮ್ಮ ತಂದೆ ಕಟ್ಟಲು ರತಿ । ರಾಜ್ಯಪಟ್ಟವನಿಂದು ತಾನೆ ॥
ಪ್ರಾಜ್ಯಪುಣ್ಯದಿ ಕಟ್ಟಿಕೊಂಡನೆಂದೆನೆ ಲೋಕ । ಪೂಜ್ಯ ಕಟ್ಟಿದನು ಪಟ್ಟವನು ॥ ೧೧೮ ॥
ಆದೆಯಿದೆ ಲಗ್ನ ಸಮೀಪಕೆ ಬಪ್ಪುದೆಂ । ಬುದ ಹಾರುತರಮನೆಗಳೊಳು ॥
ಮುದವಕ್ಕಳುತ್ಸಾಹದೊಳಗಿದ್ದರಿಲ್ಲಿಗೆ । **ಮದುವೆಯ ಸಂಭ್ರಮಸಂಧಿ** ॥ ೧೧೯ ॥
ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೦ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೧ ॥
ಪಡಿಸಣಗೊಡುತುಂಬರಂತೆ ಲೋಕಕೆ ಸುಖ । ಗೊಡುತತಿಸುಖವ ಭೋಗಿಸುವ ॥
ಕಡುಸುಖ ನನ್ನೆದೆಯೊಳು ನಿಂದು ಸುಖವ ಸಂ । ಗಡಿಸು ಚಿದಂಬರಪುರುಷಾ ॥ ೧೨೨ ॥

---

ಮದುವೆಯಸಂಭ್ರಮಸಂಧಿ ಸಂಪೂರ್ಣಂ

## ಸ್ತ್ರೀರತ್ನಸಂಭೋಗಸಂಧಿ.

ಪ್ರೊಡವಿ ನರ್ತಿಸೆ ಮುಕ್ತಿಸತಿಯ ಮದುವೆಯಾಗಿ । ಪೊಡಗೂಡಿ ಘನಸುಖವೆಂಬ ॥
ಕಡಲೊಳೋಲಾಡುವ ಸೊಬಗ ಸತ್ಕಾವ್ಯವ । ನಡೆಸು ನಿರಂಜನಸಿದ್ಧಾ ॥ ೧ ॥

ಇದೆ ಲಗ್ನ ಮುಟ್ಟಲಾಯ್ತೆನೆ ತನ್ನ ತಂಗಿಯು । ಪದೆದು ಪಲ್ಲಕ್ಕಿಯೊಳಿಟ್ಟು ॥
ಮದುವೆಯ ಮಂಟಪಕಾ ನಮಿರಾಜ ಗಾ । ಢದೊಳೆಯ್ದುತಿರ್ದನೇನೆಂಬೆ ॥ ೨ ॥

ಪೆಣ್ಣಿನ ಪಕ್ಕದ ನೃಪರ ನೆರಹಿಕೊಂಡು । ಬಣ್ಣ ಬೆಳಕಿನ ಗಾಡಿಯೊಳು ॥
ತಣ್ಣಸವೆಳುದಿಂಗಳೊಳು ಪಂಜುಕೋಟಿಯು । ಹಣ್ಣಿಸಿ ನಡೆತರುತಿರ್ದಾ ॥ ೩ ॥

ಬಾನದೊಳಂಬರೇಚರಿಯರ ಗಂಧರ್ವ । ಮಾನಿನಿಯರ ನೃತ್ಯವೆಸೆಯೆ ॥
ಭೂನಾರಿಯರ ನೃತ್ಯ ಭೂಮಿಯೊಳೆಸೆಯೆ ರಾ । ಜಾನಂದದೊಳು ಬರುತಿರ್ದಾ ॥ ೪ ॥

ಮದುವೆಯ ಮಂಟಪದಿಂದ ವ್ಯಂತರರನ । ಗ್ಗದ ದೊರೆಗಳ ಕೂಡಿಕೊಂಡು ॥
ಕುದುರೆತೇರಾನೆವೆರಸು ಬುದ್ಧಿಸಾಗರ । ನಿದಿರ್ವರುತಿರ್ದನುಬ್ಬಿನೊಳು ॥ ೫ ॥

ಪೊಣ್ಣಪೊಣ್ಣನೆ ಮೇಲೆ ಕೆಳಗೆ ನರ್ತಿಸುವೆಳೆ । ವೆಣ್ಣುಗಳಾಟಪಾಟದೊಳು ॥
ಪೆಣ್ಣಿನ ಪಕ್ಷಕೆ ನಾಲ್ಮಡಿಯೆನಿಸುವ । ಬಣ್ಣಗಾರಿಕೆಯೊಳೆಯ್ದಿದನು ॥ ೬ ॥

ನೇಜಿಯು ಪಲ್ಲವ ಸತ್ತಿಗೆಯಿಂಪಭಿ । ರಾಜಿಪ ಕಲಸಕನ್ನಡಿಯು ॥
ಪೂಜಿತಕನ್ನೆಯರಿಂದ ಸಂದಿಸಿ ನಮಿ । ರಾಜಗೆ ಮಂತ್ರಿ ಕೈಮುಗಿದಾ ॥ ೭ ॥

ಪೊಮ್ಮಡಿಬೆಳ್ಳಿಯ ಪೂ ಪೊಸಪೊನ್ನ ಪೂ । ಕಮ್ಮಲರೋಳಿಯೊಳಿಡುತ ॥
ಇಮ್ಮುಖದೊಳು ಬಂದ ದಿಬ್ಬಣ ಕೂಡಿ ಮು । ತ್ತೊಮ್ಮುಖವಾಗಿ ನಡೆದುದು ॥ ೮ ॥

ಎರಡುದಿಬ್ಬಣದ ಬಳ್ಳೇರಿ ನಿಸ್ಸಾಳ ತಿ । ತ್ತಿರಿ ಕಾಳೆ ತುಡುಮು ತಂಬಟದ ॥
ಮೊರಹು ಕೋಟಾಕೋಟಿಪಟಲಾರ್ಬು ದಶದಿಕ್ಕು । ಭರಿತದಿ ಘುಮ್ಮೆನಲಾಯ್ತು ॥ ೯ ॥

ಚೆಲ್ಲಿದಂತೆಯ್ತಂದು ನೃಪನರಮನೆಯ ಮುಂ । ದೆಲ್ಲರು ನಿಂದರು ಹೊರಗೆ ॥
ಪಲ್ಲಕ್ಕಿಯುಬಲೆಯ ಮದುವೆಯ ಗೃಹಕೆ ಮ । ಹೋಲ್ಲಾಸದಿಂದೊಯ್ದರೊಡನೆ ॥ ೧೦ ॥

ಜನನಿಯರಿಬ್ಬರುಗೂಡಿ ವಿಲಾಸಿನಿ । ಜನಗೂಡಿ ತಂಗಿ ಮುಂದೆಯ್ದೆ ॥
ವಿನಮಿಗಂಗಾಸಿಂಧುದೇವನವರುಗೂಡಿ । ಮನೆಹೊಕ್ಕನಾ ನಮಿರಾಜಾ ॥ ೧೧ ॥

ಮಂತ್ರದ ವಿಪ್ರರುಗೂಡಿ ಚಕ್ರೇಶನ । ಮಂತ್ರಿ ಮತ್ತೊಳಹೊಕ್ಕನಾಗ ॥
ಮಂತ್ರಶಾಲೆಯವೊಲು ಮದುವೆಯ ಮಂಟಪ । ಸಂತೃಪ್ತಿಸಿತು ಸ್ವಲ್ಪಜನದಿ ॥ ೧೨ ॥

ಮುತ್ತಿನ ಪೆಟ್ಟಕ್ಕಿಯೊಳು ಕನ್ನೆ ನಿಂದಳು । ಮುತ್ತಿನ ತೆರೆಯ ಮರೆಯೊಳು ॥
ಮತ್ತಕಾಶಿನಿಯರು ಹಾಡುತಿರ್ದರು ಸ್ವರ । ವೆತ್ತಿ ಶೋಭನಧವಳಗಳಾ ॥ ೧೩ ॥

ಮೆಟ್ಟಕ್ಕಿಯೊಳು ನಿಂದು ನಲ್ಲನೆದೆಗೆ ಜುಮ್ಮ । ದಟ್ಟಸಿ ಬರಿಸಿದಳೆನಲು ॥
ತೊಟ್ಟನೆ ಭರತೇಶ ಬರುತಿರ್ದನಿದೆ ಲಗ್ನ । ಮುಟ್ಟಲಾಯ್ತೆನೆ ಕೇಳುತೊಡನೆ ॥ ೧೪ ॥
ಕಿನ್ನರಕಿಂಪುರುಷಾಂಗನೆಯುರು ಮುಂದೆ । ಭಿನ್ನರುಚಿಯೊಳೊಲ್ದು ಪಾಡೆ ॥
ಬೆನ್ನೊಳು ತಂಗಿಯು*ರಮುಳವಿಳಾಸಿನಿ । ಸನ್ನಾಹದೊಳೆ ಬರೆ ಬಂದಾ ॥ ೧೫ ॥
ಬಲಗೈಯೊಳಾಂತ ಹೊನ್ನೊರೆಯ ಕಠಾರಿ ಜ । ಕ್ಕುಲಿಸುವ ದೇವಶೃಂಗಾರಾ ॥
ತೊಳಪ ಹಾವುಗೆಮೆಟ್ಟಿ ಚವರಸೀಗುರಿಗಳ । ಬಲುಮೋಡಿಯೊಳು ಬರುತಿರ್ದಾ ॥ ೧೬ ॥
ಸದಮಲಾತ್ಮಾರಾಮ ಷಟ್ಖಂಡನಾಯಕ । ಸುದತೀಜನಾನಂದರೂಪಾ ॥
ಚದುರರ ದೇವ ಜತನ ಜಯುಯೆನೆ ಬಂದು । ಮದುವೆಯ ಗೃಹದೊಳಹೊಕ್ಕಾ ॥ ೧೭ ॥
ತೆರೆಯ ಮರೆಯೊಳಿರ್ದ ನಲ್ಲಳ ನೋಡುವಾ । ತುರದೊಳುದ್ದವನೇರುವಂತೆ ॥
ಬರುತ ಮೆಟ್ಟಕ್ಕಿಯು ಮೆಟ್ಟಿ ನಿಂದನು ಶುಭ । ಕರ ಜಯ ಜಯುಯೆಂಬ ರವದಿ ॥ ೧೮ ॥
ಓದಿದರೊಡನೆ ಭೂಸುರರು ಸಿದ್ಧಾಂತಸಂ । ಪಾದಿತಮಂಗಲಾಷ್ಟಕವಾ ॥
ಆದಿಚಕ್ರಿಗೆ ಸುಭದ್ರಾದೇವಿಗಧಿಕಲೀ । ಲೋದಯ ದೊರಕೊಳ್ಳಲೆಂದು ॥ ೧೯ ॥
ನುತಮಂಗಲಾಷ್ಟಕಗಳನೋದುತೆಡೆಯೊಳಾ । ಯುತವೆಯೆಂದುರೆ ಕೇಳ್ವರದಕೆ ॥
ಹಿತವರಾಯತವೆನೆ ಸನ್ನದ್ಧರಾಗಿಯೆಂ । ಬತುಳವಾಕ್ಯಗಳು ಮೆರೆದುವು ॥ ೨೦ ॥
ಪರಮಮಂತ್ರವನೋದಿ ಮುತ್ತಿನಕ್ಷತೆಗಳ । ಹರಸಿ ದಂಪತಿಗಳಿಗಿಡುತ ॥
ತಿರುಗಿ ಮತ್ತಾಯತವೆಯೆಂಬರದಕೆ ಜೆ । ಚ್ಚರದೊಳಾಯತವೆಂಬರೊಸೆದು ॥ ೨೧ ॥
ಸುಲಲಿತಮಂಗಲಾಷ್ಟಕಪೂರ್ಣವಾಗಿ ಮಂ । ಗಲದ ಕೌಶಿಕೆಯ ರಾಗದೊಳು ॥
ಪಳಮಂಜರಿಯೊಳು ಪಾಡಿದೊಡೆ ಮಧ್ಯದ ತೆರೆ । ತೊಲಗಿತು ಜಯ ಜಯುಯೆನಲು ॥ ೨೨ ॥
ಪ್ರಮದೆಯು ಕೈಗೆ ಪೂಮಾಲೆಕೊಟ್ಟಿದ ನಿನ್ನ । ರಮಣಗೆ ಸೂಡಕ್ಕಯೆಂದು ॥
ನಮಿರಾಜಸಿಂಧುಗಂಗಾದೇವವಿನಮಿಗ । ಳಮಳಸಂಭ್ರಮದೊಳಾಡಿದರು ॥ ೨೩ ॥
ನಾಣಿಂದ ತಲೆಗುಸಿದವಳ ಕೈಗಳ ಮಧು । ವಾಣಿ ಮತ್ತೆತ್ತಿ ಸೂಚಿಸಲು ॥
ಪ್ರಾಣಕಾಂತಗೆ ಮಾಲೆಯಿಟ್ಟಳು ಧವಳಕ । ಲ್ಯಾಣಶೋಭನದ ಘೋಷದೊಳು ॥ ೨೪ ॥
ನಿನ್ನಿಂದ ನನಗೆ ನನ್ನಿಂದ ನಿನಗೆ ತಾಪ । ಮುನ್ನುಕ್ಕಿ ಹೊಯ್ಮಾಲೆಯಾಯ್ತು ॥
ಇನ್ನಿಲ್ಲ ಹೊಯ್ಮಾಲೆ ಹೂಮಾಲೆಯಾಯ್ತೆಂಬ । ಗನ್ನದೊಳ್ಮಾಲೆಯಿಕ್ಕಿದಳು ॥ ೨೫ ॥
ತೋಳವೊದಲು ತಳತಳಿಸಲೆರಡುದುಂಡು । ದೋಳೆತ್ತಿ ಕೊರಳಿಗಾ ನೀರೆ ॥
ಮಾಲೆಯನಿಡುವಾಗ ತ್ರಿಜಗದ ಭಾಗ್ಯ ಬಂ । ದೋಲೈಸಿದಂತಾಯ್ತು ನೃಪಗೆ ॥ ೨೬ ॥

---

* ರವರ

ನೆಗಹಿ ಮಾಲೆಯನಿಕ್ಕುವಾಗ ಗಂಡನ ಮುದ್ದು । ಮೊಗಗಾಣುತೆದೆಜುಮ್ಮೆದಟ್ಟೆ ॥
ನಗುತ ಲಜ್ಜೆಯೊಳಾಕೆ ತಲೆಗುಸಿದಳು ರಾಯು । ನಗುತಿರ್ದನೊಪ್ಪಚ್ಚಿ ಮಿನುಗಿ ॥ ೨೭ ॥
ದೇವಲೋಕದ ತೊಡಿಗೆಯ ತೊಟ್ಟನಹುದು ಸ್ವ । ಭಾವಸೌಂದರನಹುದವನು ॥
ಹೂವಿನ ಮಾಲೆಯುನಿಡಲೊಂದು ಹೊಸಕಾಂತಿ । ತೀವಿತಿನ್ನೆಂತೊ ಸಂತೋಷಾ ॥ ೨೮ ॥
ಮತ್ತೆ ತಂಗಿಯ ಕೈಯ ನಾಲ್ವರು ಸೋದರ । ರೆತ್ತಿ ಚಕ್ರೇಶನ ಕೈಗೆ ॥
ಹತ್ತಿಸಿದರು ಸಕಲೇಂದ್ರಿಯಸುಖದ ಸಂ । ಪತ್ತ ಕೈಸಾರ್ದವಂದದೊಳು ॥ ೨೯ ॥
ದೊಡ್ಡವನಲ್ಲವೆ ನೀನು ಲೋಗರಿಗೆ ಕೈ । ಯೊಡ್ಡೆಯಲ್ಲವೆ ನಮ್ಮ ನೃಪಗೆ ॥
ಒಡ್ಡಬಹುದೆ ಕೈಯ ಹೇಳೆಂದು ನಗುತೆದೆ । ಯೊಡ್ಡಿ ಕೇಳ್ದಳು ಮಧುವಾಣಿ ॥ ೩೦ ॥
ನಸುನಕ್ಕ ನಮಿರಾಜ ಚಕ್ರೇಶನದಕೆ ಸಂ । ತಸಬಡುತೆಡಗೈಯೊಳೊಂದು ॥
ಮಿಸುಪ ಹಾರವ ತೆಗೆದವಳ ಮೇಲಿಟ್ಟನಿ । ನ್ನುಸುರದಿರೆಂದನು ನಗುತ ॥ ೩೧ ॥
ಕರತಳ ಸೋಂಕಲೊಬ್ಬೊಬ್ಬರ ಮೈಯೊಳಂ । ಕುರಿಸುತಿರ್ದುವು ಪುಳಕಗಳು ॥
ಪರಿರಂಭದೊಳಗಿನ್ನು ಸರ್ವಾಂಗ ಸೋಂಕಿದಾ । ಗರರೆ ವಿಲಾಸವಿನ್ನೆಂತೊ ॥ ೩೨ ॥
ಬಿನ್ನಾಣದಿಂದ ತಂದೆಳೆಯ ಲತೆಯನು ಬಾ । ವನ್ನವೃಕ್ಷಕೆ ಹಬ್ಬಲಿತ್ತು ॥
ಪನ್ನೀರನೆರೆವಂತೆ ನಮಿರಾಜನೆರೆದನು । ಹೊನ್ನ ಗಿಂಡಿಯುಲಿ ಧಾರೆಯನು ॥ ೩೩ ॥
ಅಂಗಜಾಗಮಸಿದ್ಧಿರಸ್ತು ಲೀಲಾಸ್ತು ಸು । ಸಂಗೋಸ್ತು ಜಯಯೆಂಬ ರವದಿ ॥
ತಂಗಾಳಿ ಪೂಗಂಪ ಪಿಡಿವಂತೆ ರಾಯ ತ । ನ್ನಂಗನೆಯಂಗುಲಿವಿಡಿದಾ ॥ ೩೪ ॥
ನಲ್ಲಳ ಕೈವಿಡಿದಲ್ಲಿಂದ ನಡೆದೊತ್ತಿ । ನಲ್ಲಿ ಧೂಮವ ಕಳೆದುರಿವ ॥
ಉಲ್ಲಾಸಹೋಮಕುಂಡವ ಬಲವಂದನು । ಮೆಲ್ಲನೋಜೆಯೊಳು ಗಾಡಿಯೊಳು ॥ ೩೫ ॥
ಇನೆಯಳ ಕೈವಿಡಿದಿನಬಿಂಬದೊತ್ತಿನೊ । ಳ್ಬಿನದಕಾಡುವ ಕಾಮನಂತೆ ॥
ಅನಲಕುಂಡವ ಸುತ್ತಿ ಬಂದನು ತನ್ನ ಮಾ । ನಿನಿಯ ಹಸ್ತಾಂಗುಲಿವಿಡಿದು ॥ ೩೬ ॥
ಅಳಿಯನೊಡನೆ ಪೋಪ ಮಗಳ ಗಾಡಿಯನು ಪೆಂ । ಗಳ ಮರೆಯೊಳು ನಿಂದು ನೋಡಿ ॥
ಪುಳಕವಾಂತಾನಂದರಸದೊಳೋಲಾಡಿದ । ಳೆಳಸಿ ಯಶೋಭದ್ರಾದೇವಿ ॥ ೩೭ ॥
ನಮಿರಾಜ ಮೊದಲಾದ ನೃಪರ ಮಂತ್ರಿಯನು ಸಂ । ಭ್ರಮದ ನೋಟದೊಳು ಬೀಳ್ಕೊಟ್ಟು ॥
ರಮಣಿಯ ಕೈವಿಡಿದಾ ರಾಯ ಹೊಕ್ಕನು । ತ್ತಮರಾಜಗೃಹವ ಲೀಲೆಯೊಳು ॥ ೩೮ ॥
ಗಂಡಪೆಂಡಿರ ಪಟ್ಟ ಬಾಸಿಗ ಬೆಂಬಚ್ಚೆ । ದಂಡೆ ನಡುವಿನ ಚಿಂತಾಕು ॥
ತೊಂಡಿಲು ರವಕೆ ಮುಂತಾದ ಕಿರಿದ ಸೆಳೆ । ಕೊಂಡರೂಳಿಗವೆಂಗಳೊಳಗೆ ॥ ೩೯ ॥
ಹೋಗಲೆಂದವ ಹೊರಪಟಶಾಲೆಯೊಳು ಕೊಟ್ಟು । ರಾಗದಿಂದೊಳಗೆಯ್ದುವಾಗ ॥
ಬೇಗ ಗಂಗಾದೇವಿಸಿಂಧುದೇವಿಯುರೆಯ್ದಿ । ಬಾಗಿಲ ತಡೆದರರ್ತಿಯೊಳು ॥ ೪೦ ॥

ನಿಲ್ಲಣ್ಣ ನೀನೆಮ್ಮ ತವರುಮನೆಗೆ ಹೇಳ । ದೆಲ್ಲಿಯು ಹೆಣ್ಣ ಕೈವಿಡಿದು ॥
ಗೆಲ್ಲದಿ ಬರುತಿದ್ದೆ ನಮ್ಮೊಡನವಳೀಗ । ಸೊಲ್ಲಿಸಿ ಬರಲೆಂದರೊಳಗೆ ॥ ೪೧ ॥

ಆರು ಹೆಣ್ಣೆ ನಿನ್ನ ಹೆಸರೇನು ನೀ ನಿಮ್ಮ । ಭೂರಿಕುಟುಂಬವ ಬಿಟ್ಟು ॥
ಆರ ಹಿಂದೆಯ್ದಿದೆ ನಿನಗೀತನೇನಹ । ಕೋರಿ ಹೇಳೆಂದು ಕೇಳಿದರು ॥ ೪೨ ॥

ಕಂಡರು ದಿವಿಜೆಯರಣ್ಣನ ಚೆಲ್ವ ಸಾ । ಲ್ಗೊಂಡು ತಮ್ಮರ್ಗೆ ಬಾಯ್ಬಿಟ್ಟು ॥
ದಂಡಿನೊಳೀತಗೆ ಕೊಡಿಸಿಕೊಂಡಿದೆ ಬಳಿ । ಗೊಂಡು ಬಂದಪಳೆಂದರೊಡನೆ ॥ ೪೩ ॥

ಸ್ತ್ರೀಯರನೇಕವುಂಟವರ ಮರೆಸಿ ಮಹಾ । ರಾಯನ ಬೇಮಾರ್ಡಿಕೊಂಡು ॥
ಈಯೆಡೆಗೆಯ್ದಿದೆ ಭಾಪು ಮಝುರೆ ಬಲು । ಮಾಯಕಾತಿಯೆಂದರವರು ॥ ೪೪ ॥

ನಿನ್ನ ನೋಳ್ಪೊಡೆ ನಿನ್ನ ತವರುಮನೆಗೆ ಬಂದ । ರುನ್ನತಶಕ್ತಿಗಾಣಿಸಿದೆ ॥
ಇನ್ನಿಲ್ಲಿ ತೋರೊಮ್ಮೆ ನೋಳ್ಪೆವೆಂದರು ಚಕ್ರಿ । ಮುನ್ನಾದುದೇನೆಂದು ಕೇಳ್ದ ॥ ೪೫ ॥

ನಿನಗೆ ತನ್ನುಂಗುರಗಳ ತಂದು ಕೊಡುವೆವೆಂ । ದನುವಿಸಿ ನಾವು ಬಹಾಗ ॥
ತೊನೆದೊಬ್ಬರೊಬ್ಬರನೊಂದೊಂದು ಕೈಯೊಳು । ಬ್ಬಿನೊಳೀಕೆ ನಿಲಿಸಿದಳ್ತೆಗೆದು ॥ ೪೬ ॥

ಕುಳಿತೇಳದಿಬ್ಬರ ಬರಸೆಳೆದುಂಗುರ । ಗಳ ಸೆಳೆಕೊಂಡಳಾಗೀಕೆ ॥
ಬಲುಮೆಯನಿಲ್ಲಿ ತೋರಲಿಯೆಂದರದಕೆ ತ । ನ್ನೊಳು ಮೆಚ್ಚಿ ನಕ್ಕನಾ ನೃಪತಿ ॥ ೪೭ ॥

ನುಡಿ ಹೆಣ್ಣೆಯೆಂಬರು ಸುಮ್ಮನಿಹಳು ನಮ್ಮ । ನೊಡೆಹೊಯ್ದು ಹೋಗೆಂಬರದಕೆ ॥
ಮುಡಿ ಬಾಗಿ ನಗುತಿಹಳಲ್ಲದಿರ್ದೊಡೆ ತಪ್ಪ । ಕೊಡು ಬಿಡೆವೆಂದರು ಕೂಡೆ ॥ ೪೮ ॥

ನನ್ನೊಳಗಾದವಮಾರ್ಡಿದ ತಪ್ಪನು । ನನ್ನದೆಂದೆ ಕಾಣಿರಕ್ಕ ॥
ಮನ್ನಿಸುವೆನು ನಾನು ನಿಮ್ಮನೆಂದನು ಚಕ್ರಿ । ಮನ್ನಣೆಯೇನೆಂದರವರು ॥ ೪೯ ॥

ರನ್ನಚಿನ್ನದಲಿ ಮಾಡಗಳು ನಿಮ್ಮಿರ್ವರ್ಗೆ । ಹೊನ್ನುಯ್ಯಲೊಬ್ಬರೊಬ್ಬರಿಗೆ ॥
ಪನ್ನೆರಳ್ಕೋಟಿಗ್ರಾಮವನೀವೆ ಹಿಡಿಯಿರಾ । ರನ್ನಮುದ್ರಿಕೆಯನೆಂದಿತ್ತ ॥ ೫೦ ॥

ನಗುತೊಲ್ದು ಸ್ತ್ರೀಪುರುಷರು ಸುಖಬಾಳಿರೆಂ । ದೊಗುಮಿಗೆ ಸೇಸೆಯನಿಟ್ಟು ॥
ಜಗಕಗ್ರಗಣ್ಯನ ಸೋದರಿಯರು ಪೋದ । ರಗಣಿತೈಶ್ವರ್ಯಲಾಭದೊಳು ॥ ೫೧ ॥

ಸಕಲವಸ್ತುವನಿಟ್ಟುಕೊಟ್ಟು ಕಾಲ್ದೊಳೆದು ಸೇ । ವಕಿಯರೆಲ್ಲರು ಹೋದರೊಡನೆ ॥
ಶಕುನಿಮಂಚದ ಪಾಸಿನೊಳು ಹುಲ್ಲೆಗಣ್ಣ ಭಾ । ವಕಿಗೂಡಿ ಕುಳಿತನಾ ಸೊಬಗಾ ॥ ೫೨ ॥

* * * * * * * *

ನೊಚ್ಚನೇರಿತು ನಿದ್ರೆ ರಮಣನನಪ್ಪಿ ಕ । ಣ್ಮುಚ್ಚಿದಳಾ ಮೃಗನೇತ್ರೆ ॥
ಸಚ್ಚಿದಾನಂದವಸ್ತುವನಪ್ಪಿ ನೃಪತಿ ಕ । ಣ್ಮುಚ್ಚಿದನೇನು ಭಾವಕನೊ ॥ ೧೬೧ ॥

ಮೊಲೆಯ ಸೋಂಕಿನೊಳಿದ್ದುದಾ ದೇಹ ಮನವಾತ್ಮ । ಕಲೆಯ ನೆಮ್ಮಿ ದುರ್ದಿನ್ನವನ ॥
ನೆಲೆ ಮೋಕ್ಷಗಾಮಿಗೆ ಗವ್ಯವಲ್ಲದೆ ನಾಡ । ಬಳಕೆಗಾರರಿಗೆ ಗೋಚರವೆ ॥ ೧೬೨ ॥
ಮಂಗಲನಿದ್ರೆಯೊಳಿರಡುಘಳಿಗೆ ತನ್ನ । ಕಂಗಳ ಮುಗಿದಿದ್ದು ನೃಪತಿ ॥
ಅಂಗನೆ ಮಿಸುಕದಂತೋಜೆಯೊಳೆದ್ದಾತ್ಮ । ಸಂಗದೊಳಿದ್ದನೇನೆಂಬೆ ॥ ೧೬೩ ॥
ತಳ್ಪದ ಮೇಲೆ ಸಿದ್ಧಾಸನದೊಳು ಕುಳಿ । ತೊಳ್ಪಿಂದ ಹಂಸನಾಥನನು ॥
ನೋಳ್ಪೆನೆಂದಕ್ಷಿ ಪುಟವ ಮುಚ್ಚಿ ಕಂಡನಾ । ಗಳ್ಪೊಸವೆಳಗ ರೂಪಾಗಿ ॥ ೧೬೪ ॥
ಪೊಸಮದವಳಿಗೆಯ ರತಿಯಲ್ಲಿ ಜಾಡ್ಯ ಝಾ । ಡಿಸಿಹೋಯ್ತು ಗೆಲವಾಯ್ತು ಮನಕೆ ॥
ಬಿಸಿಬಿಟ್ಟ ಸೂರ್ಯನಂತಂಗದೊಳಾತ್ಮ ಕಾ । ಣಿಸುತಿದ್ದನಾ ಚಕ್ರಧರಗೆ ॥ ೧೬೫ ॥
ಪರಮಾತ್ಮಯೋಗದೊಳಿಪ್ಪಾಗ ಕರ್ಮ ನಿ । ರ್ಜರಿಸಿದ್ದುದು ಘಲಘಲನೆ ॥
ಎರಡುಘಳಿಗೆಯ ಮೇಲಾ ಕಾಂತೆ ನಿದ್ರೆ ಪೈ । ಸರಿಸಿ ಮೈಮುರಿದೆದ್ದಳೊಡನೆ ॥ ೧೬೬ ॥
ಹಂಸಕದುಲುಹು ಕಂಕಣನಾದಗೇಳ್ದಮ್ಮ । ತಾಂಶುವದನೆಯೆದ್ದಳೆಂದು ॥
ಹಂಸನಾಥನಿಗೆ ವಂದಿಸಿ ಕಣ್ದೆರೆದನ । ದೇಂ ಸುಖಶೀಲನೊ ಚಕ್ರಿ ॥ ೧೬೭ ॥
ಬೆಳಗಹ ಜಾವದೊಳಿರ್ವರು ಜಲವ ಮು । ಕ್ಕುಳಿಸಿ ವೀಳೆಯುವ ಕೈಕೊಂಡು ॥
ಕಳಕಳಿಸುವ ಮೊಗ ನೋಡುತ ನಗುತ ಹುಂ । ಕೊಳುತ ನುಡಿವುತಿದ್ದರೊಸೆದು ॥ ೧೬೮ ॥
ಮುಂಜಾವ ಧಾರೆಯಾಯ್ತೆರಡುಜಾವದೊಳರ್ತಿ । ರಂಜಿಸಿ ನಿದ್ರೆ ಹಿಂಗಿದುದು ॥
ಹಿಂಜಾವದೊಳು ಮತ್ತೆ ಹೊಸಬರಾಗಿದ್ದರ । ದೇಂ ಜಾತಿಸುಖಿಗಳೊ ಜಗಕೆ ॥ ೧೬೯ ॥
ಏನೆಂಬೆನವಳೊಂದು ಭಕ್ತಿಯ ಬೊಂಬೆ ಸಂ । ಧಾನಿಪ ವೀಳೆಯದೆಗೆದು ॥
ನಾನಲ್ತೆ ದೇವರಿಗೂಳಿಗವೆಣ್ಣೆಂದು । ತಾನೇ ಕೈಮುಟ್ಟಿ ನೀಡಿದಳು ॥ ೧೭೦ ॥
ಪುತ್ತಳಿ ವೀಳೆಯ ಕೊಡಲಿ ಸಾಕಬಲೆ ನ । ನ್ನೊತ್ತಿನೊಳಿರು ತೆಪ್ಪಗೆಂದಾ ॥
ಚಿತ್ತೈಸಬೇಕೆನ್ನ ಸೇವೆಯನೆಂದೊಲ್ಮೆ । ವೆತ್ತು ಕೊಟ್ಟಳು ಬೇಡಿಕೊಂಡು ॥ ೧೭೧ ॥
ನುಡಿವಳೊಯ್ಯನೆ ಗಂಡ ನುಡಿಯಲಾ ನುಡಿಗೇಳು । ತೊಡನಯ್ಯ ಜೀಯೆಂಬಳೊಸೆದು ॥
ಪಡಿಮಾತಿನೊಳು ನೀವು ತಾವೆಂದು ವೀಳೆಯ । ಗೊಡುತಿದ್ದಳಾ ಪತಿಭಕ್ತೆ ॥ ೧೭೨ ॥
ರತಿಯಲ್ಲಿ ನೀನುತಾನೆಂದಾಡಿ ಕೂಡೆ ಮು । ತ್ತತುಳಗಂಭೀರದೊಳ್ನುಡಿವ ॥
ಸತಿಯ ಗುಣಕೆ ರಾಯ ಮೆಚ್ಚಿದನದು ರಾಜ । ಸುತೆಯರ ಲಕ್ಷಣವಲ್ತೆ ॥ ೧೭೩ ॥
ಕೊಡುವಳೆಲೆಯ ಘಳಿಗೆಯನೊಮ್ಮೆ ಕೈಗೆ ಬಾ । ಯ್ಗೊಡನೊಮ್ಮೆ ನೀಡಲಾ ನೃಪತಿ ॥
ಕಡಿದುಕೊಂಬಾಗರ್ಧಭಾಗವ ಸೆಳೆದರ್ತಿ । ವಡುತ ತಾ ಕೊಂಬಳಾ ರಮಣಿ ॥ ೧೭೪ ॥
ಅಂತು ಬೇಡಬಲೆಯೆಂದಾ ರಾಯ ಬಾಯೊಳೋ । ರಂತೆಲೆಘಳಿಗೆಯ ಕಚ್ಚಿ ॥
ಕಾಂತೆಯ ಬಾಯ್ಗೊಡಲವಳೀಳ್ದುಕೊಂಬೊಂದು । ಸಂತೋಷ ದಾಂಟಿತು ಸುರರ ॥ ೧೭೫ ॥

ಸೋದರಮಾವನ ಮಗಳು ಮೇಲಮರತ । ಳೋದರಿಯರ ಮಿಕ್ಕ ರೂಪು ॥
ಆದಿತೊಡಗಿ ಬೇಟಗೊಂಡಿದ್ದು ಕೂಟವಿಂ । ದಾದುದಿನ್ನೆಂತೊ ವಿಲಾಸಾ ॥ ೧೭೬ ॥

ಸೋದರದತ್ತೆಯ ಮಗನು ತೇಜದಿ ಮೂಡು । ವಾದಿತ್ಯ ಷಟ್ಖಂಡದರಸು ॥
ಆ ದೇವಿಗವಗೂ ಚಿನ್ನವ ಕಾಸಿ ಬೆಚ್ಚವೊ । ಲಾದುದು ಮನಸಿನೊಂದೆರಕಾ ॥ ೧೭೭ ॥

ಆವಲ್ಲಿಯೂ ರತಿ ಸೊಗಸು ಸೋದರದತ್ತೆ । ಮಾವನ ಸಂಬಂಧವಾದ ॥
ಭಾವಜಾರ್ಥಿಗಳಾಟ ಸೊಗಸಿನಲ್ಲಿಯು ಸೊಗ । ಸಾ ವಿಲಾಸಕೆ ಸರಿಯುಂಟೆ ॥ ೧೭೮ ॥

ಪರಿಪಾಕವಾದ ಚಿತ್ತದೊಳು ಮತ್ತೊಮ್ಮೆ ಕಾ । ತರ ತೀರುವಂತೊಡಗೂಡಿ ॥
ಸ್ಮರಿಸಿ ಹಲವುಕಾಲ ಬೇಟಗೊಂಡಳಲನೊಂ । ದಿರುಳ ಭೋಗದೊಳು ತೀರ್ಚಿದರು ॥ ೧೭೯ ॥

ತನುಶುಚಿಗೈದು ಪಾಸಿನೊಳು ವಿಶ್ರಮಿಸಿದ್ದು । ಬಿನದದಾಲಿಂಗದೊಳಿರಲು ॥
ಇನನುದಯವನರಿದೆಸಗಿದರಾ ಸೆಜ್ಜೆ । ವನೆಯ ಬಾಗಿಲೊಳು ಗಾನವನು ॥ ೧೮೦ ॥

ಭೂಪಾಳಿ ಧನ್ಯಾಸಿರಾಗವ ಸತಿಯರಾ । ಳಾಪಿಸಿ ಹಂಸನ ಪಾಡೆ ॥
ಆ ಪುಣ್ಯಗಾನದೊಳುಪ್ಪವಡಿಸಿದನಾ । ಭೂಪ ತನ್ನೋಪಳುವೆರಸಿ ॥ ೧೮೧ ॥

ನಾರಿವೆರಸಿ ಮೆಲ್ಲನಡಿಯಿಟ್ಟು ಹೂವಿನ । ದ್ವಾರವ ತೆಗೆದು ರಾಜೇಂದ್ರಾ ॥
ಆ ರಮ್ಯಗೃಹದಿಂದ ಪೊರವಟ್ಟನಿಲ್ಲಿಗೆ । **ಸ್ತ್ರೀರತ್ನಸಂಭೋಗಸಂಧಿ** ॥ ೧೮೨ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದ್ಧಪ । ರಾಜಿತೇಶ್ವರನ ಕಾಣುವರು ॥ ೧೮೩ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೮೪ ॥

ನೆನೆದವರಿಗೆ ನೆನೆದರ್ಥವ ಸಾರ್ಚುವ । ಅನುಪಮಾನಂದಸ್ವರೂಪಾ ॥
ಇನಿಸಗಲದೆ ನನ್ನ ಮನದೊಳಿರಮೃತವ । ರ್ಧನನೆ ಚಿದಂಬರಪುರುಷಾ ॥ ೧೮೫ ॥

ಸ್ತ್ರೀರತ್ನಸಂಭೋಗಸಂಧಿ ಸಂಪೂರ್ಣಂ

## ಸೇಸೆಯ ಸಂಧಿ

ಮನ್ನಣೆಕಾರ ಮನೋಹರರೂಪ ಲೋ । ಕೋನ್ನತಕೋಮಲಚರಿತಾ ॥
ಸನ್ನುತಮತಿದೋರು ಶರಣಾಗು ಸೌಖ್ಯಸಂ । ಪನ್ನಾ ನಿರಂಜನಸಿದ್ಧಾ ॥ ೧ ॥

ಸತಿಯು ಮಜ್ಜನಗೈಸಿ ತಹುದೆಂದು ಭಂಡಾರ । ವತಿಗೆ ಪೇಳ್ದೋಜೆಯೊಳ್ಕಳುಹಿ ॥
ಕ್ಷಿತಿಪ ತಾನೊಂದು ಮನೆಯ ಹೊಕ್ಕು ಮಜ್ಜನಾ । ಯುತನಾಗಿ ಬಸದಿಗೆಯ್ದಿದನು ॥ ೨ ॥
ಜಿನಪೂಜೆಗೈದಾತ್ಮಯೋಗವ ಮಾಡಿ ಮೋ । ಹನದ ಶೃಂಗಾರಾಂಗನಾಗಿ ॥
ಮನೆಯೊಳಗಣ ಭದ್ರಶಾಲೆಯ ಸಿಂಹಾ । ಸನದಲ್ಲಿ ಕುಳಿತನೆಯ್ತಂದು ॥ ೩ ॥

ಗಂಡನಲ್ಲಿರಲಿತ್ತ ರತಿಚಂದ್ರೆಯೆಂಬಳ । ಭಂಡಾರವತಿ ಕೂಡಿಕೊಂಡು ॥
ಪೆಂಡತಿಗೊಲ್ದು ಮಜ್ಜನಗೈಸಿ ಮುಗಿವುದು । ಕಂಡಳಾ ಮಧುವಾಣಿ ಬಂದು ॥ ೪ ॥
ಸಖಿಯ ಕಾಣುತ ಲಜ್ಜೆಯಿಂದಾಕೆ ನಗುತಿಪ್ಪ । ಮುಖಬಾಗಿದಳು ಕೂಡೆ ಕೆಳದಿ ॥
ಸುಖಸುಗ್ಗಿಯಾದುದೆ ಲೇಸೆಂದು ಕೈಯಿಂದ । ಮುಖವಿಡಿದೆತ್ತಿ ಕೇಳಿದಳು ॥ ೫ ॥
ನೆಗ್ಗಿಹೋದುವು ಬಳೆ ತಕ್ಕೆಯಿಂ ಮೊಲೆಕಟ್ಟು । ಕುಗ್ಗಿದುವಧರ ಗಾರಾಯ್ತು ॥
ಅಗ್ಗದ ವೀರನೊಳಿರುಳರ್ತಿಗಾಳಗ । ಲಗ್ಗೆಯಾಯ್ತೆಂದಳಾ ಸುರಸೆ ॥ ೬ ॥
ಬೆನ್ನೊಳು ತೋಳೊಳು ಮೊನೆಗಾಯವಿದೆ ತೊಡೆ । ಯಿನ್ನೆಂತೊ ಕಟಿಗಳೊಳೆಂತೊ ॥
ನನ್ನ ನಗ್ಗಿಗಳಾದುವೀ ಮೊಲೆಗಳು ಮಝು । ಚೆನ್ನಾಗಿ ತಾಳಿದೌ ಧೀರೆ ॥ ೭ ॥
ಹೇಳಿದೆನಂದೆ ಚಕ್ರಿಯ ಕೂಟ ಬಿರಿಸಿಪ್ಪು । ತಾಳಿ ಮದುವೆಯಾಗಲೆಂದು ॥
ಜೋಲಿಯೇಕೆಂದೆ ನೀನಾ ಫಲವುಣ್ಣೆಂದು । ಲೀಲೆಗೈದಳು ಮಧುವಾಣಿ ॥ ೮ ॥
ತೆಗೆ ಮಧುವಾಣಿಯೇನೆಂಬೆ ದೇವಿಗೆ ರಾಯ । ನುಗುರ್ಗಲೆ ತಾಗೆ ಕುಂದಣದ ॥
ತಗಡಿಗಕ್ಷರ ತಾಗಿ ರಕ್ಷೆಯಾದಂತೆಂದು । ಪೊಗಳೆಂದಳಾ ರತಿಚಂದ್ರೆ ॥ ೯ ॥
ಚಂದ್ರಮುಖಿಗೆ ಚಕ್ರಿ ನಖರೇಖೆಯೆಂಬರ್ಧ । ಚಂದ್ರಾಭರಣವ ತೊಡಿಸಿ ॥
ಚಂದ್ರಲೇಖೆಯ ಪೋಲ್ವ ತುಟಿಯ ಕೆಂಪಿಂಗೆ ರಾ । ಜೇಂದ್ರ ಬೆಳ್ಪನಿಸಿದನೆನ್ನು ॥ ೧೦ ॥
ರಾಣಿಗೆ ರಮಣನ ಕೂಟವಾದಪ್ಪು ಸಾಂ । ಬ್ರಾಣಿಗೇರಾಟವಾದಂತೆ ॥
ತ್ರಾಣವಹುದು ಜಾಡ್ಯ ಕೆಡುವುದಲ್ಲವೆ ಮಧು । ವಾಣಿ ಹೇಳೆಂದಳಾ ಕುಶಲೆ ॥ ೧೧ ॥
ಭರತರಾಜನ ಸಂಗವೆಂದಾದುದಂದೆ ಸೌಂ । ದರಿ ಭಾಗ್ಯವತಿಯೆನ್ನದಿದನು ॥
ವಿರಚಿಸುವರೆಯೆಂದ ರತಿಚಂದ್ರೆಗೆಲ್ಲರು । ಹರುಷಬಟ್ಟಹುದೆಂದರೊಡನೆ ॥ ೧೨ ॥

ಮೋಹದ ಮನೆಯಿಂದ ಶೃಂಗಾರಗೃಹಕೆಯ್ದಿ । ಮೋಹನಶೃಂಗಾರದೊಡಿಸಿ ॥
ಆ ಹರಿಣಾಕ್ಷಿಯ ನೃಪನೆಡೆಗೊಯ್ವೆನೆಂ । ದೂಹಿಸುವಾಗೊಂದು ಲೀಲೆ ॥ ೧೩ ॥

ಬಂದು ಗಂಗಾದೇವಿಸಿಂಧುದೇವಿಯರಲ್ಲಿ । ಸಂದಿಸಿದರು ರಾಜಸತಿಯೂ ॥
ಮಂದಹಾಸದೊಳೊಬ್ಬರೊಬ್ಬರಾಲಿಂಗಿಸು । ತೊಂದಾಗಿ ಕುಳಿತರರ್ತಿಯೊಳು ॥ ೧೪ ॥
ರೋಡಾಡಿ ಹೋದಿರಿ ನಿನ್ನೆ ನೀವಿಂದೇನ । ಮಾಡಬೇಕೆಂದೆಣಿಸಿದಿರಿ ॥
ನೋಡಬಂದಿರೊ ಕಾಡಬಂದಿರೊ ಹೇಳಿರೆಂ । ದಾಡಿದಳಾ ರಾಯನರಸಿ ॥ ೧೫ ॥
ಕಾಡಬಂದವರಲ್ಲ ನೋಡಬಂದೆವು ಮೈಯ । ನೋಡಬೇಕೀ ರವಕೆಯನು ॥
ನೀಡಿ ಸಡಲಿಸೊಯ್ಯನತ್ತಿಗೆಯೆಂದು ಮಾ । ತಾಡಿದರಾ ಬಿನದೆಯರು ॥ ೧೬ ॥
ನಕ್ಕಳಿಂದೇನ ನೋಳ್ಪಿರಿ ನೋಡೆ ರವಕೆಯ । ನಿಕ್ಕದ ಮೊದಲೆಯ್ದೆಬೇಡ ॥
ಜಕ್ಕಿಯ ತೆರೆಯ ತೆರೆದು ಮೈಯ ತೋರ್ಪಾಗ । ಚಿಕ್ಕಮಾತೇಕೆಂದಳಾಕೆ ॥ ೧೭ ॥
ಕೊರಳಿಗಿಷ್ಟೇಕೆ ಚಂದನಲೇಪ ಮುತ್ತಿನ । ಸರಬಂದಿ ಮರೆಸವೆ ನೀರೆ ॥
ಇರಲಿ ಪೇಳ್ನಿಮ್ಮ ಖೇಚರಿಯರ ಜಾತಿಸಿಂ । ಗರದಂಗವಿದೊಯೆಂದರೊಡನೆ ॥ ೧೮ ॥
ಚಂದನವಿಷ್ಟೇತಕೆಂಬಾಗ ಲೋಭವೆ । ಬಂದಿ ಮುತ್ತಿನ ಸರಗಳನು ॥
ಬಂದವರಿಗೆ ತೋರುತಿರಬೇಕೆ ತೊಡಿಗೆ ಕಂ । ಪೊಂದೆ ಕಪ್ಪವೆಯೆಂದಳರಸಿ ॥ ೧೯ ॥
ಕರಗಳೊಳ್ನಿನ್ನಿನ ಬಳೆಗಳಿಂದಿಲ್ಲೀಗ । ನೆರೆದಿವೆ ಹೊಸಬಳೆ ನಿನ್ನ ॥
ಪರಿ ತಾನು ನಿನ್ನಿನ ಪರಿಯಲ್ಲವಿಂದೊಂದು । ಪರಿಯಾದುದೇನೆಂದರವರು ॥ ೨೦ ॥
ಹಳೆಯ ಬಳೆಯ ಬಿಟ್ಟು ಹೊಸಬಳೆದೊಟ್ಟರೇ । ನಿಳೆಯೊಳು ಕೊರತೆಯೆ ಅಹಹಾ ॥
ಬಳೆಗಳ ಕುರುಹ ಕಂಡುದು ಚಿತ್ರ ನೀವೇನು । ಬಳೆಗಾತಿಯರೊಯೆಂದಳೊಲೆದು ॥ ೨೧ ॥
ಆಗಲಿ ನೀನೆಮ್ಮ ಜರೆಯೆ ನೋವಿಲ್ಲ ಚೆ । ನ್ನಾಗಿ ಬಾಯ್ದೆರೆದು ಮಾತಾಡು ॥
ಮೂಗಿಗೆ ತಾವರೆಯೂಂಕೆಗೊಟ್ಟೇಕೊಚ್ಚ । ತಾಗಿ ನುಡಿವೆಯೆಂದರೊಡನೆ ॥ ೨೨ ॥
ಹೊಸತೊಂದುತಾವರೆಯರಲ ಕೈವಿಡಿದು ವಾ । ಸಿಸುತ ಮಾತಾಡಿದರೇನು ॥
ನಸು ಬಾಯದೆರೆದರೆ ಸಾಲದೆ ಪಲ್ಲ ಲೆ । ಕ್ಕಿಸಬೇಕೆ ನೀವೆಂದಳಾಕೆ ॥ ೨೩ ॥
ಎವೆಯಿಕ್ಕದೀಕ್ಷಿಪರಲ್ತೆ ನೀವದರಿಂದ । ತವೆ ಬಾಯ ಬಿಡೆ ಪೇಳ್ದರೆಮ್ಮ ॥
ನವಗೆ ನಿಮ್ಮೋಜೆಯೇಕತ್ತಿಗೆಯುರಿರದು । ನಿವಗಿರಲೆಂದಳಾ ದೇವಿ ॥ ೨೪ ॥
ಮೆಲದಿರಂಬುಜವನೆಂದೊಡನೆ ತಾವರೆಹೂವ । ಸೆಳೆದುಕೊಂಡರು ಕೂಡೆ ದೇವಿ ॥
ತಲೆಗುಸಿದಳು ಕೂಡೆ ಸುಖಬಾಳು ಬಾಳೆಂದು । ಗೆಲನಕ್ಕು ಹರಸಿದರವರು ॥ ೨೫ ॥
ಸುಖಬಾಳು ಬಾಳು ದುಃಖದ ಬಾಳು ಸಾವೆಂಬು । ದಖಿಲರರಿಕೆಯೆಂದಳರಸಿ ॥
ಮುಖಬಾಗಿ ನಮಿಸಿದರಾವು ಹರಸಿದೆವು । ಮುಖರಾರ್ಥ ಬೇಡೆಂದರವರು ॥ ೨೬ ॥
ಎಂತೆಂತು ನಾನೆರಗಿದೆನೆಯೆಂದಳು ಕೂಡೆ । ಯಿಂತಿಂತು ನಮಿಸಿದೆಯೆಂದು ॥
ಮುಂತವರ್ ತಲೆವಾಗಿ ತೋರ್ಪಾಗ ಹರಸಿದ । ಳಂತಾಯ್ತು ಸರಿಪಂಥವವರ್ಗೆ ॥ ೨೭ ॥

ಮೋರೆಗೆ ಬೆರಳಡ್ಡಾಗಿಟ್ಟಾಕೆ ನಗೆ ಕೈಯ । ಹಾರಹೊಯ್ವರು ಕೂಡೆ ನಿನ್ನ ॥
ಗಾರೆದ್ದ ತುಟಿಯಾಣೆ ನೀನೆ ಗೆದ್ದವಳೆಂದು । ನೀರೆಯರೊಪ್ಪಿದರೊಸೆದು ॥ ೨೮ ॥

ಚಂಡೆ ನೀನೆಮ್ಮಣ್ಣನಸುವನೆಲ್ಲವ ಸೂರೆ । ಗೊಂಡೆಯೆಂದಪ್ಪಿ ತೂಗುವರು ॥
ಚೆಂಡಾಡಿ ಗುದ್ದುವರ್ ಪಣೆಯೊಳು ಪಣೆಯಿಟ್ಟು । ಮುಂಡಾಡಿ ಲೀಲೆಮಾಡುವರು ॥ ೨೯ ॥

ತಳುವೇತಕೆಂದಷ್ಟರೊಳು ಬಂದರರಸನ । ಬಳಿಯಿಂದ ಕಜ್ಜವೆಣ್ಣುಗಳು ॥
ಬಳಲ್ದಿರಿಯತ್ತಿಗೆಯರಿರಯೆಂದಮರ್ದಪ್ಪಿ । ಕಳುಹಿಸಿಕೊಂಡೆದ್ದಳಾಕೆ ॥ ೩೦ ॥

ಅರುಹನಾಲಯಕೆಯ್ದಿ ವಂದಿಸಿ ತನ್ನಯ । ಪುರುಷನಿದ್ದೆಡೆಗೆಯ್ದುವಾಗ ॥
ಭರತೇಶ ಮತ್ತೊಂದು ಕಾರ್ಯವ ಮನದಲ್ಲಿ । ಸ್ಮರಿಸಿದನೇನು ಕೋವಿದನೊ ॥ ೩೧ ॥

ಊಳಿಗದವಳ ಕರ್ಣದೊಳೊಂದ ಪೇಳ್ದಟ್ಟು । ತೂಳಿಗದೆಲ್ಲರ ಕಳುಹೆ ॥
ತೂಳಿದಂತೆಲ್ಲರು ಹೋಗಿ ನಿಂದರು ಭದ್ರ । ಶಾಲೆಯ ಬಾಗಿಲೊಳವರು ॥ ೩೨ ॥

ದೇವಿಯರೊಬ್ಬರೆ ಮೊದಲೆಯ್ದಬೇಕೆಂದು । ದೇವ ಚಿತ್ತೈಸಿದನೆಂದು ॥
ಸೇವಕಿ ಭದ್ರಶಾಲೆಯ ಬಾಗಿಲೊಳು ಮಹಾ । ದೇವಿಯ ಕಿವಿಯೊಳಾಡಿದಳು ॥ ೩೩ ॥

ಏಣಾಕ್ಷಿ ಮಧುವಾಣಿಗಟ ಪೇಳೆ ಲೇಸೆಂದು । ಕಾಣಿಕೆಗವಳ ಕೈಗೊಂದು ॥
ಮಾಣಿಕವಿತ್ತು ಮಂದಿರಕೆ ಕಳುಹಿ ತಕ್ಕ । ತಾಣದೊಳ್ನಿಂದರೆಲ್ಲರೊಳು ॥ ೩೪ ॥

ಮೊಗಸಿ ಮೈಗಂಪಿಗೆ ತುಂಬಿಗಳಾಡೆ ಹಂ । ಸೆಗಳು ಕಾಲ್ಬಳಿವಿಡಿದೆಯ್ದೆ ॥
ಖಗಗಳ ಬಳಸಿನೊಳ್ಬರುತಿದ್ದಳಿವಳಹೊ । ಖಗವನಿತೆಯೆ ತಪ್ಪದೆನಿಸಿ ॥ ೩೫ ॥

ಚರಣದಂದುಗೆ ಹೊನ್ನಸಂಕಲೆ ಮೊಲೆ ಕುಂಭ । ಸಿರಿದೋಳು ಸುಂಡಿಲಂತಾಡೆ ॥
ಮೊರೆವ ತುಂಬಿಯ ಡೌಡೆಯೊಳು ಬರುತಿದ್ದಳು । ಬಿರುದಿನ ಮದಗಜದಂತೆ ॥ ೩೬ ॥

ಒಬ್ಬನೆ ಹರಿಪೀಠವೇರಿರ್ದ ಪತಿಯ ಕಂ । ಡುಬ್ಬಿನೊಳಾಕೆ ಬಹಾಗ ॥
ಒಬ್ಬಳೆ ತಾನೊಂದುಮನೆಯ ಹೊಕ್ಕೈತಹ । ಗಬ್ಬಿಯಾರಿವಳೆಂದ ನೃಪತಿ ॥ ೩೭ ॥

ಭೂಚರಿಯಂತೆಯ್ದಲಂಜುವಳಿವಳೇನು । ಖೇಚರಿಯೊಯೆಂದನದಕೆ ॥
ಖೇಚರಿಯೆಹುದರಿದುದು ಚೋದ್ಯವೆನುತಾಕೆ । ಸೂಚಿಸಲೊರ್ವಳೇಕೆಂದಾ ॥ ೩೮ ॥

ಒರ್ವಳಲ್ಲೀಗ ಕೇಳ್ವವರೊರ್ವರಾನೊರ್ವ । ಳಿರ್ವರುಂಟೇ ಮನೆಯೊಳಗೆ ॥
ಪಾರ್ವ ತುಂಬಿಗಳಡಿಯಿಡುವಂಚೆಯಿವೆ ನಾವು । ಸರ್ವರೆನುತ ಸಾರ್ದಳೊತ್ತಾ ॥ ೩೯ ॥

ಬಾಲೆ ನೀನಾರೆಂದ ನಾನೀಗ ಕೇಳ್ವಾತ । ನೂಳಿಗದವಳೆಂದಳವಳು ॥
ಪೋಲಾದ ಮಾತು ನೀನೀಗ ಕೇಳ್ವನ ಪ್ರಾಣ । ಪಾಲಕಿಯಲ್ಲವೆಯೆಂದಾ ॥ ೪೦ ॥

ಲಘುವಾಕ್ಯವೇಕೆಂದು ಕಾಣ್ಕೆಗೊಟ್ಟಾ ಗುರು । ಜಘನೆ ಕೈಮುಗಿಯೆ ಕಾಣಿಕೆಯಾ ॥
ವಿಘನಿಸಿ ಕೈಕೊಳುತಾಕೆಗೆ ಬಿನದಕಾ । ಪ್ರಘಟಿತಾನಂದ ಕೈಮುಗಿದಾ ॥ ೪೧ ॥

ಅಯ್ಯೊ ನಮ್ಮ ನಿದೇಕೆ ನೋಯಿಪ್ಪುದೆನುತ ಕಾ । ಲ್ಗೊಯ್ಯನೆ ಪಣೆಯಿಟ್ಟಳಾಕೆ ॥
ಕೆಯ್ಯಿಂದ ಪಿಡಿದೆತ್ತಿ ದೋಷವಿಲ್ಲೆಂದೊಲ್ದು । ಮೆಯ್ಯ ತಡವಿದನಾ ಸೊಬಗಾ ॥ ೪೨ ॥
ಮಾವಾಜಿಗಾನು ಕೈಮುಗಿವೆನಲ್ಲವೆ ಮುನ್ನ । ಮಾವಾಜಿ ತಪಸಿಗೆಯ್ದಿದರು ॥
ಮಾವನ ಮಗಳ್ಳಿಸೆ ನಿನಗಿರಲಾ ತೇಜ । ವೀ ವೇಳೆಗೆಂದನರ್ತಿಯೊಳು ॥ ೪೩ ॥
ಅಲಿಹಳಚಿ ನೋಡಿ ನಗುತಾಕೆ ಕೆಳಗೆ ನಿಂ । ದಾಲಿಸುತಿರ್ದ್ದಳು ನುಡಿಯಾ ॥
ಮೇಲಕೆ ಚಿತ್ತೈಸಿ ದೇವಿಯರೇಕೆ ನಿಂ । ದೋಲೈಪಿರೆಂದನು ಕೂಡೆ ॥ ೪೪ ॥
ಕೇಳಬಹುದು ನುಡಿ ಬಾಗಿಲಿಗೆಂದಳು । ಕೇಳಲೇನಳುಕೆನಗೆಂದು ॥
ಥಾಳದಿ ನುಡಿವನ ಕೆಂಬಾಯು ತಳಿರ್ಗೈಯೊ । ಳಾ ಲೋಲೆ ಮುಚ್ಚಿದಳೊಡನೆ ॥ ೪೫ ॥
ಉಗುಳ್ದನಾ ಕೈಗೆ ತಂಬುಲವನಾ ಸತಿಯುಹೊ । ಜಗಳದೊಳ್ಸರಿ ಬಂದುದೆಂದು ॥
ತೆಗೆದು ಕೆಂಬಾಯ್ನಿಟ್ಟುಕೊಂಡಳಾ ಕೆಂಬಾಯ । ಮಗುಳೆ ಮಗುಳೆ ಚುಂಬಿಸಿದನು ॥ ೪೬ ॥
ಕರವಿಡಿದೊಡನೆ ಮೇಲಕೆ ತೆಗೆದನು ತಳೋ । ದರಿ ತನುಸೋಂಕಿ ಕುಳಿತಿಳು ॥
ಉರತುಂಬಲಮರ್ದಪ್ಪಿ ಬಾಯೊಳು ಬಾಯಿಟ್ಟು । ಸುರಲೋಕಸುಖವ ನೋಡಿದನು ॥ ೪೭ ॥
ಎಂದೂ ಕಾಣದವನೊಂದಮೃತವ ಕಂಡರಿಂ । ಪೊಂದಿ ಚಪ್ಪರಿದುಂಬ ತೆರದಿ ॥
ಚೆಂದುಟಿಯನು ಚೀರುಚೀರನೆ ಸವಿದನಾ ಸೌಂ । ದರಿ ಸವಿದಳಾ ಕೂಡೆ ॥ ೪೮ ॥
ದೇವ ನಿನ್ನೊಡಹುಟ್ಟಿದವರು ಬಂದಿಂದು ನಾ । ನಾವಿಧಿಗೈದರೆಂದೊಡನೆ ॥
ತಾವರೆಯನು ಸೆಳೆಕೊಂಡುದು ಮುಂತಾದ । ಭಾವವೆಲ್ಲವನು ಹೇಳಿದಳು ॥ ೪೯ ॥
ಎಲ್ಲಿಲ್ಲಿ ನೋಳ್ಪೆನೆಂದಧರವ ನೋಡಿದ । ನಿಲ್ಲಿಲ್ಲ ಸಟೆಗವರ್ ನಿನ್ನ ॥
ಚೆಲ್ಲಕೆ ನುಡಿದರು ಕಿರಿದುಂಟು ಪಿರಿದು ನೆ । ಟ್ಟಿಲ್ಲವೆಂದಳುಕ ಜಾರಿಸಿದಾ ॥ ೫೦ ॥
ನೀನೆ ನೋಡೆಂದು ಕನ್ನಡಿಯ ತೋರಿದನಂಬು । ಜಾನನೆ ನೋಡಿದಳ್ಕತ್ತೆ ॥
ತಾನು ಕನ್ನಡಿದೋರೆ ನಸುಗಲೆಕಂಡನ । ದೇನು ಸಮಾನವೋಹಿಗಳೊ ॥ ೫೧ ॥
ಕರೆಸಿದುದೇಕೆನ್ನ ನೊರ್ವಳನೆಂದಳು । ತರುಣಿಯರೆಲ್ಲರೆಯ್ದೀಗ ॥
ಹರಸಿ ಸೇಸೆಯನಿಡುವರು ನಿನಗೆನಗದ । ವಿರಚಿಸಲ್ಬರಿಸಿದೆನೆಂದಾ ॥ ೫೨ ॥
ಪಿರಿದುದ್ದವೇರಿ ನಾನಿದ್ದರೆ ಕಂಡು ನಿ । ಮ್ಮರಸಿಯರಳಲುವರಿದರ ॥
ಪಿರಿದೇನು ಪುಟ್ಟಗದ್ದುಗೆಯಲ್ಲಿ ಕೆಳಗೆ ಕು । ಳ್ಳಿರುವೆನೆಂದಳು ಕಳಾನಿಪುಣೆ ॥ ೫೩ ॥
ಮೊದಲೆ ನಾನೊಡಬಡಿಕೆಯ ಕೊಂಡೆನವರಲ್ಲಿ । ಯಿದಕೆ ನೀನೆಣಿಸಬೇಡೆಂದಾ ॥
ಹೃದಯವ ನೋಡಿ ಮುಂದಾನು ಸೊಲ್ಲಿಪೆನಿಂದಿ । ಗಿದು ಬೇಡವೆಂದಳಾ ಜಾಣೆ ॥ ೫೪ ॥
ರಾಜಪುತ್ರಿಯರಲ್ತೆ ತೇಜಕೆ ಬಾಳ್ವರು । ತೇಜಕೆ ಬದುಕ ತೊರೆವರು ॥
ಸೌಜನ್ಯದೊಳು ಮುಂದೆ ಕಾರ್ಯವ ಕೊಂಬೆ ನಾ । ನೀ ಜೋಲಿ ಬೇಡೆಂದಳಿಂದು ॥ ೫೫ ॥

ಸವತಿಯರಲ್ತಿ ಮತ್ಸರ ಹುಟ್ಟಿದಾಗ ಶೋ । ಕವ ಹುಟ್ಟಿಸುವರು ಶೋಕಿಪರು ॥
ದಿವರಾತ್ರಿ ರಚ್ಚೆಯಾಗಿಹುದದು ಬದುಕೆ ಚೀ । ಸವಿಯೆಯೆಂದಳು ಸರೋಜಾಕ್ಷಿ ॥ ೫೭ ॥
ಪ್ರಾಣೇಶ ನಿನ್ನಯ ಕೃಪೆ ನನಗುಂಟೆಂದು । ಕ್ಷೋಣಿಯೆಲ್ಲವು ಬಲ್ಲುದಿನ್ನು ॥
ಕೋಣೆಯೊಳಾ ವಿಷ್ಟು ಕುಸಿದರೇನದರಿಂದ । ಕ್ಷೀಣವೆ ಹೇಳೆಂದಳೊಡನೆ ॥ ೫೭ ॥
ತನ್ನ ಚಿತ್ತದೊಳು ತಾನಂತೆ ಮಾಡುವೆನೆಂದು । ಮುನ್ನವೆ ನೆನೆದಿದ್ದನಹುದು ॥
ತನ್ನವಳೊಳಗನಾರಯ್ದು ನೋಡಿದನದು । ತನ್ನಂತುಟಾಗೆ ಮೆಚ್ಚಿದನು ॥ ೫೮ ॥
ಸ್ವರದೋರಿದನು ಬಂದರೂಳಿಗವೆಂಗಳು । ಹರಿಪೀಠದಗ್ರದೊಳೆಸೆವ ॥
ಸಿರಿಗದ್ದುಗೆಯ ಕೆಳಗಿರಿಸಿರೆಂದನು ತೆಗೆ । ದಿರಿಸಿದರ್ ಕುಳಿತರೊಪ್ಪದೊಳು ॥ ೫೯ ॥

ಅತ್ತಿಗೆಯರು ಬಂದರಷ್ಟರೊಳಾ ದೇವಿ । ಮತ್ತಿದಿರೆದ್ದಪ್ಪಿ ತಮ್ಮ ॥
ಒತ್ತಿನೊಳೊಪ್ಪುವ ಮಂಗಲಾಸನಕೆ ಕೈ । ಯೆತ್ತಿ ಕುಳ್ಳಿರಿಸಿದಳೊಸೆದು ॥ ೬೦ ॥
ಕಾಣಿಕೆ ಸಹಿತವೆ ಬರುತಿದ್ದರರಸನ । ರಾಣಿಯರೆನೆ ಸಮ್ಮುಖದೊಳು ॥
ಕಾಣುತ ಗದ್ದುಗೆಯಿಂದೆದ್ದು ನಡೆದಳಾ । ಜಾಣೆ ತಾನವರ್ಗಿದಿರಾಗಿ ॥ ೬೧ ॥
ಮದುವೆಯೋಳ್ಗಿಯ ಕಂಡು ನಾಣ್ಚಿ ರಾಣಿಯರು ಗ । ರ್ವದ ಗುಂಜ ಬಿಟ್ಟೆಯ್ದುತಿದ್ದು ॥
ಇದಿರೆದ್ದು ಬಹ ಮಹಾದೇವಿಯ ಗುಣಕೆ ಮ । ತ್ತಿದೆಸೋತರೆದೆಸೋಲದಿಹರೆ ॥ ೬೨ ॥
ಬರಲಾಗದಕ್ಕ ನೀನಿಂತೆಂದು ನುಡಿವುತ । ಬರುತಿದ್ದರವರು ಮತ್ತೀಕೆ ॥
ಬರಬಹುದಕ್ಕಾಜಿಯರಿರಯೆಂದೆನೆ ಸಣ್ಣ । ಸ್ವರದ ಸವಿಗೆ ಸೋತರೊಡನೆ ॥ ೬೩ ॥
ಮುಟ್ಟೈದೆ ಸಾರ್ವಾಗ ಕೈಮುಗಿದಳು ರಾಣಿ । ಯೊಟ್ಟಿಗೆಲ್ಲಕೆ ಲಲಿತಾಂಗಿ ॥
ಕಟ್ಟಕ್ಕರಿಂದವರ್ ಕೈಮುಗಿದಪ್ಪಿಕೊಂ । ಡಟ್ಟಹಾಸಗಳ ಮಾಡಿದರು ॥ ೬೪ ॥
ಇದು ಸಲ್ಲದಕ್ಕ ನೀ ತಪ್ಪಗಿದ್ದರೆ ನಾವು । ಪದೆದೆಯ್ದಬೇಕೆಂದರವರು ॥
ಮೊದಲು ಬಂದವರಿಗೆ ಕಡೆಯುಲ್ಲಿ ಬಂದವರ್ । ಮದದೋರಸಲ್ಲೆಂದಳಾಕೆ ॥ ೬೫ ॥
ಶ್ರೇಣಿಯೊಳೆಲ್ಲರು ನೃಪತಿಗೆ ರತ್ನದ । ಕಾಣಿಕೆಯಿಕ್ಕಿ ಕೈಮುಗಿದು ॥
ತಾಣವರಿದು ಮೃದುತಲ್ಪದೊಳ್ಕುಳಿತರಿಂ । ದ್ರಾಣಿಯ ನಗುವ ನೀರೆಯರು ॥ ೬೬ ॥
ಅವರೆಡೆಯೊಳು ಸುಭದ್ರಾದೇವಿ ಕುಳ್ಳಿರು । ವವಸರದೊಳು ಹಾಹಾಯೆಂದು ॥
ಸವತಿಯರ್ ತೊಡೆಯ ಮೇಲಿರಿಸಿಕೊಂಡರು ಮಝು । ಸುವಿನಯವೇನ ಕಲಿತರೊ ॥ ೬೭ ॥
ಗದ್ದುಗೆಯೊಳು ಕುಳ್ಳಿರಕ್ಕ ನೀನೆಮ್ಮತ್ತ । ಹೊದ್ದಲೊಪ್ಪದಿದೆಂದರವರು ॥
ಇದ್ದೊಡಹುಟ್ಟಿದವರ ಹಿಂಗಿ ಬೇರೆ ನಾ । ನಿದ್ದರೇನಹುದೆಂದಳಾಕೆ ॥ ೬೮ ॥
ಕುಲವೊಂದು ಸ್ತ್ರೀವೇಷವೊಂದು ಸದ್ಧರ್ಮವೊಂ । ದೊಲವಿನ ಪ್ರಾಣೇಶನೊಬ್ಬ ॥
ಇಳಿತವೇನುದ್ದವೇನಾಸನದಲ್ಲಿ ಚ । ಕ್ಕಳವೇನು ಗದ್ದುಗೆಯೇನು ॥ ೬೯ ॥

ಪುರುಷನ ಗದ್ದುಗೆಯೇರಿದಳೆಂಬಾಗ । ಪುರುಷಗೊ ಗದ್ದುಗೆ ಸತಿಗೊ ॥
ಕರುಣಿಸಿ ಕರೆದಾಗ ಕುಳ್ಳಿರುವರು ಕೋಪ । ಪೊರೆಯೆ ದೂರದೊಳಿಹರಲ್ತೆ ॥ ೭೦ ॥
ಮಂಚದೊಳೆಲ್ಲರು ಸ್ವಾಮಿಯ ಕೂಡೆ ಸ । ಮಂಚಿತಾಂಗಿಯರಹರಲ್ತೆ ॥
ಹಿಂಚುಮುಂಚೇನಕ್ಕ ನಿಮಗೆಮಗೆಂದಳ । ದೇಂ ಚದುರೆಯೊ ಪಟ್ಟದರಸಿ ॥ ೭೧ ॥
ಮೆಚ್ಚಿದರವಳ ಸದ್ವಿನಯಕೆ ಮನದೊಳೊ । ಪ್ಪಿಚ್ಚಿ ಹುರುಡು ಹುಟ್ಟಿತಿಲ್ಲ ॥
ಸಚ್ಚರಿತಕೆ ನಮ್ಮ ಮಾತ ಮನ್ನಿಸುವೆಯೊ । ನುಚ್ಚುಗಾಣ್ಬೆಯೊಯೆಂದರೊಡನೆ ॥ ೭೨ ॥
ಮೀರೆ ನಿಮ್ಮಯ ಮಾತನೆಂದಳು ಮೀರಿಯೂ । ಏರೆಂದರಿನ್ನು ಗದ್ದುಗೆಯಾ ॥
ನೀರೆಯೆದ್ದಳು ಸವತಿಯರೇಳಲರಸನಾ । ನೀರೆಯೋಜೆಗೆ ಮೆಚ್ಚುತಿದ್ದಾ ॥ ೭೩ ॥
ಹೊದ್ದಿದಳ್ಗದ್ದುಗೆಯೇರದೊತ್ತಿನೊಳು ನಿಂ । ದಿದ್ದಳು ಸವತಿಯರರಿದು ॥
ಗದ್ದುಗೆಗೀಕೆಯ ಕರೆ ಸ್ವಾಮಿಯೆನೆ ನೋಡು । ತಿದ್ದನು ಸುಮ್ಮನೆ ನಗುತ ॥ ೭೪ ॥
ಸೊಲ್ಲಿಸಿ ನೀವು ನಿಮ್ಮಣ್ಣಗೆಂದರು ಕೆಲ । ದಲ್ಲಿದ್ದ ನೃಪನ ತಂಗಿಯರಾ ॥
ಬೆಳ್ಳಿಯ ಬೆಟ್ಟದ ಹೆಣ್ಣಸೊತ್ತಿಗೆ ಕರೆ । ಕೊಳ್ಳಣ್ಣಯೆಂದರಂದವರು ॥ ೭೫ ॥
ಮೂರುಲೋಕದ ಸ್ವಾಮಿಯಣುಗನೆಂದತಿಗರ್ವ । ವೇರಿ ಲೆಕ್ಕಿಸನೆಂಬರಿವರು ॥
ಹಾರಾಟದವರ ನಾಡಿನ ಹೆಣ್ಣ ಕರೆದುಕೊ । ದೂರೇಕೆ ನಮಗೆಂದರವರು ॥ ೭೬ ॥
ಎಲ್ಲರ ಕರೆವೆನೆ ಒಬ್ಬಳ ಕರೆಯೆಂದು । ಸೊಲ್ಲಿಪುದೇಕೆ ಸಾಕೆಂದಾ ॥
ಎಲ್ಲರು ಕೂಡಿ ಹೇಳಿದರೈಸೆ ಕರೆ ದೋಷ । ವಿಲ್ಲೆಂದು ಪೇಳ್ವರೊತ್ತೊತ್ತಿ ॥ ೭೭ ॥
ನಿಮ್ಮ ಮಾತನು ಮೀರಲರಿದೀಗ ಹೇಳುವ । ಹೆಮ್ಮಕ್ಕಳನು ಮೀರಲರಿದು ॥
ಸುಮ್ಮನೆ ಕುಳ್ಳಿರೆಲಗೆಯೆಂದ ಕುಳಿತಳ । ವ್ಮಮ್ಮಾ ವಿಡಾಯಮೆ ದೊರೆಯ ॥ ೭೮ ॥
ಕೂಡೆ ಗಂಗಾದೇವಿಸಿಂಧುದೇವಿಯರೆದ್ದು । ಜೋಡಾಗಿ ಮುತ್ತಿನಕ್ಷತೆಯಾ ॥
ಗಾಡಿಯೊಳ್ಪರಸಿ ದಂಪತಿಗಳಿಗಿಟ್ಟರು । ಪಾಡುವ ಧವಲಶೋಭನದಿ ॥ ೭೯ ॥
ಅರಸನ ಪದಕವ ತಂಗಿಯರ್ ತೆಗೆದದ । ನರಸಿಯ ಕೊರಳೊಳಗಿಟ್ಟು ॥
ಅರಸಿಯ ಪದಕವನಾತಗಿಟ್ಟರು ಗುಣ । ಸರಿ ನಿಮಗೆಂದು ಪೇಳ್ವಂತೆ ॥ ೮೦ ॥
ಒಂದೊಂದು ಹಾರವ ತಮ್ಮ ಕೈಯಿಂದರ್ತಿ । ಯಿಂದ ಸ್ತ್ರೀಪುರುಷರಿಗಿಕ್ಕಿ ॥
ವೃಂದ ಭೂಷಣದ ಕರಂಡಗೆಗಳ ಬೆಡ । ಗಿಂದಿರಿಸಿದರು ಮುಂದವರಾ ॥ ೮೧ ॥
ದೇವಾಂಗವಸ್ತ್ರವ ಪೊದೆಸಿದರಣ್ಣಗೆ । ದೇವಾಂಗದುರುವ ಸೀರೆಯನು ॥
ದೇವಿಯ ತೊಡೆಯ ಮೇಲಿರಿಸಿ ಪರಸಿದರು । ಶ್ರೀವಿಲಾಸದಿ ಬಾಳಿರೆಂದು ॥ ೮೨ ॥
ಮೊನ್ನೆ ಭೂಷಣವಿತ್ತಿರಕ್ಕ ಮತ್ತೆಮಗಿಂದು । ಮನ್ನಣೆಗೆಯ್ವಿರಿಯೆಂದಾ ॥
ಭಿನ್ನವಿಲ್ಲದೆ ದಿನಚರಿ ಕೊಟ್ಟರೇನಣ್ಣ । ಚೆನ್ನಲ್ತೆ ನಮಗೆಂದರವರು ॥ ೮೩ ॥

ದಿನಚರಿ ಕೊಟ್ಟುದಲ್ಲವೆ ನಿಮ್ಮ ಪರಕೆಯಿಂ । ದಿನಗೆ ಸಂಪದವಾದ ಮೇಲೆ ॥
ಮನದಣಿಯದು ಮತ್ತೆ ಕೊಡುತಿದ್ದರಾಗದೆಂ । ದನುಜೆಯರ್ಗಿಂಪನಾಡಿದನು ॥ ೮೪ ॥
ಹುರುಡನೊತ್ತರಿಸಿದ ಸವತಿಯರೆಲ್ಲರು । ಹರಸಿ ಸೇಸೆಯನಿಟ್ಟರೊಸೆದು ॥
ಸರಿ ಶಕ್ತಿರೂಪಿದ್ದು ಗುಣದೊಳೆ ಗೆಲ್ದಳೆ । ಲ್ಲರನದೇಂ ಜಾಣೆಯೊ ರಾಣಿ ॥ ೮೫ ॥
ಆರತಿಕಾಣ್ಕೆನಿವಾಳಿಯೊಳ್ಸರಪರಿ । ವಾರಕಾಂತೆಯರೆರಗುವುದು ॥
ಭೋರೆಂದು ಪೂಮಳೆಗರೆದರು ಸುರಪರಿ । ವಾರಕಾಂತೆಯರು ಮೇಲವರ ॥ ೮೬ ॥
ಸಂಗೀತಧವಳಶೋಭನ ನಿಲ್ಲೆ ನೃಪ ತನ್ನ । ತಂಗಿಯರ್ಗುಡುಗೊರೆಯಿತ್ತಾ ॥
ಅಂಗನೆಯರ ಕೈಯ ಹಿಡಿದುಡುಗೊರೆಯಿತ್ತು । ಸಂಗಡೆಲ್ಲರನು ಮನ್ನಿಸಿದಾ ॥ ೮೭ ॥
ಕೆಳದಿಯರನುಯಜೆರ್ವೆರಸಟ್ಟಿದನು ಮದ । ವಳಿಗೆಯ ಭೋಜನಗೃಹಕೆ ॥
ಕಳಕಂಠೆಯೆಂಬ ಸೇವಕಿಗೊಂದ ಸೂಚಿಸಿ । ಕಳುಹಿದ ನಮಿರಾಜನೆಡೆಗೆ ॥ ೮೮ ॥
ನಮಿರಾಜನಬಲೆಯರ್ ಬಹರಿಲ್ಲಿಗವರೊಳು । ಮಮಕಾರಗೈದೆಯ್ದಿಯೆಂದು ॥
ರಮಣಿಯರ್ಗುಸುರಿ ಭೋಜನಶಾಲೆಗೆಯ್ದಿದ । ನಮರೇಂದ್ರನಂತೆ ಲೀಲೆಯೊಳು ॥ ೮೯ ॥

ಕಳಕಂಠೆ ನಮಿರಾಜನೆಡೆಗೋಡಿ ಬಂದು ಕೈ । ಗಳ ಮುಗಿದಿಲ್ಲಿಗೆ ಚಕ್ರಿ ।
ಲಲನೆಯರ್ವೆರಸಿದೆ ಸಾರ್ತಂದನೆಂದಳು । ಘಳಿಲನೆದ್ದನು ನಮಿರಾಜಾ ॥ ೯೦ ॥
ಮಾನಿನಿಯರುಗೂಡಿ ಬಹುದೇಕೊಯೆಂದನು । ಮಾನಿಸುತಿದಿರೆಯ್ದುವಾಗ ॥
ಆನಂದಬಟ್ಟು ಭೋಜನಕೆಯ್ದುತಿದ್ದನೆಂ । ದಾ ನಾರಿ ನುಡಿದಳು ಕೂಡೆ ॥ ೯೧ ॥
ನಿಂದನಲ್ಲಿಯೆ ಹುಸಿಮಾತಿದೆಂದೇಕಿಲ್ಲಿ । ನಿಂದೆ ನಿನ್ನಯ ಭಾವ ನೀನು ॥
ಬಂದರಾರೋಗಿಪೆನೆಂದನಲ್ಲದರಿಲ್ಲಿ । ಗಿಂದೆಯ್ದದಿರನೆಂದಳೊಡನೆ ॥ ೯೨ ॥
ವಿನಮಿಯ ಸಿಂಧುಗಂಗಾದೇವನವರ ಸು । ಮ್ಮನೆ ನೋಡಿದನು ನಮಿರಾಜಾ ॥
ಮನುಕುಲಾಗ್ರಣಿಯ ಸೇವಕಿಯಲ್ತೆ ತಂತ್ರದೊ । ಳ್ಕೊನೆದೇಳಿಸಿದಳೆಂದರವರು ॥ ೯೩ ॥
ಬಹೆನೆಂದು ಕಳುಹಿದಾಗಳೆ ಚಕ್ರಿ ಸಾರ್ತಂದು । ದಹುದು ನೀವಿಬ್ಬರಿಂದೆಯ್ದಿ ॥
ಬಹುದೆಂದು ಸಿಂಧುಗಂಗಾದೇವನವರಾತ್ಮ । ಗೃಹಕೆ ತಾವೊಲೆದರಷ್ಟರೊಳು ॥ ೯೪ ॥
ನಿಮ್ಮನು ಮನೆಮುಟ್ಟ ಬಂದೆಯ್ದಬೇಕೆಂದು । ನಮ್ಮೊಳಾಡಿದ ನಮ್ಮಸ್ವಾಮಿ ॥
ಸುಮ್ಮನೆ ಗಮಿಸಿಯೆಂದೊಡನಡಿಯಿಡಿಸಿದ । ಳೇಂ ಮಹಾಕುಶಲೆಯೊ ಧೂರ್ತೆ ॥ ೯೫ ॥
ಅತ್ತಾಳ್ಯಜಿಯರು ತನ್ನ ತಂಗಿಯರೆಯ್ದದೆ । ಅತ್ಯಂತಮುದವಾಗದೆಂದು ॥
ನಿತ್ಯವಿನೋದಿ ಸೂಚಿಸಿದನೆಂದೊಡನೆ ಸಾಂ । ಗತ್ಯಗಾಣಿಸಿದಳಾ ಕುಶಲೆ ॥ ೯೬ ॥
ನಿಮ್ಮೊಡೆಯನ ಛಲ ಮಿಕ್ಕುದಾಗಲಿ ಹೋಗು । ಅಮ್ಮಾಜಿಗರುಹಿಯೆಲ್ಲರನು ॥
ಘಮ್ಮನೆ ತಹುದೆಂದು ಮನೆಗಟ್ಟಿ ನಮಿರಾಜ । ತಮ್ಮವರ್ವೆರಸಿ ನಡೆದನು ॥ ೯೭ ॥

ಅರಮನೆಗೆಯ್ದಿ ಕಾಲ್ದೊಳೆದು ಭೋಜನದ ಮಂ । ದಿರವೊಕ್ಕು ಕಲ್ಯಾಣಪತಿಗೆ ॥
ಸರಸದೊಳುಡುಗೊರೆಯಿತ್ತು ಕೈಮುಗಿಯೆ ನಾ । ಲ್ವರನಪ್ಪಿ ಚಕ್ರಿ ಮನ್ನಿಸಿದಾ ॥ ೯೮ ॥
ಸೊಗಸುವಾತುಗಳಲ್ಲಿ ಕುಳಿತವರೊಪ್ಪಚ್ಚಿ । ನಗೆನುಡಿಗಳೊಳಿದ್ದರತ್ತ ॥
ಖಗಕುಲಸತಿಯರ ಭದ್ರಶಾಲೆಗೆ ತಂದು । ಪೊಗಿಸಿದಳ್ಕಳಕಂಠೆಯಿತ್ತ ॥ ೯೯ ॥
ರಾಯನ ರಾಣಿಯರೆಲ್ಲರು ಶುಭದೇವಿ । ಗಾ ಯಶೋಭದ್ರೆಗೆ ತಮ್ಮ ॥
ತಾಯಿಗಳೆಂದೆರಗಿದರು ಪುತ್ರಿಯರೆಂಬ । ನ್ಯಾಯದೊಳಪ್ಪಿದರವರು ॥ ೧೦೦ ॥
ನಮಿರಾಜವಿನಮಿರಾಜರ ಪೆಂಡಿರನ್ಯೋನ್ಯ । ವಮರೆ ಚಕ್ರಿಯ ಸುದತಿಯರು ॥
ಸಮತೆಯೊಳತ್ತಿಗೆನಾದುನಿಯರ್ಕಳಿಂ । ಬಮಳಸಂಭ್ರಮದೊಳಪ್ಪಿದರು ॥ ೧೦೧ ॥
ಹೊತ್ತಾದುದಿಂದಿಗೆ ಸಾಕು ನಿಮ್ಮರಮನೆ । ಯತ್ತೆಯ್ದಿರೆಂದವಗರ್ೞರೆದು ॥
ಇತ್ತ ಭೋಜನಗೃಹಕಂಬರೇಚರಿಯರ । ಮತ್ತೆ ತಂದಳು ಕಳಕಂಠೆ ॥ ೧೦೨ ॥

ಎಡೆಮಾಳ್ಪ ಮನೆಯಲ್ಲಿ ಚಕ್ರೇಶ ವ್ಯೈದನ । ರೊಡನೆ ವಿನೋದದೊಳಿದರ್ಾ ॥
ಅಡಿಗೆಯ ಮನೆಗೆಯ್ದಿ ಮಗಳ ಕಂಡಳು ನಲ್ಮೆ । ವಡೆದು ಯಶೋಭದ್ರಾದೇವಿ ॥ ೧೦೩ ॥
ನಿನ್ನಿನ ಕಾಂತಿಯಿಂದಧಿಕದ ಕಾಂತಿ ಸಂ । ಛನ್ನವಾಗೆಯ್ತಹ ಮಗಳಾ ॥
ತನ್ನಿದಿರೊಳು ಕಂಡು ನಲಿದಳಾ ತಾಯಿ ಸಾ । ಕೆನ್ನರ್ತಿ ಸಲೆ ಸಂದುದೆಂದು ॥ ೧೦೪ ॥
ನಗುತ ಲಜ್ಜೆಯೊಳೆಯ್ದಿ ನಮಿಸಿದ ಪುತ್ರಿಯ । ನಗುತ ತೂಪಿರಿದಾಕೆ ಹರಸಿ ॥
ಬಿಗಿಯಪ್ಪಿಕೊಂಡಳಾನಂದಾಶ್ರು ಕಂಗಳೊ । ಳೊಗುತಿರೆ ರೋಮಾಂಚ ನೆಗೆಯೆ ॥ ೧೦೫ ॥
ನಮಿಸಿದಳೊಡನೆ ಚಿಕ್ಕಮ್ಮಗಾನಂದದೊ । ಳಮರ್ದಪ್ಪಿ ಹರಸಿದಳಾಕೆ ॥
ಸಮದೃಷ್ಟಿಯಾಗಲಣ್ಣಂದಿರ ಪೆಂಡಿರ । ಕುಮುದಾಕ್ಷಿ ನಾಣ್ಚುತಪ್ಪಿದಳು ॥ ೧೦೬ ॥
ಓರೆವೊಗದಲಪ್ಪಲೇಕೆ ನಿನ್ನಯ ಮನೆ । ಗೋರಂತೆ ನಾವೆಯ್ದಲೆಮ್ಮ ।
ಗೌರವಗೆಡಿಸಿ ಕಾಣ್ಬರೆಯೆಂದು ಸರಸದೊ । ಳಾ ರಮಣಿಯರು ಕೇಳಿದರು ॥ ೧೦೭ ॥
ಸುಮ್ಮನೆ ನಗುತಾಕೆ ತಲೆಗುಸಿದಿಹಳು ನೀ । ನೆಮ್ಮ ವಿವಾಹಕಾಲದೊಳು ॥
ಹಿಮ್ಮೆಯ್ಯ ಮುಮ್ಮೆಯ್ಯ ಶೋಧಿಪೆಯಲ್ತೆ ನೀ । ನೊಮ್ಮೆ ವ್ಯೆದೋರೆಂಬರೆಮಗೆ ॥ ೧೦೮ ॥
ಕನ್ನಡಿಯನು ಮುಂದೆ ಪಿಡಿದೆಮಗತ್ತಿಗೆ । ಚೆನ್ನಾಗಿ ನೋಡು ನೋಡೆಂದು ॥
ಕನ್ನೆಗಾಲದೊಳಂದು ಕಾಡುವೆಯಲ್ಲವೆ । ನಿನ್ನಾಸ್ಯದೋರೆಂಬರೊಡನೆ ॥ ೧೦೯ ॥
ಕೆಯ್ಯ ಲಕ್ಷಣವ ನೋಡುವೆನೆಂದು ಬಳಿ ಹೋದು । ವಯ್ಯಯ್ಯೊಯೆಂದು ಚಿಂತಿಸುವೆ ॥
ಮೆಯ್ಯನೊತ್ತುವೆಯಲ್ತೆ ನೊಂದಿತೆಂದಾವೀಗ । ಮುಯ್ಯ ತಿದ್ದುವೆವೆಂಬರೊಸೆದು ॥ ೧೧೦ ॥
ಕೊರಳ ಹಾರವ ತಿದ್ದಬೇಕೆಂದು ಸಾರ್ದೆಮ್ಮ । ಕೊರಳ ತಡವಿ ಕೂಡೆ ನಗುವೆ ॥
ತರಹರಿಸಿದೆವಿಂದು ತನಕ ನಾವೀಗೆಮ್ಮ । ಹರಿಬವ ಬಿಡೆವೆಂಬರೊಡನೆ ॥ ೧೧೧ ॥

ಎಲ್ಲವು ಹೋಗಲಿ ನೀನಿಟ್ಟ ಪದಕವೇ । ಕಿಲ್ಲ ಮತ್ತೀ ಹೊಸಪದಕಾ ॥
ಎಲ್ಲಿಂದ ಬಂದುದೆಂದಣ್ಣಂದಿರರಸಿಯು । ರೆಲ್ಲರು ಕಾಡಿದರವಳಾ ॥ ೧೧೨ ॥
ಕಿರಿಯಂದು ಕಾಡಿದಳೈಸೆ ನಿಮ್ಮನು ಮತ್ತೆ । ನೆರೆದಂದು ನಗುತ ನೋಡಿದಳು ॥
ಬರಿದಿನ್ನು ಕಾಡದಿರೆಂದತ್ತೆ ಸೊಸೆಯರ । ಗರುಹಿ ನಿಲ್ಲಿಸಿದಳಾ ಕ್ಷಣವೆ ॥ ೧೧೩ ॥

ಆ ಮನೆಯಿಂದೆಲ್ಲರೆಡೆಮಾಳ್ಪ ಮನೆಯೊತ್ತಿ । ಗಾಮೋದದಿಂದಡಿಯಿಟ್ಟು ॥
ಭೂಮಿಾಶರಾಡುವ ನುಡಿಗೇಳುತಿದ್ದರು । ದ್ದಾಮದ ಜವನಿಕೆಯೊಳಗೆ ॥ ೧೧೪ ॥
ಮಾತುಮಾತಿನ ಮೇಲೆ ನಮಿರಾಜನೊಯ್ಯನೆ । ಭೂತಳಾಗ್ರಿಮರಲ್ತೆ ನೀವು ॥
ಔತಣಕೆಮ್ಮನು ಠಕ್ಕಿನೊಳ್ಬರಿಸಿದ । ರೀತಿ ಲೇಸೆಂದ ಚಕ್ರಿಯೊಳು ॥ ೧೧೫ ॥
ಮನೆಮುಟ್ಟ ಬಂದು ಪ್ರಾರ್ಥಿಸಿ ತರಬೇಕು ಸ । ಮ್ಮನದಂಗವಹುದು ಕೇಳದಕೆ ॥
ನಿನಗೆ ಪೇಳಲ್ತಕ್ಕ ಸೋದರರೆನಗಿಲ್ಲ । ಬಿನದದೊಳ್ಬರಿಸಿದೆನೆಂದಾ ॥ ೧೧೬ ॥
ಠಕ್ಕಲ್ಲ ನೀವೆಯ್ದದಿದ್ದರೆ ನಾನೆ ನಿ । ಮ್ಮಿಕ್ಕೆಗೆ ಬಹನದು ಸಹಜಾ ॥
ಅಕ್ಕಟಯೆನ್ನ ಸೋದರಿಯರ ಮನೆಗಾನು । ಚೆಕ್ಕನೆಯ್ದಿದರೇನು ಕೊರತೆ ॥ ೧೧೭ ॥
ಹೆಣ್ಣ ಕೊಟ್ಟೆಯೊ ಚಿನ್ನ ಕೊಟ್ಟೆಯೊಯೆಂದುಂಟು । ಹೆಣ್ಣ ಕೊಟ್ಟೊ ಪೆಮ್ಮೆ ನಿನಗೆ ॥
ಬಣ್ಣದ ಮಾತಲ್ಲ ಕೇಳಿಧೈ ನನಗಿಲ್ಲ । ಹೆಣ್ಣ ಕೊಟ್ಟಿಡೆಯಲ್ಲಿ ಗರ್ವಾ ॥ ೧೧೮ ॥
ಹೆಂಗಳೆಲ್ಲರುಗೂಡಿ ಸಿಂಧುದೇವನ ಗೃಹ । ಗಂಗಾದೇವನ ಗೃಹಕೆ ॥
ಭಂಗವಿಲ್ಲೆಂದಾನು ಹೋದುದಿಲ್ಲವೆ ನನ್ನ । ತಂಗಿಯರಿದ್ದ ಪಕ್ಷದೊಳು ॥ ೧೧೯ ॥
ನಾನೋಲೆಗಳುಹಲಾ ಕ್ಷಣದೊಳವರು ತಮ್ಮ । ಮಾನಿನಿಯರು ಸಹವಾಗಿ ॥
ಏನೆಯ್ದಿತಿಲ್ಲವೆ ತಮ್ಮ ಸೋದರಿಯರಿ । ದ್ದೀ ನಮ್ಮ ಮನೆಗೆ ನೋಡೆಂದಾ ॥ ೧೨೦ ॥
ಅವರಂತುಟಲ್ಲ ನಮ್ಮಂತಲ್ಲ ನೀವಿಬ್ಬ । ರವಿಚಳಗರ್ವಿಗಳ್ನಿಮ್ಮ ॥
ಭವನಕೆಯ್ದುವೆನೆಂದು ನೆನೆದೆನೆಂದಾ ಚಕ್ರಿ । ಸುವಿನೋದಮೋರಿ ನುಡಿದನು ॥ ೧೨೧ ॥
ದೂತಿ ಸೂಚಿಸಲೊಡನಿರ್ವರು ನಾವೆಮ್ಮ । ಮಾತೆಯರ್ವನಿತೆಯರ್ವೆರಸಿ ॥
ಪ್ರೀತಿಯೊಳ್ಬಂದೆವಲ್ಲವೆ ಗರ್ವವಾರಿಗೆಂ । ದಾತನಾಡಿದ ಚಕ್ರಿಯೊಡನೆ ॥ ೧೨೨ ॥
ಇಂದು ಗರ್ವಿಗಳಲ್ಲ ಮುನ್ನ ಗರ್ವಿಗಳು ನೀ । ವೆಂದಾಡಿ ಚಕ್ರೇಶ ಮತ್ತೆ ॥
ಮುಂದಿದ್ದ ಸಿಂಧುಗಂಗಾದೇವನವರ ಮೇ । ಲೊಂದು ಕಟಾಕ್ಷವ ನುಡಿದಾ ॥ ೧೨೩ ॥
ಉಣ್ಣಲರಿಯದಿವರಿರ್ವರ್ಗೆ ನಾವೆರ । ಳ್ಪೆಣ್ಣ ಕೊಟ್ಟೆವು ನಮಿರಾಜಾ ॥
ಹೆಣ್ಣುಗಳಿವರಂತೆ ಮರೆದರೂಟವನು ನಿ । ಮ್ಮಣ್ಣಂದಿರಾಟವ ನೋಡು ॥ ೧೨೪ ॥
ಅದು ಪುರುಷರ ಜಾಣ್ಮೆಯಲ್ಲವೆ ಸೋಂಕಿದ । ಸುದತಿ ತಾನಂತುಟಹಾಗ ॥
ಅದರಿಂದ ನಮ್ಮವರಾರೆಂದು ಕಂಡಿರಿ । ಚದುರರೆಂದರಿದಿರಿಯೆಂದಾ ॥ ೧೨೫ ॥

ಜಿನ ಮುಖ್ಯ ನಿಮ್ಮವರೇಳ್ಗೆಗೆ ನೀನೆ ಬಿ । ತ್ತ್ರನೆ ಬೀಗಿದ್ದೈ ಸಾಕು ನಮ್ಮ ॥
ಮನೆಯಲ್ಲಿ ಹುಟ್ಟಿದ ಹೆಂಗಳೆಲ್ಲರು ಹೊಕ್ಕ । ಮನೆಯಿಚ್ಛೆಯರಿದಿಹುವೆಂದಾ ॥ ೧೨೬ ॥
ಪುರುದೇವಸುತೆಯರು ಭರತೇಶನನುಜೆಯ । ರರರೆ ನಾವೆಂದು ಗರ್ವಿಸರು ॥
ಪುರುಷನೆಂತಿದ್ದರಂತಿಹರದು ನಮ್ಮ ಸೋ । ದರಿಯರ ಸಹಜವೈಯೆಂದಾ ॥ ೧೨೭ ॥
ಇವರಿಬ್ಬರಕ್ಷಿ ಬಿಟ್ಟವರು ನೀವಿಬ್ಬರು । ನವಿಲಂತೆ ನಭದೊಳಾಡುವರು ॥
ನಿವಗೆ ಕೊಟ್ಟೆವಮ್ಮ ತಂಗಿಯರೆಲ್ಲ ನಿಮ್ಮಂತೆ । ಬವಣೆಬಟ್ಟರು ಹೋಗಿರೆಂದಾ ॥ ೧೨೮ ॥
ತೆರೆಯ ಮರೆಯೊಳಿದ್ದ ನಮಿವಿನಮಿಗಳ ಪೆಂ । ಡಿರು ಸಿಂಧುಗಂಗಾಸತಿಯರು ॥
ಭರತೇಶ ತಂಗಿಯರೆನೆ ಕೇಳ್ದು ಚಿತ್ತದೊ । ಳರಳಿ ವೈಬಾತರಾ ಕ್ಷಣವೆ ॥ ೧೨೯ ॥
ನಾವಿಬ್ಬರುಣ್ಣದರೇನಾಯ್ತು ನಮ್ಮವ । ರೀ ವಿನಮಿಯು ನಮಿನೃಪನು ॥
ದೇವರ ಪಂತಿಗಿದ್ದಪರೆಂದರುರೆ ಸಿಂಧು । ದೇವಗಂಗಾದೇವನವರು ॥ ೧೩೦ ॥
ನಿಮ್ಮವರುಂಡರೆ ನಿಮಗೆ ತೃಪ್ತಿಯೆ ತೃಪ್ತಿ । ಸಮ್ಮತವೇ ಸಮ್ಮತಾರ್ಥಾ ॥
ನಿಮ್ಮಿಚ್ಛೆಯೆನುತುಡುಗೊರೆಯಿತ್ತನವರೆದ್ದು । ಸುಮ್ಮಾನದೊಳು ಪೋದರತ್ತ ॥ ೧೩೧ ॥
ಒಳಗಿದ್ದ ಸಿಂಧುಗಂಗಾದೇವಿಯರು ಕೂಡೆ । ತೊಲಗಿ ಹೋದರು ತಮ್ಮ ಮನೆಗೆ ॥
ಬಳಿಕ ಮೈದುನರಿಬ್ಬರೊಡಗೂಡಿ ರಾಯ ನಿ । ರ್ಮಲದೊಳಾರೋಗಣೆಗೈದಾ ॥ ೧೩೨ ॥
ಒಂದುಪಂತಿಯೊಳಳಿಯನು ಪುತ್ರರಾರೋಗಿ । ಪಂದವ ಮಗಳೆಡೆಮಾಳ್ಪ ॥
ಚಂದವ ನೋಡಿ ಯಶೋಭದ್ರೆ ಶುಭದೇವಿ । ಯೊಂಪಿದೆ ನೂರಾದುದೊಡನೆ ॥ ೧೩೩ ॥
ಭೋಜನವಾದ ಮೇಲರಸ ನೀವೆನ್ನ ಮಾ । ವಾಜಿಯ ಸುತರಾದರೊಸೆದು ॥
ಓಜೆಯಿಂದಿದ್ದಷ್ಟು ದಿನವೆನ್ನ ಮನೆಗೆಯ್ದಿ । ಭೋಜಿಸಬೇಕೊಮ್ಮೆಯೆಂದಾ ॥ ೧೩೪ ॥
ತೆಪ್ಪಗೆಲ್ಲರು ನನ್ನ ಮನೆಯೊಳಗಿರಿ ಯೆಂದ । ರೊಪ್ಪಿರಿ ಮಾಣಲಿ ಕೇಳಿ ॥
ಇಪ್ಪಷ್ಟು ದಿನವೆನ್ನ ಮನೆಯೊಳತ್ತ್ಯಜಿಯ । ರೊಪ್ಪದೊಳಿರಲೊಪ್ಪಿರೆಂದಾ ॥ ೧೩೫ ॥
ಆಗಲೆಂದೊಪ್ಪಿದರುಡುಗೊರೆಯಿತ್ತನು । ರಾಗದಿ ಕಳುಹೆ ಮೈದುನರಾ ॥
ಭೋಗದೇವೇಂದ್ರನು ಚಂದ್ರಶಾಲೆಯ ಹೊಕ್ಕು । ತೂಗುಮಂಚದೊಳೊರಗಿದನು ॥ ೧೩೬ ॥
ಮಗಳುವೆರಸಿ ಸೊಸೆಯರುಗೂಡಿ ಶುಭದೇವಿ । ಅಗಲದೆ ತನ್ನೊತ್ತಿಲಿರಲು ॥
ಮಗಳ ಮನೆಯೊಳಮೃತಾನ್ನವ ಸವಿದಳಾ । ಪ್ರಗುಣೆ ಯಶೋಭದ್ರಾದೇವಿ ॥ ೧೩೭ ॥
ತರುಣಿಯರೆಲ್ಲರು ತಣಿದ ಮೇಲತ್ತೆ ನಿ । ನ್ನರಸನ ಕಂಡು ಬಾರೆಂದು ॥
ಹರುಷದಿ ಮಗಳ ಕಳುಹಲಾಕೆ ಬಂದು ಭೂ । ವರನ ಕಂಡಳು ಮಂಚದಲ್ಲಿ ॥ ೧೩೮ ॥
ಬಂದ ನಲ್ಲಳ ಕೂಡೆ ಸರ್ವರು ತೃಪ್ತಿಬ । ಟ್ಟಂದವ ಕೇಳ್ದರ್ತಿವಟ್ಟು ॥
ಮುಂದೆ ಹೋಗಾನು ಬಂದತ್ತ್ಯಜಿಯರ ಕಾಣ್ಬೆ । ನೆಂದಟ್ಟಿದನು ತನ್ನ ಸತಿಯಾ ॥ ೧೩೯ ॥

ನಗುತುಬ್ಬಿನೊಳು ಬಹ ಮಗಳ ಕಂಡೇನಕ್ಕ । ನಗೆ ಪಿರಿದಾಯ್ತೆಂಬ ತಾಯಾ ॥
ಬಿಗಿಯಪ್ಪಿ ನಿನ್ನ ಕಾಣಲ್ಕೆ ನಿನ್ನಳಿಯನಿ । ಲ್ಲಿಗೆ ಬರುತಹನೆಂದಳೊಡನೆ ॥ ೧೪೦ ॥

ಇಲ್ಲಿಗೆ ತಾನೇಕೆ ಬರಬೇಕು ನಾನೆ ಬಂ । ದಲ್ಲಿ ಸಂದಿಪೆನು ಹೋಗೆಂದು ॥
ನಿಲ್ಲದೆ ಮಗಳ ಮುಂದಟ್ಟಿ ಸೇವೆಯ ಪೆಂಗ । ಳೆಲ್ಲರುಗೂಡಿ ನಡೆದಳು ॥ ೧೪೧ ॥

ಕಾಂಚನಭಿತ್ತಿಯ ಮರೆಯೊಳಂಗವನಿಷ್ಟು । ವಂಚಿಸಿ ಮೊಗದೋರಲತ್ತೆ ॥
ಮಂಚದಿಂದಿಳಿದು ನಿಂದಳಿಯ ಕೈಮುಗಿಯೆ ರೋ । ಮಾಂಚವೆದ್ದೊಳಗರಳಿದಳು ॥ ೧೪೨ ॥

ಕಳುಹಿದನಿದಿರೊಳಿದ್ದತ್ತೆಗೆ ಸತಿಯ ಕೈ । ಯೊಳಗುಡುಗೊರೆಯ ಕೊಂಡಾಕೆ ॥
ಅಳಿಯಗೆ ಹರಸಿ ಹಾರವನೊಂದು ಮಗಳ ಕೈ । ಯೊಳು ಕೊಟ್ಟು ಮಗುಳ್ದಳಾ ಕ್ಷಣವೆ ॥೧೪೩॥

ಹೆಬ್ಬಿಬ್ಬಿಗೊಳುತತ್ತೆ ಹೋದಳಾ ಕ್ಷಣ ವಾರ್ತೆ । ಹಬ್ಬಿತು ನಮಿರಾಜನೆಡೆಗೆ ॥
ಕಬ್ಬಿನ ಸಿಹಿ ನಿನ್ನ ವಿನಯದ ಮುಂದೆಯೆಂ । ದುಬ್ಬಿ ಪೇಳ್ದಳು ಮಧುವಾಣಿ ॥ ೧೪೪ ॥

ಸದರವೆ ಷಟ್ಖಂಡದೊಡೆಯನೊಬ್ಬರಿಗೆ ತಾ । ನಿದಿರೇಳ್ವನೆ ನಮಿಸುವನೆ ॥
ಅದು ಸುಭದ್ರಾದೇವಿಯತಿಶಯ ಮಾವನ । ಸುದತಿಯೆಂಬೊಂದುಪಚಾರಾ ॥ ೧೪೫ ॥

ಮನದೊಳಾತ್ಮನನಪ್ಪಿ ಪೂವಿಡಿದೆರಡುಕೈ । ಯನು ಕೂಡಿ ನೃಪತಿ ವಾಸಿಸಿದಾ ॥
ವಿನತಿಗೈದನು ಚಕ್ರಿಯೆಂದರಾತನ ಮನ । ದನುಭವವಾರ್ಗೆ ಕಾಣಿಪುದು ॥ ೧೪೬ ॥

ಸತಿಯರೊಳ್ತನ್ನ ಮಾತೆಯರಿಗಿಬ್ಬರಿಗಲ್ಲ । ದತಿಭಕ್ತಿಯೊಳು ನಮಿಸುವನೆ ॥
ರತಿವಿನೋದಾರ್ಥ ಪೆಂಡಿರಿಗೆರಗುವನದು । ವ್ರತಭಂಗವಲ್ಲಾತ್ಮರತಗೆ ॥ ೧೪೭ ॥

ಕಿರಿಯತ್ತೆಯನುಜೆಯರ್ಗವರ ಸೇವಕಿಯರ್ಗೆ । ತೆರನರಿದಟ್ಟಿ ಮನ್ನಣೆಯಾ ॥
ಉರೆ ಕಳಕಂಠೆಯ ಕರೆಸಿ ಮನ್ನಣೆಯಿತ್ತ । ಮರಹೆಂಬುದವಗಿನಿಸುಂಟೆ ॥ ೧೪೮ ॥

ಸರ್ವರು ತಮ್ಮರಮನೆಗೆ ಹೋದರು ಮಾತೆ । ಯೊರ್ವಳು ಮಗಳ ಮನೆಯೊಳು ॥
ನಿರ್ವಾಣಪುರದೊಳಿಪ್ಪಂತಿದ್ದಳಳಿಯನ । ಪೂರ್ವಸಂಪತ್ತಿಗರ್ತಿಸುತ ॥ ೧೪೯ ॥

ಜಗದ ಜಂಜಡವೆಲ್ಲ ತೀರಿಹೋದುದು ನಡು । ವಗಲಾದುದಾಗ ಚಕ್ರೇಶಾ ॥
ಹಗಲು ನಿದ್ರೆಗೆ ಸೆಜ್ಜೆವನೆಯ ಹೊಕ್ಕನು ತನ್ನ । ನಗೆಗಣ್ಣ ನಲ್ಲಳುವೆರಸಿ ॥ ೧೫೦ ॥

ಎಡೆಯಾಡಿ ಬಳಲಿದಾ ನಡೆಯದಿರಿನ್ನೆಂದು । ಮಡದಿಯ ತಾನೆತ್ತಿಕೊಂಡು ॥
ದುಡದುಡನಡಿಯಿಟ್ಟು ಶಕುನಿಮಂಚದ ಮೇಲೆ । ಮಡಗಿಕೊಂಡನು ರಾಜಮೋಹಿ ॥ ೧೫೧ ॥

ಲೇಸುದಟ್ಟಿದ ಮನ ಹೊಸಮೋಹ ಮತ್ತವ । ರಾ ಸೆಜ್ಜೆವನೆಯೊಳು ಮಾಳ್ಪ ॥
ಲೇಸನವರೆ ಬಲ್ಲರಂತಿರಲಿಲ್ಲಿಗೆ । **ಸೇಸೆಯ ಸಂಧಿ ಸುಗಂಧಿ** ॥ ೧೫೨ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೫೩ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೫೪ ॥

ಸರ್ವಜನಾನಂದ ಸರ್ವಕಳಾಧರ । ಸರ್ವಸೌಭಾಗ್ಯ ಭೋಗಾಂಗಾ ॥
ಸರ್ವದಾ ನನ್ನಂತರಂಗದೊಳಿರು ಸದ್ಗು । ಣೋರ್ವಿ ಚಿದಂಬರಪುರುಷಾ ॥ ೧೫೫ ॥

ಸೇಸೆಯ ಸಂಧಿ ಸಂಪೂರ್ಣಂ

# ಪುತ್ರವೈವಾಹಸಂಧಿ

ನಿತ್ಯಮಂಗಲ ನಿತ್ಯಶೃಂಗಾರಗೌರವ । ನಿತ್ಯಲೀಲಾಂಗತರಂಗಾ ॥
ನಿತ್ಯವೈಭವನೆ ಸನ್ಮತಿದೋರು ಸೌಖ್ಯಸಾ । ಹಿತ್ಯಾ ನಿರಂಜನಸಿದ್ಧಾ ॥ ೧ ॥

ಸೇಸೆಯಿಕ್ಕಿದ ಮರುದಿನ ಸಾರ್ವಭೌಮಗೆ । ಭೂಸುರರಿಟ್ಟರಕ್ಷತೆಯಾ ॥
ಶ್ರೀಸುಕವಿಗಳು ಕೀರ್ತಿಸಿದರು ನೃಪರು ಮ । ಹಾಸೇನೆ ಕಾಣ್ಕೆಯಿಕ್ಕಿದರು ॥ ೨ ॥
ದ್ವಿಜರಿಗೆ ದಾನ ಸತ್ಕವಿಗಳಿಗುಚಿತ ಭೂ । ಭುಜರಿಗೆ ವಿನಯಸನ್ಮಾನ ॥
ಪ್ರಜೆಪರಿವಾರಕೆ ನುಡಿನೋಟದೋರಿ ಭಾ । ವಜರೂಪ ಕೂಡೆ ಮನ್ನಿಸಿದಾ ॥ ೩ ॥
ಸುಮ್ಮಾನ ಮಿಗಲಲ್ಲಿ ಕೆಲವುದಿವಸ ಸುಖ । ಸೊಮ್ಮಿನೊಳಿರೆ ಚಕ್ರಧರನ ॥
ಹೆಮ್ಮಕ್ಕಳಿಗು ನಮಿರಾಜನ ಸತಿಯರ್ಗು । ಸಮ್ಮಾನ ಹಲವುಬಾರಾಯ್ತು ॥ ೪ ॥
ಇವರಿಕ್ಕೆಗವರೆಯ್ದಿ ಅವರಿಕ್ಕೆಗಿವರೆಯ್ದಿ । ಸವಿಮಿಕ್ಕ ಸಮ್ಮಾನವಾಗಿ ॥
ಹವಣಲ್ಲದುಡುಗೊರೆಗಳ ಕೊಟ್ಟು ಕೊಂಡಾಡಿ । ಸುವಿನೋದದೊಳು ಹೋಯ್ತು ಕಾಲಾ ॥ ೫ ॥

ಇರುತಿರಲಿಂತು ಮತ್ತೊಂದಿರುಳೊಳು ಚಕ್ರಿ । ಯರಮನೆಯಲ್ಲಿ ಮೈದುನರ ॥
ಅರಸಿಯರತ್ತೆಯರ್ತನ್ನ ರಾಣಿಯರಿರೆ । ತೆರೆಯು ಮರೆಯೊಳೊಂದು ಬಿನದಾ ॥ ೬ ॥
ನಾಲ್ವರು ಮೈದುನರೊಳು ರಾಯನೊಂದೊಂದು । ಚೆಲ್ವಿನ ಬಿನದವ ನುಡಿಯೆ ॥
ಮೇಲ್ವರಿದಾಡದೆಚ್ಚೆತ್ತವರೊಂದೊಂದ । ಸಲ್ವಂತೆ ನುಡಿದರಿಚ್ಛೆಯೊಳು ॥ ೭ ॥
ಮೂವರೊಳ್ಮೊದಲೊಯ್ಯನೊಯ್ಯನೆ ನುಡಿದು ಲೀ । ಲಾವಿನೋದವ ಮಾಡಿ ಮತ್ತೆ ॥
ಠೀವಿ ಕೈಮಿಗೆ ನಮಿರಾಜನ ಕೆಣಕಿ ಮ । ಹಾವಿಭು ನುಡಿದನೊತ್ತೊತ್ತಿ ॥ ೮ ॥
ನುಡಿಯದಿರೊತ್ತಿ ನೀನೆಮ್ಮರಸುಗಳೇನು । ಕಡಮೆಯ ಮಾಡಿದರ್ನಿನಗೆ ॥
ಪೊಡವಿಗಗ್ಗಳದ ವಸ್ತುವ ಕೊಟ್ಟರರಿಯಯೆಂ । ದೆಡೆವಾಯ್ದಳಾ ಮಧುವಾಣಿ ॥ ೯ ॥
ಉತ್ತಮವಸ್ತುವ ತಂದುಕೊಟ್ಟವರೊಳು । ಮತ್ತನೆ ಸೋತು ನುಡಿಯದೆ ॥
ಒತ್ತಿ ನುಡಿವುತಿದ್ದೆ ಸಲ್ಲದೆ ನಿನಗೆಯೆಂ । ದೊತ್ತಿದಳ್ಪೇಳೆಯನರಿದು ॥ ೧೦ ॥
ನಿನ್ನರಸುಗಳೆನಗೇನ ತಂದಿತ್ತರೌ । ನನ್ನೊಡವೆಯ ತಂದು ನನಗೆ ॥
ಸನ್ನಾಹಗೈದುದೊಂದಧಿಕವೆಯೆಂದು ಪ್ರ । ಸನ್ನಚಿತ್ತದಿ ಚಕ್ರಿ ನುಡಿದಾ ॥ ೧೧ ॥
ನಟ್ಟಣೆ ಬೇಡ ನಮ್ಮರಸುಗಳ್ನಿನಗೊಲ್ದು । ಕೊಟ್ಟ ಮೇಲಹುದು ನಿನ್ನೊಡವೆ ॥
ಕಟ್ಟರಸಾದರೆ ಮನೆಯೊಳಿರುಳ್ಪುದ । ಕುಟ್ಟಿ ನುಡಿವೆನೆಂದಳೊಡನೆ ॥ ೧೨ ॥
ಮಾವನ ಮಗಳು ಸೋದರದಳಿಯನಿಗೆಂದು । ಭೂವಲಯವೆ ಬಲ್ಲುದರಿಯ ॥
ನೀನೇನ ಕೊಟ್ಟರಿ ಚಕ್ರಿಕೊಂಡುದದೇನು । ಹೋ ವಿಡಾಯವ ಮರೆಯೆಂದಾ ॥ ೧೩ ॥

ತಾಯಣ್ಣ ಕಚ್ಛೇಂದ್ರ ಮಗಳ ತನ್ನಳಿಯನಿ । ಗೀಯನೆ ಒಮ್ಮೆಯಿೂಯದರೆ ॥
ಶ್ರೀಯಶಸ್ವತಿಯ ಹೆಮ್ಮಗ ಬಿಡುವನೆಯೆಂದು । ಸೀಯನೆ ನುಡಿದನಾ ಸುರಸಾ ॥ ೧೪ ॥
ತಪಸಿಗೆ ನಿನ್ನ ಮಾವಾಜಿ ಸಾಗಿದ ನಮ್ಮ । ನೃಪರಲ್ತೆಯಿೂಗ ಕೊಟ್ಟವರು ॥
ಕುಪಿತದಿ ಕೊಡೆನೆಂದರೇನ ಮಾಡುವೆಯೆಂದು । ಚಪಳೆ ನುಡಿದಳೆದೆದಟ್ಟೆ ॥ ೧೫ ॥
ಒರ್ವನೀ ನಮಿರಾಜ ಕೊಡೆನೆಂದರೆನಗಲ್ಲಿ । ಸರ್ವರುಂಟೌ ಸಹಾಯಿಗಳು ॥
ಸರ್ವಸಹಾಯದವರು ನೆನೆದರ್ಥ ಕೈ । ಸಾರ್ವದೆ ಕೇಳೆಂದಳೊಡನೆ ॥ ೧೬ ॥
ಸರ್ವರು ನಿನ್ನವರಾರೆಂದಳರಿಯೆಯು । ಇರ್ವರತ್ತಾ್ಯಜಿಯರ್ವಿನಮಿ ॥
ತೋರ್ವೆಂಟುಸಾವಿರದೈನೂರ್ವರನುಜೆಯ । ರುರ್ವಿಯೆ ಬೇಕೆಂಬರೆನಗೆ ॥ ೧೭ ॥
ಹೆಣ್ಣುಗಳೆಲ್ಲ ತಮ್ಮಣ್ಣನತ್ತಲೆ ಪಕ್ಷ । ಹೆಣ್ಣ ನಿಮ್ಮರಸೀಯೆನೆಸಲು ॥
ಉಣ್ಣಲಿಕ್ಕರು ನನ್ನ ತಂಗಿಯರಿವಗೆಂದ । ಪೆಣ್ಣುಗಳೆಲ್ಲರರ್ತಿಸಲು ॥ ೧೮ ॥
ಅಕ್ಕಟಯಿಂದೊಂದು ಪೆಣ್ಣಿನ ನುಡಿಯೇನು । ಲೆಕ್ಕಕಿನಿಸು ಕುಂದೆ ಮುನ್ನಾ ॥
ಅಕ್ಕಸೋದರಿಯರ ಕೊಟ್ಟಿದ್ದೆನಲ್ತೆಯೆಂ । ದೆಕ್ಕೆವಾಯ್ದನು ನಮಿರಾಜ ॥ ೧೯ ॥
ಹಲಬರುಸೋದರಿಯರ ಮುನ್ನ ನಿನಗಾನು । ಲಲಿತಗೈದುದ ಮರೆದಿರಲು ॥
ಬಲುಸಿರಿವಂತರು ಬಡವರಿಟ್ಟೊಸಗೆಯ । ಪುಲುಗಾಣ್ಬರಹುದಹುದೆಂದಾ ॥ ೨೦ ॥
ಈತಗೆಮ್ಮನುಜೆಯರಿಂ ಸಿರಿಯಾಯ್ತಲ್ಲ । ದೇತರಿಂದಾಯ್ತಿಲ್ಲವೆಂದು ॥
ಮಾತಾಡಲೆಂದೊಡನೊತ್ತಿದ್ದರ್ ಮೂವರಾ । ಮಾತಿಗೆ ನಮಿರಾಜ ನಕ್ಕಾ ॥ ೨೧ ॥
ಎಂಟುಸಾವಿರದೈನೂರಿಬ್ಬರೆನಗಿಲ್ಲಿ । ನಾಂಟರುತಿಹ ಪಕ್ಷದವರು ॥
ಉಂಟು ನಿಮಗೆ ಲಕ್ಷಪಕ್ಷ ನೀವದರಿಂದ । ಬಂಟಿದ್ದಿರೆಂದನಾ ಚಕ್ರಿ ॥ ೨೨ ॥
ಬಹಳ ನಿಮ್ಮಯ ಪಕ್ಷ ನಾಲ್ವರು ನೀವೊಬ್ಬ । ನಹಹ ನಮ್ಮಯ ಪಕ್ಷ ಕಿರಿದು ॥
ಅಹುದಲಾ ವೇಳೆಯನರಿದೆನ್ನ ನೀವೊತ್ತ । ಬಹುದೆಂದು ನುಡಿದನು ನಗುತ ॥ ೨೩ ॥
ಪೊರಗಣ ಚಾವಡಿಯೊಳು ಬಲ ಪಿರಿದೆನ । ಗುರೆ ನೀವು ಜಯಿಸಲಶಕ್ಯಾ ॥
ಮರೆಮನೆಯೊಳಗೆನ್ನನೊತ್ತುತಿದ್ದಿರಿಯಿದ । ನರಿದೆನ್ನೆಯೆಂದನರ್ತಿಯೊಳು ॥ ೨೪ ॥
ವೇಳೆಯನರಿಯಮರ್ಕನೊಳೊತ್ತಿ ಕೆಡೆವುದು । ಖೂಳರ ಮಾರ್ಗವಂತಹನೆ ॥
ತಾಳಿ ನಿಮ್ಮನು ಮುಂದೆ ಜಯಿಸುವೆನೆಂದಿಪ್ಪ । ಲೀಲಾರ್ಥ ಮೌನದೊಳಿರ್ದಾ ॥ ೨೫ ॥

ಅತ್ತೆಯರಿತ್ತ ನಿವಾಳಿಯ ಮಧುವಾಣಿ । ಬಿತ್ತರದೊಳು ಚಕ್ರಿಗಿಟ್ಟು ॥
ಪೊತ್ತಾಯ್ತು ಸಾಕೆಂದರೆಂದು ತಮ್ಮರಸುಗ । ಳತ್ತ ಸೂಚಿಸಿದಳಷ್ಟರೊಳು ॥ ೨೬ ॥
ಅಹುದಹುದಧಿಕಪ್ರಸಂಗವಾದುದು ನಾವು । ಸಿಹಿದಟ್ಟೆ ಮರೆದಿದ್ದೆವೆಂದು ॥
ವಹಿಸಿ ನಿವಾಳಿಯ ನಾಲ್ವರು ತಾವಿಟ್ಟು । ಮಹಿಪಗಾನಂದದೋರಿದರು ॥ ೨೭ ॥

ಬಳಿಕ ಗಂಗಾದೇವಿಸಿಂಧುದೇವಿಯರ ಹೆಂ । ಗಳು ನಿವಾಳಿಸಿದರು ಕೂಡೆ ॥
ಸಲೆ ನಮಿವಿನಮೀಂದ್ರರರಸಿಯರಣ್ಣಗೆ । ಕಳುಹಿದರುರೆ ನಿವಾಳಿಯನು ॥ ೨೮ ॥

ಹೊನ್ನ ಬೊಂಬೆಗಳಂತೆ ನಮಿರಾಜಪುತ್ರಿಯ । ರಿನ್ನೂರ್ವರನುಜಪುತ್ರಿಯರು ॥
ಬೆನ್ನೊಳೈವತ್ತೆನೆ ಬಂದರು ಮಾವಗೆ । ಚೆನ್ನನಿವಾಳಿಗಳಾಂತು ॥ ೨೯ ॥

ವರುಷಾರುತಿಂಗಳೊಳಗೆ ಮದುವೆಗೆ ಸಲ್ವ । ಹರೆಯದ ಕೋಮಲಾಂಗಿಯರು ॥
ಸರಸರಿಕೆಯೊಳೆಯ್ದುತಿದ್ದರು ಜಾತಿಸಿಂ । ಗರಗೂಡಿ ಕಣ್ಗೆ ಮೋಹಿಸುತ ॥ ೩೦ ॥

ಇವರಾರು ಮಧುವಾಣಿ ನಿನ್ನ ತಂಗಿಯರಾತ್ಮ । ಭವೆಯರೆಂದಳು ಕೂಡೆ ಚಕ್ರಿ ॥
ಪ್ರವರಾರ್ಕಕೀರ್ತ್ಯಾದಿರಾಜ ಮುಂತಾದೆನ್ನ । ಕುವರರ ಪುಣ್ಯವೆಯೆಂದಾ ॥ ೩೧ ॥

ಬಂದು ನಿವಾಳಿಯನಿಟ್ಟು ಮಾತುಳಗೋಜೆ । ಯಿಂದ ವಂದಿಸಿದರಾ ಚಕ್ರಿ ॥
ಒಂದುಕ್ಷಣದೊಳಷ್ಟು ರೂಪಾಗಿ ಸೊಸೆಯರ । ವೃಂದವ ತಲೆದಡಹಿದನು ॥ ೩೨ ॥

ತೊಡಿಗೆಯ ಕೊಟ್ಟನೆಲ್ಲರಿಗೆ ಮತ್ತೆ ಡಗ್ಯೆಯ । ಹಿಡಿದು ಲಕ್ಷಣವ ನೋಡಿದನು ॥
ತಡಹಿದ ಮ್ಯೆಯ ನೀವೆಮ್ಮ ಮನೆಗೆ ಬಂದ । ಬೆಡಗು ಲೇಸಾಯ್ತುಮ್ಮಯೆಂದಾ ॥ ೩೩ ॥

ಬಿಡರರ್ಕಕೀರ್ತ್ಯಾದಿರಾಜ ಮುಂತಾದವರ್ । ಕಡುಚೆಲ್ವರವರ ನೀವೂಮ್ಮೆ ॥
ನಡೆನೋಡಿದರೆ ಬಿಡಲರಿಯಿರೆಂದನು ನಾಣ್ಚಿ । ಸಿಡಿದೊಳಗೃಹಹೊಕ್ಕರವರು ॥ ೩೪ ॥

ಮೊದಲು ಸಿಕ್ಕಿದುವೆ ಸಾಕೆಮಗಧಿಕರೊಳೇಕೆ । ಪುದುವೆಂದು ನಮಿರಾಜ ನುಡಿದಾ ॥
ಮೊದಲು ನಿನ್ನನುಜೆಯರೆನ್ನ ಮನೆಯ ಹೊಕ್ಕು । ಕದನವೇನಾಯ್ತೆಂದ ಚಕ್ರಿ ॥ ೩೫ ॥

ಇದಕೆ ನೀನಾನು ಚಿಂತಿಸಬೇಡ ನಿಮ್ಮೆಮ್ಮ । ಸುದತಿಯರೆಂತು ಕಂಡಂತೆ ॥
ಹದಗ್ಯೆವೆಮ್ಯೆ ಮುಂದೆ ತಾಳಿಂದಿಗೆಂದು ಸಂ । ಪದದೋರಿ ನುಡಿದನಾ ಚಕ್ರಿ ॥ ೩೬ ॥

ಅನಿತರೊಳ್ತನ್ನ ಪುತ್ರಿಯರು ಶೃಂಗಾರವೆ । ತ್ತನಿಮಿಷಕನ್ನೆಯರಂತೆ ॥
ತನುಕಾಂತಿ ತಳತಳಿಸುತ ಬರುತಿದ್ದರೊ । ಯ್ಯನೆ ನಿವಾಳಿಯ ಕೈಯೊಳಾಂತು ॥ ೩೭ ॥

ಆರಿವರೆನ್ನಕ್ಕಂದಿರೊ ನನ್ನ ತಾಯ್ಗಳೊ । ವಾರಣಗತಿಯ ಝುಂಕಿಸುತ ॥
ಸಾರಲೆಯ್ತುಹ ಕಾರ್ಯವೇನೆಂದು ನಗುತ ಕು । ಮಾರಿಯರ್ಕಳ ನೋಡಿ ನುಡಿದಾ ॥ ೩೮ ॥

ಬಳೆವ ಪ್ರಾಯದ ಪೆಂಗಳ್ಯೆನೂರ್ವರೆಯ್ತಂದು । ತೊಳೆಪ ನಿವಾಳಿಯನಿಡಲು ॥
ತಳಿರ್ಗೈಯೊಳೆತ್ತಿ ತೊಡೆಯೊಳಿಟ್ಟುಕೊಂಡು ಮ್ಯೆ । ಗಳ ತಡಹಿದನಕ್ಕರಿಂದ ॥ ೩೯ ॥

ಅದೆ ನಿಮ್ಮ ಮಾವಂದಿರಲ್ಲವೆ ನೋಡಿ ನಿ । ಮ್ಮದಿರಲ್ಲಿ ಕುಳಿತಿರ್ದರವರ್ಗೆ ॥
ಪದುಳದಿ ನಮಿಸಿರೆಂದನು ಕ್ಯೆಯ ಮುಗಿದುವಂ । ತದು ಚಕ್ರಿಗಿರಲೆಂದರವರು ॥ ೪೦ ॥

ಎದ್ದು ಕ್ಯೆಮುಗಿದುವು ಕೆಲವುಪೆಣ್ತೊಡೆಯ ಮೇ । ಲಿದ್ದಂತೆ ಕೆಲವೆರಗಿದುವು ॥
ಹೊದ್ದವನ್ಯರ ಮಾವನೆಂದರು ತಂದೆಯ । ಹೊದ್ದಿದುವೇನು ಮಾನಿಗಳೊ ॥ ೪೧ ॥

ಮಾವನೆಂದೆಮಗಿವರೆರಗುವ ಪಾಟಿಯೆ । ಭೂವರಾಗ್ರಣಿಗೆ ತಾವ್ರೊವ್ಮೆ ॥
ಸೇವೆಗೆ ಮುಂಚಿದ ಫಲವೆಯೆಂದರು ಸಿಂಧು । ದೇವಗಂಗೇಶರೆದೆಯೊಳು ॥ ೪೨ ॥
ನೆರೆಯುದಿರಕ್ಕ ಬೇಗದಿ ನೆರೆದಾಗೆವ್ಮು । ಪಿರಿಚಿ ಹೋಹಿರಿ ಹೋದರೆಮಗೆ ॥
ಮರುಕದೋರುವುದಿಷ್ಟು ಸೈರಿಸಿರೆಂಬ ತೂ । ಪಿರಿವ ತಕ್ಕೈಸಿ ಮುದ್ದಿಸುವಾ ॥ ೪೩ ॥
ಎಲ್ಲಿದ್ದರೂ ನನ್ನ ಪುತ್ರಿಯರಿಗೆ ತಕ್ಕ । ವಲ್ಲಭರವರ ಜಾಡ್ಯವನು ॥
ಕೊಲ್ಲುವರಿವರು ಮತ್ತವರ ದಾರಿದ್ರ್ಯವ । ಕೊಲ್ಲುವೆ ನಾನೆಂದನೊಡನೆ ॥ ೪೪ ॥
ತೊಡೆಯ ಮೇಲಿದ್ದ ಪುತ್ರಿಯರೆಲ್ಲ ನಾಣ್ಚಿಯೆ । ದ್ದೊಡನೊಳಗೃಹಕೆ ಸಾಗಿದರು ॥
ನುಡಿವುದಿನ್ನಿಲ್ಲಕ್ಕ ಬಾ ಬನ್ನಿರೆಂದನು । ಕುಡಿಮಿಂಚಿನಲ್ಪೋದರವರು ॥ ೪೫ ॥

ನೆರೆವವರೊಳಗೆಯ್ದಿ ಮಧುರಾಜಿಯೆಂದೆಂಬ । ಕಿರಿಯ ಪೆಣ್ಮಣಿ ಪೋಗಿ ತೆರೆಯ ॥
ಮರೆಯೊಳು ಪೊಗದೋರುತಪ್ಪಾಜಿ ನಿನ್ನತ್ತ । ಲುರೆ ಬಾರೆವಿನ್ನೆಂದಳೊಡನೆ ॥ ೪೬ ॥
ಏನು ಕಾರಣ ಬಾರಿರವ್ವಯೆಂದನು ಹೋಗು । ಮಾನಿಸನಲ್ಲ ನೀನೆವ್ಮೆ ॥
ಮಾನಗೆಡಿಸಿದೆ ನಾವದರಿಂದ ಬಾರೆವೆಂ । ದಾ ನೋವ ತೋರಿ ನುಡಿದಳು ॥ ೪೭ ॥
ಕಂಡವರೆಲ್ಲರ ಮುಂದೆ ನೀನಿಂದತಿ । ಬಂಡುಬೂತಿನ ಮಾತ ನುಡಿದೆ ॥
ಮಂಡಲಪತಿಗಿದು ತಕ್ಕುದೆ ಯೋಚಿಸಿ । ಕೊಂಡು ನೀ ನೋಡೆಂದಳೊಡನೆ ॥ ೪೮ ॥
ಬಂಡುಬೂತೇನವ್ವ ನಿವಗೆಲ್ಲಗೊರ್ಬೊಬ್ಬ । ಗಂಡಬೇಕೆಂದು ನುಡಿದೆನು ॥
ಕಂಡೆಯ ಮತ್ತೆ ಛೀ ಛೀಯೆಂದುಗುಳ್ವಳು । ಮಂಡೆಗೊಡಹಿ ನಾಣ್ಚುತಿಹಳು ॥ ೪೯ ॥
ಒಳಗಿದ್ದರೆಲ್ಲರು ನಕ್ಕರಂತದ ನೋಡಿ । ನಿಳುಕಿ ಮತ್ತಪ್ಪಾಜಿ ನಿನ್ನ ॥
ಹಲಬರು ನಗುತಿಹರೆನಗೆ ನಾಚಿಕೆಯಾಯ್ತು । ಬಲು ಹಾಸ್ಯವಾಯ್ತೆಂದಳೊಡನೆ ॥ ೫೦ ॥
ಎಂದರೆ ನಕ್ಕನಯ್ಯಯ್ಯೊ ನೀನರಸೊಬ್ಬ । ಬಂದೆ ಸರ್ವರು ತನ್ನ ನಗಲು ॥
ಒಂದಿಷ್ಟು ನಾಣ್ಚದೆ ನಗುತಿರ್ದೆ ಹೋಗು ಹೋ । ಗೆಂದು ಕೈಯೊಯ್ದು ಝುಂಕಿಸಿತು॥ ೫೧ ॥
ನನ್ನ ನಗುವರೊತ್ತಿಲಿರಬೇಡ ಮಗಳೆ ನೀ । ನೆನ್ನೊತ್ತಿಗಿತ್ತ ಬಾರೆಂದಾ ॥
ಮುನ್ನ ನಿನ್ನೆಡೆಗೆಯ್ದಿ ನೊಂದುದು ಸಾಲದೆ । ಯಿನ್ನೊಲ್ಲೆ ಹೋಗೆಂದುದೊಲೆದು ॥ ೫೨ ॥
ತಪ್ಪು ನನ್ನದು ಮಧುರಾಜವ್ಮ ನೀವ್ರೊವ್ಮೆ । ವೊಪ್ಪದೊಳಿತ್ತ ಚಿತ್ತೈಸಿ ॥
ತಪ್ಪ ತರುವೆನು ನಿವಗೆ ನಿಮ್ಮ ಚಿತ್ತಕೆ । ಬಪ್ಪಂತೆ ನಡೆವೆನಿನ್ನೆಂದಾ ॥ ೫೩ ॥
ಎಲ್ಲರ ಮುಂದಾನು ಬಪ್ಪಾಗ ಲಜ್ಜೆಯೋ । ನಿಲ್ಲವೆ ಹೋಗೆಂದುದೊಡನೆ ॥
ಮೆಲ್ಲನೆ ರತಿಚಂದ್ರೆಗರಸ ಸೂಚಿಸಲೆತ್ತಿ । ಚೆಲ್ಲದೊಳ್ತಂದಿತ್ತಳವಳು ॥ ೫೪ ॥
ಮಾವನವರನು ತಂದೆಯ ನೋಡಿ ಮಿಗೆ ನಾಣ್ಚಿ । ಭೂವರನಂಕದೊಳ್ತನ್ನ ॥
ತಾವರೆಗೈಯಿಂದ ಮೋರೆಯ ಮುಚ್ಚಿಕೊಂ । ಡೋವಿ ಮೋನದೊಳಿದ್ದುದಾಗ ॥ ೫೫ ॥

ನೋಡಕ್ಕಯೆಂಬ ನೋಡದು ನುಡಿಯೆಂಬ ಮಾ । ತಾಡದು ತಾನೆ ತಕ್ಕೈಸಿ ॥
ನೋಡುವ ಮುತ್ತ ಕೊಡುವನು ನಗುವನು ಮು । ದ್ದಾಡುತಿದ್ದನು ತನ್ನ ಮಗಳಾ ॥ ೫೬ ॥
ಮೆಚ್ಚಿ ಸರ್ವರು ನಿನ್ನ ನೋಳ್ಪರು ನೀನು ಕ । ಣ್ಮುಚ್ಚಿದುದರಿಯರೆ ಮಗಳೆ ॥
ಹುಚ್ಚೆ ಕೇಳ್ಮಧುರಮ್ಮ ಕಣ್ದೆರೆಯೆಂಬ ಕ । ಣ್ಮುಚ್ಚಿಯೆ ನಗುವುದಾ ಹಸುಳೆ ॥ ೫೭ ॥
ನಮ್ಮನೊಬ್ಬರನು ನೋಡದೆ ಕಣ್ಣ ಮುಚ್ಚಿಹ । ಸೊಮ್ಮೇನು ತಿಳಿದು ನೋಳ್ಪಾಗ ॥
ಅಮ್ಮಗಿಂದೇನು ಧ್ಯಾನವೊಯೆಂಬನಾ ಶಿಶು । ಸುಮ್ಮನೆ ನಗುತಿಹುದೊಳಗೆ ॥ ೫೮ ॥
ಶಿವಸಿದ್ಧಿಯನು ನೀವು ನಿಮ್ಮೊಳೆ ಕಂಡನು । ಭವಿಸಿದೊಡಹುದೆ ದೇವಿಯರೆ ॥
ನವಗಿಷ್ಟು ಬುದ್ಧಿಗಲಿಸಿಯೆಂದು ಗಲ್ಲವ । ಚವಚವನಲುಗಿ ಕೇಳುವನು ॥ ೫೯ ॥
ಎಡೆಗೊಮ್ಮೆ ಕಣ್ದೆರೆವುದು ನಕ್ಕು ಮುಚ್ಚುವು । ದೊಡನೆ ಮಾತಾಡೆನೆ ತಲೆಯಾ ॥
ಕೊಡಹುತ ಚೆಂದಳಿರ್ಗೈಯೊಳಾಸ್ಯವ ಮುಚ್ಚಿ । ತೊಡೆಯ ಮೇಲಿದ್ದುದು ಪಿತನ ॥ ೬೦ ॥
ಮೋಹನದೊಂದು ಪುತ್ತಳಿಗೆ ಜೀವವ ತುಂಬಿ । ಮೋಹನಸಿದ್ಧನಾಡಿಸುವ ॥
ಊಹೆಯೊಳ್ಮಗಳ ಮುದ್ದಿಸುತಿದ್ದ ನಗುತೊಮ್ಮೆ । ಶ್ರೀಹಂಸನಾಥಯೆಂದೆಂಬಾ ॥ ೬೧ ॥
ತಂಬುಲಗೊಡುವನಾ ಶಿಶುವೊಲ್ಲದೆಂದೆಂದು । ಕೊಂಬೆಯಿಂದೇಕೊಲ್ಲೆಯೆಂದಾ ॥
ಡೊಂಬಿನ ನುಡಿ ಹೊಕ್ಕ ಬಾಯ ತಂಬುಲವೆಂದು । ದಂಬಕಮುಚ್ಚಿ ಮಾತೊಂದಾ ॥ ೬೨ ॥
ನಕ್ಕನದೇನೆಂದ ಸುಮ್ಮನಿದ್ದುದು ಕೂಡೆ । ತಕ್ಕೈಸಿ ಬಾಯ್ಗೆ ತಂಬುಲವಾ ॥
ಇಕ್ಕಿದನೊಡನೆ ಥೂ ಥೂಯೆನುತುಗುಳ್ವುದು । ಚೊಕ್ಕಳಕಾತಿ ಭಾಪೆಂದಾ ॥ ೬೩ ॥
ಮಾನಭೂಷಣೆ ಲಜ್ಜೆಕಾತಿ ಸೌಜನ್ಯನಿ । ಧಾನೆ ಗಂಭೀರೆ ಸುಶೀಲೆ ॥
ಏನಮ್ಮ ಮಧುರಾಜಿ ತಪ್ಪೊಂದ ಕಾಯೆಂಬ । ಭೂನಾಥ ಪಜ್ಜೆಯೆತ್ತುವನು ॥ ೬೪ ॥
ಮೊದಲಿಟ್ಟ ತೊಡಿಗೆಯ ತೆಗೆದನು ಹೊಸತಾಗಿ । ಸದಮಲಾಭರಣವ ತೊಡಿಸಿ ॥
ಇದು ನಿನಗಿತ್ತಪರಾಧ ಹೋಗೆಂದಿಳು । ಹಿದರೋಡಿತೆಳೆಯಂಚೆಯಂತೆ ॥ ೬೫ ॥
ಕಂಡಿರೆ ನಿಮ್ಮಣ್ಣನಾಟವ ಹೊರಗೆಡೆ । ಗೊಂಡ ಗಂಭೀರ ಮತ್ತೊಳಗೆ ॥
ಕಂಡಬಟ್ಟೆಯ ನುಡಿನಡೆಯೆಂದರರಸನ । ಪೆಂಡಿರು ಖಚರಿಯರೊಡನೆ ॥ ೬೬ ॥
ಏನ ಮಾಡಿದನಣ್ಣ ತನ್ನ ಪುತ್ರಿಯನು ಚಿ । ತ್ತಾನುರಾಗದೊಳು ಮುದ್ದಿಸಿದಾ ॥
ಹೀನವೆ ಜಗಕಿದೆಂದರು ನಮಿರಾಜನ । ಮಾನಿನಿಯರು ದಿವಿಜೆಯರು ॥ ೬೭ ॥

ಹರಿದುದೋಲಗವಂದು ಮತ್ತೊಂದು ದಿನದೊಳಾ । ಅರಮನೆಯೊಳು ಮುನ್ನಿನಂತೆ॥
ಸರಸಗೋಷ್ಠಿಯೊಳಿದ್ದನೇನೆಂಬೆನೊಂದು ಬಂ । ಧುರತಂತ್ರವನು ಚಕ್ರಿ ನೆನೆದಾ ॥ ೬೮ ॥
ಕನಕರಾಜನು ಕಾಂತರಾಜನೆಂಬವರಾದಿ । ಯೆನೆ ನಮಿರಾಜನಾತ್ಮಜರು ॥
ಜನಪನಾಜ್ಞೆಯೊಳೆಯ್ದಿ ಮುನ್ನೂರ್ವರಾಗ ಮಾ । ವನ ಕಂಡರಿಕ್ಕಿ ಕಾಣ್ಕೆಯನು ॥ ೬೯ ॥

ಶಾಂತರಾಜನು ಮೊದಲಾದವರ್ವಿನಮಿಭೂ । ಕಾಂತನ ನೂರ್ವರಾತ್ಮಜರು ॥
ಪಿಂತೆಯ್ದಿ ಕಂಡರು ಜಂಬುಖಾನಗಳ ಮಾ । ವಂ ತವಗಿಡಿಸೆ ಕುಳಿತರು ॥ ೭೦ ॥
ಚೆಲುವರ್ಕೈ ಖಚರಕುಮಾರರಿವರು ಕಲ್ತ । ಕಲೆಗಳೇನೇನೆಂದು ಚಕ್ರಿ ॥
ಒಲಿದು ಕೇಳಲು ಶಸ್ತ್ರಶಾಸ್ತ್ರದೊಳೆಲ್ಲರ । ಗ್ಗಳರೆಯೆಂದಳು ಮಧುವಾಣಿ ॥ ೭೧ ॥
ಸಾಧಿತವಿದ್ಯೆಯೊಳ್ಜಾತಿವಿದ್ಯೆಯೊಳು ವಿ । ದ್ಯಾಧರಲೋಕಕಗ್ರಿಮರು ॥
ಬೋಧಸಮ್ಯಕ್ತ್ವಚಾರಿತ್ರಸಂಪನ್ನರೆಂ । ದಾ ದೊರೆಗರುಹಿದಳವಳು ॥ ೭೨ ॥
ಬರಹೇಳೊ ನೆರೆದ ನಮ್ಮಣುಗರೆಲ್ಲರನೆಂದು । ಭರತೇಶ ಪೇಳ್ದನಷ್ಟರೊಳು ॥
ಬರುತಿದ್ದರೊಬ್ಬರಿಬ್ಬರು ನಾಲ್ವರೈವರೆ । ಣ್ಬರು ನೂರ್ವರೆನಿಸಿ ಸಾಲಾಗಿ ॥ ೭೩ ॥
ಮುಂದೆಯ್ದಿ ಮಧುರಾಜವಿಧುರಾಜರೆಂಬವರ್ । ತಂದೆಗಿಬ್ಬರು ಕಾಣ್ಕೆಯಿಕ್ಕಿ ॥
ವಂದಿಸಿ ಜಂಬುಖಾನದೊಳು ಕುಳಿತರು ಮಾ । ವಂದಿರಿಗೊಡನೆ ಕೈಮುಗಿದು ॥ ೭೪ ॥
ಸೂನುಗಳನು ನೋಡಿ ಚಕ್ರೇಶ ಮನದೊಳೊಂ । ದಾನೊಂದು ತಂತ್ರವನಿಟ್ಟು ॥
ಏನಿರ್ಕೈ ಮಧುರಾಜ ವಿಧುರಾಜ ನಿಮ್ಮ ಶಾ । ಸ್ತ್ರಾನುಭವವ ತೋರಿರೆಂದಾ ॥ ೭೫ ॥
ವ್ಯಾಕರಣದೊಳೊಮ್ಮೆ ಶಬ್ದಸಿದ್ಧಿಯ ತೋರಿ । ನೂಕಿ ತರ್ಕದೊಳಟ್ಟಿ ಮುಟ್ಟಿ ॥
ಕಾಕುದೋರದೆ ಕುವರರು ಸ್ವರ್ಗಭಾಷೆಯೊ । ಳ್ವಾಕುದೋರಿದರಯ್ಯ ಮೆಚ್ಚೆ ॥ ೭೬ ॥
ಆಗಮದೊಳು ಹರವರಿಯಾಗಿ ಹರಿದು ಕಾ । ವ್ಯಾಗಮದೊಳು ಕಳೆದೋರಿ ॥
ಭೋಗಿಸಿ ವ್ಯಕ್ತವಾಗಿರೆ ಕೂಡೆ ಚತುರರು । ಯೋಗವ ಕೇರಿ ತೋರಿದರು ॥ ೭೭ ॥
ಭರತಶಾಸ್ತ್ರದೊಳು ನಾಟಕದೊಳು ಕವಿತೆಯೊ । ಳ್ತುರಗೇಭಮಣಿಪರೀಕ್ಷೆಯೊಳು ॥
ಭರತಚಕ್ರಿಯ ಪುತ್ರರಲ್ಲವೆ ನುಡಿದರು । ಭರತವೆದ್ದಂತೆ ಕ್ಷೀರಾಬ್ಧಿ ॥ ೭೮ ॥
ಸಾಕು ಸಾಕೆಂಬಂತೆ ನುಡಿವುತಿದ್ದರು ಕೇಳ್ದ । ನೇಕರು ತಲೆದೂಗುವಂತೆ ॥
ಲೋಕರಂಜನೆ ಬೇಡ ಮೋಕ್ಷಸಿದ್ಧಿಗೆ ತಕ್ಕ । ಜೋಕೆಯ ಹೇಳಿರೈಯೆಂದಾ ॥ ೭೯ ॥
ನುಡಿವ ಚೆಲ್ವಿಕೆಗೆ ಮೆಚ್ಚಿದನಹುದದನೊಳ । ಗಡಗಿಸಿಕೊಂಡು ರಾಜೇಂದ್ರಾ ॥
ಗಡಬಡೆಯೊಳು ನಮ್ಮ ಚಾಳಿಸಿದಿರಿ ಕರ್ಮ । ಕೆಡುವ ತಂತ್ರವ ಹೇಳಿರೆಂದಾ ॥ ೮೦ ॥
ಭೇದರತ್ನತ್ರಯವಿಡಿದು ಸಾಧಿಸಿ ಮತ್ತೆ । ಭೇದರತ್ನತ್ರಯವಿಡಿಯೆ ॥
ಭೇದಿಸಿ ಕರ್ಮ ಜರಿವುದಾಗಲಮೃತದ । ಹಾದಿಯಿದೆಂದರಾ ಸುತರು ॥ ೮೧ ॥
ಅವರ ಲಕ್ಷಣವೆಂತುಟೆಂದನು ಗುರುದೇವ । ವಿವಿಧಾಗಮಾರ್ಥದ ಚಿಂತೆ ॥
ವ್ಯವಹಾರ ತನ್ನ ತಾ ಪೊರ್ದೆ ನಿಶ್ಚಯವೆಂದು । ಕುವರರಾಡಿದರಯ್ಯನೊಡನೆ ॥ ೮೨ ॥
ಅದು ಲೇಸು ಲೇಸೆಂದ ನಮಿರಾಜ ಲೇಸನಾ । ವುದ ಕಂಡೆ ಹೇಳೆಂದ ಚಕ್ರಿ ॥
ಮೊದಲು ಭೇದದೊಳಾಡಿ ತನ್ನೊಳು ತಾನೆ ನಿ । ಲ್ವುದುಯೆಂದನಾ ಖಚರೇಂದ್ರಾ ॥ ೮೩ ॥

ವ್ಯವಹಾರ ಸಾಲದೆ ನಿಶ್ಚಯವೇಕೆಂದ । ವ್ಯವಹಾರದಿಂ ಸ್ವರ್ಗವಹುದು ॥
ಶಿವಸಿದ್ಧಿ ನಿಶ್ಚಯದಿಂದಹುದಾತ್ಮಾನು । ಭವವೆ ಬೇಕೆಂದ ಭಾವನೊಳು ॥ ೮೪ ॥
ಮೆಚ್ಚಿದನಹುದದನೊಳಗಿಟ್ಟುಕೊಂಡಿದ್ದು । ಮೆಚ್ಚಿನ್ನೈಯೆಂದನಾ ಚಕ್ರಿ ॥
ಮೆಚ್ಚದುದೇನು ಮಾವಾಜಿಯಾಡಿದ ಮಾತು । ಮೆಚ್ಚುಲ್ತೆಯೆಂದರು ಸುತರು ॥ ೮೫ ॥
ನಾನೆಂದ ಮಾತಲ್ಲ ನಿಮ್ಮ ಮಾವನ ಮಾತ । ದೇನೊಳ್ಳಿತ್ತೈ ನಿಲ್ಲಿರದನು ॥
ನಾನು ನೀವೀಗ ಬಪ್ಪೆಲ್ಲರೊಳ್ಕೇಳ್ವೆವೆಂ । ದಾನಂದದೊಳು ಚಕ್ರಿ ನುಡಿದಾ ॥ ೮೬ ॥

ಪುರುರಾಜಗುರುರಾಜರೆಂಬವರ್ಬಂದರು । ಭರತೇಶ ಕೇಳಿದನವರಾ ॥
ಪರಮಾರ್ಥವಲ್ತೆ ಮಾವಾಜಿ ಕಂಡರ್ಥವೆಂ । ದರು ಚಕ್ರಿಯದನೊಪ್ಪೆನೆಂದಾ ॥ ೮೭ ॥
ಶ್ರೀರಾಜಮಾರಾಜರೆಂಬವರ್ಬಂದರು । ಕೋರಿ ಕೇಳಿದನವರೊಡನೆ ॥
ಸಾರಾರ್ಥವಲ್ತೆ ಮಾವಾಜಿಯು ಮಾತೆಂದ । ರಾ ರಾಯನದನೊಪ್ಪೆನೆಂದಾ ॥ ೮೮ ॥
ವಸ್ತುರಾಜನು ರತಿರಾಜನು ಮತಿರಾಜ । ಹಸ್ತಿರಾಜನು ಸಿಂಹರಾಜಾ ॥
ವಸ್ತುಕರಾಜ ವರ್ಣಕರಾಜಯೆಂಬ ಸ । ಮಸ್ತಪುತ್ರರೊಳು ಕೇಳಿದನು ॥ ೮೯ ॥
ದೇವರಾಜನು ದಿವ್ಯರಾಜ ಮೋಹನರಾಜ । ಬಾವನ್ನರಾಜ ಮುಂತಾದ ॥
ಸಾವಿರದಿನ್ನೂರ್ವರಣುಗರ ಕೇಳ್ದರೆ । ಲ್ಲಾವೊಂದೆ ಪರಿಯೊಳಾಡಿದರು ॥ ೯೦ ॥
ಹಂಸರಾಜನ ರತ್ನರಾಜನ ಕೇಳ್ದು ಮ । ಹಾಂಶುರಾಜನ ಕೇಳ್ದನೊಡನೆ ॥
ಸಂಸುಖರಾಜ ನಿರಂಜನಸಿದ್ಧರಾ । ಜಾಂಶರ ಕೇಳ್ದನೈವರನು ॥ ೯೧ ॥
ಬರಲರ್ಕಕೀರ್ತ್ಯಾದಿರಾಜವೃಷಭರಾಜ । ರೊರೆವಂತೆ ಕೇಳ್ವವಿನ್ನೆಂದಾ ॥
ಇರದವರೆಯ್ತಂದು ತಂದೆಗೆರಗಿ ಮಾತು । ಆರಿಗೆ ಕೈಮುಗಿದು ಕುಳಿತರು ॥ ೯೨ ॥
ದೊಡ್ಡಣ್ಣ ಚಿಕ್ಕಣ್ಣ ವೃಷಭಣ್ಣ ನಿಮ್ಮಯ । ದೊಡ್ಡಮಾವನಿಗೆನಗೊಂದು ॥
ಒಡ್ಡಾರವೊಡ್ಡಿದೆಯಿದ ನೀವು ತಿದ್ದಿಕೊ । ಟ್ಟಡ್ಡಾಕೆ ಬಿಡಿಸಿರೈಯೆಂದಾ ॥ ೯೩ ॥
ದೇವರ್ಗೆ ಮಾವಾಜಿಗಾದ ಕಾರ್ಯಕೆ ಪುರು । ದೇವನೋಲಗಕೆಯ್ದಿ ಕೇಳಿ ॥
ನಾವು ತಿದ್ದುವ ದಕ್ಷರೆಯೆಂದು ನುಡಿದರು । ಮೂವರು ಪುತ್ರರೋಜೆಯೊಳು ॥ ೯೪ ॥
ಕೇಳಿರೈ ಮುಕ್ತಿಗಾತ್ಮನದೇಕೆ ಪೊರ ಧರ್ಮ । ಸಾಲದೆಯೆಂದೆ ನಾನೀತಾ ॥
ಸ್ಥೂಲಧರ್ಮದಿ ಸ್ವರ್ಗ ತನ್ನಿಂದ ಶಿವವೆಂದು । ಹೇಳುತಿದ್ದನು ಹೇಳಿರೆಂದಾ ॥ ೯೫ ॥
ಎಂದೆಂದು ಮುಕ್ತಿಗಾತ್ಮಾನುಭವವೆ ಬೀಜ । ವೆಂದೆಮಗಯ್ಯ ಸೊಲ್ಲಿಪನು ॥
ಇಂದಿಂತು ಸೊಲ್ಲಿಪುದೇನಿದು ತಂತ್ರವೊ । ಯೆಂದವರೊಳಗೆಣಿಸಿದರು ॥ ೯೬ ॥
ಕಂಡುದ ಪೇಳಿರೈಯೆಂದನವರು ಪೇಳ । ಲಂಡಿಸುತಿದ್ದರಂತದನು ॥
ಕಂಡರ್ಕಕೀರ್ತಿ ನೀನಂಜಬೇಡೆನ್ನಾಣೆ । ಪಿಂಡಿತಾರ್ಥವ ಹೇಳಿರೆಂದಾ ॥ ೯೭ ॥

ದೇವರ ಮೇಲಾಣೇಕೆಂದರೆ ಬೇಕು ನೀ । ನಾವುದುಳ್ಳುದನೆ ಪೇಳೆನಲು ॥
ಮಾವಾಜಿ ನುಡಿದ ಮಾತದು ಸತ್ಯವಹುದದ । ದೇವರೆ ಮೆಚ್ಚಬೇಕೆಂದಾ ॥ ೯೮ ॥
ನಿನ್ನ ಸೋದರರೆಲ್ಲರೆತ್ತಲಾದರು ನೀನು । ನನ್ನತ್ತಲಾಯ್ತಿಲ್ಲವೆನಲು ॥
ನಿನ್ನಾಣೆಯಿಟ್ಟ ಮೇಲವು ತಪ್ಪುವುವೆ ಸ್ವಾಮಿ । ಮನ್ನಿಸಂತಹುದಹುದೆಂದಾ ॥ ೯೯ ॥
ರತಿಚಂದ್ರೆ ಇವರಿಂತು ನುಡಿದುದೇಕೆಂದನಾ । ಸ್ಮಿತಮುಖಿಯಿವರು ಮಾತುಳನ ॥
ಸುತೆಯರ ಕಂಡು ಪಕ್ಷಕೆ ಪೇಳ್ದರೆಂದಳಾ । ಕ್ಷಿತಿಪನಂತಹುದಹುದೆಂದಾ ॥ ೧೦೦ ॥
ನನ್ನ ಮಾತುಳನ ಪುತ್ರಿಯು ನನಗೀವಾಗ । ತನ್ನುದ್ಧದೊಡ್ಡದೋರಿದನು ॥
ತನ್ನ ಪುತ್ರಿಯರನೀವನೆ ಬರಿದಿವರೇಕೆ । ನನ್ನ ಬಿಟ್ಟಾಡಿದರೆಂದಾ ॥ ೧೦೧ ॥
ನಿವಗಂಕೆಗೆಯ್ದೆನೆನ್ನಳಿಯಂದಿರಿಗೆಯೆನ್ನ । ಕುವರಿಯವರ್ೞದಲೆ ಕೊಟ್ಟವರು ॥
ಅವಗಡಿಸದಿರಿಯೆಂದನು ನಮಿರಾಜ ಭೂ । ವರ ಹೋ ನಾ ನೆನೆದುದಾಯ್ತೆಂದಾ ॥ ೧೦೨ ॥
ರೂಪಿಗೆ ಸೋತನು ಚಕ್ರಿಯು ಸುತರ ವಿ । ದ್ಯಾಪರಿಣತೆಗೆದೆಸೋತಾ ॥
ಕೂಪತನದೊಳು ಕೈಮುಗಿಯೆ ಮೆಚ್ಚಿದ ನಮಿ । ಭೂಪನೀಯುನೆ ಕುಮಾರಿಯರಾ ॥ ೧೦೩ ॥
ಮನುರತ್ನ ತಂಗಿಯರೆನೆ ತಮ್ಮ ಪುರುಷರ್ಗೆ । ತನುಜರು ನಮಿಸಿದರೆಂದು ॥
ವಿನಮಿನಮಿಗಳ ಪೆಂಡಿರು ದಿವಿಜೆಯರು ಬಿ । ರ್ರನೆ ಬೀಗಿದರು ಬೀಗದಿಹರೆ ॥ ೧೦೪ ॥
ಸಾಕ್ಷಾಜ್ಜನಕನೆಂದರು ನೋಡು ಸುತರೆನ್ನ । ಪಕ್ಷಕಾಡರು ನಮಿರಾಜಾ ॥
ಮೋಕ್ಷಮಾರ್ಗವ ತಪ್ಪದಾಡಿದರೆಂದು ಪ । ರೀಕ್ಷಿಸಿ ನುಡಿದನಾ ಚಕ್ರಿ ॥ ೧೦೫ ॥
ಕಚ್ಛರಾಜನ ತಂಗಿಯುದರದೊಳೊಗೆದನ । ಸ್ವಚ್ಛಗರ್ಭದೊಳೊಗೆದವರು ॥
ಇಚ್ಛೆಗೆ ನುಡಿಯರೆಂದವ ತನ್ನ ತಂದೆಯು । ಸುಚ್ಛಾಯೆದೋರಿ ನುಡಿದನು ॥ ೧೦೬ ॥
ಭಾಪು ಮಝುರೆ ತನ್ನ ಭೂಷಣಾರ್ಥವ ನೋಡು । ಶ್ರೀಪುರುನಾಥನಾತ್ಮಜನ ॥
ರೂಪಿನೊಳೊಗೆದವರೆಲ್ಲರು ಸತ್ಯಸ । ಲ್ಲಾಪರೇನೆಂದನಾ ಚಕ್ರಿ ॥ ೧೦೭ ॥
ಮೊನ್ನೆ ನೀನಧಿಕರ್ಗೆ ಪೆಂಗಳ ಕೊಡೆನೆಂದೆ । ಇನ್ನು ನೀನಿಂದೀವೆನೆಂದೆ ॥
ನನ್ನರ್ಕೆ ಸಂದುದೆಂದನು ಚಕ್ರಿ ನಮಿರಾಜ । ತನ್ನರ್ಕೆಯದು ತಾನೆಯೆಂದಾ ॥ ೧೦೮ ॥
ಅವರಿವರಲ್ಪದೊಳ್ನುಡಿವರಾತ್ಮನನಿಂದು । ನವಗಾತ್ಮರುಚಿ ದೃಢವಾಯ್ತು ॥
ನಿವಗಿಷ್ಟ ಸಲಲೆಂದು ಸಿಂಧುಗಂಗಾದೇವ । ನವರುಬ್ಬಿ ಹರಸಿದರೊಡನೆ ॥ ೧೦೯ ॥
ಅಳಿಯಂದಿರಿಗೆ ಕುವರರಿಗೆ ಮನ್ನಣೆಯಿತ್ತು । ನಿಳಯಕೆ ಬೀಳ್ಕೊಟ್ಟು ಚಕ್ರಿ ॥
ಒಳಗಿದ್ದ ತಂಗಿಯರಿದಕೇನ ನುಡಿದರೆಂ । ದೆಳಸಿ ಕೇಳಿಸಿದನಾ ಕ್ಷಣವೆ ॥ ೧೧೦ ॥
ಮಕ್ಕಳ ಮದುವೆ ಲೇಸಹುದದಕೆಮಗೆ ಪೆ । ಣ್ಮಕ್ಕಳೊಳತಿಮೋಹವೆಂದು ॥
ಪಕ್ಕದಿಂದಿವರಗಲಿದರೆಮಗೆಂತೆಂದು । ಚೆಕ್ಕನವರು ಹೇಳಿಸಿದರು ॥ ೧೧೧ ॥

ತಮ್ಮ ಪುತ್ರಿಯರನೆಮ್ಮಣುಗರಿಗಿತ್ತ ಮೋ । ಉಮ್ಮಳ ತಮಗಾಗದಂತೆ ॥
ನಮ್ಮ ಪುತ್ರಿಯರ ತಮ್ಮಣುಗರಿಗೀವೆನು । ಸುಮ್ಮಾನದೊಳಗಿರಲೆಂದಾ ॥ ೧೧೨ ॥

ಹೆಣ್ಣ ಕೊಡೆಮ್ಮ ಪುತ್ರನಿಗೆಂದು ಚಕ್ರಿಯ । ಬಣ್ಣಿಸಿ ಬೇಡಲಂಜುವರು ॥
ಅಣ್ಣನ ಕೈಯಿಂದ ನುಡಿಸಿದರ್ಕೊಡುವಂತೆ । ಸಣ್ಣವೆ ಸತಿಯರ ತಂತ್ರಾ ॥ ೧೧೩ ॥

ತಾವೆಂತು ಕಂಡರಂತಾಗಲಿನ್ನೆಂದವ । ರೋವಿ ಹೇಳಿಸಿದರು ಕೂಡೆ ॥
ವೈವಾಹ ಜಯಜಯ ಲೇಸೆಂದು ಸೇವೆಯ । ಭಾವೆಯರ್ಗಲಭೆ ಮಾಡಿದರು ॥ ೧೧೪ ॥

ಮರೆಯದೆಲ್ಲರನಂದು ಮನ್ನಿಸಿ ಬೀಳ್ಕೊಟ್ಟ । ಮರುದಿನ ಮೊದಲಾಗಿ ಚಕ್ರಿ ॥
ಹರೆಹಂದಲಿಕ್ಕಿ ಹಲವುದಿನ ಮದುವೆಯ । ತೆರನರಿದೊಲ್ದು ಮಾಡಿದರು ॥ ೧೧೫ ॥

ವಿಭವ ಕೈ ಮಿಗಲವರವರ ನಾಮಕೆ ತಕ್ಕ । ಶುಭಲಗ್ನವರಿದು ಮಂಗಲವಾ ॥
ಪ್ರಭವಿಸಿದನು ಮುನ್ನ ಮಾಡಿದ ಮದುವೆಯಿಂ । ದಭಿನವವೆನಿಸಲುತ್ಸವವಾ ॥ ೧೧೬ ॥

ಉಂಗುರುಡಿಗೆ ಮೊದಲಾದುವು ಬೇಗ ಬೆ । ಡಂಗಾಗೆ ಹೆಣ್ಣುಗಂಡುಗಳ ॥
ಸಿಂಗಾರ ಸೇಸೆ ಪ್ರಭಾವನೆ ರಂಜಿಸೆ । ಮಂಗಲವಾಯ್ತು ಹೋಯೆನಿಸಿ ॥ ೧೧೭ ॥

ಹದಿನಾರುದಿನಮುಟ್ಟ ನಮಿರಾಜ ತವಗೆ ಮಾ । ಡಿದ ಲೇಸ ಮರೆಯದೆ ತಾವು ॥
ಮದುವೆಯೊಳ್ದಿನಚರಿ ಮುಯಿಗಳ ಸಲಿಸಿ ತಿ । ದ್ದಿದರು ಭೂಮಿಪರು ವ್ಯಂತರರು ॥ ೧೧೮ ॥

ಜಿನಪೂಜೆ ಕಟಕದಾತಣ ವಿಪ್ರದಾನ ಭೋ । ರೆನಲುಲಿದೆಸೆವ ವಸಂತಾ ॥
ದಿನಚರಿ ಸಲುತಿರೆ ಚಕ್ರವರ್ತಿಯ ಮಕ್ಕ । ಳ್ಗನುಪಮಕಲ್ಯಾಣವಾಯ್ತು ॥ ೧೧೯ ॥

ಕಂಜಾಜಿಯೆಂಬ ಪೆಣ್ಣರ್ಕಕೀರ್ತಿಗೆ ಗುಣ । ಮಂಜರಿಯಾದಿರಾಜನಿಗೆ ॥
ಕುಂಜರವತಿಯೆಂದು ವೃಷಭರಾಜನ ಸತಿ । ರಂಜಿಸಲಾಯ್ತು ವೈವಾಹಾ ॥ ೧೨೦ ॥

ಗಮನಾಜಿಯೆಂಬಳು ಹಂಸರಾಜಗೆ ಮನೋ । ರಮೆ ರತ್ನರಾಜನ ವನಿತೆ ॥
ಸಮರೂಪುಗುಣವರಿದೆಲ್ಲರಿಗಾಯ್ತಿಂತು । ನಮಿರಾಜಸುತೆಯರೊಳ್ಮದುವೆ ॥ ೧೨೧ ॥

ಕುವರರು ಸಾಸಿರದಿನ್ನೂರ್ವರೊಳಗೆ ಚಿ । ಕ್ಕವರಾದರಿನ್ನೂರ್ವರಲ್ಲಿ ॥
ಅವರುಳಿದುಳಿದ ಸಾಸಿರ್ವರಿಗಾಯ್ತು ಭೂ । ಭುವನ ಕೊಂಡಾಡೆ ಕಲ್ಯಾಣಾ ॥ ೧೨೨ ॥

ತಾವೊಪ್ಪೆ ಖೇಚರಪುತ್ರಿಯರೇಳುನೂ । ರೈವತ್ತನಾಯ್ದಾಯ್ದು ತರಿಸಿ ॥
ಆ ವಿನಮಿಯು ನಮಿಯಣುಗೆಯರೊಡಗೂಡಿ । ಸಾವಿರ ಪೆಣ್ಗಾಯ್ತು ಮದುವೆ ॥ ೧೨೩ ॥

ಕನಕರಾಜಗೆ ಕನಕಾವತಿಯೆಂಬಳು । ಮನುದೇವಿ ಕಾಂತರಾಜನಿಗೆ ॥
ಕನಕಪದ್ಮಿನಿ ಶಾಂತರಾಜನ ಸತಿಯಿಂತು । ತನತನಗಾಯ್ತೊಪ್ಪುವಂತೆ ॥ ೧೨೪ ॥

ನಳಿನಾವತಿ ಕುಮುದಾವತಿ ರತ್ನಾ । ವಳಿ ಮುಕ್ತಾವಳಿಯು ಮುಂತಾದ ॥
ಎಳೆವೆಂಗಳೈನೂರ ಮದುವೆ ಮಾಡಿದನೊರ್ವ । ಳುಳಿಯೆ ಮುದ್ದಿನ ಮಧುರಾಜಿ ॥ ೧೨೫ ॥

ನಾನೂರುಪೆಂಗಳ ನಮಿವಿನಮಿಗಳಾತ್ಮ । ಸೂನುಗಳಿಗೆ ಕೊಟ್ಟು ಮತ್ತೆ ॥
ಸ್ಥಾನವರಿದು ನೂರುಪೆಂಗಳ ಖಚರರ । ನೂನಪುತ್ರರಿಗೆ ಪ್ರೇರಿಸಿದಾ ॥ ೧೨೬ ॥

ಪುತ್ರಸಹಸ್ರರ ಮದುವೆಮಾಡುತ ಚಕ್ರಿ । ಪುತ್ರಿಯರೈನೂರ್ವರವರ ॥
ನೇತ್ರದಣಿಯೆ ಮದುವೆಯ ಮಾಡಿದಲ್ಲಿಗೆ । **ಪುತ್ರವೈವಾಹದ ಸಂಧಿ** ॥ ೧೨೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೮ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೯ ॥

ಆವಾಗ ಭಾವಿಸುವರಿಗನುಕೂಲಸೌ । ಖ್ಯಾವಳಿಯನೆ ಸಮನಿಸುವ ॥
ದೇವಾ ನೀನೆನ್ನಂತರಂಗದೊಳಿರು ಶುದ್ಧ । ಭಾವಾ ಚಿದಂಬರಪುರುಷಾ ॥ ೧೩೦ ॥

ಪುತ್ರವೈವಾಹಸಂಧಿ ಸಂಪೂರ್ಣಂ

# ಜಿನದರ್ಶನಸಂಧಿ

---

ಗರ್ವಗಜಾಸುರಮರ್ದನ ದುಷ್ಟ ಪರ್ವ । ಪರ್ವತದಂಭೋಳಿರೂಪಾ ॥
ನಿರ್ವಿಘ್ನಮತಿದೋರು ನತನರನಾಗಸು । ಪರ್ವಾ ನಿರಂಜನಸಿದ್ಧಾ ॥ ೧ ॥

ಗಂಡಃಪೆಣ್ಮಕ್ಕಳ ಮದುವೆಯು ಚಕ್ರಿ ಸಾ । ಲ್ಗೊಂಡು ಸಂಭ್ರಮದೊಳುಜ್ಜುಗಿಸೆ ॥
ಕಂಡುದಿಲ್ಲಂತೊಸಗೆಯು ಕೇಳ್ದುದಿಲ್ಲೆಂದು । ಕೊಂಡಾಡಿತಖಿಲಭೂಭುವನಾ ॥ ೨ ॥
ಜನಪನ ಮದುವೆಯೊಳ್ತಣಿದುದು ಕಟಕ ನಂ । ದನರ ವಿವಾಹದೊಳ್ಮತ್ತೆ ॥
ತಣಿತಣಿದುದು ಬಹುದಿನ ಸಂದುದುತ್ಸಾಹ । ವನಧಿಯೊಳ್ತೆರೆ ತೋರಿದಂತೆ ॥ ೩ ॥

ಮಂಗಲ ಮುಗಿದು ಮತ್ತಾ ಚಕ್ರಿ ರಾಜಲೀ । ಲಾಂಗದೊಳಿರುತಿರಲಲ್ಲಿ ॥
ತಂಗಾಳಿ ಬನಕೆ ಬಹಂತೊಂದು ದಿನ ಮಂತ್ರಿ । ಪುಂಗವ ಬಂದನೋಲಗಕೆ ॥ ೪ ॥
ಕಾಣಿಕೆಯಿಕ್ಕಿ ಕೈಮುಗಿದನೇಂ ಕಾರಣ । ಕಾಣಿಕೆಯ್ಯೆ ಮಂತ್ರಿಯೆಂದಾ ॥
ಪಾಣಿಪುಟವ ಪಣೆಗಿಟ್ಟು ನಿಂದಾ ಮಂತ್ರಿ । ಮಾಣಿಕ್ಯನಿಂತೆಂದ ನೃಪಗೆ ॥ ೫ ॥
ತೊಡಗಿದ ಕಾರ್ಯನಿರ್ವಾಹಕ ನಡೆದತ್ತು । ತಡೆಯಿಲ್ಲದುದ್ದಂಡಗಮನಾ ॥
ಕಡೆಯಿಲ್ಲದತಿಶಯಸಂಪತ್ತಿನೊಡೆಯ । ನನ್ನೊಡೆಯ ಬಿನ್ನಹ ಲಾಲಿಸೆಂದಾ ॥ ೬ ॥
ಮೂರುವಾರ್ಧಿಯ ಮಧ್ಯದೊಳು ಹೇಮಗಿರಿಮುಟ್ಟ । ತೋರುವ ಧರೆ ಸಾಧ್ಯವಾಯ್ತು ॥
ಆರುಖಂಡವ ಗೆಲ್ದು ವೃಷಭಾದ್ರಿಯೊಳು ರೇಖೆ । ದೋರಿದ್ಮೆ ವೀರಶಾಸನವಾ ॥ ೭ ॥
ಕೂಡಿದುವೀರೇಳುರತ್ನ ವೈವಾಹವ । ಮಾಡಿದೆ ಸುತರನಿನ್ನಿಲ್ಲಿ ॥
ಮಾಡಲುಜ್ಜುಗವಿಲ್ಲ ನಗರಿಗೆ ಬಿಜಯಂ । ಮಾಡಲುಜ್ಜುಗಿಸೆಲೆ ಸ್ವಾಮಿ ॥ ೮ ॥
ಚಿರಕಾಲವಾಯ್ತಿತ್ತ ಗಮಿಸಿ ನಿನ್ನೊಡನಿದ್ದ । ಪರಿವಾರಕಾಸರಿಲ್ಲೆಮ್ಮ ॥
ಪುರಜನಗಳು ನಿನ್ನ ಬರವ ಹಾರುತ ಕರ । ಕರೆಗೊಳುತಿಹರೇಳು ಬೇಗ ॥ ೯ ॥
ಅಮ್ಮಾಜಿ ದಿನಗಳನೆಣಿಸುತಿಹಳು ನಿನ್ನ । ತಮ್ಮಂದಿರಾಸೆಬಟ್ಟಿಹರು ॥
ಇಮ್ಮೈಯೊಳಿದ್ದ ಮೈದುನರ ಬೀಳ್ಕೊಟ್ಟೆನ್ನ । ಘಮ್ಮನೆ ಬಿಜಯಮಾಡೆಂದಾ ॥ ೧೦ ॥

ಅನುಜರ್ಗೆ ಪ್ರಜೆಗಾಸೆವುಂಟಹುದಲ್ಲಿಯು । ಜನನಿಗಾಸೆಯು ಪಿರಿದದನು ॥
ನೆನೆಯದಿದ್ದೆನು ಲೇಸನಾಡಿದ್ಯೆಯೆಂದು ಕೊ । ಟ್ಟನು ಮಂತ್ರಿಗೊಂದುಹಾರವನು ॥ ೧೧ ॥
ನಮಿರಾಜವಿನಮಿ ನಿಮ್ಮೆಮ್ಮಯ ಜನಕರೊ । ಳಮರ್ದ ಬಂಧುತ್ವವಿಂದೆಮಗೆ ॥
ಸಮನಿಸಿದುದು ಮುಂದೆ ಸುತರಿಗಾಗಿರ್ದುದು । ತ್ತಮವಲ್ತೆ ತಿಳಿದಿರಿಯೆಂದಾ ॥ ೧೨ ॥

ತಾನುಡತೊಡತಕ್ಕ ವಸ್ತ್ರಭೂಷಣವ ಸ । ಮ್ಮಾನದೊಳಿಬ್ಬರಿಗಿತ್ತಾ ॥
ಆ ನೃಪರಿತ್ತುದ ಕೈಕೊಂಡನಪ್ಪಿದ । ನೇನತಿಶುರಸನೊ ಚಕ್ರಿ ॥ ೧೩ ॥
ಆಳಿಯಂದಿರೆಲ್ಲರ್ಗೆ ಹಯಗಜಭೂಷಣಾ । ವಳಿದೇಶಪುರಗಳ ಕೊಟ್ಟಾ ॥
ಕಳೆಯರಿದವರು ತಮ್ಮಾಳಿಯಂದಿರಿಗೆ ಕೊಟ್ಟ । ರುಳಿಯದನರ್ಘ್ಯವಸ್ತುಗಳಾ ॥ ೧೪ ॥
ಸುಮತಿಸಾಗರ ಮೊದಲಾದ ಪಾಯ್ದಳಕೆ ಕೂ । ಡಮರರಿಬ್ಬರ ಸರ್ವದಳಕೆ ॥
ಪ್ರಮುದದಿ ಪೆಣ್ಣಿತ್ತ ಖಚರರ್ಗೆ ಸಾಕು ಸಾ । ಕಮಮಯೆಂದೆನಲು ಮನ್ನಿಸಿದಾ ॥ ೧೫ ॥
ಅರಮನೆಗೆದ್ದನತ್ತೆಯರಿಗೆ ತಂಗಿಯ । ರ್ಗರದೆಲ್ಲ ಕಜ್ಜವೆಂಗಳಿಗೆ ॥
ಸಿರತುಂಬಲುಡುಗೊರೆಯಿತ್ತು ಬೀಳ್ಕೊಟ್ಟನಾ । ಭರತೇಶ ಕೊಡುವಾಗ ಗಡಿಯೆ ॥ ೧೬ ॥
ಹೆಣ್ಣುಮಕ್ಕಳನು ಭೂಷಣದ ಪೆಟ್ಟಿಗೆ ಕಜ್ಜ । ವೆಣ್ಣುಗಳ್ಳಾದಿಯುರ್ವೆರಸಿ ॥
ಬಣ್ಣಿಸಿ ಬೀಳ್ಕೊಡುವಾಗ ಭೂವರನೆದೆ । ಹಣ್ಣಾಯ್ತು ಮರುಕವಿನ್ನೆಂತೊ ॥ ೧೭ ॥
ಆ ಕುವರಿಯರೊತ್ತಿನೊಳಗೆ ಕಂಬನಿದಾಳ್ದ । ವ್ಯಾಕುಲಸತಿಯರ ನೋಡಿ ॥
ಏಕೆ ಪೆಣ್ಬಡೆದಿರಾ ಗಂಡುವಡೆಯದೆಂದು । ಭೂಕಾಂತ ಮರುಕದೊಳ್ನುಡಿದಾ ॥ ೧೮ ॥
ಬಾಗಿ ಕಂಬನಿದಾಳ್ದ ಸುತೆಯರ ಕಂಡಿಂತು । ಟಾಗಬೇಡಕ್ಕ ನೀವೊಮ್ಮೆ॥
ಹೋಗಿರಿ ಬೇಗ ಕರೆಸಿಕೊಂಬೆನೆಂದನು । ರಾಗದಿ ಬೀಳ್ಕೊಟ್ಟನೊಡನೆ ॥ ೧೯ ॥
ತಮ್ಮ ಪುತ್ರಿಯರ ಸಂತೈಸಿ ವಸ್ತುವ ಕೊಟ್ಟು । ಘಮ್ಮನೆ ಬೀಳ್ಕೊಟ್ಟರವರು ॥
ಹೆಮ್ಮಕ್ಕಳನ್ಯೋನ್ಯವಿನಯದಿಂ ಬೀಳ್ಕೊಂಡ । ರುಮ್ಮಳವಾಯ್ತು ಸರ್ವರಿಗೆ ॥ ೨೦ ॥
ಮಂಗಲಮುಖಿಮಧುವಾಣಿವಿಮಾನರ । ತ್ನಂಗಳ ಬಳಿವಳಿಗೊಟ್ಟು ॥
ಹಿಂಗುವಾಗಗ್ರಜರನುಜೆಮಾತೆಯರು ದುಃ । ಖಂಗೊಂಡರದು ಸಾಜವಲ್ತೆ ॥ ೨೧ ॥
ಮಮಕಾರವಿದ್ದಲ್ಲಿ ದುಃಖವುಂಟೆಂಬುದಾ । ಸಮಯದೊಳ್ಪ್ರತ್ಯಕ್ಷವಾಯ್ತು ॥
ನಮಿವಿನಮಿಗಳು ಪರಿಸ್ಪಂದದೊಳುಗೂಡಿ । ಗಮಿಸಿದರತ್ತ ತಮ್ಮೂರ್ಗೆ ॥ ೨೨ ॥
ಬಾ ಸಿಂಧುದೇವ ಗಂಗಾದೇವ ನೀವೆಮ್ಮ । ಲೇಸಿಗೆಯ್ದಿದುದು ಚೆನ್ನಾಯ್ತು ॥
ಈ ಸರಸವ ಬಿಡದಿರಿಯೆಂದು ತಕ್ಕೈಸಿ । ಭಾಸುರದುಡುಗೊರೆಯಿತ್ತಾ ॥ ೨೩ ॥
ಗಂಗಮ್ಮ ಬಾ ಸಿಂಧುದೇವಿ ಬಾ ನಿಮ್ಮಿಂದ । ಮಂಗಲ ಸೊಬಗಾದುದಕ್ಕಾ ॥
ಮಂಗಡೆಗೆಮಗಾಯ್ತು ಪಯಣ ನೀವೆಯ್ದಿರೆಂ । ದಿಂಗಿತದುಡುಗೊರೆಯಿತ್ತಾ ॥ ೨೪ ॥
ಸುರಶಿಲ್ಪಿಯನುಜನ ಕರೆದು ನನ್ನನುಜೆಯ । ರ್ಗೆರಡೆರಡುಪ್ಪರಿಗೆಗಳಾ ॥
ವಿರಚಿಸು ರನ್ನ ಚಿನ್ನದೊಳು ಪೊನ್ನುಯ್ಯಾಲ । ಪರುಠವಿಸೆಂದು ಬೀಳ್ಕೊಟ್ಟಾ ॥ ೨೫ ॥
ನಡುವಣ ಖಂಡದೊಳಿಪ್ಪತ್ತನಾಲ್ಕೋಟಿ । ನಿಡುವಳ್ಳಿಗಳನಾಯ್ದು ಕೊಟ್ಟು ॥
ಅಡಿಗಡಿಗಿವರ ಸೇವೆಯ ಮಾಳ್ಪುದೆಂದವ । ರೊಡೆಯರ್ಗೆ ನೇಮಿಸಿಬಿಟ್ಟಾ ॥ ೨೬ ॥

ತೀವಿ ಕೋಟಿಗ್ರಾಮದವನೊಬ್ಬ ರಾಜನಾ । ಭೂವರಗಾ ಪಾಟಿಯುವರು ॥
ಮೂವತ್ತೆರಡುಸಾವಿರವೆನಲದನೀವು । ದಾವ ದೊಡ್ಡಿತು ಕೊಟ್ಟನೊಸೆದು ॥ ೨೭ ॥
ಕುವರರ ಮದುವೆಯೊಳ್ಬಾಗಿಲುದಡೆದಾಗ । ಕುವರಿಯರ್ಗಿತ್ತ ಭೂತಳವಾ ॥
ಹವಣಿಸಿ ಮಧ್ಯಖಂಡದ ಹತ್ತುಭಾಗದೊ । ಳ್ನವಭಾಗವುಳಿದೊಂದು ಹೋಯ್ತು ॥ ೨೮ ॥
ಮಂಗಲಾಕ್ಷತೆಯನಣ್ಣನಿಗಿಟ್ಟು ಚಕ್ರೇಶ । ನಂಗನೆಯರೊಳು ಬೀಳ್ಕೊಂಡು ॥
ಭಾಂಗಣದೊಳು ಪೋದರಾಣ್ಮರೊಡನೆ ಸಿಂಧು । ಗಂಗಾದೇವಿಯರತ್ತ ॥ ೨೯ ॥
ನೋಡಿ ಮೇಘೇಶ್ವರವಿಶ್ವಕರ್ಮರ ದಾರಿ । ನೂಡಿ ನೀವೆಯ್ತುಹುದೆಂದು ॥
ಆಡುವಷ್ಟರೊಳಂದೆ ಸವರಿದೆವೆಂದವರ್ । ಕೂಡೆ ಕೈಮುಗಿದರು ನೃಪಗೆ ॥ ೩೦ ॥
ಆಗಳು ಹೊಳಿತು ಸೇತುಗಟ್ಟಿತಾಚೆಯ ಪಡಿ । ತೆಗೆದುದಂದೆ ಮುನ್ನಿನಂತೆ ॥
ನಗರಿಗೆ ಪಯಣವಾಗವನೀಶಯೆನೆ ಮೆಚ್ಚಿ । ನಗುತವರ್ಗಿತ್ತ ಮನ್ನಣೆಯಾ ॥ ೩೧ ॥
ಬರೆಯೊ ಪತ್ರಿಕೆಯ ಮಾಕಾಳಗೆಂದನು ಮಾತೆ । ಯರಿಗುಡುಗೊರೆಯ ಕಟ್ಟೆಂದಾ ॥
ಕರೆಯೊ ನಂಬುಗೆವಂತರಿಬ್ಬರ ಪಾದನ । ಪುರಕಯೋಧ್ಯೆಗೆ ಹೋಗಲೆಂದಾ ॥ ೩೨ ॥
ಶೂರನಂಬುಗೆವಂತವೀರನಂಬುಗೆವಂತ । ರಾ ರಾಯಗೊಡನೆ ಕೈಮುಗಿಯೆ ॥
ವೀರಭಟರ ಕೂಡೆ ಕೊಟ್ಟು ಬೀಳ್ಕೊಟ್ಟನು । ದಾರಿಯೊಳ್ಮುಂದೆಯ್ದಿಯೆಂದು ॥ ೩೩ ॥
ತೀರಿತೆಲ್ಲಾ ಜೋಲಿಯಾ ದಿನ ಮರುದಿನ । ವೀರಕಟಕದ ಲಗ್ಗೆಯೊಳು ॥
ಈರಾರುಭೇರಿ ಭೋರೆಂದು ಸೂಳೈಸೆ ಮ । ಹಾರಾಯನೆದ್ದನುಬ್ಬಿನೊಳು ॥ ೩೪ ॥
ಎದ್ದುವು ಕೇತು ಪತಾಕೆ ವಿಮಾನದೊ । ಳೆದ್ದುವು ಮುಗಿಲನುಚ್ಚಳಿಸೆ ॥
ಎದ್ದುವು ತೆರೆ ಕಡಲೊಳು ವಾದ್ಯರವಕೆ ದಂ । ಡೆದ್ದನಾ ರಾಯರ ದೇವಾ ॥ ೩೫ ॥
ಕರಿಹಯರಥಸೇನೆಗುರ್ವರೆ ಸಾಲದಂ । ಬರಚರಬಲಕೆ ವ್ಯಂತರರ ॥
ನೆರವಿಗಂಬರ ತೆರಪೆಯ್ದದೆಂದೆನಲೆತ್ತಿ । ಬರುತಿರ್ದನಾ ಸಾರ್ವಭೌಮಾ ॥ ೩೬ ॥
ಸಂಗತಚತುರಂಗಸೇನೆ ಸರ್ವರಿಗಾ ಬೆ । ಡಂಗಗಾ ಚತುರಂಗದಲ್ಲಿ ॥
ತುಂಗವ್ಯಂತರಸೇನೆ ಖಗಸೇನೆಗೂಡಿ ಷ । ಡಂಗವೇನೆಂಬೆನದ್ಭುತವಾ ॥ ೩೭ ॥
ಆರುಖಂಡವ ತನ್ನ ವಶಮಾಡಿಕೊಂಡೊಡ । ನಾರಂಗಸೇನೆಯೋಲೈಸೆ ॥
ಮೂರುಲೋಕವ ದಾಂಟಿ ಕೀರ್ತಿಯನಟ್ಟಿ ಬ । ಲ್ಗಾರಿಕೆಯೊಳು ಬರುತಿರ್ದಾ ॥ ೩೮ ॥
ಅಂದಯೋಧ್ಯೆಯ ಪೊರಮಡುವಾಗ ತನಗೊಂದು । ಕಂದಗೊಂದೆನೆ ಪವುಜೆರಡು ॥
ಇಂದೋರ್ಗೆ ಮುಖವಾಗೆ ಪೌಜುಮೂರಾದುವೇ । ನೆಂದೆಂಬೆನವನ ಜಾಣ್ಮೆಯನು ॥ ೩೯ ॥
ಕಲ್ಯಾಣವಾದ ಸಾಸಿರ್ವರು ಸುತರ ಕೌ । ಶಲ್ಯದೊಳೊಂದೊಡ್ಡುಮಾಡಿ ॥
ಶಲ್ಯತೋಮರದ ವ್ಯಂತರಖಗಬಲವ ವೈ । ಶಾಲ್ಯದೊಳೊಪ್ಪಿಸಿಕೊಟ್ಟಾ ॥ ೪೦ ॥

ಎನೆವರ್ಕಕೀರ್ತಿರಾಜನ ಪವುಜೆಂದದು । ಪೆಸರ್ವೆತ್ತು ಮುಂದೆಯ್ದುತಿಹುದು ॥
ಹಸುಳೆತನದೊಳವ ಪವುಜೆಂದು ಹಿಂದೆ ಸೂ । ಚಿಸಿ ಬಂದನೇನಿದಚ್ಚರಿಯೆ ॥ ೪೧ ॥
ಧರೆ ಸಾಧ್ಯವಾಗದ ಮೊದಲಾತ್ಮಸುತರ ಹ । ತ್ತಿರೆ ಕೂಡಿಕೊಂಡು ಸಾಗಿದನು ॥
ತಿರುಗದಲ್ಯೆಸೆ ಲಘುವಿನಲ್ಲಿ ಸಾಗಿದ । ನರಸುತನದ ಜಾಣ್ಮೆಯಲ್ತೆ ॥ ೪೨ ॥
ನೆರೆದ ಪುತ್ರನ ಸೇನೆ ಮುಂದೆ ತೊಟ್ಟಿಲೊಳೊಬ್ಬ । ಕಿರಿಯ ಕಂದನ ಸೇನೆ ಹಿಂದೆ ॥
ನೆರೆವ ಪಾಟಿಯ ಮಕ್ಕಳಿನ್ನೂರ್ವರೊಡಗೂಡಿ । ನೆರೆಜಾಣ ನಡುವೆಯ್ದುತಿರ್ದಾ ॥ ೪೩ ॥
ನಡೆವಾಗ ಸೊಸೆಯರತ್ತೆಯರೊಳೆಯ್ದುವ ಬೀಡು । ಬಿಡುವಾಗ ಪುರುಷರತ್ತಹರು ॥
ನಡೆವಾಗ ಕುವರರೊಳ್ಬಿಟ್ಟಾಗ ಮಂತ್ರಿ ತ । ನ್ನೊಡೆಯನೊಳಿರ್ದನೇಂ ಹಿತನೊ ॥ ೪೪ ॥
ಪರಿವಿಡಿಯಿಂದೆಯ್ದಿ ಗುಹೆಯ ಸಾರ್ದದರ ಡೊಂ । ಗರದಲ್ಲಿ ಸೊಸೆಯರಳುಕುತ ॥
ಬರಲೇಕೆ ತಮ್ಮ ವಲ್ಲಭರೊಡಗೂಡಿ ತ । ದ್ಗಿರಿಯ ಮೇಲೆಯ್ತರಲೆಂದಾ ॥ ೪೫ ॥
ಚದುರಹುದೆಂದನು ಮಂತ್ರಿ ಮಾಗಧನು ಮೆ । ಚ್ಚಿದನು ತಾವಿರ್ವರೊಂದಾಗಿ ॥
ಸದರದೊಳರಸು ಪೇಳ್ದಂತೆ ವಿಮಾನವಾ । ಗಸದೊಳು ಕೊಂಡೊಯ್ದರಂತವರಾ ॥ ೪೬ ॥
ತಾನು ವಿಮಾನದ ಮೇಲೆಯ್ದಬಹುದು ತೇ । ರಾನೆ ಕುದುರೆ ಮೊದಲಾದ ॥
ಸೇನೆಯುಂಟಾಗಿಯಾ ದಳಕೆ ರಕ್ಷಣೆಯಾಗಿ । ಭೂನಾಥ ಗುಹೆಯೊಳೆಯ್ದಿದನು ॥ ೪೭ ॥
ಕುವರರಿನ್ನೂರ್ವರ ಸಖರೊಡಗೂಡಿ ಕೊ । ಟ್ಟವನೀಶ ಮುಂದೊಲ್ದು ನಡೆಸಿ ॥
ಯುವತಿಯರೆಲ್ಲರ್ಗೆ ನಲ್ಮೆದೋರುತ ಗುಹಾ । ಭವನದೊಳೆಯ್ತರುತಿರ್ದಾ ॥ ೪೮ ॥
ಚಂಡತಮಿಸ್ರಗುಹೆಯೊಳಂದು ಪೋದಂತೆ । ಖಂಡಪ್ರಪಾತಗುಹೆಯೊಳು ॥
ದಂಡೆಯ್ದಿ ದಾಂಟಿ ದಕ್ಷಿಣದ ಭೂಮಿಯ ಚಕ್ರಿ । ಕಂಡನು ಹಲವುಮಾತೇನು ॥ ೪೯ ॥
ತೂಗೆ ತೋರಣಗಟ್ಟಿ ದಳಪತಿಯೊಡನೆ ಮುಂ । ದಾಗಿದ್ದ ನಾಟ್ಯಮಾಲನನು ॥
ಆಗಳೆ ಕರೆಸಿ ಮನ್ನಣೆಯಿತ್ತನಿವನಿಲ್ಲಿ । ಬಾಗಿಲ ಕಾದಿದ್ದನೆಂದು ॥ ೫೦ ॥
ತಂದೆ ಕೆಲವು ಪಯಣದೊಳು ದಾಂಟಿದನಾತ್ಮ । ನಂದನರೊಂದೆ ದಿನದೊಳು ॥
ಮುಂದೆಯ್ದಿ ಸುಖದೊಳಿರ್ದವ್ಯ್ಯನಿಗಿದಿರಾಗಿ । ಬಂದು ಕೈಮುಗಿಯೆ ರಾಗಿಸಿದಾ ॥ ೫೧ ॥
ಎಡೆಯರಿದಾ ಗಿರಿಯೊತ್ತಿನೊಳ್ಗಂಗೆಯ । ತಡಿಯೊಳು ಬೀಡುಬಿಟ್ಟಿರ್ದು ॥
ಕಡೆಗಂಡು ಪಡೆಸಾಗಿ ಬಂದಿತೆಂದೆನಲತ್ತಿ । ನಡೆದನು ರಾಜಮಾರ್ತಾಂಡಾ ॥ ೫೨ ॥

ಗೋಡೆಯಂದದ ವಿಜಯಾರ್ಧಗಿರಿಯ ದಾಂಟಿ । ನೋಡಲೊಡನೆ ತಮ್ಮ ನಾಡಾ ॥
ಬಾಡುತ ಹರಿದಾಡುತುಬ್ಬುತ ನಗುತರ್ತಿ । ಮಾಡುತೆಯ್ದಿತು ರಾಜಕಟಕಾ ॥ ೫೩ ॥
ಬೆಂಕಿಯಾರಿದ ಗುಹೆಯಿಂ ಪೊರಮಟ್ಟೊಡ । ನಂಕದಾಳುಗಳರ್ತಿವಟ್ಟು ॥
ತೆಂಕಣ ನಾಡೆ ತಂಬೆಲರೆ ಮಾನಮಾ ಸುಖ । ಸೋಂಕೆಯೆನುತ ಹೋಗುತಿಹರು ॥ ೫೪ ॥

ಕಾರ್ಯಾರ್ಥ ಪರದೇಶಕೆಯ್ದಿದೆನ್ನೈಸೆ ಚಾ । ತುರ್ಯಕೆ ನೀನಲ್ಲದುಂಟೆ ॥
ಆರ್ಯಾಖಂಡವೆ ಅಮೃತಖಂಡವೆ ಮಹೈ । ಶ್ವರ್ಯವೆಯೆನುತೆಯ್ದುತಿಹರು ॥ ೫೫ ॥
ಇನಿತು ಕಾಲಂಬರ ದಂಡಾದುದಿನ್ನೆಮ್ಮ । ಮನೆಯ ಸಾರುವೆವೆಂದು ಮುಂದಿ ॥
ತನತನಗುಲಿದೆಯ್ದುತಿಳುಗಡೆಯೊಳು ಪೋಪ । ಹೊನಲೆನೆ ತಡೆಯದುಚ್ಚಳಿಸಿ ॥ ೫೬ ॥
ಮಾರ್ಗದಿ ಹಿಂದಿಕ್ಕಿ ಹೋಹನ ಹಿಂದಣ । ಕೂರ್ಗಲಿ ಕೂಡೆ ಹಿಂದಿಕ್ಕಿ ॥
ತಾರ್ಗೊಂಡು ಬರುತಿದ್ದನೂರ್ಗೆ ಪಯಣವೆಂದ । ರಾರ್ಗಾಗದಧಿಕಸಂತೋಷಾ ॥ ೫೭ ॥
ಅಂದು ಸೇನಾಪತಿ ಬಿಡಹೇಳಿದೆಡೆಯೆ ಲೇ । ಸೆಂದು ಪಾಳೆಯಬಿಡುತಿಹರು ॥
ಇಂದಿಲ್ಲಿ ಬಿಡಿಯೆಂದರಿಂದಿಷ್ಟು ನಡೆದರೇ । ನೆಂದು ಬಿನ್ನೈಸುವರ್ಭಟರು ॥ ೫೮ ॥
ಬಿಡುತೆತ್ತಿ ನಡೆವುತ ದಕ್ಷಿಣಮುಖವಾಗಿ । ಪಡೆಗೂಡಿ ಬರುತ ರಾಜೇಂದ್ರಾ ॥
ಕಡುಬೆಳ್ಪ ಕೆದರುವ ಕೈಲಾಸಗಿರಿಯ ತ । ನ್ನೆಡದಲ್ಲಿ ಕಂಡ ದೂರದೊಳು ॥ ೫೯ ॥
ಬಿಡಹೇಳೊ ಇಲ್ಲಿ ಪಾಳೆಯವನೆಂದನು ಕೂಡೆ । ಪಡೆವಳ್ಳ ಬಿಡಿಸಿದನಲ್ಲಿ ॥
ಮಡದಿಯರೆಲ್ಲರ ಬೀಡಿನೊಳ್ಸಂತವಿ । ಟ್ಟೊಡನೆದ್ದ ಕೈಲಾಸಗಿರಿಗೆ ॥ ೬೦ ॥
ಮಂತ್ರಿ ಮಾಗಧ ದಳಪತಿಗೆ ಪೇಳ್ದಾ ತಳ । ತಂತ್ರವಾಹಿನಿಯನಿಂಬಿಟ್ಟು ॥
ನಾಂ ತ್ರಿಭುವನದೊಡೆಯನ ಕಂಡು ಬೇಗಾತ್ಮ । ತಂತ್ರದೊಳ್ಬಹೆನೆನುತೆದ್ದಾ ॥ ೬೧ ॥
ಸಾವಿರದಿನ್ನೂರ್ವರಣುಗರು ಗಣಬದ್ಧ । ದೇವರ್ಕಳೊಡಗೂಡಿ ನೃಪತಿ ॥
ದೇವರ್ಕಳಂತೆ ವಿಮಾನದೊಳ್ಗಗನಮಾ । ರ್ಗಾವಲಂಬನದೊಳೆಯ್ದಿದನು ॥ ೬೨ ॥
ಗಾಳಿವೇಗದೊಳೆಯ್ದಿ ಕೈಲಾಸಗಿರಿಯ ನಿ । ರಾಲಸ್ಯದಿಂದೇರಿ ಮತ್ತೆ ॥
ಶೈಲವ ಮುಟ್ಟದ ಸಮವಸರಣದೊಳು । ಭೂಲಲನೇಶ ಪೊರ್ದಿದನು ॥ ೬೩ ॥
ಹಲವುವಿಮಾನವ ಪೊರಗಿಂಪುಗೈದು ಮ । ಕ್ಕಳುಗೂಡಿ ಸೋಪಾನವೇರಿ ॥
ತಳರುತ ನವರತ್ನದಿಂದ ರಂಜಿಪ ಪೊರ । ವಳಯದ ಕೋಟೆಯ ಸಾರ್ದಾ ॥ ೬೪ ॥
ಬಾಗಿಲ ದ್ವಾರಪಾಲರ ಕಂಡು ನಾವಿಲ್ಲಿ । ಹೋಗಬಹುದೆಯೆಂದು ಕೇಳ್ದಾ ॥
ಹೋಗಬಹುದು ಬರಬಹುದು ಚಿತ್ತೈಸೆಂದು । ಬಾಗಿದರವರು ಮಸ್ತಕವಾ ॥ ೬೫ ॥
ನಡುನಾಡು ಮೇಲ್ನಾಡು ಕೀಳುನಾಡೆಂಬ ಮು । ಪ್ಪೊಡವಿಯೊಡೆಯನ ಹೆಮ್ಮಗಗೆ ॥
ತಡೆಯುಂಟೆ ನಿನಗೆ ಚಿತ್ತೈಸು ಮೋಕ್ಷದ ನಾಳೆ । ನೊಡೆಯಯೆಂದರು ಕೈಯಮುಗಿದು॥ ೬೬ ॥
ಎನಲೊಳಪೊಕ್ಕು ಮಾನಸ್ತಂಭದೊತ್ತಿನ । ಕನಕಕುಂಡದೊಳು ಕಾಲ್ದೊಳೆದು ॥
ಜಿನನ ಸಭೆಗೆ ಮುಂದೆ ದುಗುಲವನುಡೆಸುತ್ತಿ । ತನುಜರುವೆರಸಿ ನಡೆದನು ॥ ೬೭ ॥
ತಂದೆ ತನ್ನಯ ತಂದೆಯೆಡೆಗತಿಭಯಭಕ್ತಿ । ಯಿಂದೆಯ್ದುವುದ ನೋಡಿ ಸುತರು ॥
ಮುಂದಿಂದು ನವಗೆ ಕಲಿಸುವೋಜೆಯಲ್ಲವೆ । ಯೆಂದು ನೆನೆದರು ತಮ್ಮೊಳಗೆ ॥ ೬೮ ॥

ಮುಂದೆರಳ್ಪೊಂಗೋಟೆ ಮಾಣಿಕ್ಯದೊಂದದ । ರಿಂದತ್ತ ಮೂರುಪೊಂಗೋಟೆ ॥
ನಿಂದೆರಡಾಕಾಶಸ್ಫಟಿಕದ ಕೋಟೆಯೆಂ । ದಂದವ ನೋಡುತೆಯ್ದಿದನು ॥ ೬೯ ॥
ದ್ವಾರವೆಂಟರೊಳುಂಟು ದ್ವಾರಪಾಲಕರಂತ್ಯ । ದ್ವಾಗವೊಂದರೊಳಿಲ್ಲವವರ ॥
ಸಾರಾನುಮತದಿಂದ ಬರುತಿರ್ದ ತನ್ನ ಕು । ಮಾರರುವೆರಸಿ ಚಕ್ರೇಶಾ ॥ ೭೦ ॥

ನಾಗೇಂದ್ರ ನಿಲ್ಲು ದೇವೇಂದ್ರ ವಂದಿಸು ಕೆಲ । ಕಾಗಿರ್ದೈ ದಿಕ್ಪಾಲರೆಲ್ಲ ॥
ಯೋಗಿಗಳ್ಕುಳ್ಳಿರಿರೆಂಬ ವೇತ್ರಿಗರ ಶ । ಬ್ದಾಗಮಕೇಳುತೆಯ್ದಿದನು ॥ ೭೧ ॥
ಗರುಡರಿಲ್ಲಿರಿ ಯಕ್ಷರಿಲ್ಲಿರಿ ಸಿದ್ಧರಿ । ಲ್ಲಿರಿರಲ್ಲಿ ಗಂಧರ್ವರಿರಿರೈ ॥
ನರರತ್ತ ಸುರರಿತ್ತಲೆಂಬ ಕಟ್ಟೆಗೆಕಾರ । ರುರವಣೆಗೇಳುತೆಯ್ದಿದನು ॥ ೭೨ ॥
ರಂಭೆಯ ನೃತ್ಯ ಲೇಸೂರ್ವಶಿಯಾಟ ಜೆ । ನ್ನಂಭೋಜಮುಖಿತಿಲೋತ್ತಮೆಯ ॥
ಕುಂಭಿಗಮನದ ಮೇನಕಿಯಾಟ ಸೊಗಸೆಂಬ । ಜೃಂಭಣೆಗೇಳುತೆಯ್ದಿದನು ॥ ೭೩ ॥
ಎತ್ತಿದ ಮುತ್ತಿನ ಸತ್ತಿಗೆ ಮೂರರು । ವತ್ತನಾಲ್ಕಿಕ್ಕುವ ಚಮರಾ ॥
ಹತ್ತಿರಶೋಕೆಯ ತರುವಿಹ ಜಿನನ ಸಂ । ಪತ್ತ ನೋಡುತ ಬರುತಿರ್ದಾ ॥ ೭೪ ॥
ಸುರಿವ ಪೂಮಳೆ ಕಾಂತಿಯುರಿವ ಭಾಮಂಡಲ । ಮೊರೆವ ದೇವಾನಕವೆಸೆಯೆ ॥
ಹರಿಪೀಠದಬ್ಜವ ಸೋಂಕದಿಪ್ಪಯ್ಯನ । ಚ್ಚರಿಗೆ ಹಿಗ್ಗುತ ಬರುತಿರ್ದಾ ॥ ೭೫ ॥
ಸಾಸಿರೆಸಳ ಕನಕಾಬ್ಜದ ಮೇಲೆ ಸಿ । ದ್ಧಾಸನವಿಡಿದೆರಳ್ಕೋಟೆ ॥
ವಾಸರಮಣಿಯ ಪ್ರಭೆಯೊಳೆಸೆವಯ್ಯನ । ಲೇಸಿಗರ್ತಿಸುತೆಯ್ದುತಿರ್ದಾ ॥ ೭೬ ॥
ಸುರಸಿದ್ಧಯಕ್ಷಕಿಂಪುರುಷರು ಮೊದಲಾದ । ಪರಮನ ಸಭೆಯವರೆಲ್ಲ ॥
ಭರತೇಶ ಬಹುದ ತಮ್ಮಿದಿರಲ್ಲಿ ಕಾಣುತ । ಚ್ಚರಿವಟ್ಟರೇನ ಬಣ್ಣಿಪೆನು ॥ ೭೭ ॥
ಆರಿವನಧಿಕಲಾವಣ್ಯನು ಚೆಲ್ವಕು । ಮಾರರುವೆರಸಿ ಬಹವನು ॥
ತಾರಾದ್ರಿಯೊಳು ಮುನ್ನ ನಾವೆಂದು ಕಂಡುದಿ । ಲ್ಲೀ ರೂಪನೆಂದು ನುಡಿದರು ॥ ೭೮ ॥
ಮೂರುಲೋಕದೊಳುಳ್ಳ ಸೊಬಗನೆಲ್ಲವ ತಾನು । ಸೂರೆಗೊಂಡುದನಾದಿಜಿನಗೆ ॥
ತೋರಲೆಂದೆಯ್ತಹ ಪರಿಯೊಯೆಂದವರು ಕ । ಣ್ಣಾರಿ ನೋಡಿದರರ್ತಿವಟ್ಟು ॥ ೭೯ ॥
ಹತ್ತಿರ ಬರಲೀತ ಭರತೇಶನಲ್ತೆ ದೇ । ವೋತ್ತಮನಾತ್ಮಜನಲ್ತೆ ॥
ಮತ್ತಾರಿಗೀ ಸಿರಿ ಸಲುವುದಾತನಿಗೆಂದು । ಚಿತ್ತದೊಳ್ನಲಿದು ನೋಡಿದರು ॥ ೮೦ ॥

ಹೆರುಷದೊಳೊಳಹೊಗುತಿರ್ದನಷ್ಟರೊಳು ದೇ । ವರ ದೇವ ತ್ರಿಭುವನಾದಿತ್ಯಾ ॥
ಪುರುನಾಥ ಚಿತ್ತೈಸು ಭರತೇಶ ಬಂದನೆಂ । ದೊರೆದರು ಸುರವೇತ್ರಧರರು ॥ ೮೧ ॥
ಅಂಗಕೆ ಮಣಿದೊಡವಿಟ್ಟಾತ್ಮಗಮಳಗು । ಣಂಗಳ ತೊಟ್ಟು ರಾಜಿಸುವ ॥
ಶೃಂಗಾರಯೋಗಿ ಬಂದನು ಪುರಾಂಬರಿಸೆಂಬ । ರಾಂಗಣಪದ್ಮಾಧಿವಾಸಾ ॥ ೮೨ ॥

ಎವೆಯಿಕ್ಕುವಮರಕುಮಾರರಂದದ ತನ್ನ । ಕುವರರುವೆರಸಿ ಸಾರಿದನು ॥
ರವಿಚಂದ್ರಕೋಟಿಪ್ರಕಾಶ ಸರ್ವೇಶ ನೀ । ನವಧರಿಸೆಂದರುಬ್ಬಿನೊಳು ॥ ೮೩ ॥
ಮೂಲೋಕದೊಳಗುಪೊರಗನೆಡೆವಿಡದರಿ । ದಾಲೋಕನಂಗೈವನಿವರಾ ॥
ಹೇಳಿ ಕಾಣಿಸಬೇಕೆಯಿದು ಸುರರೊಂದು ಸ । ಲ್ಲೀಲೆಯ ಭಕ್ತಿವಾಕ್ಯಾರ್ಥಾ ॥ ೮೪ ॥
ಒಳವೊಕ್ಕನೊಡನೆ ರತ್ನಾಂಜಲಿಯನು ಪಾದ । ನಳಿನಯುಗಕೆ ಸೂಸಿ ಚಕ್ರಿ ॥
ನಳಿತೋಳ ನೀಡಿ ಸಾಷ್ಟಾಂಗವೆರಗಿದನು । ಪುಳಕ ಸರ್ವಾಂಗದೊಳುಣ್ಮೆ ॥ ೮೫ ॥
ಜನಕ ರತ್ನಾಂಜಲಿಗೈವಾಗ ಕೂಡೆ ಕಾಂ । ಚನಕುಸುಮಾಂಜಲಿಗೈದು ॥
ಜನಕ ಸಾಷ್ಟಾಂಗವೆರಗುವಾಗ ಕುವರರು । ತನುನೀಡಿ ತಾವೆರಗಿದರು ॥ ೮೬ ॥
ತಂದೆಯೆದ್ದರೆ ತಾವು ಕೂಡೇಳ್ವರೊಡನಾತ । ವಂದಿಸೆ ಕೂಡೆ ವಂದಿಪರು ॥
ಒಂದುಸೂತ್ರದೊಳೊಡ್ಡಿ ಹಲವುಬೊಂಬೆಯನಾಡಿ । ಪಂದವಾಯ್ತಾ ಚಮತ್ಕಾರಾ ॥ ೮೭ ॥
ಧಾತ್ರಿಯೊಳ್ಮೂರುಸೂಳೆರಗಿ ನಿಂದಾ ದಿವ್ಯ । ಗಾತ್ರನ ಮುಂದೆ ಕೈಮುಗಿದು ॥
ಸ್ತೋತ್ರವ ಮಾಡಿದನೇನೆಂಬೆ ತನ್ನ ಸು । ಪುತ್ರರುಗೂಡಿ ಚಕ್ರೇಶಾ ॥ ೮೮ ॥
ಕರತಳ ಕಂಪಿಸುತಿದ್ದುವಾನಂದಾಶ್ರು । ಸುರಿವುತಿದ್ದುವು ಕಂಗಳಿಂದ ॥
ದರಹಸಿತಾಸ್ಯ ಸುಸ್ವರದೋರಿ ತನ್ನ ಸ । ದ್ಗುರುವ ಕೀರ್ತಿಸಿದನಿಂತೆಂದು ॥ ೮೯ ॥
ಕಾಂಚನಭೂಭೃದುದಂಚಿತಗೌರವಾ । ಕುಂಚಿತಭದ್ರಸ್ವರೂಪಾ ॥
ಪಂಚಬಾಣಾನೇಕಜಿತಪುರುಷಾಕಾರ । ಪ್ರಾಂಚಿತ ಜಯ ಜಯಯೆಂದಾ ॥ ೯೦ ॥
ಸುತ್ರಾಮಶತಮಕುಟಾನರ್ಘ್ಯರತ್ನಾಂಶು । ಚಿತ್ರಿತಚರಣಾಬ್ಜಯುಗಳಾ ॥
ಛತ್ರಮುಕ್ತಾಂಶುಗಂಗಾವೃತಬಹುಜಟಾ । ಸೂತ್ರಿತ ಜಯ ಜಯಯೆಂದಾ ॥ ೯೧ ॥
ಸಂಗ ನಿಸ್ಸಂಗ ಸುರಾಂಗ ಚಿದಂಗ ಮ । ತಂಗಜರಿಪುವಿಷ್ಣುರಾಢ್ಯ ॥
ಸಾಂಗಿಕಸುರಕುಸುಮಾಸಾರಧೂಳಿಭ । ಸ್ಮಾಂಗಿತ ಜಯ ಜಯಯೆಂದಾ ॥ ೯೨ ॥
ಪಿಂಜರಿತೋಗ್ರಕರ್ಮಾರಣ್ಯದಾವಧ । ನಂಜಯ ಸುಜ್ಞಾನಭಾನು ॥
ಭಂಜಿತಜಾತಿಜರಾಮಯದುಃಖ ಮೃ । ತ್ಯುಂಜಯ ಜಯ ಜಯಯೆಂದಾ ॥ ೯೩ ॥
ಕಂಜಕಿಂಜಲ್ಕಭುಂಜಿತಮಂಜುಳಾಳಿಸ್ವ । ರಂಜಿತಮಂಜುಘೋಷೆಯರ ॥
ರಂಜಿತಗೀತಪುಷ್ಪಾಂಜಲಿಪೂಜ್ಯ ಪ । ರಂಜ್ಯೋತಿ ಜಯ ಜಯಯೆಂದಾ ॥ ೯೪ ॥
ಶ್ರಾವ್ಯದಿವ್ಯಾಳಾಪಕಾವ್ಯಸಂಸೇವ್ಯ ಸ । ದ್ಭವ್ಯಾ ನಿರ್ವ್ಯಕ್ತ ಚಿದ್ದ್ರವ್ಯಾ ॥
ಅವ್ಯಯಸಿದ್ಧಿ ಸುಸಂವ್ಯಕ್ತ ಹಿತಹವ್ಯ । ಕವ್ಯಾಢ್ಯ ಜಯ ಜಯಯೆಂದಾ ॥ ೯೫ ॥
ಸುಜ್ಞಾನದರ್ಶನಸುಖಶಕ್ತಿಕಾಂತಿವ । ನೋಜ್ಞವಾದಮಲಾದಿವಸ್ತು ॥
ಪ್ರಾಜ್ಞಜನಾರ್ಚಿತ ಜಯ ಜಯ ಸ್ವಾಮಿ ಸ । ರ್ವಜ್ಞ ಸದಾಶಿವಯೆಂದಾ ॥ ೯೬ ॥

ಭರತನಪ್ಪಾಜಿ ಶಕ್ರನ ಸ್ವಾಮಿ ಕಲಿಕಾಲ । ಪರಿಚಿತರತ್ನಾಕರನಾ ॥
ಪಿರಿಯಯ್ಯ ಜಯ ಜಯಯೆಂದೆರಗಿದ ನರ । ಸುರರೆಲ್ಲ ಜಯ ಜಯಯೆನಲು ॥ ೯೭ ॥

ಶ್ರೀಮಂದರಸ್ವಾಮಿ ಪಡೆದಯ್ಯ ಪುರುನಾಥ । ಪ್ರೇಮದ ಪಿರಿಯಯ್ಯನೆಂದು ॥
ನೇಮವ ತಾಳ್ದು ರತ್ನಾಕರ ಸುಖಿಯಾದ । ನೀ ಮಾತು ಬಹುದೆ ಸರ್ವರಿಗೆ ॥ ೯೮ ॥
ಸುರಕೃತಜಲದಿಂದ ಮಿಂದನು ಕೂಡೆ ಸಿಂ । ಗರಿಸಿದನಾತ್ಮಜರ್ವೆರಸಿ ॥
ವರವಸ್ತುಚಯದಿಂದ ಜಿನನ ಪೂಜಿಸಿದನಾ । ಭರತೇಶಗೇನದಚ್ಚರಿಯೆ ॥ ೯೯ ॥
ಚಿಂತಾಮಣಿಯನು ತಂದಿದ್ದನದಿತ್ತುದು । ಚಿಂತಿಸಿದಮಳವಸ್ತುಗಳಾ ॥
ಕಂತುಹರನ ಪೂಜೆಗೈದನು ತನ್ನಯ । ಸಂತಾನಗೂಡಿ ಭಕ್ತಿಯೊಳು ॥ ೧೦೦ ॥
ತೀರ್ಥಾಂಬು ಮಲಯಜಾಕ್ಷತೆ ಪುಷ್ಪ ಚರು ದೀಪ । ಪ್ರಾರ್ಥನೆ ಧೂಪ ಫಲಾರ್ಘ್ಯಾ ॥
ಸಾರ್ಥಸಿದ್ಧಿಗೆ ಸಾರೆ ಸಭೆ ಜಯ ಜಯಯೆನೆ । ತೀರ್ಥನಾಥನ ಪೂಜಿಸಿದನು ॥ ೧೦೧ ॥
ದೃಷ್ಟಿಸಿದಮರರೆಲ್ಲರು ತಲೆದೂಗುವಂ । ತಷ್ಟವಿಧಾರ್ಚನೆಗೈದು ॥
ವೇಷ್ಟಿತಜನರನು ಪಿತನನು ಬಲಗೊಂಡ । ನಿಷ್ಟಪುತ್ರರುಗೂಡಿ ಮೂಮೆ ॥ ೧೦೨ ॥
ಮುನಿಗಳಿಗೆರಗಿ ದೇವೇಂದ್ರ ಮುಂತಾದವ । ರ್ಗಿನಿದ ನುಡಿದು ಸುತರ್ವೆರಸಿ ॥
ಮುನಿಮುಖ್ಯ ಪೇಳೆ ಕುಳಿತನು ಪನ್ನೊಂದನೆ । ಯನುಪಮಕೋಷ್ಠದೊಳೊಸೆದು ॥ ೧೦೩ ॥
ಪರಮನ ಸಭೆಗೊಂದು ಹೊಸಸಿರಿ ಬಂದು ಸಿಂ । ಗರವಾದುದಾ ಚಕ್ರಿ ತನ್ನ ॥
ಗುರುವನೆಳಸಿ ನೋಡುತಿದ್ದನಿಲ್ಲಿಗೆ ಜಿನ । ದರುಶನಸಂಧಿ ಸುಗಂಧಿ ॥ ೧೦೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೫ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವ್ಯೆದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೬ ॥
ಎಲ್ಲೆಲ್ಲಿ ಪರಮ ಮಂಗಲ*ವುಂಟಾತ್ಮರ । ನಲ್ಲಲ್ಲಿಗೆಯ್ದಿಪ ಪರಮಾ ॥
ಎಲ್ಲಿಗೂ ತೆರಳದೆನ್ನೆದೆಯೊಳಿರಾನಂದ । ಮಲ್ಲಾ ಚಿದಂಬರಪುರುಷಾ ॥ ೧೦೭ ॥

*ಗಳುಂಟಾಪ್ತರ

ಜಿನದರ್ಶನಸಂಧಿ ಸಂಪೂರ್ಣಂ

# ತೀರ್ಥಾಗಮನಸಂಧಿ.

ಜ್ಯೋತಿಸ್ಸ್ವರೂಪ ಜೊನ್ನರಸನ ಪಗಲಾಣ್ಮ । ನಾತತತೇಜೋಭಿರಾಮು ॥
ನೂತನಮತಿದೋರು ಜಯಜಯ ಲೋಕವಿ । ಖ್ಯಾತಾ ನಿರಂಜನಸಿದ್ಧಾ ॥ ೧ ॥

ಮಂಗಲಮಹಿಮನ ತಳತಳಿಸುವ ಪಾವ । ನಾಂಗದೊಳಾ ಚಕ್ರಧರನು ॥
ಕಂಗಳ ಸುಳಿದಾಡಿ ಚಿತ್ತಕಾನಂದತ । ರಂಗವನುಂಟುಮಾಡಿದನು ॥ ೨ ॥

ಕುವರರು ನೋಳ್ಪರು ನಗುವರು ಮುಂಡೆದೂ । ಗುವರು ಕೈಮುಗಿವರುಬ್ಬುವರು ॥
ಅವಯವತುಂಬಿ ಪುಳಕವಾಂತರಜ್ಜನ । ಭುವನತ್ರಯಾದ್ಭುತೋಜ್ವಲಕೆ ॥ ೩ ॥

ಪುರುರಾಜ ಮಾಣಿಕ್ಯರಾಜ ವೃಷಭರಾಜ । ಗುರುರಾಜ ಕೇಳಾದಿರಾಜಾ ॥
ಸರಿಯುಂಟೆ ನಿಮಗೆ ಸ್ವಾಮಿಯು ಪೆಸರ್ವಡೆದಿರೆಂ । ದೊರೆದನರ್ತಿಯೊಳರ್ಕಕೀರ್ತಿ ॥ ೪ ॥

ಆವಾವ ವಿಮಲನಾಮಂಗಳುಂಟವೆಲ್ಲವು । ದೇವರ ದೇವನ ನಾಮಮಾ ॥
ದೇವರು ಸ್ವಾಮಿಯು ಪೆಸರಲ್ತೆಯೆಂದರಾ । ಕೋವಿದರೊಸೆದಣ್ಣನೊಡನೆ ॥ ೫ ॥

ನಿಲ್ಲಿರ್ಕೈ ಗಲಭೆ ಸಾಕೆಂದು ಭೂಪರ ಕರ । ಪಲ್ಲವಗಳ ಸಾರ್ಚೆ ಪಣೆಗೆ ॥
ಮೆಲ್ಲದೆಯೊಳಗೊಂದ ನೆಸೆದನಾಗಳೆ ದೇವ । ನಲ್ಲಿ ಪೊಣ್ಮಿತು ದಿವ್ಯನಾದಾ ॥ ೬ ॥

ಗಂಭೀರಮೃದುಮಧುರತೆಗೂಡಿ ಕಿವಿಗಳ್ಗೆ । ಶುಂಭಿತಚಿತ್ತಕಿಂಪಾಗಿ ॥
ಸಂಭವಿಸಿತು ದಿವ್ಯನಾದ ನವೀನಸು । ಧಾಂಭೋಧಿ ಘೂರ್ಣಿಸಿದಂತೆ ॥ ೭ ॥

ಶ್ರೀಮಹಾಭಾಷೆಗಳುಂಟಲ್ಲಿ ಪದಿನೆಂಟು । ಸಾಮಾನ್ಯಭಾಷೆಯೇಳ್ನೂರು ॥
ಆ ಮಹಾದೇವನ ಮುಖಪದ್ಮದೊಳು ದಿವ್ಯ । ನಾಮಸುಸ್ವರ ವಿರಾಜಿಸಿತು ॥ ೮ ॥

ಗಗನದ ತೆರಪ ಪೇಳ್ವಲ್ಲಿಹ ಮೂರುಗಾ । ಳಿಗಳ ಪೇಳ್ದವರೊಳಡಗಿದ ॥
ಜಗಮೂರ ಪೇಳ್ದು ದಿವ್ಯಧ್ವನಿ ಜಗದ ವ । ಸ್ತುಗಳ ಪೇಳ್ದುದು ಮತ್ತೆ ನೃಪಗೆ ॥ ೯ ॥

ಪಂಚಾಸ್ತಿಕಾಯಷಡ್ದ್ರವ್ಯವ ಸಪ್ತತ । ತ್ವಾಂಚಿತನವಪದಾರ್ಥಗಳಾ ॥
ಪಂಚಿದಂದದಿ ಕೀರ ಸೂಚಿಸೆ ನೃಪತಿ ರೋ । ಮಾಂಚವೆದ್ದಾಲಿಸುತಿರ್ದಾ ॥ ೧೦ ॥

ವ್ಯವಹಾರನಿಶ್ಚಯಮಾರ್ಗಭೇದಾಭೇದ । ಸುವಿಶುದ್ಧಭಕ್ತಿಗಳನುಮಾ ॥
ಶಿವನಾದ ಸೂಚಿಸಲೆದೆಯೊಳುಬ್ಬಿದನು ಮೋ । ಕ್ಷವನಾಳಿದಂತೆ ಚಕ್ರೇಶಾ ॥ ೧೧ ॥

ಹಂಸತತ್ತ್ವವ ಹಂಸತತ್ತ್ವಸಾಮರ್ಥ್ಯವ । ಹಂಸನೊಳ್ಜಿನಸಿದ್ಧನಿಹುದಾ ॥
ಸಂಸಿದ್ಧಿನಾಯಕ ಸೂಚಿಸೆ ನೃಪಕುಲೋ । ತ್ತಂಸನಾನಂದವೈದಿದನು ॥ ೧೨ ॥

ತನಗೆ ಕೈವಲ್ಯವಪ್ಪಂದವ ಮುನ್ನಾದಿ । ಜಿನರಲ್ಲಿ ಕೇಳಿದ್ದನಹುದು ॥
ತನುಜರ್ಗೆ ಕೈವಲ್ಯವಪ್ಪುದ ಕೇಳ್ದನಾ । ಜನಕಗೆಂತುಟೊ ಪುತ್ರಮೋಹಾ ॥ ೧೩ ॥

ಸಾವಿರದಿನ್ನೂರ್ವರಣುಗರೀ ಭವದಲ್ಲಿ । ಕೈವಲ್ಯವಡೆವರೊ ಸ್ವಾಮಿ ॥
ಭಾವಿಜನ್ಮಕೆ ಮುಕ್ತರಹರೊ ಚಿತ್ತೈಸೆಂದು । ದೇವನ ಕೇಳ್ದನಾ ರಾಯಾ ॥ ೧೪ ॥
ಇವರೆಲ್ಲರೀ ಭವದೊಳೆ ಮುಕ್ತರಹರೆಂದು । ಪ್ರವಚನ ಹೊಳೆದುದಷ್ಟರೊಳು ॥
ಯುವದೀಕ್ಷೆಗೈವರೊ ವೃದ್ಧದೀಕ್ಷಿತರಾಗಿ । ಶಿವವೆಯ್ದುವರೊ ಸ್ವಾಮಿಯೆಂದಾ ॥ ೧೫ ॥
ಇಂದ್ರಿಯಸುಖವ ಪ್ರಾಯದೊಳನುಭವಿಸಿ ಜಿ । ತೇಂದ್ರಿಯರಾಗಿ ಮತ್ತವರು ॥
ಸಾಂದ್ರಸುಖದ ಮುಕ್ತಿಗೆಯ್ದುವರೆಂದು ಜಿ । ನೇಂದ್ರ ಸೂಚಿಸೆ ರಾಯ ನಲಿದಾ ॥ ೧೬ ॥
ಬಾಲತ್ವದೊಳೆ ದೀಕ್ಷೆಗಿವರೊಳಿಬ್ಬರ ಬುದ್ಧಿ । ಕಾಲೇಳ್ವುದಹುದದು ಕೂಡೆ ॥
ಜೋಲಿಗೆ ಬೀಳ್ವುದು ಭೋಗದೊಳ್ತಣಿದು ಮೋ । ಕ್ಷಾಲೀಢರಹರು ಮತ್ತೆಂದಾ ॥ ೧೭ ॥
ತಪ್ಪದೀ ಜಿನವಾಕ್ಯ ನಾನೆನ್ನ ಸುತರುಗೂ । ಡೊಪ್ಪದಿ ರಾಜ್ಯವನಾಳ್ದು ॥
ಮುಪ್ಪಿನೊಳ್ಮುಕ್ತಿಗೆಯ್ದುವೆನೆಂದು ಚಕ್ರಿ ತ । ನ್ನಪ್ಪಾಜಿಗೆರಗಿದನೊಡನೆ ॥ ೧೮ ॥
ಸುಮ್ಮನಾದುದು ದಿವ್ಯನಾದ ಮತ್ತಿವರೆಲ್ಲ । ರೆಮ್ಮಯ್ಯನೆಮ್ಮಜ್ಜನೆಂದು ॥
ತಮ್ಮೊಳರ್ತಿಸುತಿದ್ದರಾ ದೇವಗಿಲ್ಲವ । ರೆಮ್ಮವರೆಂಬ ಮಮತ್ವಾ ॥ ೧೯ ॥
ಸ್ನೇಹವೆಂಬುದು ಮೋಹಕರ್ಮದ ಸೊಮ್ಮದು । ಮೋಹಕರ್ಮದೊಳಿದ್ದು ಮೊದಲು ॥
ಸ್ನೇಹಗೈದನು ಮೋಹಕರ್ಮವ ಸುಟ್ಟತಿ । ಸಾಹಸಿಗಿನ್ನುಂಟೆ ಸ್ನೇಹಾ ॥ ೨೦ ॥
ಮಂದಿಯ ಹಾದಿಯೊಳಿರಿಸಿ ಬಂದೈ ಚಕ್ರಿ । ನಂದನರರ್ಥವ ಕೇಳ್ದೈ ॥
ಇಂದಿಗೆ ಸಾಕಿನ್ನು ಹೋಗತಿಜೋಲಿ ಬೇ । ಡೆಂದನು ವೃಷಭಸೇನಾರ್ಯಾ ॥ ೨೧ ॥
ಇಲ್ಲಿರಿಯೆನ್ನದೆ ಬೀಡಿಗೆಯ್ದೆಂಬುದ । ಸೊಲ್ಲಿಸುವರೆಯೆಂದ ಚಕ್ರಿ ॥
ಅಲ್ಲಿದ್ದರೇನು ನಿನ್ನಾತ್ಮನಿಲ್ಲಿದ್ದನೈ । ಬಲ್ಲೆ ಮೈ ಹೋಗೆಂದನವನು ॥ ೨೨ ॥
ಎಂದರೆ ದೇವರಾಜ್ಞೆಯ ಮೀರಲೇಕೆಂದು । ನಂದನರ್ವೆರಸೆದ್ದು ಜಿನಗೆ ॥
ವಂದಿಸಿ ಪುನರಪಿದರ್ಶನಮಸ್ತೆಂದು । ಚಂದದಿ ಬೀಳ್ಕೊಂಡನೊಡನೆ ॥ ೨೩ ॥
ವೃಷಭಸೇನಾರ್ಯಗನಂತವಿಜಯವೀರ । ಋಷಿಸುವೀರಾಚ್ಯುತಾರ್ಯರಿಗೆ ॥
ವೃಷಸೇನ್ತನಂತವೀರ್ಯಾರ್ಯರಿಂತರುವರ್ಗೆ । ವೃಷಕೇತುನಿಭನೆರಗಿದನು ॥ ೨೪ ॥
ನಮಿಸಿದ ಕಚ್ಛಯೋಗಿಗೆ ಮಹಾಕಚ್ಛಸಂ । ಯಮಿಗೆರಗಿದನು ಮತ್ತುಳಿದ ॥
ಸಮುದಾಯಕೆರಗಿ ಬೀಳ್ಕೊಂಡು ದೇವೇಂದ್ರಂಗೆ । ವಿಮಲಸಂಪ್ರೀತಿಯ ನುಡಿದಾ ॥ ೨೫ ॥
ಆವ ಪುಣ್ಯದ ಫಲದಿಂ ಪೆತ್ತೆ ಚಕ್ರಿಯೊ । ಲಾವಣ್ಯಸೂಸುವ ಸುತರಾ ॥
ದೇವಲೋಕದೊಳಿಲ್ಲ ನಿನ್ನ ಸಂಪದವೆಂದು । ದೇವೇಂದ್ರ ಮಂಡೆದೂಗಿದನು ॥ ೨೬ ॥
ಒರ್ವರಿರ್ವರು ಚೆಲ್ವರೆಂಬೆನೆ ನಿನ್ನಂತೆ । ಸರ್ವರು ಚೆಲ್ವರಪ್ಪುದಿದು ॥
ಉರ್ವಿಗಚ್ಚರಿ ಮೇಲೆ ತದ್ಭವಮುಕ್ತರಿ । ನ್ನಾರ್ವಣ್ಣಿಪರು ಪುರೆಯೆಂದಾ ॥ ೨೭ ॥

ಇವರಾವ ಚೆಲ್ವರಾನಾವ ಚೆಲ್ವನು ನಿಮ್ಮ । ದಿವಿಜರಿಂದಧಿಕವೆಯೆಂದಾ ॥
ನಿವಗೆ ಸಲ್ವುದು ನಿರಹಂಕಾರವೆಂದಾದಿ । ಶಿವನ ವರ್ಗವನಿಂದ್ರ ಪೊಗಳ್ದಾ ॥ ೨೮ ॥
ಇಂದ್ರಗೆ ವಿನಯವ ನುಡಿದು ಬೀಳ್ಕೊಂಡ ನಾ । ಗೇಂದ್ರ ಮುಂತಾದ ಸರ್ವರನು ॥
ಮಂದ್ರವಾಣಿಯೊಳು ಬೀಳ್ಕೊಂಡನೆದ್ದನು ಮನು । ಜೇಂದ್ರನಾ ಸಭೆಯಿಂದ ಬೇಗ ॥ ೨೯ ॥

ದ್ವಾರಪಾಲಕರಿಗಲ್ಲಲ್ಲಿಗುತ್ತಮಮಣಿ । ಹಾರವ ಕೊಡುತ ಚಕ್ರೇಶಾ ॥
ದಾರಿಯೊಳೆಲ್ಲರು ಜಯಜಯಯೆನೆ ಸುಕು । ಮಾರರುವೆರಸಿ ಸಾಗಿದನು ॥ ೩೦ ॥
ನಿಡುನೀಳ್ದ ಸೆರಗ ಸಾಗಿಸುತೊಮ್ಮೆ ಕೈಲಾಗು । ಗೊಡುತ ಮುಂದವಧಾನವೆಂದು ॥
ನುಡಿಯುತ ತಂದೆಯ ಹಿಂದುಮುಂದೆಡಬಲ । ವಿಡಿದು ಕುಮಾರರೆಯ್ದಿದರು ॥ ೩೧ ॥
ಸೋಪಾನವಿಳಿದು ವಿಮಾನವನೇರಿ ಮ । ತ್ತಾ ಪುಣ್ಯಶೈಲವ ಮಿಕ್ಕು ॥
ಭೂಪತಿ ಕಟಕದತ್ತಭಿಮುಖವಾಗಿ ಮೇ । ಘಾಪಥವೀಥಿಯೊಳೆಯ್ದುತಿರ್ದಾ ॥ ೩೨ ॥
ಹದಿನಾರುಸಾವಿರಗಣಬದ್ಧದೇವರ್ಕ । ಳೊದಗಿ ಬಳಸಿನೊಳು ಬರಲು ॥
ಮುದವದರಾತಿದಲ್ಲಣನು ಸುಪುತ್ರಸಂ । ಪದಗೂಡಿ ನಡುವೆಯ್ದುತಿರ್ದಾ ॥ ೩೩ ॥
ಕಿರಿಯ ಕುಮಾರರಿನ್ನೂರ್ವರು ತಾನೊಂದು । ತೆರಪಿನ ಪುಷ್ಪಕವೇರಿ ॥
ನೆರೆದ ಪುತ್ರರು ಬೇರೆ ಪುಷ್ಪಕವೇರಿತ್ತ । ತುರುಗಿಯೆಯ್ತರಲೆಯ್ದುತಿರ್ದಾ ॥ ೩೪ ॥
ದೇವನ ಮುನ್ನ ಕಂಡರಿಯದ ಕುವರರು । ತಾವೆಲ್ಲರಿಂದೊಲ್ದು ಕಂಡು ॥
ಭಾವದೊಳಾನಂದಬಡುತೆಯ್ದುತಿದ್ದರು । ತಾವೆ ಕೃತಾರ್ಥರೆಂದೆನುತ ॥ ೩೫ ॥
ಸಮವಸರಣದ ಸಂಪತ್ತನಾ ಪುರುನಾಥ । ಕಮಲ ಸೋಂಕದೆ ತೋರ್ಪ ಘನವಾ ॥
ದ್ಯುಮಣಿಚಂದ್ರಾನೇಕತೇಜವ ಹೊಗಳುತ । ಗಮಿಸುತಿದ್ದರು ಲೀಲೆಯಿಂದ ॥ ೩೬ ॥
ಸವಿಮಾಡಿ ತಂದೆಯ ಕೂಡದ ನುಡಿವರು । ತವಗಯ್ಯ ಹೇಳಿ ಲಾಲಿಪರು ॥
ಭುವನವಿಸ್ಮಯವಲ್ತೆ ನಮ್ಮ ಸಂಪದವೆನು । ತವರೆಯ್ದುತಿದ್ದರುಬ್ಬಿನೊಳು ॥ ೩೭ ॥

ಸರ್ವರು ಸ್ವಾಮಿಯ ಮಹಿಮೆಯ ನುಡಿಯುತ । ಕೊರ್ವಿಂದ ನಗುತೆಯ್ದುತಿರಲು ॥
ಇರ್ವರವರೊಳು ಸುಮ್ಮನೆ ಬರುತಿದ್ದರಿ । ನ್ನೂರ್ವರು ಕಿರಿಯ ಮಕ್ಕಳೊಳು ॥ ೩೮ ॥
ಜಿನರಾಜ ಮುನಿರಾಜನೆಂಬವರಿರ್ವರು । ಜಿನನ ಕಂಡಾ ಕ್ಷಣ ತಾವು ॥
ಜಿನದೀಕ್ಷೆಗೆಳಸಿ ತಂದೆಗೆ ಪೇಳಲಂಜಿ ಚಿಂ । ತನೆಗೊಳುತೆಯ್ತಂದರಾಗ ॥ ೩೯ ॥
ನಾಳೆ ಜನಕನೆಮಗಣ್ಣಂದಿರ್ಗೆಸಗಿದಂ । ತಾಲಿಸಿ ಮದುವೆಮಾಡುವನು ॥
ಬಾಲಕಾಲದ ದೀಕ್ಷೆ ಲೇಸೆಂದು ನೆನೆದರೇ । ನಾಲೀಢಪುಣ್ಯಜೀವಿಗಳೊ ॥ ೪೦ ॥
ಕಳುಹಿಮ್ಮ ದೀಕ್ಷೆಗೆಂದಯ್ಯನ ಕೆಂಬಜ್ಜೆ । ಗಳಿಗೆರಗುವೆವೆ ಎರಗಲು ॥
ಕಳುಹಲರಿಯನೊಡಹುಟ್ಟಿದರ್ಬಿಡರೆನು । ತೊಳಗೊಳಗೆಣಿಸುತೆಯ್ದಿದರು ॥ ೪೧ ॥

ಈಗೆಂತು ಕಳುಹರರಿದರಿನ್ನು ಮುಂದೆ ಚಿ । ನ್ನಾಗಿ ಕಾಲವ ಮಾಳ್ಪರದಕೆ ॥
ಮೂಗುವಟ್ಟೊರ್ಗೆಯ್ದಿ ಮತ್ತೆ ಬಂದತಿಥಿಗ । ಳಾಗುವೆವೆಂದೆಣಿಸಿದರು ॥ ೪೨ ॥
ಪರಿತದೊಳಿದ್ದ ಕಟಕದತ್ತ ನೋಡುತೆ । ಲ್ಲರು ನುಡಿವುತ ಬರುತಿಹರು ॥
ತಿರುತಿರುಗಿವರು ಮೋನಂಗೊಂಡು ಕೈಲಾಸ । ಗಿರಿಯನೆ ನೋಡುತೆಯ್ದಿದರು ॥ ೪೩ ॥

ಅರಿದನು ಚಕ್ರಿಯುವರ ಚಿತ್ತ ದೀಕ್ಷೆಯು । ತ್ತರಗಿತೆಂದಂತರಂಗದೊಳು ॥
ಮರುಕದಿಂದೊತ್ತಿಗೆ ಕರೆದುಕೊಂಡೊಡನೆ ಬಾ । ಯ್ದೆರೆದಿಂತು ನುಡಿದನವರೊಳು ॥ ೪೪ ॥
ಏನಣ್ಣ ಜಿನರಾಜು ಮುನಿರಾಜು ಸುತರು ಸು । ಮ್ಮಾನದೊಳೆಯ್ತರುತಿರಲು ॥
ದೂನಿಸುತಿದ್ದಿರಿ ನೀವೆಮಗಿದರ ಸಂ । ಧಾನಗಾಣಿಸದಾಡಿರೆಂದಾ ॥ ೪೫ ॥
ತಾಯ್ಗಳ ನೆನೆದಿರೊ ಕೈಲಾಸಕೆಯ್ತಂದು । ಮೆಯ್ಗಳು ನೊಂದುವೊ ನಿಮ್ಮ ॥
ಬಾಯ್ಗಳ ಮುದ್ರಿಸಿ ಚಿಂತಿಪುದೇನಣ್ಣ । ಬೇಯ್ಗೆಯಾಗಿದೆ ನವಗೆಂದಾ ॥ ೪೬ ॥
ದೇವರಿಂದಧಿಕವೆ ಜನನಿಯರ್ ಜಿನನೊತ್ತಿ । ಗಾವೆಯ್ದಲಲಸಿಕೆಯುಂಟೆ ॥
ದೇವರು ಕುವರರು ನುಡಿಯೆ ಭಾವಿಸುತ ಸ । ದ್ಭಾವದೊಳ್ಪಹೆವೆಂದರವರು ॥ ೪೭ ॥
ಮುಂದೆ ನೋಡದೆ ನೀವು ಹಿಂದಕೆ ತಿರುತಿರು । ಗಿಂದು ನೋಡುವುದೇಕೆಯೆಂದಾ ॥
ಎಂದು ಕಾಣ್ಬೆವು ಸ್ವಾಮಿ ಪುಣ್ಯಶೈಲವನದ । ರಿಂದ ನೋಡಿದೆವೆಂದರೊಡನೆ ॥ ೪೮ ॥
ಗಿರಿಯ ಚೆಲ್ವಿಕೆಯು ಚಿತ್ರೈಸದರಗ್ರದ । ಪರಮನ ಸಭೆಯ ಚಿತ್ರೈಸು ॥
ಧರೆಗೆ ವಿಸ್ಮಯವಲ್ತೆ ನೋಡಿದೆವೆಂದರು । ಭರತೇಶ ಲೇಸು ಲೇಸೆನಲು ॥ ೪೯ ॥

ಬಲ್ಲೆನಣ್ಣ ನಿಮ್ಮ ಮನದನುಭವವದ । ನೆಲ್ಲವನೀಗೆಣಿಸದಿರಿ ॥
ಮೆಲ್ಲಗೆ ನೀವುನಾವೊಂದಾಗಿ ಜಿನಸಭೆ । ಯಲ್ಲಿ ಮುಂದೆಸಗುವವೆಂದಾ ॥ ೫೦ ॥
ಭೋಗದೊಳ್ಕೆಲವು ದಿವಸವಿದ್ದು ಮತ್ತೆ ದೀ । ಕ್ಷಾಗಮುವೆಯ್ದುವ ಮತ್ತೆ ॥
ಈಗಲೆ ತವಕಿಸದಿರಿಯೆಂದನವರ್ಗದು । ಬಾಗಿಲ ತೆರೆದವೊಲಾಯ್ತು ॥ ೫೧ ॥
ವಂಚಿಸಿ ಬಪ್ಪೆವೆಂದಿದ್ದರರಿದ ಮೇಲೆ । ವಂಚಿಪುದಿನ್ನಾಗದೆಂದು ॥
ಸಂಚಿತಾರ್ಥವ ಕಾಣುವೊಡೆ ಪೇಳ್ದ ದೀಕ್ಷೆಗೆ । ಮುಂಚುವುದೆಂದೆಣಿಸಿದರು ॥ ೫೨ ॥
ನುಡಿಯಲಂಜಿದ್ದರವರು ತಂದೆ ನುಡಿವುದು । ತಡೆಬಿಟ್ಟವೋಲಾಯ್ತು ತವಗೆ ॥
ಅಡಿಗೆರಗಿದರು ದೀಕ್ಷೆಗೆ ಕಳುಹೆಂದು ಕಾ । ಲ್ವಿಡಿದು ನುಡಿದರಯ್ಯನೊಡನೆ ॥ ೫೩ ॥
ಎಳೆವರೆಯದೊಳೆ ಮುಕ್ತಿಯನಾಳಬೇಕೆಮ್ಮ। ಕಳುಹ ಚಿತ್ತೈಸೆಂದು ನುಡಿಯೆ ॥
ತಳಹೊಳಗೊಂಡನೆದೆಯೊಳು ಚಕ್ರೇಶನಾ । ಗಳೆ ಕಣ್ಣ ನೀರ್ಗಳುಮ್ಮಿದುವು ॥ ೫೪ ॥
ಕೆಟ್ಟೆ ಕೆಟ್ಟೆನು ಹಾ ಹಾ ನೀವೆನ್ನ ಬಿಟ್ಟು ಬೆ । ಳ್ವಿಟ್ಟಕೆಯ್ದುವೆವೆಂಬ ಮಾತಾ ॥
ಬಿಟ್ಟೆನ್ನ ರಕ್ಷಿಸಬೇಕೆಂದು ತೆಗೆದೆತ್ತಿ । ಕಟ್ಟಕ್ಕರಿಂದಪ್ಪಿಕೊಂಡಾ ॥ ೫೫ ॥

ನೀವಿಲ್ಲದಿರಲೆನಗೇನುಂಟು ಸಿರಿ ಬಲು । ನೋವುದೋರುವರೆ ಮಕ್ಕಳಿರಾ ॥
ಸಾವುನೀವೊಂದಾಗಿ ಮುಂದೆ ದೀಕ್ಷೆಯ ಕೊಂಬ । ವೀ ವೇಳೆ ಸೈರಿಸಿರೆಂದಾ ॥ ೫೬ ॥
ಕುವರರು ಕಡಮೆಯೆ ದೇವರ್ಗೆ ನಾವಿಬ್ಬ । ರವಿಚಳತಪವ ಕೈಕೊಂಡು ॥
ಜವನನಟ್ಟಿದರದು ತಾ ನಿನ್ನ ಕೀರ್ತಿಯ । ಲ್ಲವೆ ಸ್ವಾಮಿ ಹೇಳೆಂದರೊಡನೆ ॥ ೫೭ ॥
ಆ ಕೀರ್ತಿ ಬೇಡ ನೀವೆನ್ನೊಡನಿರಿ ನನ । ಗೀ ಕೀರ್ತಿ ಸಾಕೆಂದನಯ್ಯ ॥
ಕಾಕುಮಾಡುವ ಜವನೊಳಗಾಗಿ ಬಾಳ್ವುದು । ಸಾಕು ಚಿತ್ತೈಸೆಂದರವರು ॥ ೫೮ ॥
ಜವ ನವಗೇನ ಮಾಡುವನಣ್ಣ ತಾವು ತ । ದ್ಭವಮುಕ್ತರೆಂದಾದಿಜಿನರು ॥
ವಿವರಿಸಿತಿಲ್ಲವೆ ಮರೆದಿರಿ ತಾಳಿರೆಂ । ದವನೀಶ ನುಡಿದ ಪುತ್ರರೊಳು ॥ ೫೯ ॥
ಈ ಭವದೊಳೆ ಮುಕ್ತರಲ್ಲವೆಂದರೆ ನಿಮ್ಮ । ಲಾಭಕಾನಡ್ಡಬರುವೆನೆ ॥
ವೈಭವದೊಳು ನಾಲ್ಕುದಿನವಿದ್ದು ಪೋಪವೆಂ । ದಾ ಭರತೇಶನಾಡಿದನು ॥ ೬೦ ॥
ಅಲ್ಲವಪ್ಪ ನೀವು ನಮ್ಮ ಪುರವ ನೋಡಿ । ತಿಲ್ಲ ನಮ್ಮವ್ವಾಜಿ ನಿಮ್ಮ ॥
ಲಲ್ಲಿಯು ಕಂಡಿತಿಲ್ಲೀಗ ನೀವೆಯ್ದುವು । ದೆಲ್ಲರ ಮನಸಿಗೆ ಬಹುದೆ ॥ ೬೧ ॥
ಕಿರಿಯ ತಂದೆಗಳು ಪಲಂಬರುಂಟವರ ಮ್ಯ । ಗುರುಹ ನೀವೀಕ್ಷಿಸಿ ನಮ್ಮ ॥
ಮರುಕವ ಬಿಡಿಸಿ ಮತ್ತೆಯ್ದಿ ದೀಕ್ಷೆಗೆ ಜಗ । ವರಿಕೆಯೊಳ್ಕಳುಹುವೆನೆಂದಾ ॥ ೬೨ ॥
ಮತ್ತೆ ಬಹುದೆ ದೀಕ್ಷೆಗಿಚ್ಛೆ ವಿಚಿತ್ರಸಂ । ಪತ್ತಿನೊಳ್ಸಿಕ್ಕಿದ ಮೇಲೆ ॥
ಅತ್ತಣ ಸುದ್ದಿಯ ತಡಹಬೇಡೆಮ್ಮ ಸು । ಚಿತ್ತದೊಳ್ಕಳುಹೆಂದರೊಡನೆ ॥ ೬೩ ॥
ಪುರವನು ಚಿಕ್ಕತಂದೆಗಳ ಹೆತ್ತಮ್ಮಾಜಿ । ಯರ ಚರ್ಮದೃಷ್ಟಿಯಿಂ ನೋಳ್ಪ ॥
ಬೆರಗೇಕೆ ಸುಜ್ಞಾನದೊಳು ನೋಳ್ಪೆವೆಮ್ಮ ಚ । ಚ್ಚರದಿಂದ ಕಳುಹೆಂದರವರು ॥ ೬೪ ॥
ಸಲ್ಲದಪ್ಪಾ ನೀವು ನನ್ನ ಮನಸಿಗಿಷ್ಟು । ತಲ್ಲಣದೋರ್ಪುದು ಚದುರೆ ॥
ಸೊಲ್ಲಿಸದಿರಿರಿನ್ನು ತಪದ ಸುದ್ದಿಯನೆಂದು । ಗಲ್ಲವ ಪಿಡಿದಲುಗಿದನು ॥ ೬೫ ॥
ಪೊಲ್ಲದ ಕೃತ್ಯವ ನೆನೆದೆವೆ ದೇವರು । ಸಲ್ಲದೆಂದೊರೆದಾಡಲೇಕೆ ॥
ಒಳ್ಳಿತ ನೆನೆದಿರಿ ಗೆಲಿರೆಂದು ಕಳುಹೆಂದು । ಮೆಲ್ಲಡಿಗೊಡನೆರಗಿದರು ॥ ೬೬ ॥
ನುಡಿವ ನಾಣ್ನುಡಿಗೊಡಬಡರವರವರೆಂದ । ನುಡಿಗೆ ತಾನೊಡಬಡನಿಂತು ॥
ನುಡಿವುತಿದ್ದರು ತಾವು ಮೂವರು ಸರ್ವರು । ಮಿಡುಕದಾಲಿಸುತೆಯ್ದುತಿಹರು ॥ ೬೭ ॥
ನೋಡಿದ ಪುತ್ರರ ತವಕವನಿದಕೊಂದ । ಮಾಡಬೇಕೆಂದೆಣಿಸಿದನು ॥
ಕೂಡೊಂದು ಕಠಿಣದ ತಂತ್ರವ ಕಂಡು ಮಾ । ತಾಡಿದನವರೊಡನಿಂತು ॥ ೬೮ ॥
ಸರ್ವಥಾ ದೀಕ್ಷೆಗೆಯ್ವಲೆ ಬೇಕೆ ಬೇಕಾಗ । ಲುರ್ವಿಗುತ್ತಮವ ನೆನೆದಿರಿ ॥
ಒರ್ವೊರ್ವರೊಂದೊಂದುವಸ್ತುವ ನವಗೆ ಕೊ । ಟ್ಟರ್ವರು ತೆರಳಿರೈಯೆಂದಾ ॥ ೬೯ ॥

ನವ್ಮೊಳೇನುಂಟು ದೇವರಿಗೀವ ವಸ್ತುವೆಂ । ದೊವ್ಮುಖವಾಗಿ ನುಡಿದರು ॥
ಸುಮ್ಮನೆ ಕೊಡುವೆವೆಂದಾಡಿರ್ಪೆ ಪೇಳ್ವೆನೆಂ । ದುಮ್ಮಳ ವಿುಗೆ ತಂದೆ ನುಡಿದಾ ॥ ೭೦ ॥
ತೊಟ್ಟಿರ್ದ ಸರ್ವವ ತೊರೆದು ದೀಕ್ಷೆಗೆ ಹೋಗು । ತೊಟ್ಟೈಸಿದಾಸೆಯೆ ನಮಗೆ ॥
ಕೊಟ್ಟಪೆವೇನು ನಿರೂಪಿಸೆಂದರು ರಾಯು । ತೊಟ್ಟನಂಗೈಯ ನೀಡಿದನು ॥ ೭೧ ॥
ಒಬ್ಬ ಕರ್ಪೂರವನಿರಿಸಿಲ್ಲಿ ಕೂಡೆ ಮ । ತ್ತೊಬ್ಬ ತೈಲವನಿಲ್ಲಿ ಹನಿಸಿ ॥
ಇಬ್ಬರು ಹೋಗಿರ್ಪೆ ಜಿನನಾಣೆ ತಡೆಯೆನೆಂ । ದುಬ್ಬಿ ಕಣ್ಣೀರೊಳೆ ನುಡಿದಾ ॥ ೭೨ ॥
ಗಡಗಡನವರು ಕಂಪಿಸಿದರು ಕುವರರೆ । ಲ್ಲೊಡನೆ ಕಂಪಿಸಿದರಷ್ಟರೊಳು ॥
ಸುಡುಸುಡು ನಿಮ್ಮ ಬಾಳ್ಕೆಯನೆನುತಿರ್ವರ । ಜಡಿದು ನುಡಿದನರ್ಕಕೀರ್ತಿ ॥ ೭೩ ॥
ಸ್ವಾಮಿ ಕೈಯೊಡ್ಡಿ ವಿಷವ ಬೇಡುವಂತಾಯ್ತೆ । ಈ ಮಾತ ಕೇಳ್ದೆವೆ ನಾವು ॥
ಹಾ ಮಝು ಜಿನ ಜಿನ ಗುರುಹಂಸನಾಥಯೆಂ । ದಾ ಮಗ ಕಿವಿಯ ಮುಚ್ಚಿದನು ॥ ೭೪ ॥
ಅಣ್ಣನ ಮೊಗವನಯ್ಯನ ಮೊಗವನು ನೋಡಿ । ಕಣ್ಣ ನೀರ್ಗಳುಗುಳನುಗುತ ॥
ಪೊಣ್ಣನೆ ಕಾಲ್ಗೆ ಬಿದ್ದರು ದೀಕ್ಷೆಯೆಂದಿನ್ನು । ಹಣ್ಣೆವು ಕ್ಷಮಿಸೆಂದರಂಜಿ ॥ ೭೫ ॥
ಅರಿಯದಾಡಿದೆವೆಮ್ಮ ಮಕ್ಕಳಾಟಿಕೆಯನು । ಮರೆ ಸ್ವಾಮಿಯೆಂದೊರಲಿದರು ॥
ಕಿರಿಯರ ತೆಗೆದೆತ್ತಿ ತಕ್ಕೈಸಿಕೊಂಡನು । ಕಿರಿದೆ ಸಂತಾನದ ಮೋಹಾ ॥ ೭೬ ॥
ಬಾಯೊಳು ಬಾಯಿಕ್ಕಿ ಮುತ್ತಿತ್ತು ಮೈಯನಾ । ರಾಯು ತಡವಿದನಾ ಸುತರು ॥
ನೋಯಿಸಿದೆವು ಸ್ವಾಮಿಯೆಂದರಿಲ್ಲಿಲ್ಲಣ್ಣ । ಸೀಯನಾಯ್ತೀಗೆದೆಯೆಂದಾ ॥ ೭೭ ॥
ತಂದೆ ಮಕ್ಕಳ ಕಣ್ಣ ನೀರ್ಗಳ ತೊಡೆದನಾ । ತಂದೆಯ ಕಣ್ಣೀರನವರು ॥
ಚಂದಳಿರ್ಗೈಯಿಂದ ತೊಡೆದರು ತಳ್ಳಂಕ । ನಿಂದಿತು ಮನ ತೆಪ್ಪಗಾಯ್ತು ॥ ೭೮ ॥

ತನ್ನ ವಿಮಾನದಿಂದಿಳಿದು ಚಕ್ರೇಶನಾ । ಸನ್ನಕೆ ಬಂದರ್ಕಕೀರ್ತಿ ॥
ಮುನ್ನಿನುಡಿಗೆತೊಡಿಗೆಯ ತೆಗೆಸಿದನು ಸಂ । ಪನ್ನ ಸಿಂಗರಿಸಿದನೊಡನೆ ॥ ೭೯ ॥
ಪನ್ನೀರೊಳೊಯ್ಯನೆ ಮೊಗವ ತೊಳೆದನು ಬಾ । ವನ್ನವ ಮೈಗೆ ಲೇಪಿಸಿದಾ ॥
ತನ್ನ ಕೈಮುಟ್ಟಿ ಕಪ್ಪುರದ ವೀಳೆಯವಿತ್ತು । ಮನ್ನಿಸಿದನು ಜಾಣಕುವರಾ ॥ ೮೦ ॥
ಹಿರಿಯ ಕುವರ ತನ್ನ ಮನ್ನಿಸೆ ನೃಪ ತನ್ನ । ಕರಮುಟ್ಟಿ ಸುತರ ಸಿಂಗರಿಸಿ ॥
ಸಿರಿಮೊಗಗಳನು ಪನ್ನೀರಿಂದ ತಡವಿ ಕ । ಪ್ಪುರದ ವೀಳೆಯವಿತ್ತನೊಡನೆ ॥ ೮೧ ॥
ಬಳಿಕರ್ಕಕೀರ್ತಿ ನಿವಾಳಿಯನಿಟ್ಟನಂ । ತುಳಿದ ಕುವರರು ಬೇಗದೊಳು ॥
ಬಳಸಿ ನಿವಾಳಿಯನಿಟ್ಟರು ರಾಯನು । ಮ್ಮಳ ಹೋಯ್ತು ಮಂಗಲವಾಯ್ತು ॥ ೮೨ ॥

ಜಿನರಾಜು ಮುನಿರಾಜು ಕೇಳಿರಣ್ಣಿಂದಾಯ್ತು । ಮನೆಗಿನ್ನು ನಾವೆಯ್ದಲೆಮ್ಮ ॥
ನೆನೆಯದೆ ನೀವು ಚಾಳಿಸಿ ಹೋದರೆಂತೆಂದು । ಜನಕ ಕೇಳಿದನು ಮಕ್ಕಳನು ॥ ೮೩ ॥

ದೇವರಿಗರಿಕೆ ಮಾಡದೆ ಹೋಗೆವಿನ್ನೆಂದ । ರಾ ವಚನವ ನಂಬೆನೆಂದಾ ॥
ದೇವರ ಪಾದಪದ್ಮಗಳಾಣೆ ಹೇಳದೆ । ನಾವೆಯ್ದೆವೆಂದು ಮುಟ್ಟಿದರು ॥ ೮೪ ॥
ಅದು ಸಾಲದೆನಗೊಂದು ಹೊಣೆಯಾಗಬೇಕೆಂದ । ನಿದಕೇಕೆ ಹೊಣೆ ಸ್ವಾಮಿ ನಿನ್ನ ॥
ಪದಯುಗದಾಣೆಯಿಂದಧಿಕವೆ ಸಾಕು ತ । ಪ್ಪದು ನಮ್ಮ ನಂಬೆಂದರವರು ॥ ೮೫ ॥
ಹೊಣೆಗೊಡ್ಡಿ ದೊಡ್ಡಣ್ಣ ಚಿಕ್ಕಣ್ಣನವರ ವೊ । ಕ್ಕಣಿಸಿರಿ ನಮ್ಮಾಣೆ ಸಾಕು ॥
ಎಣಿಕೆಯಿಲ್ಲದೆ ನಾವು ತೆಪ್ಪಗಿಲ್ಲಿಹೆವೆಂದು । ಗುಣರತ್ನ ನುಡಿದನಾ ಚಕ್ರಿ ॥ ೮೬ ॥
ಸಾಕು ದೇವರ ಪಾದಯುಗದಾಣೆ ನಮ್ಮಂಕೆ । ಯೇಕೆಂದನೊಡನರ್ಕಕೀರ್ತಿ ॥
ಬೇಕಣ್ಣ ಹೊಣೆ ಪತ್ರವೆರಡುಳ್ಳವರ ಕಾರ್ಯ । ಹೋಕಾಗದರಿಯೆಯಯೆಂದಾ ॥ ೮೭ ॥
ಹೋ ಜೋಲಿ ಬೇಡ ಸ್ವಾಮಿಯೆ ಕಂಡಂತಾಗಲ । ಣ್ಣಾಜಿ ನೀವಲ್ಲವೆನ್ನದಿರಿ ॥
ಮಾಜಿಹೋಗರು ನಾವು ಹೊಣೆಯಿವರ್ಗೆಂದಾದಿ । ರಾಜವೊಕ್ಕಣಿಸಿ ಕೈಮುಗಿದಾ ॥ ೮೮ ॥
ಆಗಲಿ ದೇವರಿಗಣ್ಣಾಜಿಯರಿಗೆ ಚೆ । ನ್ನಾಗಿ ಬಿನ್ನವಿಸಿದೆವಾವು ॥
ಹೋಗೆವೆಂದಣ್ಣಂದಿರಿಬ್ಬರಂಘ್ರಿಗಳ ಲೇ । ಸಾಗಿ ಮುಟ್ಟಿದರವರೊಡನೆ ॥ ೮೯ ॥
ಅಯ್ಯನಂಘ್ರಿಯ ಮುಟ್ಟಿದುದೆ ಸಾಕು ಸಾಕೆಂದು । ಕೆಯ್ಯನವರು ನೂಕೆನೂಕೆ ॥
ಅಯ್ಯ ನಿಮಗೆ ಸ್ವಾಮಿ ನವಗೆ ನೀವೊಡೆಯರೆಂ । ದುಯ್ಯಲಂತೊಲೆದು ಮುಟ್ಟಿದರು ॥ ೯೦ ॥
ದೇವರಿಬ್ಬರು ಹೊಣೆ ನಾವೆಲ್ಲರಿವರ್ಗೆ ವ್ಯೆ । ಗಾವಲೆಂದುಳಿದೆಲ್ಲ ಸುತರು ॥
ತಾವೂ ಒಕ್ಕಣಿಸಿ ಕೈಮುಗಿದರು ಭಾಪು ವೋ । ಕ್ಷಾವಲಗ್ನರ ಗೋಷ್ಠಿ ರಸವೆ ॥ ೯೧ ॥
ಸಂತೋಷವಾಯ್ತು ಚಕ್ರೇಶಗೆ ಸುತರೆಲ್ಲ । ತಂತಮ್ಮ ಪುಷ್ಪಕವೇರಿ ॥
ಹಂತಿವಿಡಿದು ಬರುತಿರಲರ್ಕಕೀರ್ತಿ ತಾ । ನಿಂತೆಂದು ನುಡಿವುತೆಯ್ದಿದನು ॥ ೯೨ ॥
ಜಿನನ ನಿರೂಪ ತಪ್ಪುವುದೆ ಇಬ್ಬರಿಗೆ ಸಂ । ಜನಿಪುದು ಮೊದಲೆ ವಿರಕ್ತಿ ॥
ಅನಿತರೊಳಾತ್ಮಸುಖವಹುದೆಂದನಲ್ಲವೆ । ನೆನೆ ಸ್ವಾಮಿಯೆಂದನಯ್ಯನೊಳು ॥ ೯೩ ॥
ತನ್ನೆದೆಯೊಳಗದು ಹೊಳೆದುದೀಗಹುದಣ್ಣ । ನಿನ್ನೊಡನುಸುರುವೆನೆಂದು ॥
ಉನ್ನಿಸುತಿದ್ದೆನಷ್ಟರೊಳು ಮುಂಚಿದೆಯೆಂದು । ತನ್ನಪುತ್ರನೊಳೊಲ್ದು ನುಡಿದಾ ॥ ೯೪ ॥
ನಿಂದಿರಲಾ ವಾಕ್ಯ ಜಿನರಾಜ ಮುನಿರಾಜ । ನೆಂದವರ್ಗಿಡುವಾಗ ಪೆಸರಾ ॥
ಮುಂದಿವರ್ಜಿನಮುನಿಯಹರೆಂದು ಕಂಡಿರೊ । ಯೆಂದವನಿದು ಚಿತ್ರವೆಂದಾ ॥ ೯೫ ॥
ನಮ್ಮನುಬ್ಬಿಸದಿರ್ರಿ ಸಾಕೆಂದು ನಿನ್ನಯ । ತಮ್ಮಂದಿರೆನ್ನ ಚಾಳಿಸಿದ ॥
ಸೊಮ್ಮ ನೆನೆದರೆನಗುರೆ ನಗು ಬರುತಿದೆ । ಸುಮ್ಮನೆ ನೀನಾಲಿಸೆಂದಾ ॥ ೯೬ ॥
ಮಾತಾಡದೇಕೆ ಚಿಂತಿಪಿರೆಂದೆ ನೀವೆಂಬ । ಮಾತ ಲಾಲಿಪೆವೆಂದರದಕೆ ॥
ಏತಕೆ ತಿರುಗಿ ನೋಡುವಿರೆಂದೆ ಗಿರಿಯ ಪು । ಖ್ಯಾತಿಶಯವ ಪೇಳ್ದರದಕೆ ॥ ೯೭ ॥

ಬೀಡ ಚಾಳಿಸುವನಾ ನಾಡ ಚಾಳಿಸುವನ । ಕೂಡೆ ಜಾಣ್ಮೆಯ ತೋರುವಂತೆ ॥
ನೋಡಣ್ಣ ನಿನ್ನ ತಮ್ಮಂದಿರಾಟವನೆಂದ । ನೋಡುತೆಲ್ಲರು ನಕ್ಕರದಕೆ ॥ ೯೮ ॥

ಇದ್ದವರೊಳಗೆಲ್ಲರಿಂದ ಕಿರಿಯ ಸುತ । ರಿದ್ದರು ಮತ್ತಿಬ್ಬರಲ್ಲಿ ॥
ಮುದ್ದುನುಡಿಗಳಿಂದ ನುಡಿದರು ತಂದೆಯು । ಹೊದ್ದಿ ಮತ್ತೊಂದುಕಾರ್ಯವನು ॥ ೯೯ ॥

ಮಾಣಿಕ್ಯರಾಜಮುನ್ನಥರಾಜರೆಂಬವರ್ । ಮಾಣಿಕ್ಯಬೊಂಬೆಯಂತಿಹರು ॥
ಕಾಣಪಟ್ಟೊಂದ ಬಿನ್ನೈಸಿದರ್ ಪಿತಗೆ ಬಿ । ನ್ನಾಣವನೇನ ಬಣ್ಣಿಪೆನು ॥ ೧೦೦ ॥

ಪರಿಪಟ್ಟು ವೃಷಭಸೇನಾಚಾರ್ಯರಾದಿಯಾ । ದರುವರು ದೀಕ್ಷೆಗೊಂಬಂದು ॥
ಕಿರಿದು ದಿವಸ ತಾಳಿರೆಂದು ದೇವರು ತಡೆ । ದಿರಿಸಬೇಡವೆಯೆಂದರವರು ॥ ೧೦೧ ॥

ದೀಕ್ಷೆಯನವರು ಕೈಕೊಂಬಾಗ ದೇವರು । ಪ್ರೇಕ್ಷಿಸಿ ಸುಮ್ಮನಿದ್ದುದಕೆ ॥
ಈ ಕ್ಷಿತಿ ಮೆಚ್ಚುವುದೆಯೆಂದು ಕುವರರು । ದಾಕ್ಷಿಣ್ಯವಿಲ್ಲದಾಡಿದರು ॥ ೧೦೨ ॥

ಅಹುದು ನಾವೇನ ಮಾಡಲ್ಬೇಕು ದೇವರು । ವಹಿಸಿ ತಡೆಯಬೇಕು ತಡೆಯೆ ॥
ಸಹಜದಿ ನಿಲ್ವರೆ ನಿಲ್ಲರೆ ಹಿರಿಯಣ್ಣ । ಗಹಹ ಮಾರ್ನುಡಿವರೆ ಅವರು ॥ ೧೦೩ ॥

ಸಾಕೈ ನಿಲ್ಲಿ ನಿಮ್ಮಣ್ಣಂದಿರೀಗೆಮ್ಮ । ಹಾಕಿ ಹೋಗುವೆವೆಂದು ನೆನೆದ ॥
ಜೋಕೆಯ ಕಂಡುದಿಲ್ಲವೆ ಅವರೆನ್ನ ಪ । ರಾಕಿಸಿ ಹೋಗರೆಯೆಂದಾ ॥ ೧೦೪ ॥

ನನ್ನ ಪುತ್ರರು ನನ್ನ ಚಾಳಿಸಿ ಹೋಹೆವೆಂ । ದುನ್ನಿಸಿದುದ ಕಂಡ ಮೇಲೆ ॥
ಬೆನ್ನ ಬಂದವರೆನ್ನ ಮಾತ ಕೇಳ್ವರೆಯೆಂದು । ಬಿನ್ನವಿಸುವರೆ ಸಾಕೆಂದಾ ॥ ೧೦೫ ॥

ನೀವು ತಾನಂತುಟೆ ತರಳರಾಗಿದ್ದೀಗ । ದೇವರು ದೇವರೆಂದಪಿರಿ ॥
ಆವಾಗ ಚಾಳಿಸಿ ಹೋಹಿರೊ ನೆರೆದಾಗ । ಲಾವ ನಂಬುಗೆ ನಿಮ್ಮೊಳೆಂದಾ ॥ ೧೦೬ ॥

ಗರ್ಭದೊಳಿದ್ದುದುಮೊದಲಾಗಿ ನಾವೆಮ । ಗರ್ಭಕನಾಗುವನೆಂದು ॥
ಪೆರ್ಭಾಗ್ಯದಂತೆ ಹಾರೈಪೆವು ನೀವೆಮ್ಮ । ನಿರ್ಭಾಗ್ಯಮಾಡಿ ಹೋಗುವಿರಿ ॥ ೧೦೭ ॥

ಗಂಡಾಗಬೇಕೆಂದು ನಿಮ್ಮ ಮಾತೆಯರಾಸೆ । ಗೊಂಡು ಪಡೆದು ಸಲಹುವರು ॥
ಗಂಡೆದ್ದು ನೀವೋಡಿ ದೀಕ್ಷೆಗೊಂಬಿರಿ ಬಲು । ದಿಂಡೆಯರಲ್ಲವೆಯೆಂದಾ ॥ ೧೦೮ ॥

ಒಳ್ಳಿತನುಣಲಿತ್ತು ಸಲಹುತಿಪ್ಪೆವು ಮುಪ್ಪಿ । ನಲ್ಲಿ ಸಾಕುವರೆಮ್ಮನೆಂದು ॥
ದಲ್ಲಾಳಿತನದಲ್ಲಿ ಹಾರಿಹೋಹಿರಿ ಬಲು । ಕಳ್ಳರಲ್ಲವೆ ಹೋಗಿರೆಂದಾ ॥ ೧೦೯ ॥

ಹೇಳಿದರಿವರು ಬೀಳ್ಕೊಡರೆಂದು ನಮ್ಮನು । ಚಾಳಿಸಿ ತಪಸಿಗೆಯ್ದುವಿರಿ ॥
ಬಾಲತ್ವಮೊದಲಾಗಿ ಸಾಕಿ ಸಲಹಿದೆವ್ಮ । ಸಾಲ ಬೆಂಬಿಡುವುದೆ ನಿಮಗೆ ॥ ೧೧೦ ॥

ನೋಡಿರೈ ನಾನೆನ್ನ ತಂದೆ ರಾಜ್ಯದೊಳಿಂಬು । ಮಾಡಿದಂತಿಹೆನು ನಮ್ಮಮ್ಮಾ ॥
ಊಡಿದ ಮೊಲೆವಾಲ ಋಣಕಾಕೆಯಾಜ್ಞೆಯೊ । ಳಾಡುತಿದ್ದಪೆನಲ್ತೆಯೆಂದಾ ॥ ೧೧೧ ॥

ಪಡೆದರ ಸಾಲವೆಂಬುದು ಕಷ್ಟ ಸುತರೊಡ । ಬಡಿಸಿ ತಾವೆಯ್ದಬೇಕೆಂದಾ ॥
ಸಿಡಿದು ಹೋದರೆ ಸಾಲ ಬಿಡುವುದೆ ಮುಕ್ತಿಯು । ಪಡೆವರೆಯೆಂದಂಜಿಸಿದನು ॥ ೧೧೨ ॥

ನಿಮ್ಮಣ್ಣನವರು ನೀವದ ನೋಳ್ಪುದಿಲ್ಲ ಪೆ । ತ್ತಿನಮ್ಮ ಕಣ್ಣೀರೊಳಗದ್ದಿ ॥
ಗುಮ್ಮನಿದ್ದಿರಿ ಸಲ್ಲುದೆಯೆಂದು ತರಳರ । ಮುಮ್ಮೆಟ್ಟಿದಂತಂಜಿಸಿದನು ॥ ೧೧೩ ॥

ಇರ್ವರಲ್ಲದೆ ದೀಕ್ಷೆಗೆಂದು ಮಿಕ್ಕಣುಗರು । ಪೂರ್ವಪ್ರಾಯದೊಳೆಯ್ದರೆಂದು ॥
ಸರ್ವಜ್ಞ ನುಡಿದುದ ಬಲ್ಲ ವಿನೋದಕಿಂ । ತ ವೀರೇಶ ತೋರಿ ನುಡಿದನು ॥ ೧೧೪ ॥

ಪೋಪೆವೆಂದರು ದೇವರದಕೊಪ್ಪೆವೆಂದು ನಿ । ರೂಪಿಸೆ ನಿಂದರಣ್ಣದಿರು ॥
ಈ ಪರಿಯೊಳು ದೇವರರುವರಿಗಂದೇಕೆ । ವ್ಯಾಪಿಸಿತಿಲ್ಲೆಂದರವರು ॥ ೧೧೫ ॥

ಬಸುರ ಬಂದವರ ತಡೆವರೆನಗಿಷ್ಟು ಸಾ । ಹಸವಾದುದವರು ಸೋದರರು ॥
ಸಸಿನೆನ್ನ ಮಾತ ಕೇಳ್ವರೆ ಮಾತು ಸಾಕು ಸೈ । ರಿಸಿರೆಂದು ನುಡಿದನಾ ಚಕ್ರಿ ॥ ೧೧೬ ॥

ನಾವೀಗ ದೊಡ್ಡಣ್ಣ ಚಿಕ್ಕಣ್ಣನವರೆಂದು । ದಾವುದ ಮಿೀರುವುದುಂಟೆ ॥
ದೇವರೆಂದುದ ಮಿೀರುವರೆ ದೇವರವರ ಸಂ । ಭಾವಿಸಿತಿಲ್ಲೆಂದರೊಡನೆ ॥ ೧೧೭ ॥

ನೋಡಿರೈ ದೊಡ್ಡಣ್ಣ ನಿಮ್ಮಯ ಸೋದರ । ರಾಡುವ ನುಡಿಗಳನೆಂದಾ ॥
ಆಡಸಲ್ಲದೆ ದೇವರಂದು ತಡೆಯದೋರೆ । ಮಾಡಿದುದಾಯ್ತಿಲ್ಲವೆಂದಾ ॥ ೧೧೮ ॥

ನೀನು ನಿನ್ನನುಜರೆಂದುದನೆ ಮೆಚ್ಚಿದೆಯೆಂದ । ನೇನದಲ್ಲವೆ ಸ್ವಾಮಿಯೆಂದಾ ॥
ನಾನಂದು ತಡೆಯೆನೆ ನನ್ನ ಸೋದರರನು । ಮಾನವೆ ಕೇಳಾದರೆಂದಾ ॥ ೧೧೯ ॥

ನಿನ್ನ ಮಾತೆಂಬಾಗ ನಿನ್ನ ಸೋದರರೆಲ್ಲ । ನನ್ನ ಕಂಡಂತಂಜುತಿಹರೈ ॥
ನನ್ನವರಿಂತುಟಲ್ಲದರಿಂದ ಪುಣ್ಯವ । ನಿನ್ನಂತೆ ಪಡೆದೆನೆಯೆಂದಾ ॥ ೧೨೦ ॥

ಗುರುಹಂಸನಾಥ ದೇವರ ಪುಣ್ಯದಿಂದ ನಾ । ನುರುಪುಣ್ಯವಂತನೆಯೆಂದಾ ॥
ಧರೆಯು ದೊಡ್ಡಿತ ಹೇಳಬೇಡನುಜರ ಭಕ್ತಿ । ಭರದಲ್ಲಿ ನೀನಗ್ರನೆಂದಾ ॥ ೧೨೧ ॥

ಮಲತಾಯ್ಗಳಾತ್ಮಜರೆಂಬುದಿಲ್ಲದೆ ಸರ್ವ । ರೆಳಸಿ ನಿನ್ನೊಡನಿರುತಿಹರೈ ॥
ಲಲಿತೈಕಗರ್ಭಜರಾಗಿಯು ನನ್ನವ । ರೊಲಿದೆನ್ನೊಳಿರರಣ್ಣಯೆಂದಾ ॥ ೧೨೨ ॥

ಸಾಸಿರದಿನ್ನೂರ್ವರನುಜರು ನೀನೊಂದು । ಲೇಸು ಲೇಸಾಗಿರುತಿಹರೈ ॥
ಸಾಸಿಗನೊರ್ವರನುಜರೆನಗವರೆನ್ನ । ವ್ಯಾಸಂಗದೊಳು ಕಾಣ್ಬರೆಂದಾ ॥ ೧೨೩ ॥

ಅವರಲ್ಲಿ ನಾನು ಲೇಸನೆ ಬಯಸುವೆನೆನ್ನ । ನವರು ಲೆಕ್ಕಿಸರದರೊಳಗಾ ॥
ಅವರಿವರರಿಯದಂತಾನೋರೆಮಾಡಿಕೊಂ । ಡವರಿಚ್ಛೆಯಂತಿಹೆನೆಂದಾ ॥ ೧೨೪ ॥

ತಪಸುಗೊಂಡವರೆನ್ನೊಳತಿಭಕ್ತಿಯುತರಹು । ದುಪಮೆಯೊಳ್ತಡೆದೆ ನಾನಂದು ॥
ಸ್ವಪರಾರ್ಥವೇಳ್ದೆನ್ನನೊಪ್ಪಿಸಿ ಸ್ವಾಮಿಯೊ । ಳುಪದೇಶವಡೆದರೈಯೆಂದಾ ॥ ೧೨೫ ॥

ಇವರ್ಗೆ ನಮೋಸ್ತು ಮುಂದಿದ್ದೆನ್ನ ಸೋದರ । ರವರ್ಗಾರ್ಥಗರ್ವಿಗಳವರ ॥
ವಿವರವನರಿದಿರಿ ಹೊರಗಾಡಬೇಡೆಂದು । ಕುವರರ್ಗೆ ಬುದ್ಧಿ ವೇಳಿದನು ॥ ೧೨೬ ॥
ಜಿನ ಜಿನ ಅಪ್ಪಾಜಿಯರಿಗೆ ಚಿಕ್ಕಯ್ಯಂದಿ । ರನುಕೂಲವಲ್ಲವೆಯೆಂದು ॥
ಮನದಲ್ಲಿ ನೊಂದು ಮತ್ತೊಂದಿಂಪ ಮಾತಾಡು । ತನಿಬರೆಯ್ದಿದರಯ್ಯನೊಡನೆ ॥ ೧೨೭ ॥
ಅರಸಂಚೆಮರಿಗಳಿಗೋಜೆಯ ಕಲಿಸುತ । ಭರದೊಳು ಬಹಂತೆ ನೃಪತಿ ॥
ಸರಸಸಲ್ಲಾಪವ ಸುತರೊಳು ನುಡಿವುತೆ । ಯ್ತುರುತಿದ್ದನಧಿಕಲೀಲೆಯೊಳು ॥ ೧೨೮ ॥

ಬರೆಬರೆ ಕಟಕ ಸಮೀಪವಾದುದು ನಮ್ಮ । ದೊರೆಯಿಂದು ತೀರ್ಥವಂದನೆಯ ॥
ಪರಮಲಾಭದೊಳೆಯ್ದುತಿದ್ದನೆಂದತಿಭಕ್ತಿ । ವೆರಸಿದಿರ್ಗೊಂಡುದು ಕಟಕಾ ॥ ೧೨೯ ॥
ಕಲಸಗನ್ನಡಿಗೂಡಿ ತೋರಣಶೃಂಗಾರ । ವಳವಟ್ಟ ತೇರಾನೆಕುದುರೆ ॥
ತಳ ಮೇಲೆ ನರ್ತಿಪ ಪಾತ್ರಗೀತಗಳಿಂದ । ಬಲವಿದಿರ್ವಂದುದಾ ನೃಪಗೆ ॥ ೧೩೦ ॥
ದಳಪತಿ ಮಂತ್ರಿ ಮಾಗಧ ಮೊದಲಾದವರ್ । ಕೆಳೆಯರು ನೃಪರು ಮುಂತಾದ ॥
ದಳವಿದಿರ್ವಂದು ನಿವಾಳಿಯಿಟ್ಟರಗೆ ಭೂ । ತಳಪತಿ ಸೇಸೆಸೂಸಿದನು ॥ ೧೩೧ ॥
ಹಿಮವಂತದೇವನು ವಿಜಯಾರ್ಧದೇವನು । ಹಿಮಗಿರಿ ವಿಜಯಾರ್ಧಗಿರಿಯ ॥
ಗಮಕದೊಳೆಯ್ದಿ ನಿವಾಳಿಯಿಟ್ಟೊಡೆಯಗೆ । ನಮಿಸೆ ಪೂವಿತ್ತು ಮನ್ನಿಸಿದಾ ॥ ೧೩೨ ॥
ಜಯ ಜಯಯೆಂಬ ಕೈಮುಗಿವ ಕುಣಿವ ವಾದ್ಯ । ಚಯವ ಬಾಜಿಸುವ ಕೀರ್ತಿಸುವ ॥
ಪ್ರಿಯಕಟಕಕೆ ಸೇಸೆದಳಿವುತ ನೋಡುತ । ತ್ರಿಯೊಳೆಯ್ದುತಿರ್ದನಾ ರಾಯಾ ॥ ೧೩೩ ॥
ಆನೆ ಕುದುರೆ ತೇರು ಮರುತಮಾವುಗಳಿಗ । ವೇನೊಂಟಿಯೆತ್ತು ಮುಂತಾದ ॥
ಸೇನೆಯೆಲ್ಲಕೆ ಜಿನಪಾದಗಂಧವ ಚೆಲ್ಲಿ । ಭೂನಾಥ ಸುಕೃತದೋರಿದನು ॥ ೧೩೪ ॥
ಜನಪ ಪುಷ್ಪಕವಟ್ಟೆ ತೊಳಿಸಿ ದೆಸೆದೆಸೆ । ಗನುಪಮಗಂಧವ ಚೆಲ್ಲೆ ॥
ನನೆದು ನಾಲ್ವತ್ತೆಂಟುಗಾವುದ ಪಡೆಯೆಲ್ಲ । ಜಿನತೀರ್ಥದಿಂ ಸುಖಿಯಾಯ್ತು ॥ ೧೩೫ ॥
ಒಂದುಸಾವಿರಪ್ರಜೆಗೊರ್ವಬ್ರಾಹ್ಮಣ ಮೇಲೆ । ನಿಂದು ತೀರ್ಥವ ಚಿಮ್ಮುವಂತೆ ॥
ಒಂದುನಿಮಿಷದಲ್ಲಿ ಪಡೆಯ ನನೆಸಿದನ । ದೊಂದು ಗಣ್ಯವೆ ಚಕ್ರಧರಗೆ ॥ ೧೩೬ ॥
ನನ್ನನೋಲೈಸಿದ ಪ್ರಜೆ ನನ್ನ ಪಡೆಯೆಲ್ಲ । ಚೆನ್ನಾಗಿ ಸುಖಬಾಳಲೆಂದು ॥
ಮನ್ನೆಯರೊಡೆಯ ತೀರ್ಥವ ತಳಿದನು ಮಝು । ಇನ್ನೆಂತೊ ಪ್ರತಿಪಾಲನಾಂಗಾ ॥ ೧೩೭ ॥
ವಿಪ್ರರ ಮೇಲೆ ತನ್ನಯ ಹಸ್ತಮುಟ್ಟೆ ಭೂ । ಮಿಪ್ರಭು ಗಂಧವ ಚಿಮ್ಮೆ ॥
ಸುಪ್ರಯೋಜನವಾದೆವೆಲೆ ತೀರ್ಥಯೋಗಿಯೆಂ । ದಾ ಪ್ರಸಿದ್ಧರು ಕೀರ್ತಿಸಿದರು ॥ ೧೩೮ ॥
ಅಲ್ಲಲ್ಲಿಗಿಡುವ ನಿವಾಳಿಯಾರತಿಪುಷ್ಪ । ಪಲ್ಲವ ಫಲ ಪೂಜೆಗೊಳುತ ॥
ಎಲ್ಲಾ ಪುತ್ರರುಗೂಡಿ ಪುಷ್ಪಕವಿಳಿದೋಜೆ । ಯಲ್ಲಿ ಮುಂದಿಳಿತರುತಿರ್ದಾ ॥ ೧೩೯ ॥

ಪೊಡವಡೆ ಸಾರಿದರಿಗೆ ಗಂಧಪುಷ್ಪವ । ಕೊಡಿಸುತ ಸುತರ ಕೈಯಿಂದ ॥
ಅಡಿಗಡಿಗಲ್ಲಲ್ಲಿ ಕಂಡರ ನಿಲಿಸುತ । ನಡೆವುತಿದ್ದನು ರಾಜಗೃಹಕೆ ॥ ೧೪೦ ॥

ನಗೆ ನುಡಿ ನೋಟ ಕೈಸನ್ನೆಯಿಂದಲ್ಲಿಗ । ಲ್ಲಿಗೆ ಸರ್ವಜನರ ಬೀಳ್ಕೊಡುತ ॥
ಸುಗುಣಚಕ್ರೇಶ ಹೊಕ್ಕನು ರಾಜಗೃಹವ ಪೆಂ । ಪೊಗೆಯೆ ಸುಪುತ್ರರುಗೂಡಿ ॥ ೧೪೧ ॥

ಶೃಂಗಾರವಡೆದು ರಾಣಿಯರಿದಿರ್ವಂದು ರ । ತ್ನಂಗಳಾರತಿನಿವಾಳಿಗಳಾ ॥
ಅಂಗಜರೂಪಗೆಸಗಿ ಕೂಡೆ ಪಾದಪ । ದ್ಮಂಗಳಿಗೆರಗಿದರೊಸೆದು ॥ ೧೪೨ ॥

ಸಮವಸರಣವ ಸೋಂಕಿದ ಚರಣಗಳೆಂದು । ರಮಣಿಯರೆಲ್ಲ ಕೀರ್ತಿಸುತ ॥
ತಮತಮಗರ್ತಿಯೊಳೆರಗುತಿದ್ದರು ಮಹೀ । ರಮಣ ನೋಡುತ ನಗುತಿರ್ದಾ ॥ ೧೪೩ ॥

ತನುಜರಂಬಿಕೆಯರ್ಗೆ ಸೇಸೆಯನಿತ್ತಾದಿ । ಜಿನಪೂಜೆಗೈದೆವಂತದನು ॥
ನೆನೆದೊಡಂಬಡಿಯೆಂದರಿಚ್ಛಾಮಿಯಿಚ್ಛಾಮಿ । ಯೆನುತಿರ್ದರೆಲ್ಲರರ್ತಿಯೊಳು ॥ ೧೪೪ ॥

ಎರಗುತಿದ್ದರು ಮಕ್ಕಳೆರಗಬೇಡಣ್ಣ ನೀ । ವುರೆ ಮಕ್ಕಳಲ್ಲೆಮಗಿಂದು ॥
ನೆರೆ ತೀರ್ಥಪಥಿಕರಾವೆರಗಬೇಕೆಂದವ । ರೆರಗಿದರಣುಗರ ಕಾಲ್ಗೆ ॥ ೧೪೫ ॥

ಸಲ್ಲದಮ್ಮಾಜಿ ಹಾಹಾಯೆಂದು ಸುಕುಮಾರ । ರೊಲ್ಲದೆ ಹೊರಸಾರೆಸಾರೆ ॥
ಮೆಲ್ಲಡಿಗಳ ಮುಟ್ಟಿ ಕಣ್ಣೊತ್ತಿಕೊಂಡರು । ಬಲ್ಲವರಂಗವದಲ್ತೆ ॥ ೧೪೬ ॥

ಕೂಡೆ ಕುಮಾರರೆರಗಿದರಂಬಿಕೆಯರು । ಬೇಡಬೇಡೆನೆ ಕೇಳದೆಳಸಿ ॥
ಪಾಡರಿದಪ್ಪಿ ಪುತ್ರರ ಹರಸಿದರದ । ನೋಡಿ ರಾಗಿಸಿದನಾ ನೃಪತಿ ॥ ೧೪೭ ॥

ಸೊಸೆಯರು ಬಂದು ಮಾವನಿಗೆರಗಿದರು ಸಂ । ತಸದಿ ಗಂಧವ ಚಿಮ್ಮಿಸಿದನು ॥
ಪೊಸಪೂಜೆಗೊಡಬಡಿ ಅಮ್ಮಿಯೆಂದನು ತಲೆ । ಗುಸಿದರಿಚ್ಛಾಮಿಯೆಂದವರು ॥ ೧೪೮ ॥

ತಂತಮ್ಮ ಪುರುಷರ ಕಂಡರು ರಮಿಸರೋ । ರಂತೆ ಪೊರ್ದರು ನಾಣ್ಚಿ ನಗುತ ॥
ಪಿಂತೆ ಸಾರ್ದತ್ತೆಯರೊಡನಿದ್ದರದು ಹೊಸ । ಕಾಂತೆಯರೋಜೆಯೇನಲ್ತೆ ॥ ೧೪೯ ॥

ಬೀಗಿ ಸುಪುತ್ರರುಗೂಡಿ ಪಂತಿಯೊಳಾ । ರೋಗಣೆಗೈದು ಚಕ್ರೇಶಾ ॥
ರಾಗಾನುಲೀಲೆಯೊಳಿರ್ದನೆಂಬೆಡೆಗೆ ತೀ । **ರ್ಥಾಗಮನದ ಪುಣ್ಯಸಂಧಿ** ॥ ೧೫೦ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೫೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೫೨ ॥

ಸಂತತ ಪಾಪವ ತೊಳೆವ ಪಾವನತೀರ್ಥ । ಕಾಂತಾ ನೀನಗಲದೆ ನನ್ನ ॥
ಅಂತರಂಗದೊಳು ಥಳಿಸುತಿರು ಪರಮಾವಿ । ಶ್ರಾಂತಾ ಚಿದಂಬರಪುರುಷಾ ॥ ೧೫೩ ॥

ತೀರ್ಥಾಗಮನಸಂಧಿ ಸಂಪೂರ್ಣಂ.

# ಅಂಬಿಕಾದರ್ಶನಸಂಧಿ.

ಮಂಗಲಾಚಾರ್ಯರ್ ಮಂದರಧೈರ್ಯರ್ ಭವ್ಯಾಂತ । ರಂಗೈಕಗಮ್ಯ ಸುಸೌಮ್ಯಾ ॥
ಸಂಗೀತರಸಿಕ ಸನ್ಮತಿದೋರು ಚಿದ್ಘನ । ಲಿಂಗಾ ನಿರಂಜನಸಿದ್ಧಾ ॥ ೧ ॥

ಪುರುಪರಮೇಶನ ಪಾದಗಂಧೋದಕ । ಶಿರ ಸೋಂಕೆ ಸುಪವಿತ್ರವೆತ್ತು ॥
ತೆರಳಿತು ದಂಡು ನಿಸ್ಸಾಳ ಸೂಳೈಸಲಂ । ಬರ ಭೂಮಿ ಕಿಷ್ಕಿಂದವಾಗಿ ॥ ೨ ॥

ನಿಂದಲ್ಲಿ ನಿಲ್ಲದೆ ಕೆಲವುಪಯಣವೆಯ್ದಿ । ಮುಂದೊಂದು ಪಯಣದೊಳಿಷ್ಟು ॥
ನಿಂದನು ಚಕ್ರೇಶನಾ ಬಿಟ್ಟ ಬೀಡಿನೊ । ಳ್ಪಂದುದೊಂದೊಸಗೆಯೇನೆಂಬೆ ॥ ೩ ॥

ಭರತೇಶ ತಿರುಗಿದನೆಂಬುದ ಪೌದನ । ಪುರದೊಳಿದ್ದಂಬಿಕೆ ಕೇಳ್ದು ॥
ಪಿರಿದು ಸಂತಸವೆಯ್ದಿ ವಾರ್ತೆಯ ತಂದ ದೂ । ತರಿಗಿತ್ತಳೊಸೆದು ಮನ್ನಣೆಯಾ ॥ ೪ ॥

ಮಗನಟ್ಟಿದುಡುಗೊರೆಗಳ ತಾನು ತಂಗಿಯು । ತೆಗೆದುಟ್ಟುತೊಟ್ಟರ್ತಿವಟ್ಟು ॥
ಮುಗುಳಂಬಗದರ ವೃತ್ತಾಂತವನರುಹಿ ಮೂ । ಜಗವನಾಳ್ದಂತಿರ್ದರವರು ॥ ೫ ॥

ಬಂದುದಲ್ಲಲ್ಲಿ ಚಕ್ರಿಯ ಸೇನೆ ಮುಟ್ಟಲಾ । ಯ್ತೆಂದೆಂಬ ವಾರ್ತೆ ಹುಟ್ಟಿದುದು ॥
ಅಂದು ಕಂದನ ತಾಯ್ಗೆ ಬಪ್ಪ ಬಟ್ಟೆಯೊಳೆಯ್ದಿ । ಸಂದಿಪೆನೆಂಬರ್ತಿಯಾಯ್ತು ॥ ೬ ॥

ನಡೆದಿನ್ನು ಹತ್ತೆಂಟುದಿನಕೆಮ್ಮ ಪುರದ ಮುಂ । ಗಡೆಗೆ ದಂಡೆಯ್ದುವುದೆನಲು ॥
ಪಡೆದ ತಾಯಲ್ಲವೆ ತಾನಷ್ಟು ದಿನಮುಟ್ಟ । ತಡೆದಿರಲಾರದೆಯ್ದಿದಳು ॥ ೭ ॥

ಸಾಕೇತಪುರಕೆ ದೊಡ್ಡಣ್ಣನೆಯ್ದಲಿ ಮತ್ತೆ । ಜೋಕೆಯೊಳ್ನಾವೆಯ್ದಿ ನೋಳ್ಪ ॥
ಏಕಕ್ಕ ನಿಮಗಿಷ್ಟು ತವಕವೆಂದನುಜೆಯ । ನಾಕೆ ಬೋಧಿಸಿ ಗಮಿಸಿದಳು ॥ ೮ ॥

ಭರತಣ್ಣನೆಲ್ಲಿದ್ದನದೆ ಪುರ ನನ್ನದೆ । ತರಹರಿಸದೆ ಪೋಪೆ ನಾನು ॥
ಪುರವ ಹೊಕ್ಕಾಗ ನೀವೆಯ್ತಹುದೆಂದು ಬಿ । ತ್ತರಿಸಿ ತಂಗಿಯ ನಿಲಿಸಿದಳು ॥ ೯ ॥

ಇಂದಿಷ್ಟು ಸೈರಿಸಿ ನೀವು ಚಿತ್ತೈಸುತಿ । ಪ್ಪಂದವ ಚಕ್ರೇಶಗಾನು ॥
ಮುಂದೆ ದೂತರ ಕಳುಹುವೆನು ಮತ್ತೆಯ್ದ ಲೇ । ಸೆಂದನಂಬಿಕೆಗೆ ಮನ್ಮಥನು ॥ ೧೦ ॥

ದೂತರ ಕಳುಹಿದಾಗವ ತನ್ನ ಕಟಕ ಸಂ । ಗಾತದೊಳ್ಬರಲಿದಿರ್ಗೊಂಬ ॥
ಏತಕೊ ರಕ್ಷೆ ಗುಪ್ತದೊಳೆಯ್ದಬೇಕೆಮ್ಮ । ಮಾತಿಗೊಪ್ಪೆಂದಳಾ ಮಗಗೆ ॥ ೧೧ ॥

ಆರೂ ಅರಿಯದಂತೆ ದುಳುದುಳನೆಯ್ದಿ ಬೀ । ಡಾರವ ಹೊಕ್ಕಾಗ ತನ್ನ ॥
ನಾರಿಯರ್ತಾನು ಬೆಕ್ಕಸಬಡಬೇಕೆಂದು । ಮಾರನನೊಡಬಡಿಸಿದಳು ॥ ೧೨ ॥

ಪಲ್ಲಕ್ಕಿಯೊಳು ಪೋಗೆ ತಡವಹುದದು ಬೇಡ । ಫುಲ್ಲಪುಷ್ಪಕವೇರಿ ಗಮಿಸಿ ॥
ನಿಲ್ಲದಿಂದೆ ಕಾಣ್ಬೆನಣ್ಣನನೆಂದಿನಿ । ವಿಲ್ಲನ ಬೀಳ್ಕೊಂಡಳೊಡನೆ ॥ ೧೩ ॥

ಚರರು ನಂಬುಗೆವಂತರೂಳಿಗವೆಂಗಳ । ಲ್ಲರು ವಿಮಾನವನೇರಿ ಬಳಸಿ ॥
ಬರಲು ಯಶಸ್ವತೀದೇವಿ ಪುಷ್ಪಕವೇರಿ । ಬರುತಿದ್ದಳಾಕಾಶದಲ್ಲಿ ॥ ೧೪ ॥
ಕ್ಷಣಕೆ ಪುಷ್ಪಕ ಸೇನೆ ಮುಟ್ಟಲಾಯ್ತಿನೆ ಬಂದು । ದೆಣಿಕೆಯಿಲ್ಲದ ಕಟಕವನು ॥
ಗುಣರತ್ನನಂಬಿಕೆ ಮತ್ತೊಯ್ಯನಂಬರಾಂ । ಗಣದಲ್ಲಿ ನೋಡುತೆಯ್ದಿದಳು ॥ ೧೫ ॥
ಕಣ್ಣಳತೆಗೆ ಮಿಕ್ಕ ಪಡೆಯ ಕಂಡಿದು ಭರ । ತಣ್ಣನ ಪಡೆಯೆಯೆಂದೆನುತ ॥
ಕಣ್ಣಿಟ್ಟು ನೋಡುತ ಮನದೊಳರ್ತಿಸುತ ತಾ । ಯ್ವೆಣ್ಣಗಳೊಡತಿಯೆಯ್ದಿದಳು ॥ ೧೬ ॥
ತೆಂಕ ನಾವೆಯ್ದುತಿದ್ದಪೆವೆಮಗಿದಿರಾಗಿ । ತೆಂಕಣಿಂ ಬಪ್ಪರಾರೆಂದು ॥
ಮುಂಕೊಂಡು ಪಡೆಯೆಲ್ಲ ನೋಡುತಿದ್ದುದು ಗಗ । ನಾಂಕಕೆ ದೃಷ್ಟಿಯನಿಟ್ಟು ॥ ೧೭ ॥
ವಾದ್ಯವಿಲ್ಲೆತ್ತಿದ ಟಿಕ್ಕೆಯವಿಲ್ಲನ । ವದ್ಯವಿಮಾನವೆಯ್ದುತಿದೆ ॥
ಚೋದ್ಯವೆಂದೀಕ್ಷಿಸುವಾಗ ಪಾಯ್ದಳಕೆ ಸು । ವೇದ್ಯವೆಂದೆನೆ ಸಾರ್ದಳಾಕೆ ॥ ೧೮ ॥
ಮುಂಗಡೆಯೊಳು ಸುರವೀರನಂಬುಗೆವಂತ । ರಂಗೈಯನೆತ್ತಿ ಖೋಯೆಂದು ॥
ಡಂಗುರಿಸಿದರೆಮ್ಮ ಸ್ವಾಮಿಯಂಬಿಕೆ ಬಿಜ । ಯಂಗೈದಳೆಂದು ಪಾಯ್ದಳಕೆ ॥ ೧೯ ॥
ಪಟುಮತಿಯಿಂದವರಾಡಲಾ ನುಡಿ ಕರ್ಣ । ಪುಟದಲ್ಲಿ ಬೀಳಲಾ ಕ್ಷಣವೆ ॥
ನಿಟಲಕೆ ಕರವಿಟ್ಟು ಜಯ ಜಯಯೆಂದೆಲ್ಲ । ಕಟಕ ಬೊಬ್ಬಿರಿದುದಂದಲ್ಲಿ ॥ ೨೦ ॥
ಅವರ ಕಂಡವರು ಮತ್ತವರ ಕಂಡಾಚೆಯಿ । ದ್ದವರವರಿಂದಾಚೆಯವರು ॥
ತವತವಗೆಲ್ಲರು ಜಯ ಜಯಯೆಂದು ಘೋ । ಷವ ಮಾಡಿದರು ಸೇನೆತುಂಬಿ ॥ ೨೧ ॥
ಬಡಿವ ತಂಬಟೆ ಭೇರಿ ಮಿಡಿವ ಕಹಳೆ ಕೊಂಬು । ಸುಡುವ ಪಟಲು ಕೂಡೆ ನೆಗೆವ ॥
ಗುಡಿ ಕೇತು ತೋರಣದಿಂದ ಪಾಯ್ದಳವೆಲ್ಲ । ಸಡಗರಗೊಂಡುದತ್ತಿತ್ತ ॥ ೨೨ ॥
ಕುದುರೆಯನೇರುತಾನೆಯನೇರಿ ತೇರೇರಿ । ಯಿದಿರಾಗಿ ಬಂದು ಬಾನೆಡೆಗೆ ॥
ವದನವನೆತ್ತಿ ಕೈಮುಗಿವುತ ಜಯಯೆಂದು । ಚದುರವೇಲಾಳ್ಗಳೊಪ್ಪಿದರು ॥ ೨೩ ॥
ಅಂತರಿಕ್ಷಕೆ ನೆಗೆದಖಿಳವಿಮಾನದೊ । ಳ್ಮಂತೆ ದೂರದೊಳಡ್ಡ ಬೀಳ್ವ ॥
ವ್ಯಂತರಬಲದ ವಿದ್ಯಾಧರಬಲದೊಂದು । ಹಂತಿ ಮೋಹಿಸಿತಾಗ ಕಣ್ಗೆ ॥ ೨೪ ॥
ಕುಣಿವ ಪಾಡುವ ಹರಿದಾಡುವ ನೋಡುವ । ಗೆಣೆಯರೊಳ್ನುಡಿವರ್ತಿವಡುವ ॥
ಪಣೆಗೆ ಕೈಸಾರ್ಚುವ ಜಯ ಜಯಯೆಂಬ ಸಂ । ದಣಿಯಿದ್ದುದೆಲ್ಲಿ ನೋಡಿದರು ॥ ೨೫ ॥
ದಂತಿತುರಗರಥಭಟರು ವಿಮಾನಗ । ಳಂತರಿಸದೆ ಹೊಕ್ಕು ಕಲಸೆ ॥
ಸಂತಸದಿಂದ ಪಾಯ್ದಳವೆಲ್ಲ ಮುಸಗಿತು । ಸಿಂತುರು ಮುಸಗಿದಂದದೊಳು ॥ ೨೬ ॥
ಪಡೆಯೆಲ್ಲ ಬಳ್ಳಿಯ ಮೊದಲನಲುಗಲೆಲ್ಲ । ಕುಡಿಗಳು ಮಿಸುಕಿದಂತಾಯ್ತು ॥
ಬಡವನ ಜನನಿಯಿ ಪಟ್ಟುಂಡದೆರೆಯನ । ಪಡೆದಳೆಯ್ತರಲಿದು ಘನವೆ ॥ ೨೭ ॥

ಮೊದಲಿಪ್ಪ ಜಯ ಜಯಯೆಂಬ ಘೋಷಣೆ ತೋರಿ । ತದು ಮತ್ತೆ ಲೀಲೆಯೊಳ್ಮಸುಳೆ ॥
ಸದೆವ ವಾದ್ಯದ ದನಿ ಬೊಬ್ಬೆಯ ದನಿ ಪಟ । ಲುದಿತಘೋಷಣೆ ಹೆಚ್ಚಿತೊಡನೆ ॥ ೨೮ ॥
ಧರೆಯಗಲದಿ ಬಿಟ್ಟ ಕಟಕದೊಳಿಹ ಮೂರು । ವರೆಕೋಟಿ ವಾದ್ಯ ವೊಳಗಿತು ॥
ಭರದಿ ನಾಲ್ವತ್ತೆಂಟುಕೋಟಿ ಟಿಕ್ಕೆಯವೆತ್ತೆ । ಸುರಲೋಕಮುಟ್ಟಿತು ಗಲಭೆ ॥ ೨೯ ॥

ಅರಮನೆಯೊಳಗಿದ್ದ ನೃಪನದ ಕೇಳ್ದು ತೊ । ತ್ತಿರನಟ್ಟಿ ನೋಡಿಸಲವರು ॥
ಹರಿತಂದು ಕಡೆಯ ಬಾಗಿಲ ಸಾರಿ ನೋಡಿ ಚ । ಚ್ಚರದೊಳೋಡಿದರಾಣ್ಮನೆಡೆಗೆ ॥ ೩೦ ॥
ಒಡೆಯ ಬಿನ್ನಹ ನಮ್ಮ ಕಟಕವೆಲ್ಲವು ಬಲು । ಕಡಲು ಕಲಕಿದಂತೆ ಕಲಕಿ ॥
ನೊಡವಿಯಾಗಸತುಂಬಿ ಹರಿದೋಡುತಿದೆ ನಮ್ಮ । ನುಡಿಗೇಳ್ವರಿಲ್ಲೆಂದರವರು ॥ ೩೧ ॥
ಬಾಗಿಲ ಗೊಲ್ಲರು ಬೆಕ್ಕಸಬಟ್ಟು ಮೇ । ಲಾಗಸವನು ನೋಡುತಹರೆ ॥
ಕೂಗುತ ಹರಿವರಲ್ಲದೆ ಸುಮ್ಮನಿಹರಿಲ್ಲ । ಕೂಗಿ ನೋಡಿದೆವೆಂದರೊಡನೆ ॥ ೩೨ ॥
ಧರೆ ಸಾಧ್ಯವಾಯ್ತೆಂದು ವೈಮರೆದಾಗಿಂತು । ಬರುತಿರಲೀ ವೇಳೆಯರಿದು ॥
ಅರಿಗಳಾರಾದರು ಮೇಲ್ಗವಿದರೊಯೆಂದು । ಭರತೇಶ ನೆನೆದನೆದೆಯೊಳು ॥ ೩೩ ॥
ಸೌಂದರಿಯರಿಗಂಜದಿರಿರೆಂದು ಪೇಳ್ದು ಸೌ । ನಂದಕವೆಂಬ ಖಂಡೆಯವಾ ॥
ಕುಂದಣದೊರೆಯಿಂದ ಸುಗಿದನು ಫಣಿ ಹೆರೆ । ಯಿಂದುಚ್ಚಿ ನಿಮಿರಿದಂತಾಯ್ತು ॥ ೩೪ ॥
ಜವನ ನಾಲಗೆಯಂತೆ ಮೆರೆವ ಖಡ್ಗವನಾಂತು । ಯುವತಿಯರೊತ್ತಿನಿಂದೆದ್ದು ॥
ಕವಚ ಹರಿಗೆ ಮೊದಲಾದ ಸಂಜೋಗವಿ । ಲ್ಲವನೀಶನೆದ್ದನಿದ್ದಂತೆ ॥ ೩೫ ॥
ಒಡ್ಡುವರೊಂದು ಹೊಯ್ವರದೊಂದು ಮುಂಡೆ ಮೈ । ಗಡ್ಡೈಸಿಕೊಂಬರೊಂದೊಂದು ॥
ಹೆಡ್ಡರಿಗಿರಲೆನಗೀ ಖಡ್ಗ ಸಾಕೆನು । ತಡ್ಡಾಕೆಯಿಲ್ಲದೆಯ್ದಿದನು ॥ ೩೬ ॥
ಉಟ್ಟಿದ್ದ ದಟ್ಟಿ ತೊಟ್ಟಿದ್ದ ಭೂಷಣ ಮೊದ । ಲಿಟ್ಟಿದ್ದ ಕುಲಾಯಿ ಸಹಿತ ॥
ಬಿಟ್ಟ ಸೆರಗನೆಡಗೈಗೆ ಸುತ್ತಿದನಡಿ । ಯಿಟ್ಟನಾ ನಿಸ್ಸೀಮರೊಡೆಯಾ ॥ ೩೭ ॥
ನಿಡುದೋಳ ನೆರೆ ನೀಡಿ ಪಿಡಿದ ಖಡ್ಗವನೊತ್ತಿ । ಝಡಿದು ನೋಡಿದನು ಚಕ್ರೇಶಾ ॥
ಕಡೆಗಾಲದಗ್ನಿ ನಾಲಗೆನೀಡುವಂತೆ ದಿಂ । ಕಿಡೆ ಚಳಚಳನೆ ಚಿಮ್ಮಿದುದು ॥ ೩೮ ॥
ಭೂಕಂಪವಾಯ್ತು ಸಮುದ್ರವುಕ್ಕಿತು ಮೇಲೆ । ಕೂಕಿರಿದುವು ಭೂತಕೋಟಿ ॥
ಲೋಕವೆಲ್ಲವು ಭಯಂಕರವಾಯ್ತು ಸವರವೆ । ಲೋಕದಕ್ಷನ ತೋಳ ಬಲ್ಮೆ ॥ ೩೯ ॥
ರಕ್ಕಸರಾಗಲಿಂದಿದಿರಾದರಾದರೆ । ಹಕ್ಕಿಯನಟ್ಟುವಂತವರಾ ॥
ದಿಕ್ಕುದಿಕ್ಕಿಗೆ ತೆಮುಳ್ದುವೆನೆಂಬ ವಿಕ್ರಮ । ಮುಕ್ಕುಳಿಸುತ ನಡೆತಂದಾ ॥ ೪೦ ॥
ದಿಗಿದಿಗಿನೆಯ್ತಂದು ಕಡೆಯ ಬಾಗಿಲ ಸಾರ್ದು । ಜಗದೇಕವೀರ ನೋಳ್ಪಾಗ ॥
ಬಿಗಿದ ಚಲ್ಲಣ ಕಾಸೆ ಕೂರಸಿವೆರಸಿ ಕೈ । ಮುಗಿದರು ಕುವರರು ಬಂದು ॥ ೪೧ ॥

ಗಣಬದ್ಧರೊದಗಿದರಷ್ಟರೊಳರಸ ಮುಂ । ದಣ ಪೌಜ ನೋಳ್ಪಾಗ ಮುಂದೆ ॥
ಎಣೆಗೂಡಿ ಶೂರವೀರರು ಬೆರಸೆಯ್ತಂದು । ಮಣಿದುಸಿರ್ದರು ಕಾರ್ಯಗತಿಯಾ ॥ ೪೨ ॥

ಗುರುಹಂಸನಾಥ ನಮ್ಮಮ್ಮಾಜಿಯೆಯ್ತಂದ । ಪರಿಯೆ ಭಾಪೆಂದುಬ್ಬಿ ನಗುತ ॥
ಕರವಾಳ ಭಟನ ಕೈಗಿತ್ತನು ಶೂರವೀ । ರರಿಗಿತ್ತನೊಡನೆ ಮನ್ನಣೆಯಾ ॥ ೪೩ ॥

ಗಾಳಿಯೆದ್ದಷ್ಟರೊಳ್ಬಂದು ಪುಷ್ಪಕ ಹೊರ । ಪಾಳೆಯದೊಳವೊಕ್ಕದೊಡನೆ ॥
ಮೇಲಣ ಲೋಕದ ದಿವಿಜೆಯಂತಿಳಿದಳಾ । ಲೋಲೆ ಯಶಸ್ವತೀದೇವಿ ॥ ೪೪ ॥

ಹೊದೆದ ದೂವಟವ ನಿವಾಳಿಯಿಟ್ಟೊಡನೊಂದ । ಹೊದೆವುತ ನೃಪ ತನ್ನ ತಾಯ ॥
ಇದಿರಲ್ಲಿ ಸಾಷ್ಟಾಂಗವೆರಗಲಷ್ಟರೊಳಾಕೆ । ಒದಗಿ ಕೈಯೊಡ್ಡಿ ತಡೆದಳು ॥ ೪೫ ॥

ಆದುದಿಲ್ಲಾನಡ್ಡಬೀಳಬೇಕೆಂದನು । ಬೀದಿಯೊಳ್ಬೇಡೆಂದಳಾಕೆ ॥
ವಾದಿಸುವಾಗರ್ಕಕೀರ್ತಿ ವಸ್ತ್ರವ ಹಾಸ । ಲಾದರದಿಂದಡ್ಡಬಿದ್ದಾ ॥ ೪೬ ॥

ಪೊಡೆ ಮಗುಳ್ವಂದು ಬಾಲನನೆತ್ತಿದಿರವ ಕ । ನ್ನಡಿಸುವಂತಾ ಜಗನ್ಮಾತೆ ॥
ಕಡುಬೇಗದಿಂದೆತ್ತಿ ತಕ್ಕೈಸಿಕೊಂಡು ಮೈ । ದಡವಿ ಹರಸಿದಳೇನೆಂಬೆ ॥ ೪೭ ॥

ಏರುವ ಜವ್ವನ ಜಾರದೆ ನರೆತಲೆ । ದೋರದೆ ಚಿರ ಬಾಳು ಕಂದಾ ॥
ಆರುಖಂಡವ ಬಹುದಿನವಾಳ್ದು ಮುಕ್ತಿಯ । ಸೂರೆಗೊಳ್ಳೆಂದಳು ಕ್ಷಣಕೆ ॥ ೪೮ ॥

ತಕ್ಕೈಸಿದಾಗ ತಮ್ಮಿಬ್ಬರ ಮೈಯುಬ್ಬಿ । ಕಿಕ್ಕಿರಿದುವು ಪುಳಕಗಳು ॥
ಒಕ್ಕುವಾನಂದಾಶ್ರು ಸೆರೆಗಳೆದ್ದುವು ತಾಯಿ । ಮಕ್ಕಳ ಮೋಹವಿನ್ನೆಂತೊ ॥ ೪೯ ॥

ಅರುವತ್ತುಸಾವಿರವರ್ಷವಾಯ್ತಣ್ಣ ನೀ । ನುರೆ ನನ್ನ ಪಕ್ಕದಿಂದಗಲಿ ॥
ಮರಿಯಾನೆ ಇಂದು ಸಂದಿಸಿದೆಯುಯೆಂದಪ್ಪಿ । ಮರುಕದೊಳ್ನುಡಿದಳಾ ಜನನಿ ॥ ೫೦ ॥

ಜಿನಸಿದ್ಧ ವರ್ಷ ತಾನಷ್ಟಾಯ್ತೆ ಅಮ್ಮಾಜಿ । ಯೆನುತ ಚಕ್ರೇಶ ಕೇಳಿದನು ॥
ತನುಜ ತಪ್ಪದು ನಾನು ಲೆಕ್ಕಗೊಂಡಿದ್ದೆನೆಂ । ದೆನೆ ಮಂಡೆದೂಗಿದನೊಡನೆ ॥ ೫೧ ॥

ಮತ್ತರ್ಕಕೀರ್ತಿ ನಿವಾಳಿಯನೊಲಿದಿಟ್ಟು । ಹೆತ್ತಮ್ಮಗಡ್ಡಬಿದ್ದೆದ್ದಾ ॥
ಒತ್ತಿನ ಸುತರೆಲ್ಲರೆರಗಿದರವನಂತೆ । ಸುತ್ತಿನ ನುಡಿಗಳಿನ್ನೇನು ॥ ೫೨ ॥

ಪುರದಿಂದ ಪೊರಮಡುವಾಗೊಂದುತೊಟ್ಟಿಲೊ । ಳಿರನೆ ತಾನಿವನರ್ಕಕೀರ್ತಿ ॥
ನೆರೆದ ಕುವರರೆಲ್ಲರಿವನ ಸೋದರರೆಂದು । ಭರತೇಶ ತಾಯ್ಗೆ ಸೂಚಿಸಿದಾ ॥ ೫೩ ॥

ಎನಲರ್ಕಕೀರ್ತಿಯ ತಕ್ಕೈಸಿ ಹರಸಿದ । ಳನಿಬರೆಲ್ಲರನೊಲ್ದು ಹರಸಿ ॥
ಜಿನ ಜಿನ ಮಗನೆ ನಿನ್ನಂತಾರು ಪುಣ್ಯವ । ರ್ಧನರೆಂದು ನುಡಿದಳಾ ಜನನಿ ॥ ೫೪ ॥

ನರಲೋಕದವರಲ್ಲ ಭರತಣ್ಣ ನಿನ್ನ ಪು । ತ್ರರು ಕಡುಚೆಲ್ವರಿಂತಿವರಾ ॥
ಸುರಲೋಕದಿಂದ ತಂದೆಯೊ ಚಕ್ರದಣ್ಣ ನಾ । ಡರಸಣ್ಣ ಪೇಳೆಂದಳೊಸೆದು ॥ ೫೫ ॥

ಕುವರರ ಸುದ್ದಿ ಸಾಕೆಂದು ನೀವಿಂತು ಚಿ । ತ್ತವಿಸುತಿದ್ದುದನು ಸೂಚಿಸದೆ ॥
ತವಕದೊಳೆಯ್ತರಬಹುದೆಯೆಂದೆದೆಯು ಸ್ನೇ । ಹವ ತೋರಿ ನೊಂದು ನುಡಿದನು ॥ ೫೬ ॥

ಕಟಕ ಸಿಂಗರಿಸದೆ ತಳ ಮೇಲೆ ನೃತ್ಯ ಸಂ । ಘಟಿಸದೆ ನಾನಿದಿರ್ಗೊಳದೆ ॥
ಕಟಕಟ ನೀವಿಂತು ಬಪ್ಪರೆಯೆಂದು ಸಂ । ಕಟಗೊಂಡನೆದೆಯೊಳಾ ನೃಪತಿ ॥ ೫೭ ॥

ಚಿನ್ನ ಬೆಳ್ಳಿಯು ಪುಷ್ಪ ಕಮಲ ಕಾಶ್ಮೀರ ಬಾ । ವನ್ನದೊಳ್ಕಟಕವೆದ್ದಾಡೆ ॥
ನಿನ್ನ ಮುಂದೋಡಾಡಿ ಬರೆ ನಾನು ಬಾರದೆ । ಖಿನ್ನಗೆಯ್ದುವರೆ ಹಾಯೆಂದಾ ॥ ೫೮ ॥

ಮೇಲುದೊರೆಗಳುಡೆಸುತ್ತಿ ನನ್ನೊಡನೆಯ್ದಿ । ಕಾಲುನಡೆಯೊಳು ನಾನೆನ್ನ ॥
ಸಾಲುಮಕ್ಕಳುಗೂಡಿ ಬಂದೆರಗದೆ ಹರಿ । ದಾಳಿಮಾಡುವರೆ ನೀವೆಂದಾ ॥ ೫೯ ॥

ಸಾರಗೆಟ್ಟಖಿಳಕಾರ್ಯಕೆ ಕಟಕವ ನಾಡ । ದಾರಿಯೊಳ್ಬರಿಸಿದೆನೆಂದಾ ॥
ಗೌರವಾಂಬಿಕೆಗಿದಿರಾಗಿಂದು ಹಯಗಜ । ತೇರೆಯ್ದಲಾಗದೆಯೆಂದಾ ॥ ೬೦ ॥

ಅಲ್ಲಲ್ಲಿ ಪಾತ್ರವ ಕಾಣಿಸಿ ಹೆಣಗುವ । ಮಲ್ಲರ ತೋರುತ ನಿಮ್ಮ ॥
ಪಲ್ಲಕ್ಕಿವಿಡಿದು ನಾನೋಲೈಸೆ ಬಾರದೆ । ಜಲ್ಲನೆಯ್ತಹರೆಯಿಂತೆಂದಾ ॥ ೬೧ ॥

ಭಾಗ್ಯವಿಲ್ಲೆನಗೆ ದೇವರ ಪಾದಸೇವೆಗೆ । ಯೋಗ್ಯವಲ್ಲೆನ್ನ ಪಾಲ್ಪಳವು ॥
ಭೋಗ್ಯವಲ್ಲೀ ಗೀತಪಾತ್ರಗಳೆಂದು ವೈ । ರಾಗ್ಯ ಕೈವಿಗೆ ನೊಂದು ನುಡಿದಾ ॥ ೬೨ ॥

ಬೇಕಾದ ಸೇವೆಯು ನಾನು ಮಾಳ್ಪುದು ನೋಡು । ವಾಕಾಂಕ್ಷೆ ನಿಮಗಿಲ್ಲ ಕಂಡಾ ॥
ಏಕೆ ಪೆತ್ತಿರಿ ನನ್ನ ಷಟ್ಪಂಡವಾಳೆಂದ । ದೇಕೆ ಪಾಲೆರೆದಿರಿಯೆಂದಾ ॥ ೬೩ ॥

ಅಂತು ನೋಯದಿರಣ್ಣ ನನ್ನಾಣೆ ನಿನಗೆ ಲೋ । ಕಾಂತವರ್ತನೆ ಸೇರದೆನಗೆ ॥
ಇಂತೊಳ್ಳಿತೇಕಾಂತದೊಳು ನಿನ್ನ ಕಂಡಾಗ । ಸಂತೋಷವೆಂದಳಾ ಜನನಿ ॥ ೬೪ ॥

ತುಂಬಿದ ಕೊಳದಂತೆ ಪಡೆಯಿರಲಾನೈಕ್ಯ । ದಿಂ ಬಪ್ಪೆನೆಂಬಾಗ ನಿನ್ನ ॥
ನಂಬುಗೆವಂತರು ಕಡುಧೂರ್ತರವರಿಷ್ಟು । ಡೊಂಬಿಮಾಡಿದರವರೊಡನೆ ॥ ೬೫ ॥

ದೇವ ಬಿನ್ನಹ ಚಿಕ್ಕಸ್ವಾಮಿ ದೂತರ ಮುಂದೆ । ದೇವರಿಗಟ್ಟುವೆನೆನಲು ॥
ತಾವು ಬೇಡೆಂದೆಯ್ದಿ ನಾವಿಂತು ಗೈದೆವೆಂ । ದಾ ವೀರಶೂರರಾಡಿದರು ॥ ೬೬ ॥

ಒಡೆಯನ್ನ ಜನನಿ ಚಿತ್ತೈಸಿದರೆಂದಿಷ್ಟು । ನುಡಿದೆವಷ್ಟರೊಳೆಮ್ಮ ಕಟಕಾ ॥
ಸಡಗರಗೊಂಡಿತೆಂದವರಾಡೆ ನೃಪ ಮೆಚ್ಚಿ । ತೊಡಿಗೆಯನಿತ್ತ ಮತ್ತವರ್ಗೆ ॥ ೬೭ ॥

ಒಳ್ಳಿತ ಗೈದಿರಿ ನೀವು ಹಾದಿಯೊಳಷ್ಟ । ಸೊಲ್ಲಿಸಲಿಷ್ಟರ್ತಿಯಾಯ್ತು ॥
ಇಲ್ಲದರವ್ವಾಜಿ ಗೂಢದೊಳೆಯ್ತಹ । ರಲ್ಲವೆ ಭಾಪೆಂದು ನಕ್ಕಾ ॥ ೬೮ ॥

ಆದುದವ್ವಾಜಿ ಸೂಚಿಸದೆ ನೀವೆಯ್ದಲೇ । ನಾದುದು ನಿಮ್ಮಬಳ್ಕೆಯನು ॥
ಮೇದಿನಿಯರಿಯದೆ ಪ್ರಕಟವ ಮಾಡಿತೆಂ । ದಾದರದೊಳು ನಕ್ಕು ನುಡಿದಾ ॥ ೬೯ ॥

ಪೊಡವಿಗಗ್ಗಳಿಯರು ಬಡವರಂದದಲಡಿ । ಯಿಡಲಾಗಿ ವಿಪರೀತದಿಂದ ॥
ನಡುಗಿತು ಧರೆ ಸೇನೆ ಕಲಕಿತು ನಾನಸಿ । ವಿಡಿದಿಲ್ಲಿಗೆಯ್ದಿದೆನೆಂದಾ ॥ ೭೦ ॥

ಸಾಕು ನಿನ್ನಯ ಬಲ್ಪ ಮಾಜಿಕೊಂಡೆನ್ನನೆ । ಲೋಕರಂಜನೆಮಾಳ್ಪೆಯೆಂದು ॥
ವ್ಯಾಕುಲಹಿಂಗಿದ ಮಗನ ಮ್ಬೆದಡವಿ ಮ । ತ್ತಾಕೆ ಸಂತೋಷವೆಯ್ದಿದಳು ॥ ೭೧ ॥

ಒಡನೆ ಕೈಲಾಗಿತ್ತು ಹೊರಗಣ ಪೌಳಿಯಿಂ । ನಡುವಣ ಪೌಳಿಗಂಬಿಕೆಯಾ ॥
ಅಡಿಯಿಡಿಸಿದನು ಚಿಕ್ಕಮ್ಮನ ಕ್ಷೇಮಗೇ । ಳ್ದೊಡಹುಟ್ಟಿದನ ಲೇಸ ಕೇಳ್ದು ॥ ೭೨ ॥

ನಡುವಣ ಚಾವಡಿಗೆಯ್ದಿ ಗದ್ದುಗೆಯಲ್ಲಿ । ಪಡೆದಳ ಬಿಜಯಂಗೈಸಿ ॥
ಎಡಬಲದಲಿ ಕುವರರು ತಾನು ನಿಂದು ಪೆಂ । ಪಿಡಿಸುತೋಲೈಸಿದರೊಸೆದು ॥ ೭೩ ॥

ಅತ್ತೆ ಬಂದುದ ಸೊಸೆಯರು ಕೇಳ್ದು ನವ್ಯಸಂ । ಪತ್ತು ಬಂದಂತರ್ತಿವಡುತ ॥
ಒತ್ತಿ ಬಂದರು ಮುಝು ಮನದ ಸಂತಸವೆಂತೊ । ತತ್ತರಗೊಂಡು ತಮ್ಮೊಳಗೆ ॥ ೭೪ ॥

ಸಡಿಲುವ ಮುಡಿಯ ಸಾಗಿಸದೆ ಸೇವಕಿಯರ । ತಡಹದೆ ಪತಿಗೆ ಶಂಕಿಸದೆ ॥
ನಡೆತರುತಿರ್ದರು ಸೊಕ್ಕಿದಾನೆಯ ಹಿಂಡ । ತಡೆಯ ಬಿಟ್ಟಂತೆ ಲಗ್ಗೆಯೊಳು ॥ ೭೫ ॥

ಅಂದುಗೆ ಝುಲ್ಲುಝುಲ್ಲೆನೆ ಬಳೆ ಕಂಕಣ । ಸಂದಿಸಿ ಝುಣಝುಣರೆನಲು ॥
ಕುಂದಣಗೆಜ್ಜೆನೇವಳ ಕಿಣಿಮಿಣಿಯೆನೆ । ಬಂದರು ನಲಿದು ರಾಣಿಯರು ॥ ೭೬ ॥

ತನುಕಾಂತಿ ಧಗಧಗಿಸಲು ದೇಹಗಂಧ ಕಂ । ಪಿನ ಹೊಳೆ ನೂಕಿದಂತಾಗೆ ॥
ಕನಕಲತೆಗಳೊಡ್ಡು ನಡೆದುಬಹಂತೆ ಸ । ಜ್ಜನಸತಿಯರು ಬಂದರೊಸೆದು ॥ ೭೭ ॥

ಗೆಲವಾಂತು ಸೊಸೆಯರೆಯ್ತರುತಿರಲತ್ತೆ ಕಂ । ಗಳುತುಂಬಿ ಕಂಡುಬ್ಬಿ ನಗುತ ॥
ಎಲೆಲೆ ನನ್ನನುಜರ ಸುತೆಯರು ಬಂದರೊ । ನಲವ ತಂದರೊಯೆಂದಳೆನಗೆ ॥ ೭೮ ॥

ಮೊಗವೆಲ್ಲ ನಗೆ ತನುವೆಲ್ಲ ಪುಳಕ ಕಣ್ಣೊ । ಳೊಗುವ ಬಾಷ್ಪಗಳಿಂದ ಸಾರಿ ॥
ದುಗುಲನಿವಾಳಿಯಿಟ್ಟತ್ತೆಯ ಪಜ್ಜೆಗೆ । ಬಗೆಮೆಚ್ಚಿ ನೊಸಲಿಟ್ಟರವರು ॥ ೭೯ ॥

ತರತರದೊಳು ಬಂದು ನಮಿಸುವ ಸೊಸೆಯರೆ । ಲ್ಲರ ನೋಡಿ ನಗುತಲಾ ದೇವಿ ॥
ಶಿರವಿಡಿದೆತ್ತಿ ಹರಸುತಿರ್ದಳು ಬಲು । ಪರಿಷೆಯ ದೇವತೆಯಂತೆ ॥ ೮೦ ॥

ವಂದನೆ ಮುಗಿದ ಮೇಲತ್ತೆಯಮ್ಮ ನಾವೆಲ್ಲ । ರಂದು ಕೈಕೊಂಡ ನೇಮಗಳು ॥
ಇಂದಿಗೆ ಸಂಪೂರ್ಣವೆಂದರು ಬಲುವ್ರತ । ಸಂದುವೆ ಲೇಸೆಂದಳಾಕೆ ॥ ೮೧ ॥

ಕಂಡಿರಾ ಅತ್ತೆಯಮ್ಮ ನಿಮ್ಮಲ್ಲಿ ವ್ರತವ ಕೈ । ಕೊಂಡು ನಾವೆಯ್ದಿದ ಫಲದಿ ॥
ಮುಂಡೆಗೆ ಮದ್ದನಿಕ್ಕದೆ ಬಂದೆವೆಂದರ್ತಿ । ಗೊಂಡು ನುಡಿದರು ಸೊಸೆಯರು ॥ ೮೨ ॥

ಏನಿವಕೈಗೊಂಡ ವ್ರತವೆಂದ ನೃಪತಿ ಪ್ರ । ಸೂನದೊಳುಂಬಮೃತದೊಳು ॥
ನಾನು ಬೇಡೆನಲವರಂತು ಕೇಳದೆ ತಾಳ್ದ । ರೇನೆಂಬೆನೆಂದಳಾ ಜನನಿ ॥ ೮೩ ॥

ಇವರಷ್ಟು ಭಕ್ತಿಯು ನನಗಿಲ್ಲದಾಯ್ತು ನೇ । ಮನ ಮಾಡಿತಿಲ್ಲೆಂದು ನೊಂದಾ ॥
ಆವರ ಭಕ್ತಿಯೆ ನಿನ್ನದಲ್ತೆ ನೋಯದಿರೆಂದು । ಕುವರನ ಸಂತವಿಸಿದಳು ॥ ೮೪ ॥

ಮುನ್ನಿನ ಸತಿಯರು ನಮಿಸಲೊಡನೆ ಹೊಸ । ಕನ್ನೆಯರ್ಬರುತಿದ್ದರಿವರು ॥
ನನ್ನನುಜರ ಸುತೆಯರೊಯೆಂದಳರಿದುದು । ಚೆನ್ನೆಂದರಿದ್ದ ಸೊಸೆಯರು ॥ ೮೫ ॥
ಉದ್ದಂಡರಾಜಪುತ್ರಿಯರು ಮುಂತಾದವ । ರಿದ್ದ ಖೇಚರರ ಪುತ್ರಿಯರು ॥
ಹೊದ್ದಿ ನಿವಾಳಿಯಿಟ್ಟೆರಗಿದರವರನು । ಮುದ್ದಿಂದ ಹರಸಿದಳಾಕೆ ॥ ೮೬ ॥
ಸೊಸೆಯರಾಕೆಗೆ ನಮಿಸಿದ ಮೇಲೆ ಸೊಸೆಯರ । ಸೊಸೆಯರು ನಮಿಸಿದರಾಗ ॥
ವಸುಧೇಶಚಕ್ರೇಶ ತಾಯೊಡನೊಂದ ಸಂ । ತಸವಾಂತು ನುಡಿದನೇನೆಂಬೆ ॥ ೮೭ ॥
ನಿಮ್ಮ ಸೊಸೆಯರ ನೀವಂದು ಹರಸಲಾಗಿ । ಸುಮ್ಮಾನದೊಳು ಬಾಳುತಹರೆ ॥
ನಮ್ಮ ಸೊಸೆಯರಿವರನು ನೋಡಿ ಹರಸಬೇ । ಕಮ್ಮಾಜಿಯೆಂದನರ್ತಿಯೊಳು ॥ ೮೮ ॥
ಅಹುದೆ ಕೇಳರಸಣ್ಣ ನಿನ್ನ ಸೊಸೆಯರೆನ್ನ । ಮಹಿಮೆಯ ಸೊಸೆಯರಂದದೊಳು ॥
ಬಹುಸುಖದೊಳು ಬಾಳಲೆಂದು ಹರಸಿ ಗಹ । ಗಹಿಸಿದಳ್ಬಿನದಕೆ ಮಗನ ॥ ೮೯ ॥

ಸರ್ವರು ಬಂದರೇಕಕ್ಕಾಜಿ ಬಾರಳೆಂ । ದುರ್ವಿ ಪೆಂಗಳು ನೋಡುವಾಗ ॥
ಸಾರ್ವಭೌಮನ ಪಟ್ಟದರಸಿಯಲ್ಲವೆ ಬಂದ । ಳುರ್ವಿಯ ಸಿರಿಯೆ ಬಹಂತೆ ॥ ೯೦ ॥
ಸಿಂಗರಿಸಿದ ಸತಿಯರ ಬಳಸಿನೊಳು ತ । ನ್ನಂಗಶೃಂಗಾರ ವೆಗ್ಗಳಿಸೆ ॥
ಅಂಗದ ಕಾಂತಿಯೊಳ್ಮಡುಗಟ್ಟಿ ತುಳುಕೆ ಲ । ತಾಂಗಿ ಬಂದಳು ವಿಲಾಸದೊಳು ॥ ೯೧ ॥
ತುಂಬುಜವ್ವನ ತುಂಬಿದಂಗ ಮತ್ತದರಲ್ಲಿ । ತುಂಬಿತುಳುಕುವ ಲಾವಣ್ಯ ॥
ತುಂಬಿದ ಗಾಡಿಯೊಳ್ಬರುತಿದ್ದ ಸೊಸೆಯ ಕ । ಣ್ತುಂಬ ನೋಡಿದಳತ್ತೆ ಕೂರ್ತು ॥ ೯೨ ॥
ಕಚ್ಛೇಂದ್ರಸುತೆ ಸುಭದ್ರಾದೇವಿ ಗುಣರತ್ನ । ಗುಚ್ಛದೊಳೆಸೆವ ಸ್ತ್ರೀರತ್ನ ॥
ಅಚ್ಛಾವಧಾನ ಸಾರ್ತಂದಳೆಂದರಿಪಿದ । ರಿಚ್ಛೆಯೊಳ್ಕಂಬಿಕಾತಿಯರು ॥ ೯೩ ॥
ನಿಲ್ಲಿರಾ ರಚ್ಚೆ ಸಾಕೆಂದು ಕೈಸನ್ನೆಯೊ । ಳ್ಮೆಲ್ಲನವರ ಸುಮ್ಮನಿರಿಸಿ ॥
ಸಲ್ಲಲಿತಾಂಗಿಯೆಯ್ದಿದಳು ಗಂಭೀರವ । ನೆಲ್ಲರ್ಗೆ ಕಲಿಸುವಂದದೊಳು ॥ ೯೪ ॥
ತಡವೇಕೆ ನಿಮಗಿಷ್ಟು ಹೊತ್ತಕ್ಕಯೆಂದಿಂಪ । ನುಡಿದರು ಸವತಿಯರದಕೆ ॥
ಕಡೆಯೊಳು ಬಂದವಳಾನು ನಿಮ್ಮೊಡನೆಯ್ದೆ । ಬೆಡಗೆಯೆಂದೊಯ್ಯನಾಡಿದಳು ॥ ೯೫ ॥
ತಂದೆಯೊಂದಾಗಿ ಹುಟ್ಟಿದಳಲ್ತೆ ತನ್ನಯ । ತಂದೆಯ ಕಂಡಂತೆ ನಲಿದು ॥
ಬಂದಳಾ ಸೊಸೆ ಸೊಸೆ ಬಪ್ಪಾಗ ತನ್ನಣ್ಣ । ಬಂದಪೊಲೊಸೆದಳಾ ದೇವಿ ॥ ೯೬ ॥
ಪಟ್ಟನಿವಾಳಿಯಿಟ್ಟೊಡನೊಂದುಹಾರವ । ನಿಟ್ಟು ನಿವಾಳಿಯ ಮೇಲೆ ॥
ತೊಟ್ಟನೆರಗಲತ್ತೆ ತೆಗೆದಪ್ಪಿಕೊಂಡರ್ತಿ । ವಟ್ಟು ಹರಸಿದಳಾ ಸೊಸೆಯಾ ॥ ೯೭ ॥

ಕಿರಿಯಂದು ನಿನ್ನ ಕಂಡಿರ್ದೆನಷ್ಟಕೆ ದೂರ । ಹೊರಸಾರಿ ಹೋದಿರಿ ನೀವು ॥
ನೆರೆದಂದು ನನ್ನ ಕಣ್ಣಾರ್ತಿ ಕೂಡಿದುದೆಂದು । ಮರುಕದೊಳ್ನುಡಿದಳಾ ದೇವಿ ॥ ೯೮ ॥
ಅಣ್ಣನ ಕಂಡಪೊಲಾಯ್ತೆಂದು ನುಡಿದಳು । ಹೆಣ್ಣಾದುದಿಬ್ಬರ ಹೃದಯಮ ॥
ಕಣ್ಣೊಳಿಬ್ಬರಿಗುಕ್ಕುವಶ್ರು ಸೋದರಿಕೆಯ । ಬಿಣ್ಣಿತೆನಿಪ ಮೋಹವಲ್ಲಿ ॥ ೯೯ ॥
ಘಳಿಯೂರದೊಳಗಷ್ಟರೊಳು ಶಂಖನಾದವು । ಚ್ಚಳಿಸಿತಾರೋಗಣೆಗಿನ್ನು ॥
ತಳರ್ವುದುತ್ತಮವೆಂದು ಚಕ್ರೇಶ ತನ್ನಮ್ಮ । ಗೆಳಸಿ ಬಿನ್ನವಿಸಿದನೊಡನೆ ॥ ೧೦೦ ॥
ಊಳಿಗವೆಂಗಳ ಮೊತ್ತವೆಯ್ತಂದು ನಿ । ವಾಳಿಯಿಟ್ಟೊಡನೆರಗಿದುದು ॥
ಹೇಳಲಳವೆ ಮರ್ಘು ಸರ್ವರಾನಂದದೊ । ಳೋಲಾಡಿದರು ತವತವಗೆ ॥ ೧೦೧ ॥
ಮಗಗೆ ಮೊಮ್ಮಕ್ಕಳಿಗಾ ದೇವಿ ಕೈಮುಟ್ಟಿ । ತೆಗೆದುಡತೊಡಲಿತ್ತರವರು ॥
ನಗುತೆರಳ್ಕೈಯೊಡ್ಡಿ ಕೈಕೊಂಡು ಕಣ್ಗೊತ್ತಿ । ಪೊಗಳ್ದರು ಸುಖಿಯಾದೆವೆಂದು ॥ ೧೦೨ ॥
ಸೊಸೆಯರ್ಗೆ ಸೊಸೆಯರ ಸೊಸೆಯರ್ಗೆ ಕಜ್ಜವೆ । ಣ್ಪಸರಕೆ ತೊಡಲುಡಲೀಯೆ ॥
ಒಸೆದಾಂತು ಕಣ್ಗೊತ್ತಿಕೊಂಡರೆಲ್ಲರಿಗೊಂದು । ಹೊಸಹಬ್ಬ ಬಂದಪೊಲಾಯ್ತು ॥ ೧೦೩ ॥
ಚಾವಡಿಯಿಂದೆದ್ದು ಸರ್ವರು ಬೇರೆ ಬೇ । ರಾವಾಸಗಳ ಹೊಕ್ಕು ಮಿಂದು ॥
ದೇವಪೂಜೆಯ ಮಾಡಿ ಭೋಜನಗೃಹಕೆ ಮ । ಹಾವಿಭವದಿ ಹೊಕ್ಕರೊಡನೆ ॥ ೧೦೪ ॥
ಭೋಜನಶಾಲೆಯೊಳುಯ್ಯಲ ಮೇಲಭಿ । ರಾಜಿಪ ಗದ್ದುಗೆಯಲ್ಲಿ ॥
ಆ ಜಗನ್ಮಾತೆಯಿದ್ದಳು ತನ್ನ ಸೊಸೆಯರ । ಪೌಜೆಲ್ಲ ಸಾಗಿ ಬಪ್ಪನೆಗ ॥ ೧೦೫ ॥
ಬಂದರೆಲ್ಲರು ಕೂಡೆ ತಾಯ ಪೂಜಿಪೆನೆಂದು । ಮುಂದಿಪ್ಪ ದೂರದಿ ಚಕ್ರಿ ॥
ತಂದು ಸಿಂಹಾಸನವಿಡಿಸಿದನಲ್ಲಿಗೊ । ಲ್ಪಿಂದ ಚಿತ್ತೈಸಬೇಕೆಂದಾ ॥ ೧೦೬ ॥
ಅಂದೊಮ್ಮೆ ಪರ್ವೋಪವಾಸದ ನೆವದಿಂದ । ಸಂದಿಸೆ ಪೂಜೆಗೊಪ್ಪಿದೆನು ॥
ಇಂದೊಲ್ಲೆ ನನಗೇಕೆ ಪೂಜೆ ಸುಮ್ಮನಿರೆಂದು । ನಂದನಗೊರೆದಳಾ ಜನನಿ ॥ ೧೦೭ ॥
ಇನ್ನೊಮ್ಮೆ ಸಲಿಸಿ ನನ್ನಾರ್ತಿಯ ಚಿತ್ತೈಸಿ । ಹೊನ್ನ ಸಿಂಹಾಸನಕೆಂದಾ ॥
ಚೆನ್ನಲ್ಲ ನಾನೊಲ್ಲೆನೆಂದಾಕೆಯೇಳದೆ । ಬಿನ್ನಾಣವಡೆದಿದ್ದಳಲ್ಲಿ ॥ ೧೦೮ ॥
ಹೇಳು ದೊಡ್ಡಣ್ಣ ನೀನಿದಕೆ ತಂತ್ರವನೆಂದ । ಕೇಳದಂತರ್ಕಕೀರ್ತಿಯನು ॥
ಮೇಲಿದ್ದ ಗದ್ದುಗೆವಿಡಿದೆತ್ತಿ ತಹೆನೆಂದು । ಹೇಳಿದನವನು ಕರ್ಣದೊಳು ॥ ೧೦೯ ॥
ಅವನ ಬಿಟ್ಟಾದಿರಾಜನ ಕೇಳ್ದನಲ್ಲಿಯೆ । ಸುವಿಧಾನದೊಳಗಜ್ಜಿಯಿರಲಿ ॥
ಪ್ರವರಪೂಜೆಯ ಮುಂದೆ ಮಾಳ್ಪವೆಂದಯ್ಯನ । ಕಿವಿಯೊಳು ಪೇಳ್ದನಾ ಕುವರಾ ॥ ೧೧೦ ॥
ಮಿಕ್ಕ ಪುತ್ರರೊಳೆಡೆಗವಮ್ಮಾಜಿಯನು ತಹು । ದಕ್ಕೇನು ತಂತ್ರವೈಯೆಂದು ॥
ಸಕ್ಕರೆ ಸವಿನುಡಿಕಾರನು ಗೂಢವಾ । ಗಿಕ್ಕಡೆ ಕೇಳ್ದ ಕರ್ಣದೊಳು ॥ ೧೧೧ ॥

ದೇವರಣ್ಣಾಜಿಯರರಿದ ತಂತ್ರಗಳಿಂದ । ನಾವೊಂದ ಬಲ್ಲೆವೆ ಹೆಚ್ಚಾ ॥
ನೀವು ಕಂಡುದೆ ಕಾಣ್ಕೆಯೆಂದು ಕೈಮುಗಿದುಕ । ಲಾವಿದರಿದ್ದರೊಪ್ಪದೊಳು ॥ ೧೧೨ ॥
ದೊಡ್ಡಣ್ಣ ಚಿಕ್ಕಣ್ಣ ನಿಮ್ಮ ತಂತ್ರಗಳವು । ದೊಡ್ಡವಹುದು ತಂತ್ರಗಳಿಗೆ ॥
ಸಡ್ಡಲ್ಲವಿನ್ನೊಂದು ಮಂತ್ರವುಂಟಿದ ನೋಡಿ । ರೆಡ್ಡ ಕಜ್ಜವ ಮಾಳ್ಪೆನೆಂದಾ ॥ ೧೧೩ ॥
ತಂತ್ರ ವ್ಯೆಯಾಡಿ ಮಾಡುವ ಕಾರ್ಯ ತುಟಿಯಾಡಿ । ಮಂತ್ರವ ಮಾಳ್ಪುದು ಸದರಾ ॥
ಮಂತ್ರವಿದ್ದೇಕೆ ತಂತ್ರದ ರಚ್ಚೆ ನೋಡಿರೈ । ಮಂತ್ರದ ಸಾಮರ್ಥ್ಯವೆಂದಾ ॥ ೧೧೪ ॥
ಏಳಿ ಪೂಜಾಸನಕಮ್ಮಾಜಿಯೆಂದನು । ಹೇಳಬೇಡೆಂದಳಾ ಮಾತಾ ॥
ಹೇಳುವುದಿಲ್ಲೊಂದು ಮಂತ್ರಶಕ್ತಿಯ ನೀವು । ಲಾಲಿಸಬೇಡವೆಯೆಂದಾ ॥ ೧೧೫ ॥
ಓಂ ಮಹಾಹಂಸನಾಥಾಯ ನಮಃ ಸ್ವಾಹಾ । ಅಮ್ಮಾಜಿಯೇಳಿಯೇಳದಿರೆ ॥
ನಿಮ್ಮಯ ಭರತಣ್ಣನಾಣೆ ಸ್ವಾಹಾಯೆಂದ । ಜುಮ್ಮನಿಳಿದು ನಿಂದಳಾಕೆ ॥ ೧೧೬ ॥
ಪಣ್ಣಪಣ್ಣನೆ ನಡೆಯದಿರೆ ನಿಮ್ಮಯ ಚಕ್ರ । ದಣ್ಣನಾಣೆ ಸ್ವಾಹಾಯೆಂದಾ ॥
ಅಣ್ಣ ಬಿಡಾಣೆಯನೆನುತಾಕೆ ನಡೆದಳು । ಹೆಣ್ಣುಗಳ್ನಗೆ ತಾನು ನಗುತ ॥ ೧೧೭ ॥
ನೀವು ಪೇಳ್ವರಸಣ್ಣನಾಣೆ ಸ್ವಾಹಾ ವಿಷ್ಟ । ರಾವಲಂಬನವೇರಿರೆಂದಾ ॥
ಭಾವೆಯರೆಲ್ಲರು ನಗುತ ಕೈಮುಗಿಯಲಾ । ದೇವಿ ಕುಳಿತಳೇರಿ ಮಣೆಯಾ ॥ ೧೧೮ ॥
ನಿಮ್ಮ ದೊಡ್ಡಣ್ಣನಾಣೆವ್ಮ ದೊಡ್ಡಣ್ಣನಾ । ಣೆಮ್ಮಯ ಚಿಕ್ಕಣ್ಣನಾಣೆ ॥
ನಿಮ್ಮಯ ಚಿಕ್ಕಣ್ಣನಾಣೆ ಸ್ವಸ್ಥದೊಳಿರಿ । ಅಮ್ಮ ಸ್ವಾಹಾಂತಯೆಂದಾ ॥ ೧೧೯ ॥
ಭರತೇಶಭುಜಬಲಿಗಳನಾಕೆ ವಿನಯದಿ । ಕರೆವ ಮಾತುಗಳವು ಮತ್ತೆ ॥
ಭರತೇಶ ತಾನರ್ಕಕೀರ್ತ್ಯಾದಿರಾಜರ । ಕರೆವ ಮಾತುಗಳು ಸ್ವಲ್ಪಗಳೆ ॥ ೧೨೦ ॥
ಘೊಳ್ಳನೆಲ್ಲರು ನಗುತಿದ್ದರು ಮಗನೆ ನೀ । ನೊಳ್ಳಿತ ಕಲಿತೆ ಮಂತ್ರವನು ॥
ಇಲ್ಲವಿನ್ನಾಣೆಯು ನನ್ನಾಣೆಯೆನಲಾಣೆ । ಯಿಲ್ಲಿಲ್ಲ ಸ್ವಾಹಾಹಿಯೆಂದಾ ॥ ೧೨೧ ॥
ಕಂಡೆಯ ದೊಡ್ಡಣ್ಣ ಮಂತ್ರಶಕ್ತಿಯನೆಂದ । ಕಂಡೆನಚ್ಚರಿ ಸ್ವಾಮಿಯೆಂದು ॥
ಕೊಂಡಾಡಿ ಹೊದೆದ ದೂವಟವ ನಿವಾಳಿಸಿ । ದಿಂಡುಗೆಡೆದನವ ನಗುತ ॥ ೧೨೨ ॥
ಆದಿರಾಜನು ಮೊದಲಾದ ಕುವರರೆಲ್ಲ । ರಾದಿನ ಹೊದೆದ ವಸ್ತ್ರಗಳಾ ॥
ಆದರದಿಂದಯ್ಯಗಿಟ್ಟು ನಿವಾಳಿಯ । ಪಾದಕೆರಗಿದರರ್ತಿಯೊಳು ॥ ೧೨೩ ॥
ಅಣ್ಣಂದಿರನು ನೋಡಿ ಗುಣರಾಜನೆಂಬೊರ್ವ । ಚಿಣ್ಣ ತಾ ತೊಟ್ಟ ಕುಪ್ಪಸವಾ ॥
ಕಣ್ಣಾರೆ ತೆಗೆದಿಟ್ಟು ಮಣಿದನಯ್ಯನಿಗಿದೇ । ನಣ್ಣ ಯೆಂದಪ್ಪಿದನಯ್ಯಾ ॥ ೧೨೪ ॥
ಬರುವೆಯೊಳಿರುತಿರ್ದ ಗುರುರಾಜನೆಂಬೊಂದು । ಕಿರುಗೂಸು ದಾದಿಯ ಕೈಯ ॥
ಮಿರುಪಂಗದಟ್ಟ ವಸ್ತ್ರವ ಸೆಳೆದಿಟ್ಟು ಕಾ । ಲ್ಗೆರಗಿತೆಲ್ಲರು ಚೋದ್ಯಬಡಲು ॥ ೧೨೫ ॥

ನಲಿದಾಡುತೆಯ್ತಂದು ಸಖರಾಜನೆಂಬುದೊಂ । ದೆಳೆಗೂಸು ಕೈಯೊಳು ಪಿಡಿದು ॥
ಗಿಲಿಕೆಯ ಕೋಲನಿತ್ತಯ್ಯಗೆರಗಿತಿದು । ಬಲಿಕೆಯ ನೆಚ್ಚಳ್ಳೆಯೆಂದಾ ॥ ೧೨೬ ॥
ತೊಳವೆದ್ದಂತೆಯ್ದಿ ಸುಖರಾಜನೆಂಬೊಬ್ಬ । ಬಾಲಕ ತಾ ನೆಲುತಿದ್ದಾ ॥
ಬಾಳೆಯ ಹಣ್ಣ ಕೊಟ್ಟಯ್ಯಗೆರಗಲಿದು । ಸಾಲದೆ ಪುರೆಯೆಂದರೆಲ್ಲ ॥ ೧೨೭ ॥
ತರಳರೆರಗಿದಂದವೇನೆಂದು ಪೆಂಡಿರ । ಭರತೇಶ ಕೇಳ್ದ ನಾವದರ ॥
ಪರಿಯನರಿಯೆವೆಂದರಹುದೆ ನಿಮ್ಮತ್ತ್ಯೆಮ್ಮ । ನರುಣಾಂಘ್ರಿಯಾಣೆಯೆಯೆಂದಾ ॥ ೧೨೮ ॥
ಆಣೆಯೇಕಯ್ಯಗೆ ಸುತರೆರಗರೆಯೆಂದು । ರಾಣಿಯರೊಯ್ಯನಾಡಿದರು ॥
ಕೇಣಾತಿವರು ನಿವಾಳಿಸುವ ಪ್ರಾಯವೆ ಚಿಕ್ಕ । ಮಾಣಿಗಳರಿವೇನಿದೆಂದಾ ॥ ೧೨೯ ॥
ದೊಡ್ಡಣ್ಣನೆರಗೆ ಚಿಕ್ಕಣ್ಣ ಮುಂತಾದವ । ರಡ್ಡಬಿದ್ದರು ನಿವಾಳಿಸುತ ॥
ಹೆಡ್ಡರಲ್ಲದ ಕಂಡು ನಮಿಸಿದರಿವರಿದು । ದೊಡ್ಡಣ್ಣನೊಳ್ಪೆಂದರವರು ॥ ೧೩೦ ॥
ಅದು ಹುಸಿ ನಿಮ್ಮ ದೊಡ್ಡಣ್ಣನ ನಡೆಗೆ ಬೀ । ಗಿದಿರಿ ನೀವಾನೊಪ್ಪೆನೆಂದಾ ॥
ಚದುರಮಗನೆ ನಿನ್ನ ಸುತರು ನಿನ್ನಂತೆಂದು । ಪದೆದಾಡಿದಳು ರಾಜಜನನಿ ॥ ೧೩೧ ॥
ತಮ್ಮ ದೊಡ್ಡಣ್ಣನನವರು ಕೀರ್ತಿಸೆ ನೀವು । ನಿಮ್ಮ ದೊಡ್ಡಣ್ಣನ ಪೊಗಳೆ ॥
ನಮ್ಮ ಚಿತ್ತಕೆ ಬಾರದಿವರೋಜೆ ಭರತಾಂಕ । ನಮ್ಮಾಜಿಯತಿಶಯವೆಂದಾ ॥ ೧೩೨ ॥
ತಪ್ಪದಂತಹುದಹುದೆಂದು ರಾಣಿಯರೆಲ್ಲ । ರೊಪ್ಪಿದರಣುಗರೊಪ್ಪಿದರು ॥
ದುಪ್ಪಟಿಗಳನೆಲ್ಲ ಸುತರ್ಗೆ ತರಿಸಿಕೊಟ್ಟ । ನೊಪ್ಪದಿ ಹೋದರಂತವರು ॥ ೧೩೩ ॥
ಏಕಾಂತವೆಂತು ನೀವಿಂತು ವಿನೋದದ । ನಾಕನೆಸಗಲಿದು ಹಬ್ಬಿ ॥
ಲೋಕಾಂತವಾಗುತದಿದು ಬೇಡ ಮಗನೆಯೆಂ । ದಾಕೆ ಮತ್ತೋಜೆವೇಳಿದಳು ॥ ೧೩೪ ॥
ತಾಯ ಮುಂದಾನೊಂದು ಶಿಶುವಲ್ಲದಾನೊಬ್ಬ । ರಾಯನೆ ಆದರಿಂದ ನನಗೆ ॥
ನ್ಯಾಯವಿಲ್ಲಿಯೆ ಮಕ್ಕಳಾಟಿಕೆ ಮಿಕ್ಕಲ್ಲಿ । ತಾಯೆ ಗುರುತ್ವ ಕೇಳೆಂದಾ ॥ ೧೩೫ ॥
ಮಂತ್ರದಿಂ ತಹೆನೆಂಬುದೇಕಾಣೆಯಿಷ್ಟು ಸ್ವ । ತಂತ್ರಸುತಿದೆಯೆಂದಳಾಕೆ ॥
ಮಂತ್ರ ಸಾಮರ್ಥ್ಯ ತಾನಿಲ್ಲವೆ ನೋಳ್ಪರೆ । ಸಂತ್ರಾಸಗೊಳಿಪೆ ನಾನೆಂದಾ ॥ ೧೩೬ ॥
ಸಾಲಾಗಿ ನಿಲ್ಲಿರೌ ನೂರ್ವರುಪೆಂಗಳೆಂ । ದೂಳಿಗವೆಂಗಳ ನಿಲಿಸಿ ॥
ನಾಲಗೆ ಮಿಡುಕಿದ ಗೃಹದ ಮೇಲಕೆ ಹೋಗಿ । ಸಾಲಾಗಿ ಕುಳಿತಿದ್ದರವರು ॥ ೧೩೭ ॥
ಮನೆಯ ಮೇಲಿದ್ದ ಪೆಂಗಳಿಗೆ ಮಂತ್ರಿಸಲೊಳ । ಮನೆಗವರ್ಬಂದೆಂದಿನಂತೆ ॥
ಅನುವಡೆದಿದ್ದರಂತದ ನೋಡಿ ಜನನಿಯು । ವನಿತೆಯರ್ಬೆರಗಾದರೆಲ್ಲ ॥ ೧೩೮ ॥
ಧರೆಯನತ್ತಿತ್ತ ಮಾಡುವ ಮಂತ್ರವುಂಟು ಶ್ರೀ । ಗುರುಹಂಸನಾಥಾರ್ಥಿ ನಾನು ॥
ಬರಲಮ್ಮವೆನ್ನ ಮಂತ್ರಗಳು ನಿಮ್ಮೊತ್ತಿಗೆ । ಬರಿಸಿದೆನಾಣೆಯಿಟ್ಟೆಂದಾ ॥ ೧೩೯ ॥

ನಗುವರಾರಾನೊಂದು ಬಿನದವ ಮಾಡಲ್ಕೆ । ಮೊಗಗಳು ಡೊಂಕುವವದನು ॥
ಬಗೆವುದೆಂದೊಡನೆ ಮಂತ್ರಿಸಿದನು ಸೂರ್ವರ । ಮೊಗವುಡುಗಿದ್ದುವಾ ಕ್ಷಣವೆ ॥ ೧೪೦ ॥
ಕೂಡೆ ಮಂತ್ರಿಸಲವು ನೇರವಾಗಿದ್ದುವಾ । ಗಾಡಿಗಚ್ಚರಿವಟ್ಟರೆಲ್ಲ ॥
ನಾಡ ವ್ಯಂತರರೆಲ್ಲರವನ ಸೇವಕರೇನ । ಮಾಡನಾ ಧ್ಯಾನವಿಜ್ಞಾನಿ ॥ ೧೪೧ ॥
ವರಮಂತ್ರಶಕ್ತಿಯ ತೋರುತಿದ್ದೊಡನೊಂದು । ಸರಸವ ನೆನೆದು ಮಂತ್ರಿಸಿದಾ ॥
ನೆರವಿಯೊಳಿಹ ಮಧುವಾಣಿಯ ಮೋರೆ ಚ । ಚ್ಚರದಿ ಡೊಂಕಿತು ನಕ್ಕರೆಲ್ಲ ॥ ೧೪೨ ॥
ಇದ್ದವರೆಲ್ಲರ ಮುಂದೆ ನಾಣ್ಚುತ ಬಂದು । ಬಿದ್ದಳು ಕಾಲ ಮೇಲವಳು ॥
ಎದ್ದು ನಿಲ್ಲೆಂದಿನಂತಾದುದಾ ಮೊಗವೆಂದ । ನೆದ್ದಳಾ ಮೊಗ ನೇರವಾಯ್ತು ॥ ೧೪೩ ॥
ಮರೆದೆಯ ಧಾರೆಯನೆರೆವಾಗ ಕೈಯೊಡ್ಡ । ಲುರೆ ಡೊಂಕ ನುಡಿದೆ ನೀನೆನಗೆ ॥
ಉರುಗಿತಾ ಫಲದಿಂದ ನಿನ್ನಯ ಮೊಗವಿದ । ನರಿದಿನ್ನು ನವಗಳ್ಕಿರೆಂದಾ ॥ ೧೪೪ ॥
ಅಂದು ನುಡಿದರೇನು ಮತ್ತೆ ನಿಮ್ಮತ್ತೆಗೆ । ವಂದಿಸಿದಾಗಾನು ನಿನ್ನ ॥
ಚಂದದಿ ಪೊಗಳ್ದೆನಲ್ಲವೆ ಸರ್ವರಿದಿರೊಳೀ । ಯಂದಗ್ಯೆವರೆಯೆಂದಳವಳು ॥ ೧೪೫ ॥
ಮೊದಲು ಡೊಂಕಿನ ಮಾತನಾಡಿದ ಫಲದಿಂದ । ವದನ ಡೊಂಕಿತು ಮತ್ತೆ ಪೊಗಳ್ದ ॥
ಪದುಳವ ನೆನೆದು ತಿದ್ದಿದೆನು ಮೋರೆಯನೆಂದು । ಚದುರರ ದೇವನಾಡಿದನು ॥ ೧೪೬ ॥
ಘನಮಂತ್ರದಿಂದ ನೀನೆನಗೆ ಮಂತ್ರವ ಮಾಡ । ಲಿನಿತರೊಳೇನಾಯ್ತು ಮುಂದೆ ॥
ನಿನಗೆ ಹರುವ ಹೇಳತಕ್ಕೊಂದು ದೇವತೆ । ನನಗುಂಟು ತಾಳೆಂದಳವಳು ॥ ೧೪೭ ॥
ವೇಳೆಯಲ್ಲಿದು ಸ್ಯೆರಿಸದಕೆ ತಕ್ಕದ ಮುಂದೆ । ಪೇಳಿಪೆನೆಂದನಪ್ಪರೊಳು ॥
ಮೇಲುರನ್ನದ ತೊಡಿಗೆಯನಿತ್ತು ನೋಯದಿರ್ । ಬಾಲೆಯೆಂದೊಡನೆ ಮನ್ನಿಸಿದಾ ॥ ೧೪೮ ॥
ಸರ್ವಚಿಂತೆಯ ಬಿಟ್ಟು ಮತ್ತೆ ಮಾತೆಯ ಭಕ್ತಿ । ಪೂರ್ವಕದಿಂದ ಪೂಜಿಸಿದಾ ॥
ಸರ್ವರಾಣಿಯರೊಲಿದಾರತಿಯೆತ್ತಿದ । ರುರ್ವೀಶನದ ನೋಡಿ ನಲಿದಾ ॥ ೧೪೯ ॥
ಸಲಿಲ ಗಂಧಾಕ್ಷತೆ ಪುಷ್ಪಾನ್ನ ದೀಪ ಗು । ಗ್ಗುಳ ಫಲತತಿಯಿಂದ ತಾಯಾ ॥
ನಲಿದು ಪುತ್ರರುಗೂಡಿ ಪೂಜಿಸಿ ನಮಿಸಿದ । ಕುಲಪುತ್ರರೋಜೆಯದಲ್ತೆ ॥ ೧೫೦ ॥
ಪೂಜೆಯ ತೊಲಗಿಸಿ ಮಂಗಲಾಸನದಿ ಮ । ತ್ತೋಜೆಯೊಳೆಲ್ಲರು ಕುಳಿತು ॥
ಭೋಜನಗ್ಯೆದರೆಂದಾಡಿ ಬಿಡುವೆನಿನ್ನು । ಗಾಜುಗೋಜಿನ ನುಡಿಯೇನು ॥ ೧೫೧ ॥
ಭರತಚಕ್ರೇಶನ ಮನೆಯೂಟವೆಂಬುದು । ಸುರಲೋಕದೌತಣದಂತೆ ॥
ವಿರಚಿಸೆ ಜೋಲಿಯಪ್ಪುದು ತೃಪ್ತರಾದರೆಂ । ದೊರೆವೆನಪ್ಪರೊಳೆಲ್ಲವಡಕ ॥ ೧೫೨ ॥
ಬಿನದದೊಳೆಲ್ಲರು ತಣಿದಿದ್ದರೊಡನೆ ಭೋ । ಜನದಲ್ಲಿ ತಣಿದರು ಮತ್ತೆ ॥
ಅನುರಾಗದಿಂದ ಕೈದೊಳೆದರೆಲ್ಲರು ಮರ್ಝು । ಜನನಿಯೆಯ್ತಂದೊಂದುಸಿರಿಯೆ ॥ ೧೫೩ ॥

ಇಂಬಿಂದ ಪುತ್ರಪೌತ್ರರು ಸೊಸೆಯರ್ಕಳು । ತುಂಬಿ ಮತ್ತವರ ಸೊಸೆಯರು ॥
ಅಂಬಿಕೆಯೊಡನೆ ಪಂತಿಯೊಳುಂಡು ತಣಿದರಿ । **ದಂಬಿಕಾದರ್ಶನಸಂಧಿ** ॥ ೧೫೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೫೫ ॥

ಪ್ರೇಮದಿಂದಿದನೋದಿದರಿ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೫೬ ॥

ಮಾತುಮಾತಿಗೆ ದಿನದಿನಕೆ ಕ್ಷಣಕೆ ನವ್ಯ । ನೂತನಭಾವವ ತೋರ್ಪ ॥
ಸಾತಿಶಯಾತ್ಮ ನನ್ನೆದೆಯೊಳಿರವ್ಯತನಿ । ಕೇತಾ ಚಿದಂಬರಪುರುಷಾ ॥ ೧೫೭ ॥

---

ಅಂಬಿಕಾದರ್ಶನಸಂಧಿ ಸಂಪೂರ್ಣಂ

---

## ಕಾಮದೇವಾಸ್ಥಾನಸಂಧಿ.

ತಾಯಿಲ್ಲ ತಂದೆಯಿಲ್ಲಂತ್ಯವಿಲ್ಲಾದಿಯಿ । ಲ್ಲಾ ಯಾಸವಿನಿತಿಲ್ಲದಭವಾ ॥
ದಾಯದೋರಿನಗೆ ಸನ್ನುತಿಯನು ನಿರಘ ನಿ । ರ್ವಾಯಾ ನಿರಂಜನಸಿದ್ಧಾ ॥ ೧ ॥

ಜನನಿಯು ಕಂಡು ಸಂತಸವ ತಾಳ್ದಾ ಮರು । ದಿನದೊಳು ಭೇರಿ ಸೂಳೈಸೆ ॥
ಜನನಾಥ ದಂಡೆತ್ತಿ ನಡೆದನು ಧರೆಯು ತೆ । ಕ್ಕನೆ ತನ್ನ ಪಡೆ ತುಂಬಿ ನಡೆಯೆ ॥ ೨ ॥
ಸೇನೆಯೆಲ್ಲರ ಮುಂದೆ ಚಂದ್ರಸೂರ್ಯಧ್ವಜ । ಚೀನಪತಾಕೆಯೊಗ್ಗಿನೊಳು ॥
ಭಾನುಮಂಡಲ ನಡೆವೊಲು ಚಕ್ರರತ್ನಪ್ರ । ಭಾನು ಲೀಲೆಯೊಳೆಯ್ದುತಿಹುದು ॥ ೩ ॥
ಹತ್ತೆಂಟುಪಯಣವ ಬಂದು ಪೌದನಪುರ । ದತ್ತ ಸಾರ್ದಲ್ಲಿಂದ ಮುಂದೆ ॥
ಎತ್ತಿ ನಡೆವೆನೆನೆ ನಿಂದುದು ನಡೆಯದ । ತ್ತಿತ್ತೊಲೆಯದೆ ಚಕ್ರರತ್ನಾ ॥ ೪ ॥
ಚಕ್ರಿಗೆರಗಿದವರುರ್ವಿಯೊಳ್ನಡೆವುದು । ವಕ್ರಿಸಿದವರ ಸೀಮೆಯೊಳು ॥
ಚಕ್ರ ಪೋಗದೆ ನಿಲ್ವುದಾ ಚಕ್ರ ನಿಲೆ ಸೇನಾ । ಚಕ್ರ ವಿಸ್ಮಯಬಟ್ಟುದೆಲ್ಲ ॥ ೫ ॥
ಏನು ಕಾರಣ ನಿಂದಿತ್ತೈ ಚಕ್ರವೆಂದು ಪ್ರ । ಧಾನಿಯ ಕೇಳ್ದನಾ ಚಕ್ರಿ ॥
ಮೀನಾಂಕ ಮೊದಲಾದ ನಿನ್ನ ಸೋದರರು ಬಂ । ದಾನತರಾಗಬೇಕೆಂದಾ ॥ ೬ ॥
ಬಿಡಿಸಿದನಲ್ಲಿ ಪಾಯ್ದುಳವ ಲೇಖನವ ತ । ನ್ನೊಡಹುಟ್ಟಿದವರಿಂಗಟ್ಟಿದನು ॥
ಕಡೆಗವರೆಲ್ಲರಾ ಲೇಖನಾರ್ಥವನೋದಿ । ಪೊಡವಿಯಾಸೆಯ ಬಿಟ್ಟರೊಡನೆ ॥ ೭ ॥
ತಂದೆ ಕೊಟ್ಟುಂಬಳಿಯೊಳಗಿರ್ದು ತನಗಿನ್ನು । ವಂದಿಸಿ ಬಾಳ್ವೆವೆಯೆಂದು ॥
ಒಂದನು ನುಡಿಯದೆ ಕೈಲಾಸಗಿರಿಗೆಯ್ದಿ । ತಂದೆಯೊಳ್ತಪದಾಳ್ದರವರು ॥ ೮ ॥
ಕುಡುವಿಲ್ಲ ಪೊರಗಾಗಿ ತೊಂಭತ್ತಮೂವರು । ನಡೆದು ದೀಕ್ಷೆಯ ಕೊಂಡರೆಂಬ ॥
ನುಡಿಗೇಳ್ದು ಚಕ್ರೇಶ ಮನದೊಳು ಮರುಗಿದ । ನೊಡನೆ ವಿಕ್ರಮಕೆ ಮೆಚ್ಚಿದನು ॥ ೯ ॥

ಎಲ್ಲರಿಂಗೋಲೆಯ ಕಳುಹಿದ್ದನಾವೋಲೆ । ಯಲ್ಲಿ ಬಂದೆರಗುವುದೆಂಬ ॥
ಸೊಲ್ಲಿರೆ ನೊಂದವರ್ತಪಸುದಾಳ್ದರು ಕಬ್ಬು । ವಿಲ್ಲಗಂತೋಲೆ ಹೋಯ್ತಿಲ್ಲ ॥ ೧೦ ॥
ಈಕ್ಷಿಸಿ ಸಖರೆಲ್ಲರನುಮತದಿಂದೊಬ್ಬ । ದಕ್ಷಿಣಾಂಕನ ಚಕ್ರಿ ಕರೆದು ॥
ಇಕ್ಷುಚಾಪನ ತಹುದೆಂದಟ್ಟಲವ ಹೋಗಿ । ಸುಕ್ಷೇಮದೊಳು ಹೊಕ್ಕ ಪುರವಾ ॥ ೧೧ ॥
ಪೊಳಲಲ್ಲಿ ಕಿರಿದೆಡೆಗೆಯ್ದಿ ಪಲ್ಲಕ್ಕಿಯಿಂ । ದಿಳಿದು ಚಮ್ಮಾವುಗೆಮೆಟ್ಟಿ ॥
ತಳೆ ಗಿಂಡಿ ಚಾಮರ ವಾದ್ಯ ಮುಂತಾದಾತ್ಮ । ಬಲದ ಸಂಪದದೊಳೆಯ್ದಿದನು ॥ ೧೨ ॥
ಓದುವಕ್ಕರಿಗರ್ಗೆ ಪಾಡುವ ಗಾಯಕ । ರ್ಗಾದರದಿಂ ಮೆಚ್ಚುಗೊಡುತ ॥
ಆದಿಚಕ್ರಿಯ ಸಖನಲ್ಲವೆ ಬರುತಿರ್ದ । ಮೇದಿನಿ ಪೊಗಳ್ವ ಭಾಗ್ಯದೊಳು ॥ ೧೩ ॥

ಈಕ್ಷಿಪ ನಗುವ ನುಡಿವ ಕೊಡುವೆಡೆಯೊಳು । ಲಕ್ಷಣಜನವ ಮೋಹಿಸುತ ॥
ದಕ್ಷಿಣನಾಯಕನಲ್ಲವೆ ಬರುತಿರ್ದ । ದಕ್ಷಿಣಾನಿಲನೆ ಬಹಂತೆ ॥ ೧೪ ॥
ಇಕ್ಕಿದಾಭರಣದ ಕಾಂತಿ ಸಿಂಗರಿಸಿದ । ಚೊಕ್ಕ ನುಡಿಯದೊಂದು ಬಿಂಕಾ ॥
ದಿಕ್ಕನೊಯ್ಯೊಯ್ಯನೆ ಮುರಿದು ನೋಡುತ ಪಜ್ಜೆ । ಯಿಕ್ಕುತಿರ್ದನು ವಿಡಾಯದೊಳು॥ ೧೫ ॥

ವಾದ್ಯವನೊಂದಿಷ್ಟು ದೂರದಿ ನಿಲಿಸಿ ಸು । ವಿದ್ಯಾನುಭವಿಗಳೊಗ್ಗಿನೊಳು ॥
ಪ್ರದ್ಯುಮ್ನರಾಜನ ಪುರದ ಸಂಪತ್ತಿಗೆ । ಚೋದ್ಯಬಡುತ ಬರುತಿರ್ದಾ ॥ ೧೬ ॥
ಘಟ್ಟಿವಾಳರ ಮಾಲೆಗಾರರ ಕನ್ನಡಿ । ಘಟ್ಟಿಯು ಮಣಿವಸರಗಳಾ ॥
ಪಟ್ಟೆ ಚೀನಾಂಬರಝಲ್ಲಿಯು ಮೆದೆಗಳ । ನಿಟ್ಟಿಸುತ್ತೆಯ್ತರುತಿರ್ದಾ ॥ ೧೬ ॥
ಪನ್ನೀರಚೆಂಬುಗಳಿಡಿಗುಡ್ಡೆ ಸಿರಿಪಚ್ಚೆ । ಪನ್ನೆಗಪ್ಪುರದ ರಾಶಿಗಳು ॥
ಚೆನ್ನಪುಣುಗು ಸಾದು ಕಸ್ತೂರಿಗಳ ಗುಡ್ಡೆ । ಬಿನ್ನಾಣವಡೆದುವಲ್ಲಲ್ಲಿ ॥ ೧೮ ॥
ಅರಗೊಡೆದಂತೆಸೆವಡಕೆ ಭೇರಿಯ ದನಿ । ಗೆರಡುಹೋಳಹ ಬಿಳಿಯೆಲೆಯಾ ॥
ಸಿರಿಕೈರಗುಳಿಗೆ ಮುತ್ತಿನ ಸುಣ್ಣ ಪಸರವಿ । ಟ್ಟಿರೆ ಮೆಚ್ಚಿ ನೋಡುತೆಯ್ದಿದನು ॥ ೧೯ ॥
ಚೆಂದೆಂಗಿನೆಳೆನೀರು ದ್ರಾಕ್ಷೆ ಖರ್ಜೂರ ಪ । ಕ್ವಂದಾಳ್ವ ಮಾದಲಪಣ್ಣ ॥
ಬಂದಮಾವಣ್ಣರನೇರಿಲ ಪಣ್ಗಳ । ವೃಂದದಂಗಡಿಗಳೊಪ್ಪಿದುವು ॥ ೨೦ ॥
ನವಿಲಂಚೆ ಕೋಗಿಲೆ ಕೊಳರ್ವಕ್ಕಿ ಕೊಂಚೆ ಪಾ । ರಿವ ಗಿಳಿ ಬಃಣಾಂಕಿಗಳನು ॥
ಹವಣಿಸಿ ಕೊಳುವ ಕೊಡುವರಿಂದ ಜನಕೆ ಕಾ । ಮವನೆ ಹೆಚ್ಚಿಸುವುದಾ ನಗರಾ ॥ ೨೧ ॥
ಭೋಗಾಂಗವಲ್ಲದೆ ಯೋಗಾಂಗವಿಲ್ಲನು । ರಾಗವುಂಟಿಲ್ಲ ವಿರಕ್ತಿ ॥
ಪೂಗಣೆಯುನ ಪುರವಲ್ತೆಯೆನುತ ಮುಂಡೆ । ದೂಗುತ ಬರುತಿರ್ದನವನು ॥ ೨೨ ॥
ಉಗುರ ತಿದ್ದುವರೆ ಪಲ್ಲ ಸುಲಿ ಹುಬ್ಬ ತಿದ್ದು ಪ । ನ್ನೆಗಳ ತಿದ್ದೆಂಬ ಮಾತುಗಳಾ ॥
ಮುಗುದೆ ಮಧ್ಯಮೆ ಲೇಸು ಬಾಲೆ ಪ್ರಗಲ್ಭೆಯೇಂ । ಸೊಗಸೆನುತಿರ್ದರಲ್ಲಲ್ಲಿ ॥ ೨೩ ॥
ತಿಂಗಳ ಬಾಣಂತಿ ಪುಷ್ಪಿತೆಯಾಗಿ ಮಿಂ । ದಂಗನೆ ಮುನಿದುತಿಳಿದಳು ॥
ರಂಗದ ಪಾತ್ರ ಷಣ್ಮಾಸಗರ್ಭಿಣಿಯರ । ಸಂಗದೊಳ್ಸೊಗಸೆಂಬರಲ್ಲಿ ॥ ೨೪ ॥
ಸಂಪಗೆ ಮರುಗ ಹೊಂಗೇದಗೆ ಸುರಗಿಯು । ಜೊಂಪ ಮುಂತಾದಿವುವುಷ್ಪಾ ॥
ಕಂಪಿನ ಮೊಲ್ಲೆ ಮಲ್ಲಿಗೆ ಪದ್ಮ ಲಾವಂಚ । ತಂಪೆನುತಿರ್ದರಲ್ಲಲ್ಲಿ ॥ ೨೫ ॥
ಕನಕದಾಭರಣ ಕಸ್ತೂರಿ ಕುಂಕುಮ ಸಾದು । ಪುಣುಗು ಜವಾದಿಗಳುಷ್ಣಾ ॥
ಪನಿನೀರು ಸಿರಿಪಚ್ಚೆ ಕರ್ಪೂರ ಪಟ್ಟೆ ಮು । ತ್ತಿನ ಹಾರ ತಂಪೆಂಬರಲ್ಲಿ ॥ ೨೬ ॥
ಕಾಲಕೆ ತಕ್ಕ ವಸ್ತುವನರಿದೋಪರ । ಲೀಲೆಯನರಿದಿನಿಗಲೆಯ ॥
ಕೀಲನರಿದು ಕೂಡೆ ಕಾಮಸುಖಾಬ್ಧಿಯೊ । ಳೋಲಾಡಬಹುದೆನುತಿಹರು ॥ ೨೭ ॥

ತಮ್ಮ ಭೋಗಾಂಗವ ತಾವರಿಯದೆ ಕೂಡಿ । ಯೊಮ್ಮೊಮ್ಮೆ ಚಿತ್ತಭ್ರಾಂತಾಗಿ ॥
ಹೆಮ್ಮಕ್ಕಳಾಟ ಲೇಸಲ್ಲೆಂದು ಹೊರಿಪರು । ಕಮ್ಮಗೋಲನ ಮೇಲೆ ದೂರಾ ॥ ೨೮ ॥
ಮೋಹವೆ ಮುಕ್ತಿಯಲ್ಲೆಂಬನ ಬಾಯಿ ಹೊಯ್ । ಮೋಹಿಯಲ್ಲದನ ನೋಡದಿರು ॥
ಮೋಹವ ಬಲ್ಲವನೆಲ್ಲವ ಬಲ್ಲನೆಂ । ದಾ ಹಾದಿಯೊಳಗಾಡುತಿಹರು ॥ ೨೯ ॥
ವ್ಯಸನದುದ್ರೇಕಕೆ ಪಶುಗಳಂದದಿ ಗಸ । ಬಸನೊಂದಲದು ಮೋಹವಲ್ಲ ॥
ಅಸುವಿನ ನೇಮವಲುಗಿ ಕೂಡಲದು ಮೋಹ । ವಸುಧೆಗಪ್ರತಿಯೆಂಬರಲ್ಲಿ ॥ ೩೦ ॥
ಒಲಿದವಳೊಲಿ ಬರಿಮೋಹದ ಪೆಣ್ಣತ್ತ । ತಲೆಯಿಕ್ಕದಿರು ನಿನಗೊಲಿದ ॥
ಚೆಲುವೆಗೆ ನಿನ್ನ ಸರ್ವಸ್ವವ ಕೊಡು ಮೋಹಿ । ಗಳ ಮಾರ್ಗವಿದೆಯೆನುತಿಹರು ॥ ೩೧ ॥
ಓತೊಡಂಬಟ್ಟಳ ಕೂಡು ಬೇಸರಿಸಿ ಕಂ । ಜಾತನೇತ್ರೆಯರ ಕೂಡದಿರು ॥
ಕಾತರವೇಳದರತಿಕಷ್ಟವದು ಕಾಮ । ಪಾತಕವೆನುತಿದ್ದರಲ್ಲಿ ॥ ೩೨ ॥
ಮೊಲೆಬಿದ್ದ ಹೆಣ್ಣನಪ್ಪದರಿಂದ ಮೊಲೆಯುಳ್ಳ । ಸಿಲೆಯ ಪುತ್ತಳಿಯನಪ್ಪುವುದು ॥
ಕಲೆವಂತನಲ್ಲದ ವಿಟನಿಂದ ಕಾಡುವ । ಮೊಲೆನಾಗ ಲೇಸೆಂಬರಲ್ಲಿ ॥ ೩೩ ॥
ಮೊಲೆಬಿದ್ದರೇನೊಮ್ಮೆ ಮೊಗದ ಮೈಗಟ್ಟಿನ । ಚೆಲುವುಳ್ಳ ಪೆಣ್ಣಾದರವಳು ॥
ಕಲೆಗನುಕೂಲೆಯಾದರೆ ಸಾಕು ಚಿತ್ತಸಂ । ಕಲೆಯಹುದೆಂಬರು ಕೆಲರು ॥ ೩೪ ॥

ಇಂತು ನುಡಿವ ಮೋಹಿಜನಗಳ ಮೋಹಸಿ । ದ್ಧಾಂತವ ಕೇಳುತ ನಡೆದು ॥
ಕಂತುವಿನರಮನೆ ಮುಟ್ಟಲಾಯ್ತೆನೆ ಬಂದ । ನಂತರಿಸದೆ ದಕ್ಷಿಣಾಂಕಾ ॥ ೩೫ ॥
ಸತ್ತಿಗೆ ಚಮರ ಚಮ್ಮಾವುಗೆಯುಳಿದು ಬೆಂ । ಬತ್ತಿದ ಸರ್ವರ ನಿಲಿಸಿ ॥
ಮತ್ತೆ ತಾನೊರ್ವನೆ ಕಡೆಯ ಹಜಾರದ । ಮುತ್ತಿನ ಬಾಗಿಲ ಸಾರ್ದಾ ॥ ೩೬ ॥
ಮಾರಗೆ ತಾನು ಬಂದುದನವಸರದೊಬ್ಬ । ಸೌರಭಾನಿಲಗೆ ಪೇಳ್ದಟ್ಟ ॥
ದ್ವಾರದೊಳಿರ್ದುಮೋಲಗಕೆ ಪೋಪುದ್ದಂಡ । ನಾರಿಯರಿರವನೀಕ್ಷಿಸಿದಾ ॥ ೩೭ ॥
ಹಾವಭಾವದ ಚಳಬಳಿಕೆ ರಂಜಿಸೆ ತನ್ನ । ಹಾವಂತೆ ಬಂದೊರ್ವಳೊಲೆದು ॥
ಕಾವರಾಯಗೆ ಪುಷ್ಪಮಾಲೆಯ ಕೊಂಡೊಳ । ಚಾವಡಿಗೆಯ್ದೆ ನೋಡಿದನು ॥ ೩೮ ॥
ಪೂಸರಲಗೆ ಮಸಲಾಗಿ ಕೆಂಜಾಜಿಯ । ಬಾಸಿಗವಿಡಿದೆಯ್ದುವಾಗ ॥
ಆಸೇವೆಗೈವಳಿಗಳ್ಗೆ ಚಂಪಕಮಾಲೆ । ಬೀಸುತೆಯ್ದಿದಳೊರ್ವ ಕುಶಲೆ ॥ ೩೯ ॥
ಮುಗುಳುಮಲ್ಲಿಗೆಯ ಹಾರವನೊರ್ವ ತಾವರೆ । ಮುಗುಳುಮೊಲೆಯ ನೀರೆ ಪಿಡಿದು ॥
ಮುಗುಳಂಬನೋಲಗಕಡಿಯಿಡುತಿರೆ ದಿಟ್ಟೆ । ಮುಗುಳ್ವಂತೆ ಕಂಡ ಕಾಮುಕರಾ ॥ ೪೦ ॥
ಪಂಕಜದೆಲೆಯೊಳೊರ್ವಳು ಘಮಘಮಿಸುವ । ಕುಂಕುಮಚೂರ್ಣವ ಪಿಡಿದು ॥
ಭೋಂಕನೆದ್ದಳು ಮದನಾನುರಾಗವ ಮುಕ । ರಾಂಕಗೊಯ್ದಪಳೊಯೆಂಬಂತೆ ॥ ೪೧ ॥

ಮಲಯಜಸಾರವನೊರ್ವಳಶೋಕೆಯ । ತಳಿರೊಳೊಯ್ದಳು ಬಳಿಕೊರ್ವ ॥
ಲಲನೆ ಹೊಂಗೇದಗೆಯೊಂದು ಕಠಾರಿಯ । ನೊಲಿದೊಯ್ವುತಿದ್ದಳಂಗಜಗೆ ॥ ೪೨ ॥
ಶೈಲಪದ್ಮದ ಬಟ್ಟವಾವುಗೆಗಳನು ಪೊಂ । ಬಾಳೆಯ ನಿಡುಚವರಗಳಾ ॥
ಲೀಲೆಗಾತಿಯರೊಯ್ವುತಿರೆ ದಕ್ಷಿಣಾಂಕ ನಿಂ । ದಾಲೋಕಿಸುತಿರ್ದನಿನಿಸು ॥ ೪೩ ॥
ಏಣಲೋಚನೆಯೋರುಜವ್ವನೆ ಲಲಿತಾಂಗಿ । ಮಾಣಿಕದೊಡಿಗೆಯ ತೊಟ್ಟು ॥
ವೀಣೆಯ ಪಿಡಿದೊರ್ವಳೆಯ್ದುತಿದ್ದಳು ಪಂಚ । ಬಾಣನೋಲಗದೊಳಾ ಕಡೆಗೆ ॥ ೪೪ ॥
ಕಿನ್ನರಿವಿಡಿದೊರ್ವ್ಳ ಮಿಡಿವುತ ಲೀಲೆಯೊ । ಳ್ತನ್ನೊಳಿಪ್ಪಾಳಾಪಗೊಡುತ ॥
ಬೆನ್ನಿಡಬಲನ ನೋಡದೆ ಹೋಗುತಿದ್ದಳು । ಚೆನ್ನೆಯೊರ್ವಳು ಮದೋನ್ಮತ್ತೆ ॥ ೪೫ ॥
ಹಿಂಡಿನ ಮೇಳ ಮೇಲಿದ್ದಂತೆ ನನಗಿಕ್ಷು । ದಂಡ ಕಾರ್ಮುಕ ವೀಳ್ಯಗೊಡಲು ॥
ಹಿಂಡುವೆನಮೃತವನೆನುತೆಯ್ದಿದಳು ಸ್ವರ । ಮಂಡಲವಿಡಿದೊರ್ವ ಸೊಬಗೆ ॥ ೪೬ ॥
ಚೆಂಗು ದಂಡಿಗೆ ತಿತ್ತಿ ಮುಖವೀಣೆ ಜಂತ್ರವು । ಪಾಂಗ ಮುಂತಾದುವನಾಂತು ॥
ಅಂಗಜನೋಲಗಕಡಿಯಿಡುತಿದ್ದ ಗಾ । ನಾಂಗನೆಯರ ನೋಡುತಿರ್ದಾ ॥ ೪೭ ॥
ಕಾಲುತೊಡರು ಪರಿಪರಿಯ ಬಿರುದಿನಂಕ । ಮಾಲೆಯನೋದಿಸಿಕೊಳುತ ॥
ಓಲಗವೆಂಗಳು ಬರುತಿದ್ದರೀಕ್ಷಿಪ । ರಾಲಿಗಳ್ಬೆಬ್ಬಳವಾಗೆ ॥ ೪೮ ॥
ನರಸುರರೆದೆಯ ಸೋಲಿಪುದು ಚೋದ್ಯವೆಯೆನ್ನ । ಚರಣದಿಂದೊದೆದಶೋಕೆಗಳ ॥
ಮರನನಾ ಕ್ಷಣ ತಳಿರೇರಿಪೆನೆಂದೊರ್ವ । ಬಿರುದಿನ ಗಣಿಕೆಯೆಯ್ದಿದಳು ॥ ೪೯ ॥
ಸೂಳೆ ನೋಡಿದ ನೋಟ ವಿಟನ ನಾಟದರದು । ಹೀಲಿಗಣ್ಣೆಂಬುದೇನೆನ್ನ ॥
ಆಲಿಯೊಳ್ತಿಲಕವೃಕ್ಷವ ಚಿಗುರಿಪೆನೆಂದು । ಹೇಳಿಸುತೊರ್ವಳೆಯ್ದಿದಳು ॥ ೫೦ ॥
ಅಂಗೈಯೊಳಾನೊಮ್ಮೆ ತಡವಿದರೊಡನೆ ಪ್ರಿ । ಯಂಗುವೃಕ್ಷವ ಚಿಗುರಿಪೆನು ॥
ಸಂಗದೊಳ್ವಿಟರ ಸೋಲಿಪುದಾವ ಗಹನವೆಂ । ಬಂಗನೆಯೊರ್ವಳೆಯ್ದಿದಳು ॥ ೫೧ ॥
ಪುರುಷರೆನ್ನೆದೆಸೋಂಕೆ ರೋಮಾಂಚಕಂಚುಕ । ವೆರಸುವುದೇನಪ್ಪಿ ನಾನು ॥
ಕುರವಕವೃಕ್ಷವ ಚಿಗುರಿಪೆನೆಂಬೊರ್ವ । ಸುರತಾನುರಕ್ತೆಯೆಯ್ದಿದಳು ॥ ೫೨ ॥
ಚಿತ್ತತ್ತ್ವದನುಭವಗೆಟ್ಟ ತಾಪಸರೆನ್ನ । ತೊತ್ತಿರ ಕಾಲ ಗೆಜ್ಜೆಗಳು ॥
ಎತ್ತಿ ಹೊಯ್ ಡೌಡೆಯನೆಂಬ ಬಿರುದಿನೊರ್ವ । ಮತ್ತಕಾಶಿನಿಯ ನೋಡಿದನು ॥ ೫೩ ॥
ಒಳಗಾತ್ಮಸುಖ ಹೊರಗಂಗನಾಸುಖವಿವ । ಗ್ಗಳಗಳಿನ್ನುಳಿದುವಲ್ಪಗಳು ॥
ಬಳಿಕೊಂದ ನುಡಿವನ ಬಾಯ ಕುಟ್ಟಿದು ಭುಜ । ಬಲಿರಾಜಮತವೆನುತಿಹರು ॥ ೫೪ ॥
ನಾರಿಯರೊಳಪೊಕ್ಕರೊಡನೆ ಮುನ್ನೆಯ್ದಿದ । ದ್ವಾರಸೌರಭ ಮಗುಳಿದನು ॥
ದಾರಿಯ ನೋಡುತ ನಿಂದಿರ್ದ ದಕ್ಷಿಣ । ಗಾರಯ್ದು ನುಡಿದನಿಂತೆಂದು ॥ ೫೫ ॥

ಓಲಗವಾಗದ ಮುನ್ನ ಬಂದ್ಯೈ ನಸು । ಜೋಲಿಯಾಯ್ತದರಿಂದ ನಿನ್ನಾ ॥
ಆಲಸ್ಯಗಂಡರೆಂದೆನ್ನದಿರೆನುತವ । ನಾಲಾಪಗೈದನಾತನೊಳು ॥ ೫೬ ॥
ಸ್ವಾಮಿಯೋಲಗವಾದ ನೀನೆಯ್ದಿದಿರವ ಕೇ । ಳ್ವಾದವೋದಿಸಿದನು ಬಾರೆಂದು ॥
ಕಾಮನೋಲಗಕೆ ಚಕ್ರೇಶನ ಸಖನ ಸು । ಪ್ರೇಮದೊಳೊಯ್ದನಾ ಸುಮುಖಾ ॥ ೫೭ ॥
ಪುತ್ತಳಿಗೆಲಸದ ಬಾಗಿಲು ಕಾಂಚನ । ಭಿತ್ತಿ ಮಾಣಿಕದ ಕಂಭಗಳು ॥
ಕತ್ತುರಿಸಾರಣೆ ಪೂವಲಿ ನೆಲದೊಳು । ಮೆತ್ತಮೆತ್ತನೆ ಬರುತಿರ್ದಾ ॥ ೫೮ ॥
ಬರುತಿಪ್ಪನಿವನಾರು ದಕ್ಷಿಣಾಂಕನೊ ಪಂಚ । ಶರನ ಕಾಣಲ್ಕೆ ಪೋದಪನೊ ॥
ಭರತೇಶನೆಲ್ಲಿದ್ದನಿವನೇಕೆ ಬಂದನೆಂ । ದರಗಿಳಿ ನುಡಿದುವಲ್ಲಲ್ಲಿ ॥ ೫೯ ॥
ಅಗ್ಗದ ದೊರೆಯು ಕೆಳೆಯನೆಂಬ ಗರ್ವವೊ । ಮೊಗ್ಗೆಗೋಲನ ಸಭೆಗಿನಿಸು ॥
ತಗ್ಗಿ ಬಾ ನೋಡಿ ಬಾ ಮೆಲ್ಲನೆ ಬಾರೆಂದು । ಹೆಗ್ಗಾರ ನುಡಿದುವಲ್ಲಲ್ಲಿ ॥ ೬೦ ॥
ಹೂಣಿ ಭೂಂದಸರನಟ್ಟಿದೆ ಕಾಮನೆಡೆಗೆ ಪ್ರ । ವೀಣದಕ್ಷಿಣನನಟ್ಟಿದನು ॥
ಜಾಣನೈ ಭರತೇಶನೆಂದೆಡಬಲದಲ್ಲಿ । ಬಾಣಾಂಕಿ ನುಡಿದುವಲ್ಲಲ್ಲಿ ॥ ೬೧ ॥
ನರುಗೋಲನೊತ್ತಿಂದ ದಕ್ಷಿಣಗಿದಿರಾಗಿ । ಮರಿಯೆರಳೆಗಳೋಡಿ ಬಂದು ॥
ದುರುದುರನೀಕ್ಷಿಸಿ ಹೊಸಗವಲಿಗೆ ಬೆಚ್ಚಿ । ಬಿರಿತೋಡಿದುವು ಕಂಡಕಡೆಗೆ ॥ ೬೨ ॥
ಮೋರೆಯ ತಾಗುವಂತೊಂದು ಪಾರಿವಪಕ್ಕಿ । ಪಾರಿ ಬಹಾಗ ದಕ್ಷಿಣನು ॥
ಮೋರೆಯನೊಲೆದು ಕೈಯೊಡ್ಡಿ ಕಳೆಯೆ ಕಂಡ । ನೀರೆವೆಂಗಳು ನಕ್ಕರೊಸೆದು ॥ ೬೩ ॥
ಆರಯ್ಯುತೋಸರಿಸುತ ನಡೆತಪ್ಪಾಗ । ನಾರಿಯರೋಲಗದೊಳಗೆ ॥
ದೂರದೊಳಿದಿರೊಳೊಪ್ಪುವ ಮನಸಿಜನ ಕ । ಣ್ಣಾರೆ ಕಂಡನು ದಕ್ಷಿಣಾಂಕಾ ॥ ೬೪ ॥
ಬಿಂಗಡೆಯೊಳಗೆಂಟುಸಾವಿರ ತನ್ನ ರಾ । ಜಾಂಗನೆಯರು ತೆರೆಯೊಳಗೆ ॥
ಮುಂಗಡೆಯೊಳು ಮಂತ್ರಿಸಖರು ತನ್ನೋಲಗ । ವೆಂಗಳೊಪ್ಪಿರೆ ಕಾಮನಿರ್ದಾ ॥ ೬೫ ॥
ಅರಲ ಸಿಂಹಾಸನದಗ್ರದೊಳಂಚೆಯ । ಕೊರಳ ತುಪ್ಪುಳ ಗದ್ದುಗೆಯೊಳು ॥
ನರಸುರನಾಗಲೋಕದ ಮೋಹನಾಂಗವೆ । ಪುರುಷರೂಪಾಂತವೊಲಿರ್ದಾ ॥ ೬೬ ॥
ಕಪ್ಪಿನ ರೇಖೆಯ ತೆಗೆದಂತೆ ತೋರುವ । ತುಪ್ಪುಳುಮೀಸೆ ನುಣ್ಬವರಿ ॥
ಉಪ್ಪರಜವ್ವನೆಯರು ಕಂಡು ಸೋಲ್ತು ಬಂ । ದಪ್ಪುವೊಲೆಸೆದನಾ ಮದನಾ ॥ ೬೭ ॥
ಪಚ್ಚೆಯ ಪ್ರತಿಮೆ ಪ್ರಾಣಂಬೆತ್ತು ನವರತ್ನ । ದಚ್ಚುದೊಡಿಗೆತೊಟ್ಟು ತೋರ್ಪ ॥
ಮೆಚ್ಚಿನೊಳಿರ್ದನಾ ಕಾಮದೇವನು ನೋಳ್ಪ । ರಚ್ಚರಿವಡುವ ಚೆಲ್ವಿನೊಳು ॥ ೬೮ ॥
ಕಂಡ ಸ್ತ್ರೀಪುರುಷರ ಮೈಗೆ ರೋಮಾಂಚದ । ಹಿಂಡನೇಳಿಸುವ ಗಾಡಿಯೊಳು ॥
ಮುಂಡೆಯ ಬಾಸಿಗಗಂಪಿಗೆ ತುಂಬಿ ಹೊ । ಯ್ಕೊಂಡಿನಂತಾಡೆ ಕಣ್ಗೆಸೆದಾ ॥ ೬೯ ॥

ಚಾಮರಾಷ್ಟಕವ ಶಂಖಿನಿಯರು ಢಾಳಿಸೆ । ಲಾಮಂಚದಾಲವಟ್ಟವನು ॥
ಪೂಮಿಕ್ಕ ಬೀಸಣಿಗೆಗಳ ಚಿತ್ರಿಣಿಯರು । ನೇಮಿಸಲೆಸೆದನಾ ಮದನಾ ॥ ೭೦ ॥
ವೀಳೆಯದೆಲೆ ಗಿಂಡಿ ತಂಗಾರದಡಕಿಲೆ । ಯೂಳಿಗ ಪದ್ಮಿನಿಯರಿಗೆ ॥
ಕಾಳಂಜಿ ಕೈದುವ ಹಸ್ತಿನಿಯರು ಪಿಡಿ । ದೋಲೈಸಲೆಸೆದನಾ ಮದನಾ ॥ ೭೧ ॥
ಕೋಗಿಲೆವಿಡಿದರಗಿಳಿಗಳ ಪಿಡಿದನು । ರಾಗದಿಂದಂಚೆಯ ಪಿಡಿದ ॥
ಸೋಗೆನವಿಲ ಪಿಡಿದಬಲೆಯರಿದ್ದರು । ಪೂಗೋಲನಾಸ್ಥಾನದಲ್ಲಿ ॥ ೭೨ ॥
ಕರಸೊಬಗಾಗಿ ಸಿಂಗರಿಸಿದ ವಾರಸೌಂ । ದರಿಯರಿದ್ದರು ಸಭೆತುಂಬಿ ॥
ಸರಸಗಾನವ ಹಾಡುತಿದ್ದರು ವೀಣೆಕಿ । ನ್ನರಿಮುಟ್ಟಿ ಕೋಮಲಾಂಗಿಯರು ॥ ೭೩ ॥
ಗಾನಕೇಳುತ ತನ್ನ ಸಖರೆಂಟುಮಂದಿ ಸಂ । ಧಾನಿಪರ್ಥಕೆ ಮೆಚ್ಚಿ ನಗುತ ॥
ಮೀನಾಂಕನಿರ್ದನು ಮಲಗ ತಾನೊರಗಿ ಸು । ಮ್ಮಾನದೊಳ್ನೀಡಿ ಪಾದಗಳಾ ॥ ೭೪ ॥
ಮಲಯಮಾರುತ ಚರಣವನೊತ್ತುತಿರೆ ಹಸ್ತ । ತಳವ ಮಂದಾನಿಲನೊತ್ತೆ ॥
ಕೆಳೆಯರ ನುಡಿಗೇಳುತಿದಿರ ಮಂತ್ರಿಯ ನೋಡು । ತೊಲವಿನೊಳಿದ್ದನಾ ಮದನಾ ॥ ೭೫ ॥
ಎಲೆಯ ಘಳಿಗೆಗೊಮ್ಮೆ ಕೈನೀಡುತೊಮ್ಮೊಮ್ಮೆ । ಕೆಲಬಲದತ್ತ ನಿಟ್ಟಿಸುತ ॥
ಒಲೆದೊಮ್ಮೆ ತೆರೆಯ ಮರೆಯ ಪೆಂಡಿರತ್ತ ಕ । ಣ್ಣಿಲುಕುತಿರ್ದನು ವಿಡಾಯದೊಳು ॥ ೭೬ ॥
ಒತ್ತಿನೊಳನ್ಯರಿದ್ದಾಗ ಗಂಭೀರಾಂಗ । ವೆತ್ತಿಹರವ ಚಕ್ರಿಯಲ್ಲ ॥
ಚಿತ್ತಜನಲ್ಲವೆ ಓಲಗದೊಳು ತನ್ನ । ಚಿತ್ತಕೆ ಬಂದವೊಲಿರ್ದಾ ॥ ೭೭ ॥
ಕಟ್ಟೆದಿರೊಳು ತೋರ್ಪ ಕಾಮನ ನೋಡುತ । ಮುಟ್ಟಲೆಯ್ದಿದನು ದಕ್ಷಿಣನು ॥
ಕಟ್ಟಿತು ಸಂಗೀತ ಕಳಕಂಠನೆಂಬೊರ್ವ । ಕಟ್ಟೆಗೆಕಾರನಿಂತೆಂದಾ ॥ ೭೮ ॥
ಮನ್ಮಥವೀರ ಮರ್ತ್ಯಾಮರನಾಗಲೋ । ಕೋನ್ಮದಕಾರಿ ಸಂಹಾರಿ ॥
ಚಿನ್ಮಾರ್ಗಚಕ್ರಿಯ ಸಖ ಬಂದನವಧಾನ । ಸನ್ಮೋಹಿಸೆಲೆ ಪರಾಕೆಂದಾ ॥ ೭೯ ॥
ದಾಕ್ಷಿಣ್ಯಪರನು ಕ್ಷತ್ರಿಯನು ನಾನಾಕಲಾ । ದಕ್ಷನು ಪತಿಕಾರ್ಯಹಿತನು ॥
ದಕ್ಷಿಣನಾಯಕನೆಯ್ತಂದನೊಡೆಯ ಪ । ರೀಕ್ಷಿಸು ಗಲಭೆ ಹೊಯೆಂದಾ ॥ ೮೦ ॥
ನೀಡಿದ್ದ ಕಾಲ್ಗಳನುಡುಗಿಸಿ ಮುನ್ನ ಕೈ । ನೀಡಲೊತ್ತುವುದನು ನಿಲಿಸಿ ॥
ಪಾಡುಗಾರಿಕೆಯೊಳೋಲಗವಾಗಿ ಮನ್ಮಥ । ನೋಡುತಿದ್ದನು ಬಪ್ಪ ಸಖನಾ ॥ ೮೧ ॥
ಉಡೆಸುತ್ತಿದಂಗವನೋಸರಿಸುತ ಮೆಲ್ಲ । ನಡಿಯಿಡುತಲ್ಲಲ್ಲಿ ನಿಲುತ ॥
ಅಡಕದೊಳೋಜೆಯೊಳೊಯ್ಯನೆ ದಕ್ಷಿಣ । ಕುಡುವಿಲ್ಲನೊತ್ತ ಸಾರಿದನು ॥ ೮೨ ॥
ತಳಿರ ನಿವಾಳಿ ಪೂಮಾಲೆನಿವಾಳಿಯ । ಸೆಳೆದಿಟ್ಟು ತಾವರೆಯೊಂದಾ ॥
ಅಲರಂಬಗೊಡನೆ ಕಾಣಿಕೆಗೊಟ್ಟು ಸಾಷ್ಟಾಂಗ । ಲಲಿತದೊಳೆರಗಿದನವನು ॥ ೮೩ ॥

ಚಕ್ರೇಶನನುಜಾತ ನರಸುರನಾಗಭೂ । ಚಕ್ರವೋ‍ಹನವಮೂಲಕರ್ತಾ ॥
ಚಕ್ರವಾಕಧ್ವಜ ತೇನವೋನನಮಯೆಂದು । ಚಕ್ರಿಯ ಸಖನೆದ್ದು ನಿಂದಾ ॥ ೮೪ ॥
ನಾಗರ ಮೊದಲಾದ ಸಖರ ಕಾಣಿಕೆ ಬುದ್ಧಿ । ಸಾಗರನಿತ್ತುದಿದೆಂದು ॥
ಪೂಗಂಪ ಕಸ್ತೂರಿಗಳ ಕಾಣ್ಕೆಗೊಟ್ಟು ಚೆ । ನ್ನಾಗಿ ಮಣಿದನು ಶಿರವನು ॥ ೮೫ ॥
ಬಂದುದುತ್ತಮವಾದುದಿತ್ತ ಬಾ ದಕ್ಷಿಣ । ಯೆಂದೊತ್ತಿನೊಳು ಕುಳ್ಳಿರಿಡಿಸಿ ॥
ಕಂದರ್ಪ ನಗುತ ಕುಳ್ಳಿರವೇಳೆ ಕುಳಿತನ । ದೊಂದು ಸಾಲದೆ ರಾಜತೇಜಾ ॥ ೮೬ ॥
ಸುಳಿಯದಿರಬಲೆ ಸೋಂಕದಿರೆಲೆ ಪ್ರಬಲೆ ನಿ । ವ್ವೊಳು ಮಾತು ಸಾಕು ಕಂಕಣದ ॥
ಬಳೆಗಳ ದನಿದೋರದಿರಿ ಪೆಂಗಳೆಂದಲ್ಲಿ । ಕಳಕಂಠ ಸೊಬಗುದೋರಿದನು ॥ ೮೭ ॥
ಸುತ್ತಲೆಲ್ಲರು ಸುಮ್ಮನಾಲಿಸುತಿದ್ದರು । ಚಿತ್ತಜನೊಡನೆ ದಕ್ಷಿಣನಾ ॥
ಎತ್ತಣಿಂ ಬಂದೆ ನಿನ್ನೊಡೆಯನನೆಲ್ಲೆಲ್ಲಿ । ಸುತ್ತಿಸಿ ತಂದೆಯ್ಯೆಯೆಂದಾ ॥ ೮೮ ॥
ಎತ್ತಣಿಂದೆಂಬೆಯ ನಿನ್ನ ಕಾಣುವ ಪುಣ್ಯ । ದತ್ತಣಿಂ ಬಂದೆನೆಂತಿರಲಿ ॥
ಸುತ್ತಿಸಿ ತಹರಾರು ಜಗವ ಸುತ್ತಿಪ ಕಾಮ । ನತ್ತಣಿಂ ಪಿರಿಯನನೆಂದಾ ॥ ೮೯ ॥
ನೀನು ನಾಗರನು ಮುಂತಾದ ಪ್ರಚಂಡರು । ಸೇನಾಧ್ಯನಾ ಮಂತ್ರಿಗೂಡಿ ॥
ಏನೇನ ಮಾಡುತಿದ್ದಿರಿ ನಿಮ್ಮ ದೊರೆಯನೆಂ । ದಾ ನಳಿನಾಸ್ತ್ರನಾಡಿದನು ॥ ೯೦ ॥
ಇರಲೀಯದಲ್ಲಲ್ಲಿಗೆಳೆಸುತಿಹಿರಿ ನಿಮ್ಮ । ದೊರೆಯೆಂತು ನಡೆದನಂತದನೆ ॥
ಪುರೆಯಿಟ್ಟು ಪೊಗಳ್ದಿರಿ ನಾಡ ಸುತ್ತಿಸಿ ತಂದ । ಪರಿ ಲೇಸು ಲೇಸೆಂದು ನಕ್ಕಾ ॥ ೯೧ ॥
ಪರತಂತ್ರಚರಿತನೆ ನಿಮ್ಮಣ್ಣ ನಾವೊಂದ । ನೊರೆದ.ಬ್ಬಿಸುವರೆ ಉಬ್ಬಿಸಲು ॥
ಭರತೇಶನುಬ್ಬಾಳೆ ನೆರೆಜಾಣ ನೀವಿಂತು । ವಿರಚಿಸುವರೆ ಸ್ವಾಮಿಯೆಂದಾ ॥ ೯೨ ॥
ಹೋಗಲ್ಯೆ ಬಿಡು ಬಿಡಾ ಮಾತಿನ್ನು ನೀವೊಳ್ಳಿ । ತಾಗಿ ವರ್ತಿಸುವಿರ್ಯೆ ಸಾಕು ॥
ರಾಗಾರ್ಥ ನಾನೊಂದ ಕೇಳ್ವೆ ನೋಯದಿರೆನ । ಲಾಗಲುಸುರಿ ಸ್ವಾಮಿಯೆಂದಾ ॥ ೯೩ ॥
ಅಲ್ಲವ್ಯೆ ದಕ್ಷಿಣ ಹಯಗಜಾಭರಣಗ । ಳಲ್ಲಲ್ಲಿ ಬಡವರೊಳಿರಲು ॥
ಎಲ್ಲವ ಸುಲಿದುಕೊಂಡೆಯ್ತಂದಿರ್ಯೆ ಮಝು । ಬಲ್ಲಿದರ್ಯೆಯೆಂದ ನಗುತಾ ॥ ೯೪ ॥
ಬಡವರಾರೊಡೆಯ ವ್ಯಂತರರು ಖೇಚರರೇನು । ಬಡವರೆ ಮ್ಲೇಚ್ಛರಲ್ಲಿಗರೆ ॥
ಕಡಲೊಳು ಬೆಟ್ಟದೊಳ್ಸಿಂಧುಗಂಗೆಯ ಶಕ್ತಿ । ವಿಡಿದತಿಬಲರಲ್ತೆಯೆಂದಾ ॥ ೯೫ ॥
ಅರ ಕಂಡರು ಮುನ್ನ ದಾರಿಗವರು ವಸ್ತು । ಸಾರವ ತೆತ್ತರೇನರಿಯ ॥
ಭೇರಿಯ ದನಿಗಳ್ಕಿ ಬಂದಿಂತು ಕಂಡರು । ಮಾರನಣ್ಣನನೆಂದನೊಡನೆ ॥ ೯೬ ॥
ಅವರು ಕಪ್ಪಕೆ ಕೊಟ್ಟ ಹಯಗಜಾಭರಣ ಮೇ । ಲವಕೆ ನಾಲ್ಮಡಿಯ ವಸ್ತುಗಳಾ ॥
ಸವಿವಿಲ್ಲನಣ್ಣ ಮನ್ನಣೆಯಿತ್ತನೆಂದವ । ಸವಿಸವಿಯಾಗಿ ನುಡಿದನು ॥ ೯೭ ॥

ವಸ್ತುವಿನಾಸೆಗೆಯ್ದಿದನೆ ಚಿಂತಾಮಣಿ । ಹಸ್ತದೊಳಿಹುದೆಮ್ಮ ನೃಪಗೆ ॥
ದುಸ್ತರನೃಪರ ಶಿಕ್ಷಿಸೆ ಗವಿಸಿದನು ಸ । ಮಸ್ತರ ಸುಖಿಮಾಡಲೆಂದು ॥ ೯೮ ॥
ಒಡವೆಯ ದೊಡ್ಡಿತೇನವರು ಚೆಲ್ವಿನ ಪೆಣ್ಣ । ಪಡೆದಿದ್ದ ನಮ್ಮ ಭೂವರಗೆ ॥
ಸಡಗರದಿಂದಿತ್ತರಾ ವಸ್ತು ಲೇಸಿನ್ನು । ಬಿಡು ಮಿಕ್ಕ ವಸ್ತುವನೆಂದಾ ॥ ೯೯ ॥
ಅದಕೇನು ಕಡಮೆಮಾಡಿದನೆ ನಲ್ವೆಂಗಳ । ಯ್ಯದಿರಡ್ಡ ಬೀಳಬೇಡೆಂದಾ ॥
ಮೃದುವಾಕ್ಯದೊಳು ನೀವು ತಾವೆಂಬನಾ ತೇಜ । ಸದರವೆ ನಾಡ ಭೂಪರಿಗೆ ॥ ೧೦೦ ॥
ತನುಜೆಯರ್ಕಳನಿತ್ತ ನೆವದಿಂದ ನೃಪನರ । ಮನೆಗೆಡೆತಡೆಯಿಲ್ಲದವರು ॥
ಅನುದಿನ ಸುಖದೊಳೋಲಾಡುತಹರೆ ನಮ್ಮ । ಜನಪನಾರ್ಗೆಸಗನು ಲೇಸಾ ॥ ೧೦೧ ॥
ಚತುರರಾದರು ಕೆಲರೆಮ್ಮರಸನ ಕಂಡು । ಪ್ರತಿಕರಾದರು ಕೆಲಕೆಲರು ॥
ಗತಿಮತಿಗಾಣದವರು ಗತಿಮತಿಗಂಡು । ಕ್ಷಿತಿಯೆಲ್ಲ ಸುಖಿಯಾದುದೆಂದಾ ॥ ೧೦೨ ॥
ಶೃಂಗಾರವೆಂತು ಸಾಹಿತ್ಯವದೆಂತು ಸು । ಸಂಗೀತವೆಂತೆಂಬರೆಲ್ಲ ॥
ಸಿಂಗರಿಸುವರು ಜಾಣ್ನುಡಿವರು ಪಾಡುವ । ರಂಗಜನಣ್ಣನ ಪೊರ್ದಿ ॥ ೧೦೩ ॥
ಅಡವಿಯ ಮಿಗಗಳಂತೆತ್ತರತತ್ತರ । ನಡೆವರೆಲ್ಲರು ಜಾಣರಂತೆ ॥
ಒಡೆಯ ಬೀಳ್ಕೊಟ್ಟರು ಬಿಡಲಾರದಿನ್ನು ಸಂ । ಗಡದೊಳಿದ್ದರು ಸ್ವಾಮಿಯೆಂದಾ ॥ ೧೦೪ ॥

ಇದು ದೊಡ್ಡ ಸಾಮರ್ಥ್ಯವೈ ತನ್ನ ಕಂಡವರ್ । ಚದುರ ಕಲಿತರೆಂದೆಯೆಂದು ॥
ಮದನನಾಡಿದನದಕಾ ದಕ್ಷಿಣಾಂಕ ಮ । ತ್ತದನೆ ಮಾಕೋಂಡಿಂತು ನುಡಿದಾ ॥ ೧೦೫ ॥
ಮೃದುಗುಣಗಣವ ಸೂಚಿಸಿದೆನು ಸಾಮರ್ಥ್ಯ । ದೊದವ ಪೇಳ್ವೆಡೆ ಚಕ್ರಧರಗೆ ॥
ಇದಿರಹ ಪಡೆಗಳೆಲ್ಲರ ಮೇಲೆಯುಗ್ರಖ । ಡ್ಗದ ಬಲ್ಪ ತೋರುವನೆಂದಾ ॥ ೧೦೬ ॥
ಕಂಡಷ್ಟು ಸೂಚಿಪೆನಾಲಿಸೊಂದಂಬಿನೊಳ್ । ಕಂಡನು ಬಂದು ಮಾಗಧನು ॥
ಹಿಂಡುವ್ಯಂತರರ ಕಾಣಿಸಿಕೊಟ್ಟು ನೃಪನ ಮೈ । ಗೊಂಡಿದ್ದನೀಗ ಸೇನೆಯೊಳು ॥ ೧೦೭ ॥
ಒಂದುಪೆಟ್ಟಲ್ಲದೆರಡ ನೀಡಿತಿಲ್ಲ ಡ । ಬ್ಬೆಂದು ವಜ್ರದ ಪಡಿಯೊಡೆದು ॥
ಹಿಂದಕೆ ತೆರೆದುದು ಭರತೇಶಗಿದಿರಿಲ್ಲ । ವೆಂದು ಬಾಯ್ದೆರೆದು ಪೇಳ್ವಂತೆ ॥ ೧೦೮ ॥
ಬೆನ್ನೊಳೆ ಬೆಂಕಿ ನಾಲಗೆನೀಡಿತಾಗಶ್ವ । ಪನ್ನೆರಳ್ಗಾವುದ ನೆಗೆಯೆ ॥
ಮನ್ನೆಯರೊಡೆಯ ಜಾರದೆ ಬಂದನಮರರು । ಚೆನ್ನಲರ್ವಳೆಯ ಕರೆದರು ॥ ೧೦೯ ॥
ಪೆಟ್ಟನೊಂದನು ನೀಡೆ ಬೆಟ್ಟವದರಿತು ದಿಂ । ಕಿಟ್ಟುದಾರ್ಭಟೆ ಸುರಾಂಗಣಕೆ ॥
ಬಿಟ್ಟರು ಗರ್ವವ ಖಗರು ಮ್ಲೇಚ್ಛರು ತಂದು । ಕೊಟ್ಟರು ಕಪ್ಪಕಾಣಿಕೆಯಾ ॥ ೧೧೦ ॥
ಘೋರವೃಷ್ಟಿಯು ಕರೆದುಗ್ರದೇವತೆಗಳಿ । ಗಾ ರಾಯ ಮಣಿದುದಿಲ್ಲವನ ॥
ವೀರಭಟರೆ ಮುರಿಯಟ್ಟಿದರಾತನ । ಕೂರಸಿಗಿದಿರಹರಾರು ॥ ೧೧೧ ॥

ಅಂಕಮಾಲೆಯ ಬರೆಸುವೆನೆಂದು ಮೊದಲೊಂದು । ಡೊಂಕುಮಾಲೆಯುನುಜ್ಜು ವಾಗ ॥
ಝುಂಕಿಸುತಿದ್ದುವು ಭೂತಗಳಾಗವ । ನೂಂಕುರೆ ಹಲ್ಲ ಕುಟ್ಟಿಸಿದಾ ॥ ೧೧೨ ॥
ಕಂತುರಾಜೇಂದ್ರ ಲಾಲಿಸು ಚಕ್ರಧರ ಹಿಮ । ವಂತಶೈಲವನೊಡೆಹೊಯ್ದು ॥
ಮುಂತೆ ರಾಜ್ಯವ ಸಾಧಿಸುವೆನೆಂದು ನೋಡಿದ । ಸಂತೈಸಿದೆವು ನಾವು ಬಿಡದೆ ॥ ೧೧೩ ॥
ಅವನ ಸಾಹಸಕಿದಿರಹರಾರು ಜಗದೊಳು । ಜವನೆ ಮೃತ್ಯುವೆ ದೈತ್ಯಕುಲವೆ ॥
ಅವರು ಮೆಚ್ಚುವರು ನಮ್ಮೊಡೆಯ ನಾಡಾಡಿಯೆ । ವಿವರಿಸು ಸ್ವಾಮಿ ನೀಯೆಂದಾ ॥ ೧೧೪ ॥
ಲೀಲಾಮಾತ್ರದಿ ಧರೆ ಸಾಧ್ಯವಾಯ್ತಾದ । ಮೇಲಾ ಸಾಹಸವ ತೋರುವನು ॥
ಪೇಳಲಚ್ಚರಿ ಚಕ್ರಧರನ ಸಂಪತ್ತ ಪೂ । ಗೋಲ ಬಲ್ಲಹ ಲಾಲಿಸೆಂದಾ ॥ ೧೧೫ ॥
ಕಮ್ಮಗೋಲಿಂದ ಮೂಜಗವನಂಡಲೆವಾತ । ತಮ್ಮನು ಭಟರಿಂದ ನೃಪರ ॥
ಹೆಮ್ಮೆಯ ಬಿಡಿಸುವನಣ್ಣನೆಂಬಾಗಹೊ । ನಿಮ್ಮ ಮಿಕ್ಕಧಿಕರಾರೆಂದಾ ॥ ೧೧೬ ॥
ನೀವಗ್ರಗಣ್ಯರೆಂದಾಡಲೇತಕೆ ನಿಮ್ಮ । ಸೇವಾನುಮತದೊಳಾಚರಿಪ ॥
ನಾವೆಲ್ಲರಧಿಕರೆಂಬುದು ಲೋಕವೆಂದನಾ । ಕಾವನ ಸಖರು ಲೇಸೆನಲು ॥ ೧೧೭ ॥
ಅಲ್ಲವೆ ಚಕ್ರಿಗಾರಿದಿರಾತನನುಜನೀ । ಫುಲ್ಲಾಸ್ತ್ರಗಾರಿದಿರಿವರ ॥
ಮೆಲ್ಲಡಿವಿಡಿದಾವು ಧನ್ಯರಾದೆವು ಲೇಸ । ಸೊಲ್ಲಿಸಿದ್ಯೆಯೆಂದರವರು ॥ ೧೧೮ ॥
ಪ್ರಣಯಚಂದ್ರಮಮಂತ್ರಿ ಕೇಳಿದ್ಯೆ ನುಡಿವ ದ । ಕ್ಷಿಣನ ಚಾತುರ್ಯವನೆಂದಾ ॥
ಗುಣವನುಳ್ಳುದನಾಡಿದನು ಸ್ವಾಮಿಯೆಂದು ಪೂ । ಗಣೆಯುಗಾ ಮಂತ್ರಿ ಸೂಚಿಸಿದಾ ॥ ೧೧೯ ॥
ನೀನತಿದಕ್ಷ ನಿನ್ನಣ್ಣನಗ್ಗಳನೆಂಬು । ದೇನುಪಚಾರದ ನುಡಿಯೆ ॥
ಭಾನುಚಂದ್ರರ ಲೋಕ ಬಣ್ಣಿಪಂತಿಹುದೆಂದು । ಮೀನಾಂಕಗೊರೆದನಾ ಸಚಿವಾ ॥ ೧೨೦ ॥
ಎರವಿಲ್ಲದದು ನೋಡು ಚಕ್ರಿಯ ಮಂತ್ರಿಮಿ । ತ್ರರುಗೂಡಿ ನಿನಗೆ ಕಾಣಿಕೆಯಾ ॥
ಬರುತಿರ್ದ ಸಖನ ಕೈಯೊಳು ಕಳುಹಿದರದು । ದೊರೆಯು ಸದ್ಗುಣವಲ್ತೆಯೆಂದಾ ॥ ೧೨೧ ॥

ಇಂದಿಗೋಲಗ ಸಾಕು ದಕ್ಷಿಣನಾಯಕ । ಬಂದಲಸಿಕೆಯ ಹಿಂಗಿಸಲಿ ॥
ಮುಂದಾತನೆಯ್ತಂದ ಕಾರ್ಯವ ಬೆಸಗೊಂಬ । ವೆಂದನಾ ಮಂತ್ರಿ ಮನ್ಮಥಗೆ ॥ ೧೨೨ ॥
ಗಮ್ಮನೀತಗೆ ಪಡಿಬೀಡಾರಗೈಸೆಂದು । ಕಮ್ಮಗೋಲನು ಮಂತ್ರಿಗೊರೆದಾ ॥
ನಮ್ಮ ಮನೆಗಳಿದ್ದು ಬೀಡಾರವೇಕೆಂದು । ಸಮ್ಮಾನಿಸಿದರಾಗ ಸಖರು ॥ ೧೨೩ ॥
ಭರತೇಶ ಬಿಜಯಂಗೈದನಾದರೆ ದೇವ । ರರಮನೆಯಲ್ತೆ ಬಿಡಾರಾ ॥
ದೊರೆಯು ಸಖಗೆ ನಮ್ಮ ಮನೆಯೆ ಬಿಡಾರವೆಂ । ದೆರವಿಲ್ಲದೆಲ್ಲರಾಡಿದರು ॥ ೧೨೪ ॥
ನೆವದಿಂದ ಬಂದನೀ ದಕ್ಷಿಣನಾಯಕ । ನವಗಿದೊಂದೊಸಗೆಯಾಯ್ತೆಂದು ॥
ಸುವಿಟನಾಗರದಕ್ಷಿಣಾಂಕ ಮುಂತಾದಂಗ । ಭವನ ಸುಮಿತ್ರರಾಡಿದರು ॥ ೧೨೫ ॥

ಉಡುಗೊರೆಯಿತ್ತು ದಕ್ಷಿಣಗೆ ಮತ್ತೀತನ । ಪಡೆಯ ಮನ್ನಿಸು ಮಂತ್ರಿಯೆಂದಾ ॥
ನಡೆಯಿಂದು ವಿಶ್ರಮಿಸೆಂದು ತನ್ನಯ ಸಖ । ರೊಡನೆ ಬೀಳ್ಕೊಟ್ಟನಾ ಮದನಾ ॥ ೧೨೬ ॥

ಬೆಲೆವೆಂಗಳೆಲ್ಲರ ಬೀಳ್ಕೊಟ್ಟು ಹೊಂದೊಡ । ರುಲಿಯೆ ಸಿಂಹಾಸನದಿಂದ ॥
ಆಳವಿಯೊಳಿದ್ದು ತನ್ನಯ ರಾಣಿಯರುಗೂಡಿ । ನಿಳಯುವ ಹೊಕ್ಕನಾ ಮದನಾ ॥ ೧೨೭ ॥

ಈ ಮಂತ್ರಿಸಖರು ತನ್ನತ್ತಲೀ ಭುಜಬಲಿ । ಸ್ವಾಮಿ ಬೇರಾಗಿದ್ದನೆಂದು ॥
ಕ್ಷೇಮಾರ್ಥಿ ದಕ್ಷಿಣ ನೆನವುತೆಯಿದ್ದನಿದು । **ಕಾಮದೇವಾಸ್ಥಾನ ಸಂಧಿ** ॥ ೨೨೮ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೯ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವ್ವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೩೦ ॥

ನಿಟ್ಟಸುತಖಿಳವೀರಾನುಯೋಗವ ಬೇರು । ಪಟ್ಟಿಹ ವಿಮಲಸ್ವರೂಪಾ ॥
ದಿಟ್ಟಮನಸುತುಂಬಿ ನನ್ನೊಳಿರಾ ಮೋಕ್ಷ । ಮುಟ್ಟ ಚಿದಂಬರಪುರುಷಾ ॥ ೧೩೧ ॥

ಕಾಮದೇವಾಸ್ಥಾನಸಂಧಿ ಸಂಪೂರ್ಣಂ.

# ಸಂಧಾನಭಂಗಸಂಧಿ.

ನಿರ್ಮಲೋಪಾಯ ನಿಶ್ಚಿಂತಾಭಿಪ್ರಾಯ ಜ್ಯೋ । ತಿರ್ಮಯ ತೀವ್ರಪ್ರಕಾಶಾ ॥
ನರ್ಮದೊಳ್ಕಾವ್ಯವ ನಡೆಸು ನವೀನಾತ್ಮ । ಧರ್ಮಾ ನಿರಂಜನಸಿದ್ಧಾ ॥ ೧ ॥

ಮದನನ ಸಖರಿಗೆ ಮಂತ್ರಿಗೆ ದಕ್ಷಿಣ । ಹೃದಯದರ್ಥವನಾಡಿ ತೋರಿ ॥
ಹದಗೈದುಕೊಂಡೆಯ್ದಿ ಮರುದಿನ ಕಂಡನು । ಮದನನನಾಸ್ಥಾನದಲ್ಲಿ ॥ ೨ ॥

ಬಂದುದೇನೈ ಹೇಳು ದಕ್ಷಿಣ ನೀನೆಂದು । ಕಂದರ್ಪ ಕೇಳ್ದನಂತದಕೆ ॥
ಮುಂದೆ ಕೈಮುಗಿದು ನಿಂದಾ ದಕ್ಷಿಣಾಂಕನಿಂ । ತೆಂದನೇನೆಂಬೆನಿಂಬರಿದು ॥ ೩ ॥

ಬಿನ್ನಹ ಸ್ವಾಮಿ ದೊಡ್ಡೊಡೆಯನ ಸೋದರ । ನನ್ನ ಚಿಕ್ಕೊಡೆಯ ನಾಡೊಡೆಯ ॥
ಚೆನ್ನಿಗರೊಡೆಯ ನಿನ್ನವನ ಬಿನ್ನಹವ ಪ್ರ । ಸನ್ನಚಿತ್ತದಿ ಲಾಲಿಸಂದಾ ॥ ೪ ॥

ರಾಯುಗೆ ಧರೆ ಸಾಧ್ಯವಾಯ್ತಾದಮೇಲೆ ಮಾ । ರ್ಗಾಯುದೊಳಯ್ಯನ ಕಂಡಾ ॥
ತಾಯ ಕಂಡನು ಮೇಲೆ ತಮ್ಮನ ಕಾಣ್ಬಾರ್ತೆ । ಯಾಯಿತೆಂದಾಯೆದೆಯೊಳಗೆ ॥ ೫ ॥

ತಮ್ಮನ ನೋಳ್ಪಂದವೇನೆಂದು ಗೂಢದೊ । ಳ್ನಮ್ಮ ಕೇಳುವನು ಕೇಳಿದೊಡೆ ॥
ತಮ್ಮನ ಕಾಣ್ಬಾರ್ತೆ ನಿನಗಾಯ್ತು ನಿನ್ನನಾ । ತಮ್ಮ ಹಾರನೆಯೆಂದೆವಾವು ॥ ೬ ॥

ನಮ್ಮೆಲ್ಲರಿಂದತಿಮುದ್ದಾಗಿ ಪೊರೆದನೈ । ಕಮ್ಮಗೋಲನನಯ್ಯನೆಂದು ॥
ಸುಮ್ಮನಿರಲಿ ಸುಖದಲಿ ಸುತ್ತಲೇಕೆ ಚಿ । ಕ್ಕಮ್ಮಗೊಬ್ಬನೆ ಮಗನೆಂದಾ ॥ ೭ ॥

ಚಿಕ್ಕಮಾತೆಯ ನಾಳೆ ಸಾಕೇತಪುರಕೆ ತ । ಮ್ಮಕ್ಕನು ಕರೆಸುವುದುಂಟು ॥
ಸಕ್ಕರೆವಿಲ್ಲನಾಗೆಯ್ತುಹನವನನು । ಚಿಕ್ಕತಾಯನು ಕಾಣ್ಬನೆಂದಾ ॥ ೮ ॥

ಅರಮನೆಯೊಳು ನೀವು ಸಂಧಿಸಿ ಮಾತಾಡಿ । ದರೆ ನವಗದ ಕೇಳಲರಿಪು ॥
ಧರೆ ತೆರಪಾದಲ್ಲಿ ಸಂಧಿಸೆ ನಾವು ಸ । ರ್ವರು ಕಾಣ್ಬವೆಂದೆಳಸಿದೆವು ॥ ೯ ॥

ದೊರೆಗಳೆಲ್ಲರು ನೀವು ಸಂಧಿಸಿ ನುಡಿವೊಂದು । ಸಿರಿಗಾಣಲರ್ತಿಸುತಹರೆ ॥
ತೆರಳ್ವಾಗ ಸ್ಮರಪುರದಿದಿರಲ್ಲಿ ಸಂಧಿಸೆ । ಧರಣೀಶನದಕೊಡಂಬಟ್ಟಾ ॥ ೧೦ ॥

ದೂರವಲ್ಲೀಗ ನಿನ್ನೂರ ಸಮೀಪದೊ । ಳಾರಾಯನಿದ್ದನರ್ತಿಯೊಳು ॥
ಹಾರಯ್ಸಿದವರ ಕಣ್ಣಾರ್ತಿಯು ಸಲಿಸಲೆ । ಮಾರಯೆಂದೊಡನಡ್ಡಬಿದ್ದಾ ॥ ೧೧ ॥

ಏಳೇಳು ಕುಳಿತು ಮಾತಾಡೆನೆ ಕುಳಿತನು । ಕೇಳು ದಕ್ಷಿಣ ನಿಮ್ಮ ಪುರಕೆ ॥
ಲೀಲೆಯೊಳೆಯ್ದಿರ್ಪೆ ನಿಮ್ಮಾಣ್ಮ ಪೇಳ್ದಂತೆ । ನಾಳೆ ನಾನೆಯ್ತಹೆನೆಂದಾ ॥ ೧೨ ॥

ಇರ್ವರ್ಗೆ ನಿವಗರ್ತಿಯೊಂದೆಯಾಯ್ತುಹುದೆಮ್ಮ । ಸರ್ವರ ನುಡಿಗೊಡಂಬಟ್ಟು ॥
ಸಾರ್ವಭೌಮನು ನಿಂದ ಮೇಲಿನ್ನು ಸಂಧಿಪು । ದುರ್ವಿಗುತ್ತಮ ಸ್ವಾಮಿಯೆಂದಾ ॥ ೧೩ ॥

ಮೇರು ನಿಂದಂತೆ ನಿಂದನು ಚಕ್ರಿ ನೀನೆಯ್ದಿ । ಮೇರುಗಳೆರಡು ಸಂಧಿಸಿದ ॥
ಗೌರವವಹುದಲ್ಲದಿದ್ದರೆ ರಾಜಗಂ । ಭೀರಕೆ ಸಾಮಾನ್ಯವಲ್ತೆ ॥ ೧೪ ॥
ವ್ಯಂತರರಂಬರೇಚರರು ಭೂಭುಜರು ನೋ । ಳ್ಪಂತರಂಗಾಶೆಯೊಳಿದ್ದು ॥
ಕಂತುವೆಯ್ತಂದುದಿಲ್ಲೆಂಬಾಗ ಮುಖವು ನಿ । ಷ್ಕಾಂತಿಯಾಗದೆ ಸೊಲ್ಲಿಸೆಂದಾ ॥ ೧೫ ॥
ಲೋಕಾನಂದವ ಮಾಳ್ಪನಲ್ಲದೆ ನೀನು । ವ್ಯಾಕುಲದೋರುವ ಸುಖಿಯೆ ॥
ಈ ಕಾರ್ಯಕಿಂತುಟೆಂದೆನಬೇಡ ಮಕರಪ । ತಾಕ ಚಿತ್ತೈಸಬೇಕೆಂದಾ ॥ ೧೬ ॥
ಬಹೆನಹುದೆನಗೊಂದುಕಾರ್ಯವುಂಟದರಿಂದ । ಬಹುದಕ್ಕೆ ಬಗೆ ಬಾರದೀಗ ॥
ಮಹಿಪನ ನೀನೊಂದುತಂತ್ರದಿಂದೇಳಿಸಿ । ಗೃಹವನೆಯ್ದಿಸು ನಡೆಯೆಂದಾ ॥ ೧೭ ॥
ಬೇಡವೈ ಸ್ವಾಮಿ ನೀನೆಯ್ದಿ ನಿಮ್ಮಣ್ಣನ । ನೋಡಿ ನಿಮ್ಮಯ ವಿಳಾಸವನು ॥
ನೋಡದ ಪಡೆಗೆ ಸಂತಸಮಾಡು ವಿರಸವ । ಮಾಡುವುದುಚಿತವೆಯೆಂದಾ ॥ ೧೮ ॥
ಭರತರಾಜನ ಕಾಣ್ಬ ಕಾರ್ಯದಿಂದಧಿಕದ । ಪರಕಾರ್ಯವುಂಟೆ ಲೋಕದೊಳು ॥
ಒರೆಯದಿರಿಂತಂತುಟೆಂದು ಚಿತ್ತೈಸೆಂದು । ಕರಗಳ ಮುಗಿದನಾ ಸುಮುಖಾ ॥ ೧೯ ॥
ಆವ ಬಗೆಯಲಾದರೊವ್ಮೆ ನೀನೆಯ್ತಂದ । ಸೇವೆಯ ನೀ ನೋಡುತಿರ್ಪ ॥
ನಾವಿಷ್ಟು ನಮ್ಮ ಕಾರ್ಯವ ನೋಳ್ಪೆವೈಯೆಂದು । ಕಾವನಾಡಿದನಾತನೊಡನೆ ॥ ೨೦ ॥
ನಿನ್ನ ಕಾರ್ಯಕೆ ಹಾನಿಯಪ್ಪಂತೆ ನಾನೊಂದ । ಬಿನ್ನವಿಪಾಗನ್ಯರವನೆ ॥
ನನ್ನ ಸೇವೆಯೆ ನಿನ್ನ ಕಾರ್ಯವಲ್ಲವೆ ಪಾಲಿ । ಸೆನ್ನ ಬಿನ್ನಹವ ನೀನೆಂದಾ ॥ ೨೧ ॥
ಬಲ್ಲೆವೈ ನೀನಿಷ್ಟು ಜಾಣನೆಂಬುದ ಮಾತಿ । ನಲ್ಲಿ ನಮ್ಮನು ಚಾಳೈಸದಿರು ॥
ಸಲ್ಲದು ನನಗೀಗ ಬಹುದಕೆಹೋಗೆಂದು । ಮಲ್ಲಿಗೆಗೋಲನಾಡಿದನು ॥ ೨೨ ॥
ಅಣ್ಣನೊತ್ತಿಗೆ ಗಮಿಸುವರಾಗದೆಂದಿಂತು । ಬಣ್ಣಿಸುವರೆ ಸ್ವಾಮಿಯೆಂದಾ ॥
ಅಣ್ಣನಲ್ಲೆಮಗಾತನೊಡೆಯನೈ ನೀನಿಂತು । ಬಣ್ಣವಿಕ್ಕದಿರು ಸಾಕೆಂದಾ ॥ ೨೩ ॥
ದಂಡುವೆರಸಿ ನಿಂದು ಕಾಮನ ಕರೆಯೆಂದು । ತೊಂಡರ ಕರೆಸುವಂತೆನ್ನಾ ॥
ದಂಡಿಸುತಿದ್ದನಣ್ಣನೊ ಈತನೊಡೆಯನೊ । ಕಂಡುದ ಹೇಳು ನೀನೆಂದಾ ॥ ೨೪ ॥
ಗುರುಹಂಸನಾಥ ನೀವಿಂತಾಡುವರೆ ಸ್ವಾಮಿ । ದೊರೆಗಳು ನಾವಾಸೆವಟ್ಟು ॥
ಇರಿಸಿದೆವಲ್ಲದೆ ಚಕ್ರಿ ನಿಂದನೆ ನಾವು । ಸಿರಿಗೆಡರಲ್ತೆ ಹಾಯೆಂದಾ ॥ ೨೫ ॥
ಧರೆಯ ತೂಕದ ಚಕ್ರಧರನ ನಿಲಿಸಿದೆವು । ಪರಿವಾರಕಂಗಜೋತ್ತಮನ ॥
ಸಿರಿದೋರ್ಪೆವೆಂದು ನೆನೆದೆವೆಮ್ಮ ಕಾರ್ಯದೀ । ವರಿಗಾದುದಿಲ್ಲಹಾ ಯೆಂದಾ ॥ ೨೬ ॥
ಮನದೊಳೊಂದಿದ್ದು ಮಾತಿನೊಳೊಂದ ನುಡಿವುದು । ನನಗೆನ್ನ ಪಡೆಗೆ ಸಲ್ಲುವುದು ॥
ನಿನಗೆ ನಿನ್ನೊಡೆಯಗೆ ಸಲುವುದೆ ಠಕ್ಕಿನ । ವಿನಯವೇಕೆಂದನಾ ಮದನಾ ॥ ೨೭ ॥

ಠಕ್ಕಾವುದೊಡೆಯಯೆಂದನು ಹೇಳಬೇಕೆ ಬೇ । ಕಕ್ಕಟ ನೀವಾತ್ಮರತರು ॥
ಠಕ್ಕನಾಡಿರಿ ನಾನೆ ತಪ್ಪಿ ನುಡಿದೆನದ । ಲೆಕ್ಕಿಸಬೇಡ ಹೋಗೆಂದಾ ॥ ೨೮ ॥
ದೇವರ್ಗೆ ತಪ್ಪಿಲ್ಲವೆಮಗೆ ತಪ್ಪಿಲ್ಲ ಠ । ಕ್ಕಾವುದೆಂದದ ಸೂಚಿಸೆಂದಾ ॥
ನೋವು ಬಹುದು ಸಾಕು ಹೋಗೆಂದ ನಿನ್ನಿಂದ । ನೋವುಂಟೆ ಉಸುರುಸುರೆಂದಾ ॥ ೨೯ ॥
ಚಕ್ರಿ ನಿಂದರೆ ನನ್ನ ಕಾಣಿಸಿಕೊಂಬ ಪ । ರಾಕ್ರಮಾರ್ಥಕೆ ಬೀಡುಬಿಟ್ಟು ॥
ಚಕ್ರಿ ಕಳುಹೆ ಬಂದು ಬಣ್ಣವ ನುಡಿಯುವೈ । ವಕ್ರವನರಿದೆ ಹೋಗೆಂದಾ ॥ ೩೦ ॥
ನೀನು ಮಾಜಿದೆ ನಿನ್ನ ನುಡಿಗೊಡಂಬಟ್ಟೆನ್ನ । ಮಾನಿಸಮಾರ್ಜಿದರಿವನು ॥
ತಾನೆ ಬಂದೊಬ್ಬ ಹಿತವನೆನಗೊರೆದನ್ನೈ । ನಾನಾರ್ಥ ಸಾಕು ಸಾಕೆಂದಾ ॥ ೩೧ ॥
ನಿಂದಿತು ಚಕ್ರ ನೀವಿಪ್ಪರೀ ಸ್ಥಳದಲ್ಲಿ । ಸಂದಿಸಲೆಂಬರ್ಥಕಾಗಿ ॥
ಮುಂದಿ ಹಾರಿತು ಕಂಡ ನಿಮ್ಮನೋಲೈಸುವೆ । ನೆಂದು ಹಾರದೆ ಚಕ್ರವೆಂದಾ ॥ ೩೨ ॥
ಒಳಗನರಿಯದಲ್ಲಿ ಜಾಣ್ಮೋರಬೇಕಹು । ದೊಳಗ ಕಂಡವರಿದಿರಿನೊಳು ॥
ಸಲುವುದೆ ಜಾಣ್ಮೆ ಸಾಕ್ಷಿ ಸ ಮ್ಮನಿರು ಮಾತ । ಕಲಿತೆಯೆಂದಾಡುವೆಯೆಂದಾ ॥ ೩೩ ॥
ಏನಿಷ್ಟು ಸೊಕ್ಕು ನಿಮ್ಮೊಡೆಯಗೆ ಧರಣಿಯು । ಭೂನಾಥರೆರಗೆ ತಣಿಯದೆ ॥
ಸೇನೆಯ ಮುಂದೆನ್ನನೆರಗಿಸಿಕೊಂಬ ಬ । ಲ್ಮಾನಕೆ ನಾನೆಯ್ದಬೇಕೆ ॥ ೩೪ ॥
ಪ್ರೇತುಗಳಲ್ಲ್ತೆ ಖೇಚರರು ಭೂಚರರೆಲ್ಲ । ಭೂತಗಳಲ್ತೆ ವ್ಯಂತರರು ॥
ಪ್ರೇತುಭೂತಗಳಂಜಿ ನಮಿಸಿದರೆನೆ ಮೀನ । ಕೇತುವೆರಗುವನೆ ತನಗೆ ॥ ೩೫ ॥
ಎರಗುವುದಕೆ ಪ್ರಸ್ತವೇನು ತನ್ನಯ ಹಂಗು । ಕಿರಿದುಂಟೆ ನನಗಯ್ಯನಂದು ॥
ಪಿರಿಚಿಕೊಟ್ಟಂಬಳಿಯಲ್ಲಿ ನಾನಿಹೆನು ಕ । ಣ್ಗರುಬಾಯ್ತೆ ತನಗಿದ ನೋಡಿ ॥ ೩೬ ॥
ತುಂಬಿದ ರಾಜ್ಯವ ತನಗಿತ್ತು ಪಿತ ಕಿರಿ । ದುಂಬಳಿಯಿತ್ತನು ನನಗೆ ॥
ಕಂಬೆಳಗಿದ ನೋಡಿ ಕೆಚ್ಚಗಾದುದೆ ನಮ್ಮ । ಹೊಂಬಣ್ಣದೊಡಲಣ್ಣಗೆಂದಾ ॥ ೩೭ ॥
ಉಂಬಳಿಯೇನು ನಿಮ್ಮಣ್ಣ ನಿನಗೆ ತನ್ನ । ತುಂಬಿದ ಧರೆಯೊಳರ್ಧವನು ॥
ಇಂಬರಿದೀವೆನೆಂದೆಮ್ಮೊಳಾಡಿದನಿಂತು । ಟೆಂಬರೆ ಸ್ವಾಮಿ ನೀನೆಂದಾ ॥ ೩೮ ॥
ಅಲ್ಪರ ನುಡಿವಂತೆ ನುಡಿಯದಿರಲೆ ಸ್ವಾಮಿ । ಬಲ್ಪಿನ ಚಕ್ರನಾಯಕನಾ ॥
ಮೆಲ್ಪಿನ ಗುಣ ನಿನ್ನ ಸೊಮ್ಮಲ್ತೆ ಕಠಿಣದ । ಬಲ್ಪವೇಕೆಂದು ಕೈಮುಗಿದಾ ॥ ೩೯ ॥
ಬಿಡೆಯಲಾ ನಿನ್ನ ಜಾಣ್ಮೆಯ ಮತ್ತು ನನಗೊಂದು । ಪೊಡವಿಯಾಸೆಯ ತೋರಿ ಕರೆದು ॥
ಒಡೆಯನ ಕಾಲ್ಗೆರಗಿಪೆನೆಂದು ನೆನೆವೆಯೈ । ಬಡಮನದವನೆ ನಾನೆಂದಾ ॥ ೪೦ ॥
ಗುಣಕೆರಗುವೆನಹುದಣ್ಣನೆಂದೊಮ್ಮೆ ಝುಂ । ಕಣೆಗೆರಗುವೆನೆ ತಾನೀಗ ॥
ಅಣಿಮೋರಿ ನಿಂದು ಬಣ್ಣಕೆ ನಿನ್ನ ಕಳುಹಿ ಪ್ರೇ । ರಣೆಸುತಿದ್ದನು ಭಾಪು ನೋಡ ॥ ೪೧ ॥

ಹೆಡ್ಡರೆನ್ನೊಡಹುಟ್ಟಿದವರೀತನೋಲೆಗೇ । ಳ್ದೊಡ್ಡಳಿದೋಡಿದರ್ತಪಕೆ ॥
ದೊಡ್ಡಕಾರ್ಯವ ತೋರುತಿದ್ದನು ನನ್ನೊಡ । ನೊಡ್ಡುಗೂಡಿದರಾದರೆಲ್ಲ ॥ ೪೨ ॥

ಅಪ್ಪಾಜಿ ಕೊಟ್ಟ ತೇಜದೊಳೆನ್ನ ಸೋದರ । ರೊಪ್ಪದೊಳಿರಲೆಂಬನಣ್ಣಾ ॥
ಕಪ್ಪವ ತೆರಲೆರಗಲಿಯೆಂಬನಣ್ಣನೆ । ತಪ್ಪಲ್ಲ ಲೇಸಣ್ಣನೆಂದಾ ॥ ೪೩ ॥

ಉತ್ತಮರಾಣಿಯ ಮಗನೊಬ್ಬನೆನ್ನನು । ತೊತ್ತಿರ ಮಗನ ಕಾಣ್ಬಂತೆ ॥
ಒತ್ತಂಬದಿಂದೆನ್ನ ಕರೆಸುತಿದ್ದನು ಭಾಗ್ಯ । ವೆತ್ತಣ್ಣನಲ್ತೆ ಲೇಸೆಂದಾ ॥ ೪೪ ॥

ಕೇಳಿಬ್ಬರರಸಿಯರುಂಟೈಸೆ ದೊರೆಪಾಟಿ । ಊಳಿಗವೆಣ್ಣೆಲ್ಲ ಪಿತಗೆ ॥
ಊಳಿಗದವರ ಮಕ್ಕಳ ಕರೆವಂತೆಮ್ಮ । ಕೇಳಬಹುದೆ ನಿಮ್ಮ ನೃಪತಿ ॥ ೪೫ ॥

ನನ್ನ ನಿಮ್ಮೆಡೆಗಟ್ಟಿದಾಗ ಮಂತ್ರಿಯು ಸಖ । ರೆನ್ನ ಕೈಯೊಳಗೆ ಕಾಣಿಕೆಯಾ ॥
ನಿನ್ನಂಘ್ರಿಗಟ್ಟಿದಾಗೂಳಿಗವೆಣ್ಣಾತ । ಬಿನ್ನಣಿಪರೆ ಸ್ವಾಮಿಯೆಂದಾ ॥ ೪೬ ॥

ನುಡಿಯಲಂಜುವೆನೆಲೆ ಸ್ವಾಮಿ ಚಿತ್ತೈಸು ದೊ । ಡ್ಡೊಡೆಯ ತನ್ನಯ ಮಂತ್ರಿಸಖರಾ ॥
ಬಡತಾವಿಗಟ್ಟನಟ್ಟಿದರೇನು ನಮ್ಮ ಚಿ । ಕ್ಕೊಡೆಯನಲ್ಲಿಗೆ ಬಂದೆವೆಂದಾ ॥ ೪೭ ॥

ಅಲ್ಲವೈ ನೀವೆನ್ನ ಚಾಳೈಸಿಕೊಂಡೊಯ್ವ । ರೆಲ್ಲವ ಮಾಳ್ಪರಂತದಕೆ ॥
ಫುಲ್ಲಾಸ್ತ್ರ ಮರುಳಾಗಿ ಬಂದು ನಿಮ್ಮೊಡೆಯನ । ಮೆಲ್ಲಡಿವಿಡಿವನೆಯೆಂದಾ ॥ ೪೮ ॥

ಆಟ್ಟೋಲೆಗಳನಟ್ಟ ಚಿಕ್ಕಚಿಕ್ಕನುಜರ । ದಟ್ಟಿಸಿ ತಪಸಿಗೋಡಿಸಿದಾ ॥
ದಿಟ್ಟನೆಂಬುದನರಿದೆನಗೀಗ ಕೆಳೆಯನ । ನಟ್ಟಿದನೈ ಬಲ್ಲೆವೆಂದಾ ॥ ೪೯ ॥

ಹುಸಿವಿನಯವ ತೋರುತಂಜಿಸುತೆಮ್ಮ ಚಾ । ಳಿಸುವುದ ಕಂಡೆಮ್ಮ ಹೃದಯ ॥
ಬಿಸಿಯಾಗದಿಹುದೆ ತಂಪೆನಿಪ ಚಂದನವಮಥ । ನಿಸೆ ಹೊಸಕಿಡಿ ಸೂಸದಿಹುದೆ ॥ ೫೦ ॥

ಕ್ಷಣಕ್ಷಣಕೆನಗೆ ನಿನ್ನೊಡೆಯನ ಗುಣವನೊ । ಕ್ಕಣಿಸುವಾಗೆದೆಯಲ್ಲಿ ಕೋಪಾ ॥
ಕುಣಿದಾಡುತಿದೆ ನನ್ನ ಕೆರಳಿಸಬೇಡ ದ । ಕ್ಷಿಣ ಹೋಗು ಹೋಗು ಸಾಕೆಂದಾ ॥ ೫೧ ॥

ಕಂಬನಿದುಂಬಿದನೊಡನೆದ್ದು ದಕ್ಷಿಣ । ಮುಂಬಟ್ಟೆಯೊಳಗಡ್ಡಬಿದ್ದು ॥
ಇಂಬುಗೊಳ್ಳೆಲೆ ಸ್ವಾಮಿ ನಿಮ್ಮ ನೋಯಿಸಿದೆನೇ । ನೆಂಬೆ ನಾನತಿಕ್ರೂರನೆಂದಾ ॥ ೫೨ ॥

ಒಡೆಯರಿಬ್ಬರನೊಡಗೂಡಿ ನೋಡುವೆವೆಂದು । ಸಡಗರಗೊಂಬೆವು ನಾವು ॥
ಕಡುಪಾಪಿಗಳು ನೆನೆದುದು ಫಲಿಸುವುದೆ ಚಿ । ಕ್ಕೊಡೆಯಯೆಂದತ್ತತ್ತು ನುಡಿದಾ ॥ ೫೩ ॥

ಮೂಲೋಕಕಮೃತವ ಕರೆವನ ಮನದಲ್ಲಿ । ಜ್ವಾಲೆಗೊಳಿಸಿದೆನು ನಾನು ॥
ಹಾಲು ಬಪ್ಪಲ್ಲಿ ನೆತ್ತರ ಬರಿಸಿದೆ ನಾನು । ಮೂಲೋಕಕತಿಪಾಪಿಯೆಂದಾ ॥ ೫೪ ॥

ಪಾಪಿಯಲ್ಲೇಳೇಳು ಪೋಗೆಂದನೊಡನೆದ್ದು । ಪೋಪೆನೆಂದವನು ಪೋಗುತಿರೆ ॥
ಹೋ ಪೋಗದಿರು ದಕ್ಷಿಣಾಂಕ ನಿಲ್ಲೆಂದು ಸ । ಮಾಪದ ಮಂತ್ರಿ ಮಾರ್ಕೊಂಡಾ ॥ ೫೫ ॥

ಅಂಜುವೆನೊಡೆಯ ನಿಮ್ಮಯ ಕೋಪಕಿದಿರಾರು । ನೀಂ ಜಾಣದೊರೆಯದರಿಂದ ॥
ಕಂಜಾಸ್ತ್ರ ನೀವಿಕ್ಕಿದಾಜ್ಞೆಗೊಳಗು ಲಾಲಿ । ಸಂಜದಿನ್ನಾಡುವೆನೆಂದಾ ॥ ೫೭ ॥
ಪುರುಪರಮೇಶನ ಸುತರು ನೀವಿಬ್ಬರು । ವಿರಸವ ನುಡಿದಾಡಿದಾಗ ॥
ಧರೆಯೊಳಿದ್ದವರಿನ್ನು ಸಹಜದಿ ನಡೆವರೆ । ಮರುಳುಗೊಂಡಾಡರೆ ವಿಭುವೆ ॥ ೫೭ ॥
ಅಣ್ಣನೊತ್ತಿಗೆ ನೀನು ಗವಿುಸಲೊಲ್ಲದೆ ನಿನ್ನ । ಕಣ್ಣ ಕೆಚ್ಚಗೆ ಮಾಡಿದಾಗ ॥
ಅಣ್ಣ ತಮ್ಮದಿರಿನ್ನು ಜಗದೊಳಿದ್ದವರೆಲ್ಲ । ಡೊಣ್ಣೆಯೊಳ್ಬಡಿದಾಡದಿಹರೆ ॥ ೫೮ ॥
ಓಜೆಯ ವಿಾರಿ ಬಂದವರಿಗಾಜ್ಞೆಯ ಮಾಳ್ಪ । ರಾಜರೋಜೆಯ ವಿಾರಿ ನಡೆಯೆ ॥
ಓಜೆವೇಳ್ವರು ಆರು ಬೇಡೆಂದು ಸಖರೆಲ್ಲ । ರೋಜೆಯಿಂದೆರಗಿ ಪೇಳಿದರು ॥ ೫೯ ॥
ಗುರುವಿಗೆ ಶಿಷ್ಯ ತಂದೆಗೆ ಮಗ ತನ್ನಯ । ಪುರುಷಗೆ ಸ್ತ್ರೀಯೆರಗದಿರೆ ॥
ಹಿರಿಯಣ್ಣಗನುಜರೆರಗದಾಗ ಮಳೆಬೆಳೆ । ಧರೆಯೊಳುಂಟೆ ಸ್ವಾಮಿಯೆಂದಾ ॥ ೬೦ ॥
*ಆದರ ಮೇಲೊಡೆಯ ನಿನ್ನಣ್ಣನು ನೀನು ಲೋ । ಕದೊಳೆಲ್ಲರಂದದ ನೃಪರೆ ॥
ತ್ರಿದಶಲೋಕದ ಮೆಚ್ಚಿನರಸುಗಳಲ್ಲವೆ । ಇದ ನೆನೆವರೆ ಸ್ವಾಮಿಯೆಂದಾ ॥ ೬೧ ॥
ನನ್ನೆದೆಯೊಳು ಹೊಳೆದುದ ನಾನು ಮಾಜದೆ । ಬಿನ್ನವಿಸಿದೆ ಸ್ವಾಮಿ ನೀನು ॥
ನಿನ್ನೊಳಾಲೋಚಿಸು ಮಿತ್ರರೇನರಿಯರೆ । ಸನ್ನಿಧಿಯೊಳಗಿಹರೆಂದಾ ॥ ೬೨ ॥
ಕಾಮನ ಸಖರು ದಕ್ಷಿಣನಾಗರಾದಿಗ । ಳಾ ಮಾತಿಗೆಲ್ಲರೊಗ್ಗಾಗಿ ॥
ನೇಮುಗಂಡಾಡಿದ ಪ್ರಣಯಚಂದ್ರಮಮಂತ್ರಿ । ಸ್ವಾಮಿ ಮೆಚ್ಚುವನೆಂದರಿದಕೆ ॥ ೬೩ ॥
ಪರಮುಖಜಾಣನೆ ಸ್ವಾಮಿ ನೀನರಿಯದ । ಸುರುಚಿರಕಲೆಗಳೇನುಂಟೆ ॥
ಹಿರಿಯಣ್ಣನೆಡೆಗೆಯ್ದೆನೆಂಬುದಿದುಚಿತವೆ । ಸ್ಮರಿಸಿ ನೋಡೆಂದರಾ ಸಖರು ॥ ೬೪ ॥
ಮೃದುಚಿತ್ತನೆಂಬರು ನಿನ್ನ ನಿನ್ನೊಡನಾಡಿ । ಚದುರರೆಂದಾಡುವರೆಮ್ಮಾ ॥
ಇದ ನೀನು ನೆನೆದಾಗ ನಿಮಗೆಮಗಿನ್ನು ಲೋ । ಕದೊಳುಂಟೆ ಸತ್ಕೀರ್ತಿ ನೃಪತಿ ॥ ೬೫ ॥
ಅಣ್ಣನೆಂಬಾಗ ನಿನ್ನಣ್ಣನೆಲ್ಲರ ಪಾಟಿ । ಯಣ್ಣನೆ ತಮ್ಮನೆಂಬಾಗ ॥
ಅಣ್ಣಪ್ಪಂದಿರ ಪಾಟಿಯನುಜನೆ ನೀನಿಂತು । ಬಿಣ್ಣಿತು ತೋರ್ಪರೆ ಸ್ವಾಮಿ ॥ ೬೬ ॥
ಜಗಕಗ್ರಗಣ್ಯರು ನೀವು ಕೂಡಿರಲದು । ಜಗದ ಸೌಭಾಗ್ಯವೆಮ್ಮರ್ತಿ ॥
ದುಗುಡಬೇಡೆಂದು ಮಂತ್ರಿಗೆ ಸನ್ನೆಮಾಡಿ ಕೈ । ಮುಗಿದಡ್ಡಬಿದ್ದರಾ ಸಖರು ॥ ೬೭ ॥
ಏಳೇಳು ಮಂತ್ರಿ ಸಾಕೇಳಿರೈ ಸಖರೆಂದ । ಪಾಲಿಪನೆನ್ನೆಮ್ಮ ನುಡಿಯಾ ॥
ಮೇಲೇಳ್ವೆವೆಂದರೊಂದೆರಡುಮಾತುಂಟದ । ಕೇಳಿರೈಯೆನಲೆದ್ದರೊಡನೆ ॥ ೬೮ ॥

---

ಸದಮಲಚರಿತ ನೀ ನಿನ್ನಣ್ಣ ಲೋಕದೊ । ಳ್ಪದಿದ ವೈಭವವುಳ್ಳ ನೃಪರು ॥

ನನಗತಿಹಿತರೆಂದು ಕಂಡಿದ್ದೆ ನೀವೆನ್ನ । ಮನಕಿಚ್ಛೆಯಿಲ್ಲದ ನುಡಿಯಾ ॥
ಅನುವಡಿಸುವರೆ ನನ್ನವರೆಂದರೆನ್ನ ಮಾ । ತನೆ ಮೆಚ್ಚಬೇಡವೆಯೆಂದಾ ॥ ೭೯ ॥
ನೋಡಿರೈ ಚಕ್ರಿಯಿಚ್ಛೆಯನೆ ಚಕ್ರಿಯ ಸಖ । ನಾಡಿದನಲ್ತೆ ನೀವಿವನಾ ॥
ನೋಡಿಕೊಂಡಾದರು ನನ್ನತ್ತಲಾಡದಿಂ । ತಾಡಬಹುದೆಯೆಂದನೊಡನೆ ॥ ೭೦ ॥

ಕೇಳುತಿದ್ದವರು ಸೈರಿಸಲಾರದಷ್ಟರೊ । ಳೋಲಗವೆಂಗಳೊಳ್ಕೆಲರು ॥
ಪಾಲಿಸಬೇಕೆಲ್ಲರಿಚ್ಛೆಯನೆಂದು ವೈ । ನೀಳಗೊಟ್ಟೆರಗಿದರವರು ॥ ೭೧ ॥
ಗಣ್ಯದೋರುವ ಮಂತ್ರಿಸಖರ ಮಾತುಗಳ ದಾ । ಕ್ಷಿಣ್ಯದೊಳಾಲಿಸುತಿರ್ದಾ ॥
ಗಣ್ಯನಾರಿಯರ ಮೇಲುಗ್ರಕೋಪವನು ಶ । ರಣ್ಯವಿಲ್ಲೆನಲೆತ್ತಿಕೊಂಡಾ ॥ ೭೨ ॥
ಸುತ್ತ ಸುಮ್ಮನೆ ನೋಡುತಿರದೆ ಬುದ್ಧಿಯ ಹೇಳ । ಲಿತ್ತಲಾರ್ಕರೆತಂದರಿವರಾ ॥
ತೊತ್ತಿರ ಬಡಿಬಡಿಯೆಂದು ಮನ್ಮಥ ನೇಮ । ವಿತ್ತನು ಕಳಕಂಠಗೊಡನೆ ॥ ೭೩ ॥
ಬಾಳೆಯ ಸುಳಿಯು ಕಟ್ಟೆಗೆಕೋಲೊಳವ ಹೊಯ್ದು । ನೇಳೇಳು ಮಾಲೆಗೋಡಾಡಿ ॥
ಆ ಲೇಸುವೆಂಗಳ ಮೈಗೆ ಬಾಸಳು ಪುಷ್ಪ । ಮಾಲೆಯಂತಿದ್ದುವಾ ಕ್ಷಣವೆ ॥ ೭೪ ॥
ಆಯ್ದಟ್ಟಿ ಹೊಯ್ವಾಗ ಹುಲ್ಲೆಯಂದದಿ ಹಾರಿ । ಯೆಯ್ದುವಳೊರ್ವ ಚಪಳೆಯಾ ॥
ನೆಯ್ದಿಲ ದಂಟಿನ ಸೆಳೆಯೊಳೆ ಹೊಯ್ದರೆ । ಮೆಯ್ದೊಗಲುಬ್ಬಿತಾಕ್ಷಣವೆ ॥ ೭೫ ॥
ಮತ್ತಕೋಕಿಲನೆಂಬ ಚಾಟಿಕೋಲವಗೆ ಕ । ಣ್ಣೊತ್ತಿ ಹೊಯ್ ಹೊಯ್ಯೆಂದನೊಡನೆ ॥
ಮತ್ತೆ ಕೆಲಬರನಶೋಕೆಯ ತಳಿರು ವೈ । ಸುತ್ತುವಂತವನಟ್ಟೆ ಹೊಯ್ದಾ ॥ ೭೬ ॥
ಮಲಯಮಾರುತ ಮಂದಮಾರುತನೆಂಬಿಬ್ಬ । ರಲಘುಜಟ್ಟಿಗಳ ನೇಮಿಸಿದಾ ॥
ಎಳೆದೆಳೆದತ್ತಿತ್ತ ತೆಗೆದು ಗುದ್ದಿದರು ತಂ । ಬೆಲರೊಲೆವಂತೆಳೆಲತೆಯಾ ॥ ೭೭ ॥
ಸಿಡಿದತ್ತಲಿತ್ತ ಕೆಲಬರೋಡುವಾಗ ಬ । ಲ್ಮುಡಿಬಿಟ್ಟು ತಮ್ಮ ಪಜ್ಜೆಗಳಾ ॥
ತೊಡರಲು ದೊಪ್ಪನೆ ಕೆಡೆವರು ಕಾಲ್ಕಣ್ಣಿ । ತೊಡರಿ ಬೀಳ್ವಂತೆ ಹುಲ್ಲೆಗಳು ॥ ೭೮ ॥
ಮಲಯಮಾರುತ ಗುದ್ದಲೊರ್ವಳು ಬೀಳ್ವಾಗ । ಲೊಲೆದೊರ್ವಳಾರಾಂತು ತನ್ನ ॥
ಮೊಲೆಯನಾಕೆಯ ಮೊಲೆಗಳು ತಾಳಲಾರದೆ । ನೆಲಕೆ ಬಿದ್ದಳು ತಬ್ಬಿಕೊಂಡು ॥ ೭೯ ॥
ಗುಚ್ಛವ ಕೋಕಿಲನೆತ್ತಲೊರ್ವಳು ಸಾಕಿ । ದಚ್ಛನ್ನರವದ ಬಾಣಾಂಕಿ ॥
ಇಚ್ಛಾಮಹಾದೇವಿಯಾಣೆ ಹೊಯ್ಯದಿರೆನೆ । ಪುಚ್ಛದತ್ತವ ಸಾರಿ ನಿಂದಾ ॥ ೮೦ ॥
ಅತಿಕೋಪ ಮಿಗೆ ಗುದ್ದಲೆಂದೆಯ್ದುವಾಗೊರ್ವ । ಚತುರೆ ಸಾಕಿದ ಗಿಣಿ ಕಂಡು ॥
ರತಿದೇವಿಯಾಣೆ ಗುದ್ದದಿರೆನೆ ಮಲಯಮಾ । ರುತನಂಜಿ ನಿಂದ ದೂರದೊಳು ॥ ೮೧ ॥
ಎಂದೆಂದು ದನಿಗೆ ತೆಳ್ಪುಸುರಿಗೆ ಸರಿಯಲ್ಲ । ವೆಂದು ಜರಿವರೆಮ್ಮನೆಂದು ॥
ಅಂದು ವೇಳೆಯ ಕಂಡು ಕೊಂದರಾ ಕಳಕಂಠ । ಮಂದಮಾರುತರು ನೀರೆಯರಾ ॥ ೮೨ ॥

ತಳಿರ ಲಂಚವ ಪಿಡಿ ಕಳಕಂಠಯೆಂದು ಬೆ । ಳ್ಪಿಲೆಗೊಟ್ಟಳೊರ್ವಳು ಭ್ರಮಿಸಿ ॥
ಹಳಿಯೆವು ಮಂದಮಾರುತ ನಿನ್ನನೆಂದೆಲ್ಲ । ರೊಳಹೊಕ್ಕು ದೈನ್ಯದೋರಿದರು ॥ ೮೩ ॥
ಜ್ವರ ಹುಟ್ಟಿತೆಲ್ಲರ್ಗೆ ಶ್ವಾಸ ಹೆಚ್ಚಿತು ಕಣ್ಣು । ತಿರುಗಿ ಕಂಪನ ಬೆಮರಾಯ್ತು ॥
ಸ್ಮರವೀರನುಪಟಳಕಿದಿರಹರಾರು ಮ । ಲ್ಲರು ವೇತ್ರಿಗರು ಸದಕಿದರು ॥ ೮೪ ॥
ಅರಿಯದಾಡಿದೆವೆಲೆ ಸ್ವಾಮಿ ಪಾಲಿಪುದೆಂದು । ಮೊರೆಯಿಟ್ಟರವರಾಗ ಮೊದಲು ॥
ಎರಗಿದ್ದ ಪೆಂಗಳೆಲ್ಲರ ರಕ್ಷಿಸುವುದೆಂದು । ಮರುಗಿ ಕೈಮುಗಿಯೆ ಮಾಣಿಸಿದಾ ॥ ೮೫ ॥

ಪರಿಣಾಮದೊಳಗಿವರನುಭವಿಸುವರೆಮ್ಮ । ಪುರದ ಭೋಗಿಗಳೇನು ಕಡಮೆ ॥
ಭರತೇಶನಾಳ್ಗಳ ನೋಡಬೇಕಾಯ್ತೆ ತೊ । ತ್ತಿರಿಗೆಂದು ನುಡಿದ ಕೋಪದೊಳು ॥ ೮೬ ॥
ಮದವೆದ್ದ ಜವ್ವನಿಗರೊಳಿವರಾಡಿ ಸೊ । ಕ್ಕಿದರಿನ್ನು ನುಡಿದರೊಬ್ಬೊಬ್ಬ ॥
ಮುದಿವಿಟರಿಗೆ ನೂಂಕಿ ನೋಯಿಸಬೇಕೆಂದು । ಮದನನಾಡಿದನು ಪಲ್ಗಡಿದು ॥ ೮೭ ॥
ರಸಿಕರ ಕೂಡಾಡಿ ಸೊಕ್ಕಿದರಿನ್ನು ಭಾಂ । ದಸರಿಗೆ ಜಾಡ್ಯವಿಟರಿಗೆ ॥
ಹಸುರೆಲೆಗೋಟಡಕೆಯ ಮೆಲ್ವರಿಗೆ ನೂಂಕಿ । ಹೊಸಬಾಧೆವಡಿಸಬೇಕೆಂದಾ ॥ ೮೮ ॥
ಎಲ್ಲ ಪೆಂಗಳು ಸುಮ್ಮನಿದ್ದಂತೆ ನೀವಿರ । ಲೊಲ್ಲದೆ ನನಗೊಂದ ಪೇಳ್ದು ॥
ಬಲ್ಲವಿಕೆಯ ತೋರ್ಪುದಾಯ್ತೆ ಮಝು ಕಬ್ಬು । ವಿಲ್ಲನೇಂ ಸದರನೊಯೆಂದಾ ॥ ೮೯ ॥
ಮನೆಮನೆಗೆಲ್ಲ ಬಲ್ಲವರಾದರಾನೊಬ್ಬ । ನಿನಿಸನರಿಯದವನಾದೆ ॥
ಜಿನಸಿದ್ಧಾ ಹಂಸನಾಥನೆ ಬಲ್ಲ ನೋಡು ಕಾ । ಮನ ಕರ್ಮವೆ ಭಾಪು ವಿಧಿಯೆ ॥ ೯೦ ॥
ಅವಿವೇಕದೊಳು ನಾನು ನಡೆವವ ನೀವೆಲ್ಲ । ಸುವಿವೇಕದೋಜೆದೋರುವರು ॥
ಕವುದಿಗೆ ಹಲ್ಲು ಬಂದಂತಾಡಿಸುವುದು ಕಾ । ಲವೊ ಕರ್ಮವೊ ಹಂಸನಾಥಾ ॥ ೯೧ ॥
ಏತರದಿವರೊಪ್ಪದಾಗೆನ್ನ ಬದುಕಹೊ । ಪೂತು ಮಝುರೆಯೆಂದು ನುಡಿಯೆ ॥
ಭೀತಿಗೊಂಡುಸುರದಿರ್ದರು ಮಂತ್ರಿಸಖರಂಗ । ಜಾತನ ಕೋಪವ ಕಂಡು ॥ ೯೨ ॥
ಮೊರನ ಹೊಯ್ದುರೆ ಬೆಕ್ಕನಂಜಿಸಿಕೊಂಡನೆಂ । ಬರಿಕೆಯ ನುಡಿಯಂತೆ ಮದನಾ ॥
ಉರುಬಿ ಹೇಳುವ ಮಂತ್ರಿ ಸಖರನಂಜಿಸಿಕೊಂಡ । ಹೊರವೆಣ್ಣುಗಳ ಮೇಲೆ ಮುನಿದು ॥ ೯೩ ॥
ಹೋರಿ ಹೇಳುವ ಮಂತ್ರಿಸಖರ ಮೇಲಣ ಕೋಪ । ವಾರನಾರಿಯರ ನೋಯಿಸಿತು ॥
ಊರಿಗೆಯ್ದಿದ ಮಾರಿ ಬೀರಸೆಟ್ಟಿಯ ಹೊಯ್ದು । ದಾರಿಕಾರರ ಗಾದೆಯಂತೆ ॥ ೯೪ ॥

ತಲೆಗುತ್ತಿ ನಡುಗುತ ಸುಮ್ಮನಿದ್ದುದು ಸಭೆ । ಬಳಿಕ ಹೂಂಕರಿಸುತಂಗಜನು ॥
ತೊಲಗಿ ದೂರದೊಳಿದ್ದ ಗುಣವಸಂತಕನೆಂಬ । ದಳನಾಯಕನ ನೋಡಿ ನುಡಿದಾ ॥ ೯೫ ॥
ಇತ್ತಿತ್ತ ಬಾ ಬಾರೈ ಗುಣವಸಂತಕ ದೂರ । ದತ್ತತ್ತಲೇಕೆ ನೀ ನಿಲ್ವೆ ॥
ಹೊತ್ತು ಹೋಕವೊಯೆನ್ನ ಮಾತು ನೀತಿಯೊ ಪೇಳು । ಚಿತ್ತದೊಳಿರ್ದುದನೆಂದಾ ॥ ೯೬ ॥

ಕೆಟ್ಟಿಕೆಟ್ಟೆನು ಸ್ವಾಮಿ ನಿನ್ನ ನಿರೂಪವ । ಕುಟ್ಟಿ ಪರೀಕ್ಷಿಪರುಂಟೆ ॥
ಕಟ್ಟಾಣಿಮುತ್ತಿನ ಸರವದು ಸೊಬಗಿನ । ಕಟ್ಟಿ ಲೇಸಿನ ಬಟ್ಟೆಯೆಂದಾ ॥ ೯೭ ॥
ರಾಜಾಂಗವನೆ ತೋರಿ ನುಡಿದೆಯಲ್ಲದೆ ನೀನು । ವ್ಯಾಜಾಂಗವೊಂದನಾಡಿದೆಯಾ ॥
ತೇಜಸ್ವಿಯೇಕೊಬ್ಬಗೆರಗುವನದು ರಾಜ । ರೋಜೆ ತಾನೆಂದನಿಚ್ಚೆಗನು ॥ ೯೮ ॥
ಮಾರನಗ್ಗಳನೆಂದುಯೆಲ್ಲರಾಡುವರು ಮ । ತ್ತೀ ರೀತಿಯೊಳು ಪೋಗಿಯೆರಗೆ ॥
ಮಾರಾಯನೆಂಬರೆ ನಿನ್ನ ಕಂಡವರೊಂದು । ಮಾರ ತೊಲಗುವರೆಯೆಂದಾ ॥ ೯೯ ॥
ಗುಣಕೆರಗುವೆನೆಂದೆ ವಿಕ್ರಮಕೆರಗೆನೆಂ । ದೆಣಿಸಿದೆ ನಿನ್ನಲ್ಲಿ ತಪ್ಪೆ ॥
ಗುಣಿಗಳಾರಿದ ಮೆಚ್ಚದವರೆಂದು ನುಡಿದನು । ಗುಣವಸಂತಕ ವೇಳೆಯರಿದು ॥ ೧೦೦ ॥
ಮೆಚ್ಚಿದನದಕೆ ಬಾ ಬಾರೆಂದು ಕರೆದೊಂದು । ಪಚ್ಚೆಯ ಪದಕವನಿತ್ತಾ ॥
ಒಚ್ಚೆಯಗೊಡದತಿವೀರನೈ ನಿನ್ನ ನಾ । ನಚ್ಚಿದೆನಿನ್ನು ಹೋಗೆಂದಾ ॥ ೧೦೧ ॥
ಕಳಕಂಠಮತ್ತಕೋಕಿಲಮಂದಮಾರುತ । ಮಲಯಮಾರುತರು ಹೊತ್ತರಿದು ॥
ಎಲೆ ಸ್ವಾಮಿ ನಿನ್ನ ಕಾರ್ಯಕೆ ಸರಿಯುಂಟೆಯೆಂ । ದುಲಿದರದಕೆ ಮೆಚ್ಚುಗೊಟ್ಟಾ ॥ ೧೦೨ ॥
ನೀವೀಗ ನನ್ನವರುಳಿದವರೇನೆಂದು । ಭಾವಿಪೆನೆನುತೋರೆಮೊಗದಿ ॥
ಕಾವನಿನ್ನೋಲಗ ಪರಿಯಲ್ಲೆಯೆಂದನು । ಚಾವಡಿಯಿಂದೆದ್ದರೆಲ್ಲ ॥ ೧೦೩ ॥
ನುಡಿಯದೆ ಸಖರು ಮಂತ್ರಿಯು ದಕ್ಷಿಣಾಂಕನು । ಪೊಡವಟ್ಟು ಸಾಗಿದರವರು ॥
ಒಡನೆ ಕೈಮುಗಿದು ಪೆಣ್ಣುಗಳೆಲ್ಲ ಪೋದರು । ದುಡುಗುಟ್ಟುವೆದೆಯ ಬಲ್ಪಿಡಿದು ॥ ೧೦೪ ॥
ನೊಂದ ಪೆಂಗಳಿಗೆ ಕೈಗೊಡುತ ಚೆಲ್ಲಿದ ಮಣಿ । ಯೊಂದ ಹಾರದೆ ಬಿಟ್ಟ ಮುಡಿಯಾ ॥
ಚಂದವ ಮಾಡದೆ ಹೋಗುತಿರ್ದರು ಕಾದಿ । ನೊಂದ ಪಾಯ್ದಳ ಸಾಗುವಂತೆ ॥ ೧೦೫ ॥
ಇದ್ದರು ಗುಣವಸಂತಕ ಮೊದಲಾದೈವ । ರಿದ್ದವರೆಲ್ಲ ಸಾಗಿದರು ॥
ಗದ್ದುಗೆಯೊಳಗಿದ್ದು ಕರೆಕರೆ ಕಳಕಂಠ । ಹೊದ್ದಿ ದಕ್ಷಿಣನ ಬೇಗೆಂದಾ ॥ ೧೦೬ ॥
ಕಡೆಯ ಬಾಗಿಲಿಗವ ಹರಿತಂದು ಕರೆದನು । ಸಡಗರಗೊಂಡು ದಕ್ಷಿಣನಾ ॥
ಒಡೆಯನ ಮನವಿಷ್ಟು ತಿಳಿದುದೊಯೆಂದಾಸೆ । ವಡುತ ಬಂದವನು ಕೈಮುಗಿದಾ ॥ ೧೦೭ ॥
ಕೇಳು ದಕ್ಷಿಣ ನಿನ್ನ ದೊರೆಯೆನ್ನ ಮೇಲಿನ್ನು । ದಾಳಿಮಾಡದೆ ಪೋಪನಲ್ಲ ॥
ಕಾಳಗವಿಲ್ಲಿ ಬೇಡಾನೆಯ್ದಿ ನೀವಿರ್ದ । ಪಾಳೆಯದೊಳೆ ಬಪ್ಪೆನೆಂದಾ ॥ ೧೦೮ ॥
ಆರುಖಂಡವ ಗೆಲ್ದೆನೆಂಬನ ಗರ್ವವ । ಮಾರಾಂಕದೊಳಗೆತ್ತಿ ತೂಗಿ ॥
ತೋರುವೆನೆಂದನಾ ಸಖ ಕೇಳಿ ಭಾಗ್ಯವು । ಹಾರುವ ಮಾತೆಂದು ನೆನೆದಾ ॥ ೧೦೯ ॥
ಬಡವರ ಸಂಧಿಸಿದಂದವಲ್ಲೀಗ ದಾ । ಳಿಡುವನಾ ಭುಜಬಲಿರಾಜಾ ॥
ಪಡೆಗೂಡಿ *ಜೋಕೆಯಾಗಿರಲೆಂದನವನಿದು । ಕಡೆಗಾಲ ನಿಮಗೆಂದು ನೆನೆದಾ ॥ ೧೧೦ ॥

* ಜೋಕೆಯೊಳಿರಲೆಂದನವನಿಂದು । ಕಡುಗಲಿಯಿವನೆಂದು ನೆನೆದಾ ॥

ಹೋಗು ನಿನ್ನೊಡೆಯಗೀ ಹದನ ಹೇಳೆನಲವ । ಮೂಗುವಟ್ಟೊಡನೆ ಕೈಮುಗಿದು ॥
ಹೋಗುತಿದ್ದನು ಮಝು ತೀವ್ರಕರ್ಮನವೆ ಮೋಕ್ಷ । ಭಾಗಿಯು ಕಾಡುವೈಯೆನುತ ॥ ೧೧೧ ॥

ಆಜ್ಞೆಯದು ಚಕ್ರಿಯಾಪ್ತಿಗರೆಯ್ದಲೆಮ್ಮ ಪ । ಟ್ಟಣದೊಳಹೊಗಿಸಬೇಡೆಂದು ॥
ಗುಣವಸಂತಕ ಮೊದಲಾದರ ಕಳುಹಿ ಪೂ । ಗಣೆಯ ಹೊಕ್ಕನು ನಿಜಾಲಯವಾ ॥ ೧೧೨ ॥

ಹಿಂದಕೆ ಕರೆಸಿದುದೇನೊಯೆಂದೆಣಿಸುತ । ನಿಂದಿದ್ದ ಕಡೆಯ ಬಾಗಿಲೊಳು ॥
ಬಂದು ದಕ್ಷಿಣ ಪೇಳೆ ಮಂತ್ರಿಸಹಾಯರು । ಸ್ಸೆಂದು ಸುಯ್ದರದೇನು ಹಿತರೊ ॥ ೧೧೩ ॥

ಉರಿವ ಕೋಪವ ಕಂಡು ನಾನೊಂದ ನೃಪಗಿಚ್ಛೆ । ಗೊರೆದೆನಂತದು ಸತ್ಯವೆಂದು ॥
ಸ್ಮರಿಸಬೇಡೆಂದನು ಗುಣವಸಂತಕನದು । ಬೆರಗಾಯ್ತು ಲೇಸೆಂದರೆಲ್ಲ ॥ ೧೧೪ ॥

ಮೂಕರಂತಿರೆ ದೊರೆ ಮುನಿವನೆಂದರಿದೊಂದು । ವಾಕುದೋರಿದೆವಿಚ್ಛೆಗಾವು ॥
ಈ ಕಾರ್ಯಮಾರ್ಗಹುದೆಂದಾಡಿದರು ಮತ್ತ । ಕೋಕಿಲ ಮುಂತಾದ ಹಿತರು ॥ ೧೧೫ ॥

ನಮಿಸಬೇಕೆಂಬರಲ್ಲದೆ ತಮ್ಮನಣ್ಣಗೆ । ಸಮರಕೊಡ್ಡುವುದು ಲೇಸೆಂದು ॥
ಅಮೃತವನುಂಡವರಾರು ನುಡಿವರೆಂದು । ತಮತಮಗೆಲ್ಲರಾಡಿದರು ॥ ೧೧೬ ॥

ದೊರೆಗಳಿಬ್ಬರು ಕೂಡೆ ನಾವು ನೋಡುವ ಭಾಗ್ಯ । ದೊರಕಿತಿಲ್ಲದು ನಮ್ಮ ಪಾಪ ॥
ಪಿರಿದಾಯಸಂಬಟ್ಟೆ ದಕ್ಷಿಣನಾಯಕ । ತೆರಳೆಂದರೆಲ್ಲ ನೋವಿನೊಳು ॥ ೧೧೭ ॥

ಆಳವಡಿಸಿದ ನಿನ್ನ ತಂತ್ರಕೆ ಸವಿಪೊರೆ । ದೊಳವೊಕ್ಕು ನುಡಿವ ಮೈಸಿರಿಗೆ ॥
ಸಿಲೆ ಮೃದುವಾಗಬೇಕಂಗಜನಾದುದಿ । ಲ್ಲಳದಿರೆಂದಾದರಿಸಿದರು ॥ ೧೧೮ ॥

ಜನನಿ ಮನ್ಮಥಗಿನ್ನು ಬುದ್ಧಿವೇಳ್ವಳು ನಾವು । ಮುನಿಸು ತಂಪಾಗೆ ನೋಡುವೆವು ॥
ಅನುಬಂದರೋಲೆಯುಟ್ಟುವೆವಲ್ಲದಾಗ ಸು । ಮ್ಮನೆಯಿಪ್ಪೆವೆಂದರು ಹಿತರು ॥ ೧೧೯ ॥

ಏನೊಂದು ವಿನಯವ ನಿನಗೆ ಮಾಡಿದೊಡಿನ್ನು । ಮೀನಾಂಕ ನಮಗೆ ಕೋಪಿಸುವಾ ॥
ನೀನು ಪೋಗೆನಲವ ಬೀಳುಗೊಂಡೆಡೆಗೆ ಸಂ । ಧಾನಭಂಗದ ಸಂಧಿ ಬಿರಿಸು ॥ ೧೨೦ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೨ ॥

ನುಡಿವುದು ಪುದ್ಗಲ ಕೇಳ್ವುದು ಪುದ್ಗಲ । ಕಡೆಗೆ ಪುದ್ಗಲ ಸ್ನೇಹಕೋಪಾ ॥
ಜಡಿದಿವ ನೂಂಕಿ ನನ್ನೆದೆಯೊಳಿರಯ್ಯ ಬಾ । ನೊಡಲಾ ಚಿದಂಬರಪುರುಷಾ ॥ ೧೨೩ ॥

ಸಂಧಾನಭಂಗಸಂಧಿ ಸಂಪೂರ್ಣಂ

# ಕಟಿಳವಿನೋದಸಂಧಿ.

ಪ್ರಾಣದೊಡೆಯ ಚದುರರ ದೇವ ಪ್ರೌಢರ । ಪ್ರಾಣವಲ್ಲಭರ ಬಲ್ಲಹನೆ ॥
ಆಣಿಮುತ್ತುಗಳಂತೆ ನುಡಿದೋರು ವಾಕ್ಪುಷ್ಪ । ಬಾಣಾ ನಿರಂಜನಸಿದ್ಧಾ ॥ ೧ ॥

ಕುಡುವಿಲ್ಲನಾಪ್ತರ ಬೀಳ್ಕೊಂಡು ತನ್ನ ಪೆ । ರ್ಪಡೆಗೂಡಿ ಚಕ್ರಿಯ ಸಖನು ॥
ಕಡೆಯ ಹಜಾರದ ಬಾಗಿಲ ಮುಂದಕೆ । ನಡೆದನೇನೆಂಬೆನುಬ್ಬೆಯೊಳು ॥ ೨ ॥

ಬಂದ ತನ್ನೊಂದುಸೇವೆಯ ನೆನೆದಾ ಕಾರ್ಯ । ದಂದಗೆಟ್ಟುದಕೆ ಸಿಗ್ಗಾಗಿ ॥
ಕಂದಿದ ಮೊಗ ಕೆಲಬಲಕೆ ಕಾಲಿಡದ ಕ । ಣ್ಣಿಂದೆಯ್ದುತಿರ್ದ ಮೋನದೊಳು ॥ ೩ ॥

ಪರಮಲೀಲೆಯೊಳೀತ ನಿನ್ನೆಯೆಯ್ದಿದನಿಂದು । ತಿರುಗುವಾಗಿಷ್ಟಾಯ್ತೆ ಚಿಂತೆ ॥
ದೊರೆಗಳ ಸೇವೆಯ ಸುಖವಿಂತೆಯೆಂದಾಗ । ಪುರಜನ ನೋಡಿದುದವನಾ ॥ ೪ ॥

ಇಷ್ಟವನಿವನೆಂದ ನಮ್ಮಾಣ್ಮ ಮುನಿದನು । ಶಿಷ್ಟನಿನ್ನಿವ ತನ್ನ ಪತಿಯಾ ॥
ದೃಷ್ಟಿಸಲೆಣಿಸುತಿದ್ದನು ಸುಡು ಪರಸೇವೆ । ಕಷ್ಟವೆಂದರು ಕೆಲರಲ್ಲಿ ॥ ೫ ॥

ಆದರೆ ಕಾರ್ಯ ನಮ್ಮರಸನ ಪುಣ್ಯದಿಂ । ದಾದುದೆಂಬರು ಕಾರ್ಯ ತಪ್ಪೆ ॥
ಹೋದವರಿಂ ತಪ್ಪಿತೆಂಬರು ಪರಸೇವೆ । ಮೊದಲಿಯೆನುತಿದ್ದರಲ್ಲಿ ॥ ೬ ॥

ಹಿರಿಯಣ್ಣನಲ್ಲವೆ ನರಲೋಕಕೊಬ್ಬದೊ । ಡ್ಡರಸಲ್ಲವೆ ಚಕ್ರಿಯೊಡನೆ ॥
ವಿರಸವ ನೆನೆದಾಗ ನಮ್ಮರಸಿವನೇನು । ಸುರಸನೆಯೆನುತಿದ್ದರಲ್ಲಿ ॥ ೭ ॥

ಭಾವಿಸುತೆಲ್ಲರ ಮಾತ ದಕ್ಷಿಣನು ಚ । ಮ್ಮಾವುಗೆಮೆಟ್ಟಿ ಬಪ್ಪಾಗ ॥
ಸೇವಕ ಕೈಲಾಗ ಕೊಡಬಂದನವನ ನೇ । ತ್ರಾವಲೋಕನದಿ ಜಾರಿಸಿದಾ ॥ ೮ ॥

ಪಾದವೆಚ್ಚರಿಕೆ ಪರಾಕು ಚಾಂಗೆಂದು ಮುಂ । ದೋದೆ ಕೈಸನ್ನೆಯೊಳ್ನಿಲಿಸಿ ॥
ಹಾದಿಯೊಳ್ತಪ್ಪುಕೈಕೊಳಲಲ್ಲಿ ಪಾಡುವ । ನಾದವ ನಿಲಿಸಿಯೆಯ್ದಿದನು ॥ ೯ ॥

ಢಾಳಿಪ ಚಮರ ಸಾಕೆಂದನು ನೀಡಿದ । ವೀಳೆಯದೆಲೆಯ ನಿಲ್ಲಿಸಿದಾ ॥
ಆಳುವನಟ್ಟಿದೂಳಿಗ ಭಂಗವಾದ ಹೀ । ಹಾಳಿಕೆಯೊಳು ಬರುತಿರ್ದಾ ॥ ೧೦ ॥

ಹಿಡಿದರು ತಂದು ಪಲ್ಲಕ್ಕಿಯನವ ಮುಂಡೆ । ಗೊಡಹಿ ಸುಮ್ಮನೆ ಹೋಗುತಿರ್ದಾ ॥
ಒಡನೆ ದಂಡಿಗೆಯನೊಡ್ಡಿದರು ನೋಡದೆ ಕಾಲು । ನಡೆಯೊಳು ಬರುತಿರ್ದನವನು ॥ ೧೧ ॥

ಆನೆಯ ಮುಂದೊಡ್ಡಿ ಬೆಂಗೊಡಿಸಿದರದ । ನೇನೆಂದು ನೋಡದೆಯ್ದಿದನು ॥
ಸಾನುರಾಗದಿ ತಂದು ತೇಜಿಯ ಹಿಡಿದರು । ಮೋನದೊಳಗೆ ಹೋಗುತಿರ್ದಾ ॥ ೧೨ ॥

ಗುರುಸೇವೆ ತಪ್ಪಿದ ಶಿಷ್ಯ ಚಿಂತಿಸುವಂತೆ । ದೊರೆಯಟ್ಟಿದೂಳಿಗ ತಪ್ಪೆ ॥
ಕೊರಗುತ ಕಾಲ್ನಡೆಯೊಳು ಬಂದು ಪೌದನ । ಪುರದ ಬಾಗಿಲನು ದಾಂಟಿದನು ॥ ೧೩ ॥

ಒಡೆಯನೊತ್ತಿಗೆ ಸಾರಬೇಡವೆ ಪಜ್ಜೆಯು । ನಡೆ ಜೋಲಿಯಲ್ಲವೆಯೆಂದು ॥
ಕಡುಹಿತವರು ಪೇಳೆ ದಕ್ಷಿಣನಾಯಕ । ನುಡಿದನಿಂತೆಂದಾಪ್ತರೊಡನೆ ॥ ೧೪ ॥
ಚರಣಮಾರ್ಗದ ನಡೆ ತಳುವಹುದಂದಳ । ಕರಿಹಯಶಿಬಿಕೆ ಬೇಡಿನ್ನು ॥
ತರಹೇಳೊ ಮರುತವಾವೊಂದನೆಂದನು ತಂದ । ರರರೆ ಪಾಯ್ದೇರಿದನೊಡನೆ ॥ ೧೫ ॥
ಸತ್ತಿಗೆವಿಡಿದರು ತೆಗೆಯೆಂದ ಟೆಕ್ಕೆಯು । ನೆತ್ತಿದರಿಳುಹಹೇಳೆಂದಾ ॥
ತತ್ತರಗೊಂಡು ವಾದ್ಯವ ನುಡಿಸಿದರು ಕೈ । ಯೆತ್ತಿ ಛಿ ಛಿಯೆಂದು ಬಯ್ದಾ ॥ ೧೬ ॥
ತುಡುಮು ತಂಬಟವನೇತಕೆ ಒಡಿವರು ರಾಯ । ಗಿಡಿಬಿಡಿ ಸಾಕೆಂದು ಹೇಳೊ ॥
ಸುಡಬೇಡವೆನ್ನೊ ಪಟಲನಿಂದು ನವ್ಮದೆ । ಸುಡುವುದು ಸಾಲದೆಯೆಂದಾ ॥ ೧೭ ॥
ಚೆಜೆಜೆಯೆಂದು ಕಾಳೆಯನೂದಬೇಡಿಂದು । ಛಿ ಛಿ ಛಿಯೆಂದೂದಹೇಳೊ ॥
ನಾಚಿಗೆಗೆಟ್ಟರ ನೋಡೆಂದು ಜಡಿಯೆ ಸೇ । ನಾಚಕ್ರ ಸುಮ್ಮನಾಯ್ತಂಜಿ ॥ ೧೮ ॥
ಸ್ವಾಮಿಯ ಕಾರ್ಯಕೆ ಗೆಲವಾದರಾವು ವು । ಹಾಮಹಿಮೆಯೊಳೆಯ್ದಬೇಕು ॥
ಕಾಮಿನಿಯಿಲ್ಲ ಕೈಧಾರೆಮಂತ್ರವೆಯೆಂದು । ಸ್ವಾಮಿಹಿತವ ನೊಂದು ನುಡಿದಾ ॥ ೧೯ ॥
ತಡವಿಲ್ಲದಾನೆಯ್ದಿ ಸ್ವಾಮಿಯ ಕಾಣ್ಬೆನು । ಪಡೆ ಹಿಂದೆ ಬರಲೆಂದು ತನ್ನ ॥
ಪಡೆಯ ಮುಖ್ಯಗೆ ಪೇಳ್ದು ನಡೆದನು ಮರುತವಾ । ವಡರಿ ತನ್ನೊಡನೆಯ್ದೆ ಕೆಲರು ॥ ೨೦ ॥
ಬಲಗೂಡಿ ಕಟಕವ ಹೊಗಲು ಸಿಗ್ಗಾಗಿ ಹಿಂ । ದುಳುಹಿ ಮುಂದೆಯ್ದುವನೆಂದು ॥
ತಿಳಿದನಾ ಹೆಗ್ಗಡೆ ಲೇಸೆಂದು ತನ್ನಾಣ್ಮ । ಕಲಿಸಿದೋಜೆಯೊಳೆಯ್ದುತಿರ್ದಾ ॥ ೨೧ ॥
ಬಿಗುಹಿನ ಕುಲ್ಲಾಯಿ ಚಲ್ಲಣ ಕಾಸೆ ದ । ಟ್ಟಿಗೆ ಕಟ್ಟಿ ಹೊಳೆವ ಹೊಂಜುರಿಗೆ ॥
ಮಿಗೆ ಮಿಂಚಿನೊಲ್ಲಿವೆರಸು ದಕ್ಷಿಣಾಂಕನು । ಹಗುರಸಿಂಗರದೊಳೆಯ್ದಿದನು ॥ ೨೨ ॥
ತಾವುಜ ಕಡಕು ಪೆಂಡೆಯುವೆತ್ತಿ ಕೊರಲಿಡೆ । ಗಾವರಿಸಿದ ಯಜ್ಞಸೂತ್ರಾ ॥
ನೇವಳವಿಪ್ಪ ತಾಳ್ದುಳಿದವ ತೊರೆದು ಕ । ಲಾವಿದನೆಯ್ತುರುತಿರ್ದಾ ॥ ೨೩ ॥
ಮರುತಮಾವುಗಳನಡರಿಯೆಡಬಲ ಹಿಂದೆ । ಬರೆ ತನ್ನ ಹಿತವರೊಗ್ಗಾಗಿ ॥
ಸರಿತವಾಡಿದನು ತಾನೇರಿದ ಮರುತವಾ । ವೆರಳೆಯ ನಗುತ ಸಾಗಿದುದು ॥ ೨೪ ॥
ವಾಗ್ಯದಂಡೆಗೆ ವಾಮಕರವಿಕ್ಕಿ ಬಲಗೈಯ । ಯೋಗ್ಯದ ಕುಂಚವ ನೆಗಹಿ ॥
ವಾಗ್ಯೋಗ ಹುಮ್ಮನೆ ಪೋಪ ವಾಹನದೊಂದು । ಭಾಗ್ಯ ಸಾಲದೆ ರಾಜಸಖನಾ ॥ ೨೫ ॥
ಧಗಧಗಿಸುವ ರನ್ನಚಿನ್ನದ ಸಂಜೋಗ । ವೊಗರಂಬವೆಸೆವ ಮಾವುಗಳು ॥
ಧಿಗಿಧಿಗಿನೆಯ್ದುತಿರ್ದುವು ಮರ್ಘು ನೋಡೆ ಹೊ । ವ್ಮಿಗಗಳು ಹೊಳೆದು ಹೋಹಂತೆ ॥ ೨೬ ॥
ಧರೆಗೂರಿ ತೆಗೆವ ವೇಗಕೆ ನೋಡೆ ಕಾಲು ಸಾ । ವಿರವೊ ಒಂದೊಂದಕೆಂಬಂತೆ ॥
ಹರಿವಾಣದೊಳು ಸೇಸೆ ಬಿದ್ದಂತೆ ಕಾಲಿಕ್ಕಿ । ಹರಿವುತಿರ್ದುವು ಪಣಪಣನೆ ॥ ೨೭ ॥

ಹರಿಣ ಪಾಡಲ್ಲ ತೇಜಿಯೊಳಿಲ್ಲವೆನೆ ವೇಗ । ಹರಿವುತಿದ್ದುವು ಗಾಳಿಯಂತೆ ॥
ಮರುತಗಳೆನಬಹುದಿವನೆಂದು ದಕ್ಷಿಣ । ಸ್ಮರಿಸುತೆಯ್ದಿದನು ತನ್ನೊಳಗೆ ॥ ೨೮ ॥
ಮಾವಿನ ನೆಳಲ ಸಾರ್ದಂತಿದೆ ಡಗೆಯಿಲ್ಲ । ರಾವುತರೊಡಲಲುಗದಿದೆ ॥
ಮಾವುಗಳೆಂಬ ಪೆಸರು ಸಲ್ವುದಿವಕೆಂದು । ಭಾವಿಸುತೆಯ್ದಿದನವನು ॥ ೨೯ ॥
ಮರುತನಂದದಿ ವೇಗ ಮಾವಿನ ನೆಳಲಂತೆ । ಪರಿಣಾಮದೋರಲಾಗಿವನು ॥
ಮರುತಮಾವುಗಳೆನಬಹುದೆಂದು ಮನದೊಳಾ । ದರಿಸುತ ಸಖನೆಯ್ದುತಿರ್ದಾ ॥ ೩೦ ॥
ಮರುತನನೇರಿ ಬಪ್ಪವನಿಗೆ ತಳುವುಂಟೆ । ತುರಿಹದಿ ಕಟಕವ ಸಾರ್ದು ॥
ನೆರವಿಯ ಹೊಕ್ಕೆಯ್ದಿ ವಾಹನವಿಳಿದು ಮಂ । ದಿರಕೆ ಬೀಳ್ಕೊಟ್ಟ ತನ್ನವರಾ ॥ ೩೧ ॥

ಇರುಳೋಲಗವಿತ್ತು ಚಕ್ರೇಶನೆಲ್ಲರ । ಕರೆಯೆಂಬ ವೇಳೆಯೊಳೊಬ್ಬ ॥
ಚರನೋಡಿ ಬಂದು ದಕ್ಷಿಣ ಬಂದ ವಾರ್ತೆಯ । ದೊರೆಗಿಂತು ಬಿನ್ನವಿಸಿದನು ॥ ೩೨ ॥
ದಕ್ಷಿಣನಾಯಕ ಹಿಂಡನುಳಿದ ಹಂಸ । ಪಕ್ಷಿಯೊ ಎಲೆಗಳುದುರಿದ ॥
ಸಾಕ್ಷಾಚ್ಚೂತವೊಯೆನೆ ಬಂದ ದೂರದೊ । ಳೀಕ್ಷಿಸಿ ಬಂದೆ ನಾನೆಂದಾ ॥ ೩೩ ॥
ಪರಿವಾರವಿಲ್ಲ ವಾದ್ಯಗಳಿಲ್ಲ ಹತ್ತೆಂಟು । ಮರುತಮಾವುಗಳೊಡಗೂಡಿ ॥
ಭರದಿ ಬಂದೆಲ್ಲರ ಕಳುಹಿ ತಾನಿಲ್ಲಿಗೆ । ಬರುತಿದ್ದನೆಂದರುಹಿದನು ॥ ೩೪ ॥
ಭರತೇಶನದ ಕೇಳುತೋಲಗಕಿನ್ನಾರು । ಬರಬೇಡ ಹೋಗಹೇಳೆಂದಾ ॥
ಪರಿದು ಮುಂದೆಯ್ತರುತಿರ್ದ ಮಾಗಧಮೇಘೇ । ಶ್ವರರೆದ್ದರುರೆ ಪೋಪೆವೆಂದು ॥ ೩೫ ॥
ತಳರಲೇತಕೆ ನೀವು ಕುಳ್ಳಿರಿರೈ ನಿಮ್ಮ । ಕಳೆದೆನಗುಂಟೆಯೇಕಾಂತಾ ॥
ಕೆಳೆಯರೆಣ್ಬರು ಮಂತ್ರಿ ನೀವಿಬ್ಬರೆನ್ನ ಮೈ । ಗಳವಟ್ಟ ಪ್ರಭೆಯಲ್ತೆಯೆಂದಾ ॥ ೩೬ ॥
ಬಿರಿಸಾದುದೈ ಕಾರ್ಯ ಭುಜಬಲಿಯೊಳಗ ನಾ । ನರಿಯೆನೆ ಬಲುಗರ್ವಿಯವನು ॥
ಬರೆದೋಲೆಯಟ್ಟದೆ ಸಖನನಟ್ಟಿದೆನದು । ಮೆರೆಹಾದುದಿಲ್ಲೆಂದು ನೊಂದಾ ॥ ೩೭ ॥

ನಡೆತಂದನಷ್ಟರೊಳಗೆ ದಕ್ಷಿಣಾಂಕ ತ । ನ್ನೊಡೆಯನನಿದಿರಲ್ಲಿ ಕಂಡು ॥
ಒಡವೆಯ ನೀಗಿದ ಮಗನು ತಂದೆಯ ಕಾಣ್ಬ । ಕಡುಲಜ್ಜೆಯೊಳು ಬರುತಿರ್ದಾ ॥ ೩೮ ॥
ಬಾಡಿದ ಮೊಗ ಬಸವಳಿದ ಮೈಯೊಳು ತನ್ನ । ನೋಡೆ ಸಾಷ್ಟಾಂಗ ಬಪ್ಪ ಸಖನಾ ॥
ನೋಡಿ ಚಕ್ರೇಶ್ವರ ಚಿಂತೆಯೇಕೈ ನಲ್ಮೆ । ಗೂಡಿ ಬಾ ಬೆದರದಿರೆಂದಾ ॥ ೩೯ ॥
ಮುನ್ನಲೆ ಬಲ್ಲೆ ನಾನವನಂತರಂಗವ । ಭಿನ್ನಮಾನಿಸರ ಕಳುಹದೆ ॥
ನಿನ್ನ ನಟ್ಟಿದೆನದು ನನ್ನಲ್ಲಿ ತಪ್ಪು । ಬಾ ನಿನ್ನಲ್ಲಿ ತಪ್ಪಿಲ್ಲವೆಂದಾ ॥ ೪೦ ॥
ಬಂದು ಸಮ್ಮುಖದಲ್ಲಿ ಮೈನೀಡಿ ಚಕ್ರಿಯ । ಮುಂದಡ್ಡಬಿದ್ದೆಲೆ ಸ್ವಾಮಿ ॥
ಓಂದನು ನುಡಿವೆನೆಂದರೆ ಬಾಯಿಬಾರದೆ । ನ್ನಿಂದ ಕಾರ್ಯವು ತಪ್ಪಿತೆಂದಾ ॥ ೪೧ ॥

ಇನ್ನೊಬ್ಬ ಹೋದರೆ ಚಂದವಪ್ಪುದು ಕಾರ್ಯ । ನನ್ನಿಂದ ಹಸಗೆಟ್ಟುದೊಡೆಯಾ ॥
ನಿನ್ನ ತಮ್ಮನೊಳೇನು ಕಡಮೆಯಿಲ್ಲೆಂದನು । ಚೆನ್ನಾದುದೇಳು ಸಾಕೆಂದಾ ॥ ೪೨ ॥
ಸಮ್ಮುಖದೊಳಗೆದ್ದು ನಿಂದನಾಗಲಿ ನನ್ನ । ತಮ್ಮನೇನೆಂದ ಹೇಳೆನಲು ॥
ಕಮ್ಮಗಣೆಯನಲ್ತೆ ಕಠಿಣವ ನುಡಿವನೆ । ಕಮ್ಮನಾಡಿದನೆಂದನವನು ॥ ೪೩ ॥
ಆಡಿದುದೇನೆಂದನಣ್ಣಾಜಿ ಪರಿವಾರ । ಗೂಡಿ ಕೌಶಲಿಗೆಯ್ದಲೆಂದಾ ॥
ನೋಡೆನ್ನ ಪುರಕೆಯ್ದೆ ತನ್ನಪ್ಪಣೆಯೆ ಗರ್ವ । ಕಾಡುತಿದ್ದುದು ತನಗೆಂದಾ ॥ ೪೪ ॥
ಕಾಳಗವೆಂದನೊ ಕಡೆಯ ಮಾತೊಂದನೆ । ಹೇಳಂಜಬೇಡ ನೀನೆಂದಾ ॥
ಕಾಳಗವಲ್ಲಣ್ಣನೊಡನೆ ಸಾಧನೆಮಾಳ್ಪ । ಲೀಲೆಗಿಚ್ಛೈಸಿದನೆಂದಾ ॥ ೪೫ ॥
ಚಿಕ್ಕಂದು ದೇವರ ಕೂಡೆ ಸಾಧನೆಗೈದ । ಲೆಕ್ಕವ ನಿನ್ನ ಪಾಳೆಯಕೆ ॥
ಚಿಕ್ಕನೆಯ್ತಂದು ತೋರುವೆನೆಂದನೆಮ್ಮಯ । ಚಿಕ್ಕೊಡೆಯನು ಸ್ವಾಮಿಯೆಂದಾ ॥ ೪೬ ॥
ವಿನಯತಂತ್ರದಿ ನಾನು ಕರೆದೆನು ತನ್ನ ಸ । ಜ್ಜನರಂತುಟೊರೆದರು ಮತ್ತೆ ॥
ವನಿತೆಯರಾಡಿದರೇನೆಂಬೆನೊಡೆಯ ನಿ । ನ್ನನುಜನ ಮನಸಿಗಾಯಿಲ್ಲ ॥ ೪೭ ॥
ನಿನ್ನ ಕಂಡಂತೆ ಭಕ್ತಿಯ ಮಾಡಿದೆನು ನಸು । ಭಿನ್ನ ಹುಟ್ಟದ ಮಾತ ನುಡಿದೆ ॥
ತನ್ನವರೆಲ್ಲ ಮೆಚ್ಚಿದರಾತಗಾಯಿಲ್ಲ । ನನ್ನ ಪಾಪದ ಫಲವೆಂದಾ ॥ ೪೮ ॥
ಭರತೇಶನೊಡನೀತ ವಿರಸವ ನೆನೆದುದ । ಧರೆ ಮೆಚ್ಚುವುದೆಯೆಂದು ತನ್ನ ॥
ಪುರಜನವೆಲ್ಲ ಚಿಂತಿಸಿ ನುಡಿವುದ ಕೇಳ್ದು । ಬರುತಿದ್ದೆ ನಾನೆಂದನವನು ॥ ೪೯ ॥

ಫಡ ಹುಸಿ ನೋಡವನೆದೆಸೊಕ್ಕನೊಂದನೆ । ನ್ನೊಡನೆ ಕಾಳಗಕೆಳಸಿದನೆ ॥
ಒಡಹುಟ್ಟಿದೊಂದು ಮುಂದ್ಯಾಳದೊಳ್ನುಡಿವನೊ । ಕೆಡುವುದರಿಯದೆ ತಾನೆಂದಾ ॥ ೫೦ ॥
ಬಹಿರಾತ್ಮರಿಗೆ ತನ್ನ ಪುಷ್ಪಬಾಣವ ತೋರಿ । ಬಹುಬಾಧೆಗೊಳಿಸಿದ ಸೊಕ್ಕಾ ॥
ಸಹಜಾತ್ಮರಸಿಕಗೆನಗೆ ತೋರುತಿದ್ದನೆ । ಸಿಹಿವಿಲ್ಲ ಸುಡು ಫಡಾಯೆಂದಾ ॥ ೫೧ ॥
ಪರರ ಕಾಡುವುವು ತನ್ನಂಬುಗಳಾತ್ಮತ । ತ್ಪರರ ಸಮ್ಮುಖದೊಳಾ ಬಾಣಾ ॥
ಇರವೇಳ್ನೊಡಿಹವು ಪೋಗೆಂದರೆ ಪೋಪುವೀ । ಪರಿಯನರಿಯನವನೆಂದಾ ॥ ೫೨ ॥
ಹಂಸನಾಥನ ನೋಡಿ ಪುಷ್ಪಬಾಣಗಳ ವಿ । ಧ್ವಂಸವಮಾಡುವೆನದ ಮಾರಿ ॥
ಹಿಂಸೆಗಂಜದೆ ಖಡ್ಗವಿಡಿದು ಬಂದರೆ ಖಡ್ಗ । ವಂ ಸೆಳೆಕೊಂಡು ನೂಂಕುವೆನು ॥ ೫೩ ॥
ದಿಟ್ಟಿಸಿ ಹೋಗೆಂಬೆ ಹೋಗದಿದ್ದರೆ ಬೆನ್ನ । ಮುಟ್ಟಿ ಹೋಗೆಂದು ನೂಂಕುವೆನು ॥
ದಟ್ಟಿಸಿದರೆ ಕಟ್ಟಿ ಕಳುಹುವೆ ಶಿಬಿಕೆಯೊ । ಳಿಟ್ಟು ಚಿಕ್ಕಮ್ಮನ ಬಳಿಗೆ ॥ ೫೪ ॥
ಮುನಿದೆನಾದರೆ ಚೆಂಡನಿಡುವಂತೆ ಹಿಡಿದೆತ್ತಿ । ವನಧಿಗಿಡುವ ಶಕ್ತಿಯುಂಟು ॥
ಅನುಜನ ಮೇಲೆ ಶಕ್ತಿಯ ತೋರಬಹುದೆ ಮೇ । ದಿನಿ ಮೆಚ್ಚುವುದೆ ತೋರೆನೆಂದಾ ॥ ೫೫ ॥

ಅನ್ನಿಗರೆನಗೊಡ್ಡಿ ನಿಂದರೆ ದಗಮಿನ । ಸನ್ನೆಯೊಳ್ಬಾಯ ಕುಟ್ಟಿಸುವೆ ॥
ಬೆನ್ನ ಬಂದವನ ನೋಯಿಸುವೆನೆ ಜಗವೆಲ್ಲ । ಚುನ್ನವಾಡದೆ ನನ್ನನೆಂದಾ ॥ ೫೬ ॥
ಸಾವಿರವಾದರು ಹಿರಿಯನೆಂಬರು ನನ್ನ । ಕಾವನೆ ಕಿರಿಯನೆಂಬರಲಾ ॥
ಆವುಗ್ರದವನನುಪಾಯದೊಳ್ಗೆಲುವೆನ್ನೆ । ನೀವೆಲ್ಲರಂದಿರಿಯೆಂದಾ ॥ ೫೭ ॥
ಅವನನೆಂತಾದರು ಗೆಲುವೆನಂತಿರಲಿ ಹೋ । ಸವ ನೀಗಿ ಬಂದೆ ನೀನೆಂದಾ ॥
ಸುವಿವೇಕಿ ಕುಳ್ಳಿರೆಂದೆನೆ ದಕ್ಷಿಣಾಂಕ ವಾ । ಕ್ಯವ ಕೇಳ್ದು ತಣಿದು ಕುಳಿತನು ॥ ೫೮ ॥

ಪನ್ನೀರ ಕೊಡಿಸಿ ವೀಳೆಯಗೊಡಿಸಿದನೇಕೆ । ಖಿನ್ನನಪ್ಪೆ ದಕ್ಷಿಣಾಂಕಾ ॥
ನಿನ್ನಿಂದ ಕಾರ್ಯ ತಪ್ಪದು ನಾನು ಬಲ್ಲೆನ್ನೆ । ನನ್ನಾಣೆ ಮರುಗದಿರೆಂದಾ ॥ ೫೯ ॥
ಇಲ್ಲ ನನ್ನೊಡೆಯ ನಿನ್ನಡಿಗಳ ಕಂಡರ್ಗೆ । ಸಲ್ಲೀಲೆಯ್ಯೆಸೆ ನೋವುಂಟೆ ॥
ಎಳ್ಳಷ್ಟು ಮೊದಲಿದ್ದಿತಾ ನೋವು ಹೋಯ್ತೆಂದು । ಸೊಲ್ಲಿಸುತವನು ಕೈಮುಗಿದಾ ॥ ೬೦ ॥
ಸುವಿಟ ಮುಂತಾದ ಮಿತ್ರರು ಮಂತ್ರಿ ಕಟಕಪುಂ । ಗವ ಮಾಗಧೇಂದ್ರರಷ್ಟರೊಳು ॥
ರವಿಯೊತ್ತಿನೊಳು ಮಂಚೆ ನಿನ್ನೊತ್ತಿನಲ್ಲಿ ದುಃ । ಖವೆ ಸ್ವಾಮಿಯೆಂದರರ್ತಿಯೊಳು ॥ ೬೧ ॥
ಒಳಗೆನ್ನ ಸತಿಯರು ಹೊರಗೆನ್ನ ಸುತರು ನೀ । ವಳಲಿದರೆನಗುಂಟೆ ಭಾಗ್ಯಾ ॥
ನಲವಿನೊಳಿರಿ ಹಂಸನಾಥನ ಕೃಪೆಯುಂಟು । ಗೆಲುವೆನೀ ಕಾರ್ಯವನೆಂದಾ ॥ ೬೨ ॥
ತಮ್ಮನಲ್ಲದೆ ಹಗೆಯಲ್ಲವನರಿಯದೆ । ಹೆಮ್ಮೆಯೊಳ್ಬರಲದಕೇನು ॥
ನಿಮ್ಮೆಲ್ಲರರಿಕೆಯೊಳ್ನಯದಿಂದ ಗೆಲುವೆನು । ಉಮ್ಮಳಿಸದಿರಿ ನೀವೆಂದಾ ॥ ೬೩ ॥

ನಾನೊಮ್ಮೆ ಹೋಗಿ ನೋಡಲೆ ಸ್ವಾಮಿಯೆಂದು ಪ್ರ । ಧಾನಿ ಬಿನ್ನವಿಸಿದನದಕೆ ॥
ಏನವ ಮಾನ್ಯರಿರವನು ಬಲ್ಲನೆ ಹೋಗಿ । ಗ್ಲಾನಿಯುಹರೆ ಸೈರಿಸೆಂದಾ ॥ ೬೪ ॥
ಅಯ್ಯಯ್ಯೊ ದಕ್ಷಿಣನರಿಯದವನೆ ಹೋಗಿ । ಹುಯ್ಯಲುಂಡೆಯ್ದಿದನರಿಯ ॥
ಮೆಯ್ಯೆಲ್ಲ ನೋಡು ಮೋರೆಯ ನೋಡು ಸ್ಮರನತ್ತ । ಮೆಯ್ಯಿಕ್ಕಿ ಮಲಗದಿರೆಂದಾ ॥ ೬೫ ॥
ನೀನೆಂದರಾರು ನಾನಲ್ತೆ ಗರ್ವಿಗನ ಸಂ । ಧಾನಕೆ ಹೋಗಿ ಭಂಡಹರೆ ॥
ಏನು ಬಂದುದ ನಾನೆ ಕಾಣ್ಬೆನು ತಾಳೆಂದ । ನೇನು ವಿವೇಕಿಯೊ ಚಕ್ರಿ ॥ ೬೬ ॥
ಚಿಕ್ಕೊಡೆಯನ ಮಂತ್ರಿಸಖರೆಲ್ಲರೆಮ್ಮತ್ತ । ಪಕ್ಕವಾಗಿಹರದರಿಂದ ॥
ತಕ್ಕನೊಬ್ಬನನಟ್ಟಿ ನೋಳ್ಪೆನು ನಾನು ಕಾ । ಲಿಕ್ಕೆನೆಂದನು ಕೂಡೆ ಮಂತ್ರಿ ॥ ೬೭ ॥
ಅದು ಲೇಸು ನಾಳೆ ನಾಡಿದಿಗಿಷ್ಟು ಕೋಪ ತ । ಗ್ಗದೆ ನೋಳ್ಪೆವೆಂದಿದ್ದ ಸಖರು ॥
ವಿದಿತಮಾಗಧದಳಪತಿಗಳಾಡಿದರಾಗ । ಲದಕೇನು ನೋಡಿರ್ಪೆಯೆಂದಾ ॥ ೬೮ ॥

ಬಳಲಿದ್ದೆ ದಕ್ಷಿಣ ಹಿಡಿಯುಡುಗೊರೆಯನೆಂ । ದಿಳೆಯಾಣ್ಮನೊತ್ತಿಗೆ ಕರೆದಾ ॥
ಬಲುಸೇವೆಗೈದೆನಲ್ಲವೆ ನನಗುಡುಗೊರೆ । ಸಲುವುದು ಸಾಕೆಂದನವನು ॥ ೬೯ ॥

ಅವ ಬಾರದಿರೆ ನಿನ್ನ ಪ್ರಯಾಸ ಕಿರಿದಾಯ್ತು । ಸುವಿವೇಕವಿಲ್ಲಾಯ್ತು ಬಾರೈ ॥
ದಿವರಾತ್ರಿ ನೀವು ನಾವಾನಂದದಲ್ಲಿ ಕಾ । ಲವ ನೂಕಬೇಕೆಂದು ಕರೆದಾ ॥ ೭೦ ॥

ಒಲ್ಲನವನು ಕೂಡೆ ಚಕ್ರೇಶ ತನ್ನೊತ್ತಿ । ನಲ್ಲಿಯಿಹರ ನೋಡಿ ನೀವು ॥
ಎಲ್ಲರು ಮನ್ನಣೆವಿಡಿಯಿರೈ ದಕ್ಷಿಣ । ಮೆಲ್ಲನೆ ಮತ್ತಾಂಪನೆಂದಾ ॥ ೭೧ ॥

ಮಾಗಧ ಬಾರೆಲೆ ಮೇಘೇಶ್ವರಾಂಕ ಬಾ । ಸಾಗರಾಂಕಿತಮಂತ್ರಿ ಬಾರೈ ॥
ನಾಗರ ಮೊದಲಾದರೆಯ್ತಂದರೆಂದನು । ರಾಗದಿಂದಿತ್ತ ಮನ್ನಣೆಯಾ ॥ ೭೨ ॥

ಕಡೆಯೊಳು ದಕ್ಷಿಣಗುಡುಗೊರೆಗೊಡುತ ನ್ಯೆ । ದಡವಿ ಮಂಡೆಯನಪ್ಪಿಕೊಳುತ ॥
ಬಿಡು ನೋವನೆಂದು ಮುದ್ದಿಸಿದನಾ ನೃಪನಾತ । ಗೊಡೆಯನೊ ತಂದೆಯೊ ಗುರುವೊ ॥ ೭೩ ॥

ಕನಸಿನೊಳ್ನೋವಿಲ್ಲ ಸ್ವಾಮಿಯೆಂದನು ಪಾದ । ವನಜಯುಗೆಕೆ ಮಂಡೆಯಿಟ್ಟು ॥
ಜನಕಗೆರಗುವಂತೆ ನಮಿಸಿದರೆಲ್ಲರಾ । ತನ ಹೊದ್ದಿ ನಲಿಯುದರಾರು ॥ ೭೪ ॥

ಕಳುಹಿಸಿಕೊಂಡರೆಲ್ಲರು ಚಕ್ರಿ ತಾನೆದ್ದು । ನಿಳಯುವ ಹೊಕ್ಕನಾ ಕ್ಷಣವೆ ॥
ಕಳುಹಿಸಿಕೊಂಡವರೀಚೆಯೊಂದೊಂದೆಡೆ । ಯೊಳು ನಿಂದು ನೆನೆದರಿಂತೆಂದು ॥ ೭೫ ॥

ದೊರೆಗಳು ಮಂತ್ರಿವೆರಸಿ ಹೋಗಿ ಮದನಭೂ । ವರಗೆ ಕಾಣಿಕೆಯಿಕ್ಕಿ ಕಂಡು ॥
ಕರೆತಹವೆಂದು ಯೋಚಿಸಿ ಪ್ರಾಪ್ತನೊರ್ವಗೆ । ವಿರಚಿಸಿದರು ಪಯಣವನು ॥ ೭೬ ॥

ಬೆಳಗಾಗೆ ನೀನೆಯ್ದಿ ಪ್ರಣಯಚಂದ್ರಮನ ಕಂ । ಡೊಳಗರಿದೆಯ್ತಹುದೆಂದು ॥
ಕಳುಹಿ ಬಿಡಾರವ ಹೊಕ್ಕರೆಲ್ಲರು ತಳ । ತಳನೆ ಮೂಡಿತು ಮೂಡ ಭಾನು ॥ ೭೭ ॥

ಸ್ಮರಪುರಕವ ಹೋದ ಹೆಬ್ಬಾಗಿಲೊಳಗಿತ್ತ । ಬರಬಾರದೆಂದು ತಡೆದರು ॥
ಹರಿದು ಮಂತ್ರಿಗೆ ಹೇಳಲಮ್ಮೆವೆಂದರು ನಾಣ್ಚಿ । ತಿರಿಗಿ ಬಂದನು ಪ್ರಾಪ್ತನಿತ್ತ ॥ ೭೮ ॥

ಸರ್ವರು ಚಿಂತಿಸುತಿದ್ದರಾ ವಾರ್ತೆಯ । ಸಾರ್ವಭೌಮನು ಕೇಳಿ ನಕ್ಕಾ ॥
ಗರ್ವವೆಗ್ಗಳಿಸಿತ್ತೆ ಮದನಗೆಂದರು ರವಿ । ಜಾರ್ವುದು ರಾತ್ರಿಯಾಯ್ತೊಡನೆ ॥ ೭೯ ॥

ಭರತೇಶ ಸೆಜ್ಜೆವನೆಯೊಳೊರಗಿದನಂದಿ । ನಿರುಳ ಮೂರನೆಯ ಜಾವದೊಳು ॥
ಪರಮಾತ್ಮಯೋಗದೊಳಿದ್ದನಪ್ಪರೊಳೊಂದು । ಸರಸಾರ್ಥ ಹುಟ್ಟಿತೇನೆಂಬೆ ॥ ೮೦ ॥

ಮರನಲುಗದ ಮಾತುಗುಟ್ಟದ ಹೊತ್ತದು । ತೆರೆನಿಂದ ಕಡಲಂತೆ ಕಟಕ ॥
ಪರವಶವಾಗಿದ್ದುದಿಬ್ಬರೆಚ್ಚತ್ತು ಭೂ । ವರನನಿಂತೆನುತಿದ್ದರಾಗ ॥ ೮೧ ॥

ಹಸಿಗೂಡಿ ಹಳ್ಳ ನಾರೊಡಗೂಡಿ ಹಗ್ಗವೆಂ । ಬನುವಿನೊಳ್ಪಡೆಗೂಡಿ ಚಕ್ರಿ ॥
ಘನತೆವೆತ್ತನು ಸೇನೆಹೊರತಾದರಿವನೊಬ್ಬ । ಮನುಜನಲ್ಲವೆಯೆಂದರವರು ॥ ೮೨ ॥

ಅಹುದಹುದಾನೆಕುದುರೆ ಮೊದಲಾದ ಸಂ । ಗ್ರಹದೋರಿ ಜಗವನಂಜಿಸಿದಾ ॥
ಸಹಜಶಕ್ತಿಯ ನೋಡಲೀತಗೇನುಂಟಾವ । ಮಹಿಮೆ ನಮ್ಮಂತೆಂದರೊಡನೆ ॥ ೮೩ ॥

ಕಟ್ಟ ಕಡೆಯು ಕಟಕದೊಳಿಬ್ಬರಾಡುವ । ಗಟ್ಟ್ಯಾಟವನು ಚಕ್ರಧರನು ॥
ನಟ್ಟ ನಡುವೆ ತೋರ್ಪ ಸೆಜ್ಜೆವನೆಯೊಳಿದ್ದು । ತೊಟ್ಟನೆ ಕೇಳ್ದನೇನೆಂಬೆ ॥ ೮೪ ॥
ರವಿಯೊಳಗಣ ಪ್ರತಿಮೆಯ ಕಾಣ್ಬನವನಕ್ಷಿ । ಕಿವಿಗಳಾ ಕಡೆಯ ಪಾಳೆಯದ ॥
ರವಗೇಳ್ವವೆನಲವನಿಂದ್ರಿಯಶಕ್ತಿಯ । ಹವಣಿಸಬಹುದೆ ಲೋಕದೊಳು ॥ ೮೫ ॥
ಭಾವವ್ಮೈದುನರು ಖೇಚರರವರಾಡಲಾ । ಭೂವರ ಕೇಳ್ದದನೊಂದು ॥
ಭಾವದಿ ಪ್ರಕಟಿಸಬೇಕೆಂದು ನೆನೆದಿದ್ದ । ತಾವರೆಯೋಪ ಮೂಡಿದನು ॥ ೮೬ ॥
ದೇವತಾರ್ಘ್ಯವನಿತ್ತು ಕಡೆಯ ಚಾವಡಿಗೆಯ್ದಿ । ಠೀವಿಯಿಂದೋಲಗವಾದಾ ॥
ಭಾವಶುದ್ಧದೊಳೆಲ್ಲರೆಯ್ತಂದು ಕಂಡು ಸ । ಭಾವಾಸತುಂಬಿದ್ದರಾಗ ॥ ೮೭ ॥
ಮೊಗವನಲ್ಪವ ಮಾಡಿಕೊಂಡು ಮೋನದೊಳು ಗ । ದ್ದುಗೆಯೇರಿ ಚಕ್ರೇಶನಿರಲು ॥
ಮುಗುಳಂಬ ಮಲೆತ ಚಿಂತೆಯೆಯೆಂದು ನೆನೆವುತ । ಮಿಗೆ ಪೊರ್ದಿ ಮಂತ್ರಿಯಿಂತೆಂದಾ ॥ ೮೮ ॥
ಚಿಂತೆ ಬೇಡೆಂದೆಮಗರುಹಿ ದೇವರಿದೇನ । ಚಿಂತಿಪುದೆನೆ ಕೇಳ್ದು ನೃಪತಿ ॥
ಕಂತುವಿಗೆಣಿಸೆನ್ನ ನರ ಬಿಗಿದೆನ್ನನು । ಚಿಂತೆಗೊಳಿಸುತಿದೆಯೆಂದಾ ॥ ೮೯ ॥
ಪರಿಕಿಪೆವೆಲ್ಲೆಲ್ಲಿಯೆಂದ ಮಂತ್ರಿಗೆ ಕಿರು । ವೆರಲ ಸಟೆಗೆ ಡೊಂಕುಮಾಡಿ ॥
ಅರಸ ತೋರಿದನದು ತುದಿಬಾಗಿದೊಂದು ಪೂ । ಸರಲಂತೆ ಕಣ್ಗೆ ಮೋಹಿಸಿತು ॥ ೯೦ ॥
ಧರೆಯೊಳೆಲ್ಲರ ನಡೆನುಡಿ ಡೊಂಕು ಭರತಭೂ । ವರಗೆ ಡೊಂಕಣುಮಾತ್ರವಿಲ್ಲ ॥
ಪೊರೆವುದಿದಕೆ ದೃಷ್ಟಿಪಾತವೆಂದರೆಜಾವ । ಬೆರಲು ಡೊಂಕಿತೊಯೆನಲೆಸೆದಾ ॥ ೯೧ ॥
ಚೆಕ್ಕಸಬಟ್ಟು ಮರುಗಿ ಮಂತ್ರಿಮಿತ್ರರು । ಸುಕ್ಕಿದಂಗುಲಿಯ ಮುಟ್ಟಿದರೆ ॥
ಠಕ್ಕಿಗಾ ನೃಪ ಜಿನಪತಿಯೆಂಬ ಮೋರೆಯ । ಕೊಕ್ಕಿಸಿಕೊಂಡು ಕೈದೆಗೆವಾ ॥ ೯೨ ॥
ಮರುಗಿ ಕುವರರೆಲ್ಲ ಪರಿತಂದು ತಂದೆಯ । ಕಿರುವೆರಳನು ಮುಟ್ಟಿ ನೋಡೆ ॥
ಬರಿದಿಪ್ಪು ನರಳುತ ಗುರುಹಂಸನಾಥಯೆಂ । ದೊರಗುಮೂಡೆಯನೊರಗಿದನು ॥ ೯೩ ॥
ದೊರೆಗಳೆಲ್ಲರು ಚಿಂತೆಗೊಳುತಿದ್ದರಾ ಮಂತ್ರಿ । ಕರೆಸಿದ ರಾಜವೈದ್ಯರನು ॥
ವರಮೂಲಿಕಾಸಾರಸಿದ್ಧತೈಲವ ಪೂಸಿ । ಸರಿತಮೂಡುವೆನೆಂದರವರು ॥ ೯೪ ॥
ಮಂತ್ರೀಶ ಬಳಿಯಟ್ಟಿ ಬಂದರಾಗಳೆ ದಿವ್ಯ । ಮಂತ್ರವಾದಿಗಳು ಲಗ್ಗೆಯೊಳು ॥
ಮಂತ್ರಿಸಿ ನೇರವಮಾಡುವೆವಿದ ನೋಡೆವ್ಮು । ಮಂತ್ರಶಕ್ತಿಯನೆಂದರವರು ॥ ೯೫ ॥
ಯಂತ್ರಸಿದ್ಧರು ಬಂದರಿದಕೆ ಬೀಜಾಕ್ಷರ । ಮಂತ್ರವ ಬರೆದು ಕಟ್ಟಿದರೆ ॥
ಜಂತ್ರ ಪರಿದ ಬಿಲ್ಲು ಸಿಮಿರಿದಂತಹುದೆಲೆ । ಮಂತ್ರೀಶ ನೋಡೆಂದರೊಡನೆ ॥ ೯೬ ॥
ಜಟ್ಟಿಗಳೆಯ್ದಿ ನೋಡಿದರು ಸಾವೊಯ್ಯನೆ । ನೆಟ್ಟದೆಗೆವೆವೆಂದರೊಡನೆ ॥
ನಿಟ್ಟಿಸಿ ಕವಿಗಳು ಹೊಸಕೃತಿವೇಳ್ದು ಸಾಂ । ನೆಟ್ಟಗಾಗಿಪೆವೆಂದರೊಸೆದು ॥ ೯೭ ॥

ಜಲವ ಹೊಕ್ಕಾವು ಮಂತ್ರಿಸಿ ನೇರವಾಳ್ಪೆವೆಂ । ದುಲಿದರು ಬಂದ ಭೂಸುರರು ॥
ಹಲಬರು ತಂತವನ್ನು ಕಲಿತ ವಿದ್ಯಾರ್ಥದ । ಬಲುಹ ಸೂಚಿಸುತಿದ್ದರಾಗ ॥ ೯೮ ॥
ಭೂನಾಥನಂಗವೈದ್ಯರು ಬಂದು ನಿಂದರು । ಮೂನೂರರುವತ್ತುಮಂದಿ ॥
ಸೇನೆಯೊಳುಳ್ಳ ಸರ್ವರು ಬಂದು ನೆರೆದರು । ನಾನು ಮಾಣಿಪೆನೆಂದರವರು ॥ ೯೯ ॥
ಬಡವಗೆ ಬಲುರೋಗ ಬಂದು ಬಾಯ್ಬಿಡಲೊರ್ವ । ರೆಡಹಿಯು ಕಾಣರುರ್ವಿಯೊಳು ॥
ಒಡವೆಯುಳ್ಳವಗಲ್ಪರುಜೆ ಬರೆ ವಿಸ್ಮಯ । ಬಡುತ ಸಾರುವರದು ಸಹಜಾ ॥ ೧೦೦ ॥
ಇವರೊಳಾವುದು ದೇವ ನಿನಗಹುದೆನೆ ಮಂತ್ರಿ । ನವಗೀಗ ಕದನವುಂಟರಿಯ ॥
ಇವು ಜೋಲಿಯೌಷಧಿಯಿಂದೆ ಮಾಣ್ಬೊಂದು ತಂ । ತ್ರವ ಪೇಳ್ವೆನಾನೆಂದ ನೃಪತಿ ॥ ೧೦೧ ॥
ನೆಟ್ಟಯು ತೆಗೆದೊವ್ಮೆ ನೋಡಿರೈಯೆಂದಾಗ । ಜಟ್ಟಿಗಳಿಗೆ ಕೈಯ ನೀಡೆ ॥
ಬೆಟ್ಟಿಮಾಡದೆ ಕೈಯನವರೊತ್ತಲರಸನ । ಬೆಟ್ಟಿದ್ದುದಿನಿಸು ಸಡಿಲದೆ ॥ ೧೦೨ ॥
ನೋವಿಗಂಜಿದರಾಗದೊತ್ತಿ ತೆಗೆವುದೆಂದು । ಭೂವರನುಸುರೆ ಜಟ್ಟಿಗಳು ॥
ತಾವೊತ್ತಿ ಪಿಡಿಯಲೆತ್ತಿದನಾಗ ತೂಗುತ । ಬಾವಲಂತಿದ್ದರಂದವರು ॥ ೧೦೩ ॥
ಸಾಲದೊಬ್ಬನ ಭಾರ ನೀವಿಬ್ಬರಾತನ । ಕಾಲುವಿಡಿದು ತೂಗಿರೆಂದಾ ॥
ಸಾಲಾಗಿ ತೆಗೆವಾಗ ಮೇಲಕೆತ್ತಿದನಕ್ಷ । ಮಾಲೆಯನೆತ್ತಿದಂದದೊಳು ॥ ೧೦೪ ॥
ನಸುನೇರವಾಗದೆ ಬೆರಳಿದ್ದರಿನ್ನೊಂದು । ಪೊಸತಂತ್ರವುಂಟೆಂದು ನೃಪತಿ ॥
ಮಿಸುನಿಯ ಸರಪಣಿಯೊಂದನಂಗುಲಿಗೆ ಪೋ । ಣಿಸಿ ತೂಗಿರೆಂದನೆಲ್ಲರಿಗೆ ॥ ೧೦೫ ॥
ಹರದಾರಿಮುಟ್ಟೆಲ್ಲ ಸಾಲಾಗಿ ನಿಂದೊಂದು । ಸರಪಣಿವಿಡಿದು ತೆಗೆದರು ॥
ಬೆರಳಿಷ್ಟು ಮಿಸುಕದು ಮತ್ತರೆಗಾವುದ । ಹರಿದು ತೆಗೆದರು ಖೋಯೆಂದು ॥ ೧೦೬ ॥
ಆದರೊಳು ನೇರವಾಗದು ಚಕ್ರವರ್ತಿಯಿ । ನ್ನಿದಕೊಂದು ತಂತ್ರವುಂಟೆಂದಾ ॥
ಇದಿರಲ್ಲಿ ನಿಂದಿರ್ದ ವಿಶ್ವಕರ್ಮನ ನೋಡಿ । ಸದಮಲಾನಂದನಿಂತೆಂದಾ ॥ ೧೦೭ ॥
ಕಟಕವೆಲ್ಲಕೆ ಹಬ್ಬುವೊಲು ಸರಪಣಿಯ ಸಂ । ಘಟಿಸಿ ತಾ ಬೇಗದೊಳೆಂದಾ ॥
ಸ್ಫುಟದಿ ನಿರ್ಮಿಸಿ ಕೊಟ್ಟನವ ಕೂಡೆ ಚಕ್ರಿಯು । ತುಟಿ ಮಿಸುಕಿದ ಕಾರ್ಯತಡವೆ॥ ೧೦೮ ॥
ಹಿಡಿದರಾಗಳೆ ತೇರ ಮಿಣಿಯಂತೆ ಕಟಕದ । ಕಡೆಮುಟ್ಟ ನಿಡುಸರಪಣಿಯಾ ॥
ಎಡಬಲಕಲ್ಲಲ್ಲಿ ಕವಲಾಗಿ ಸರಪಣಿ । ನಡೆದುವು ದೆಸೆಮಿಣಿಯಂತೆ ॥ ೧೦೯ ॥
ಜೊಡೆಬಳ್ಳಿಯೊಂದರ ಗಂಟುಗಂಟಿಗೆ ಕುಡಿ । ಯೊಡೆದೆಂಟುದೆಸೆಗೆ ಪೋಪಂತೆ ॥
ನಿಡುಸರಪಣಿಯೊಂದು ಬಹುಸರಪಣಿ ತನ್ನ । ತೊಡರೆ ಹಬ್ಬಿತು ಕಂಡ ಕಡೆಗೆ ॥ ೧೧೦ ॥
ಪಡೆಯೆಂಬ ಪಂದಲ ಮೇಲೊಂದು ಪೊಸಲತೆ । ಕುಡಿಬಿಟ್ಟು ಹಬ್ಬಿದಂದದೊಳು ॥
ನಡೆನೋಡಲೊಪ್ಪುತಿರ್ದ್ದುದು ಸರಪಣಿಯೆಡೆ । ಬಿಡದೆ ಪಾಯ್ದುಳಕುಂಬಿ ಹಬ್ಬಿ ॥ ೧೧೧ ॥

ಗುಣಮಣಿಹಾರನಂಗುಲಿಯೊಳಗೊಂದು ಕುಂ । ದಣಲತೆ ಹುಟ್ಟಿ ಪಾಯ್ದಳವಾ ॥
ತಣಿಸಿ ಹಬ್ಬಿದುದೆನಲಾಯ್ತು ಚಿನ್ನದ ಸರ । ಪಣಿಯೊಂದು ತೋಳ ತೋರದಲಿ ॥ ೧೧೨ ॥
ಕಿರುವೆರಳಿಗೆ ಸರಪಣಿಯ ಸಂದಿಸಿ ರಾಯ । ಬಿರಿಸಾಗಿ ತೂಗಿರ್ಪೆಯೆಂದಾ ॥
ಇರುಹೆಗಳೆಂಟೆಸೋಂಕಿದ ನೇಣ ಮುತ್ತುವಂ । ತೆರಗಿ ಪಿಡಿದುದಾಗ ಕಟಕಾ ॥ ೧೧೩ ॥
ಕುವರರು ದೊರೆಗಳು ಸಖರು ಪಿಡಿವುತಿರ । ಲವನೀಶ ಸನ್ನೆಯೊಳ್ನಿಲಿಸಿ ॥
ವಿವಿಧಸೇನೆಗೆ ತುಯ್ವುದೆಂದು ಸನ್ನೆಯ ಮಾಡ । ಲವರು ತೆಗೆದರು ಬೊಬ್ಬಿರಿದು ॥ ೧೧೪ ॥
ಸೇನೆ ತೆಗೆಯೆ ಬೆರಲಿನಿಸು ಮಿಸುಕದಿರ । ಲಾನೆಕುದುರೆಯೆತ್ತುಗಳಿಗೆ ॥
ಸ್ಥಾನವರಿದು ತೊಡರಿಪುದೆಂದು ಬೆಸಸೆ ಸಂ । ಧಾನಿಸಿದರು ಸರಪಣಿಯಾ ॥ ೧೧೫ ॥
ಠಮಠಮಯೆಂದು ವಾದ್ಯವ ಕುಟ್ಟಲಾಲ್ದು ಸಂ । ಭ್ರಮದಿ ತೆಗೆದರೆಲ್ಲರುಬ್ಬಿ ॥
ಅಮರಿದ ಗದ್ದುಗೆಯಿಂದ ಜಾರದೆ ಧರಾ । ರಮಣನಿದ್ದನು ಶಕ್ತಿಯೆಂತೊ ॥ ೧೧೬ ॥
ತೇರನೆಳೆಯ ಬಹುದೈಸೆ ಹಗ್ಗವ ಹಾಕಿ । ಮೇರುವನೆಳೆದರೆ ಬಹುದೆ ॥
ಆರಾರು ಬಹುದಹುದಾ ಸೇನೆ ತೆಗೆದಾಗ । ಧೀರಾಗ್ರನಿದ್ದನಿದ್ದಂತೆ ॥ ೧೧೭ ॥
ನರವಿಷ್ಟು ಸಡಿಲದು ತೆಗೆಯಹೇಳಧಿಕನಿ । ರ್ಭರದಿಂದ ಕಟಕವನೆಂದಾ ॥
ಮುರಿದು ಪಲ್ಗಚ್ಚಿಕೊಂಡುಳ್ಳ ಶಕ್ತಿಯನಿಕ್ಕಿ । ಸರಪಣಿದುಯ್ದುದಾ ಸೇನೆ ॥ ೧೧೮ ॥
ಕಾಲ ಪೈಸರಗೊಟ್ಟು ಸರಪಣಿವಿಡಿದು ಹಿ । ಮ್ಮಾಲಾಗಿ ಪಡೆ ತೆಗೆವಾಗ ॥
ತೋಳ ಸಿಕ್ಕಿಗೆ ರಾಯ ನೀಡಿದನುರೆ ಹೊಟ್ಟೆ । ಮೇಲಾಗಿ ಕೆಡೆದರುರ್ವಿಯೊಳು ॥ ೧೧೯ ॥
ಕಟ್ಟೆ ಬಿಸಾಟಂತೆ ಬಿದ್ದರು ಭಟರೆತ್ತು । ಕಟ್ಟಿದಾನೆಗಳು ತೇಜಿಗಳು ॥
ಥಟ್ಟಪೊಟ್ಟನೆ ಕೆಡೆದೊದೆದಾಡುತಿರೆ ರಾಯ । ನಿಟ್ಟಿಸುತಿದ್ದನು ನಗದೆ ॥ ೧೨೦ ॥
ಏಳಹೇಳೇಕೆ ಬಿದ್ದರು ನಾನು ಸುಕ್ಕಿದ ತೋಳ । ನೀಡಿದೆನ್ನೈಸೆ ನನ್ನ ॥
ಮಾಲಿದಂಗುಲಿಯಿನ್ನು ನೇರವಾಯ್ತಿಲ್ಲೆಂದ । ಮೇಲೆಲ್ಲರೆದ್ದರಾ ಕ್ಷಣವೆ ॥ ೧೨೧ ॥
ಬಲುಹಾಗಿ ಹಿಡಿಯಹೇಳಾನೊಮ್ಮೆ ನನ್ನತ್ತ । ಬಲಿದು ನೋಡುವೆನೆಂದನದಕೆ ॥
ಕಲಿಗಳು ಫಣಿಗಳ ಪಿಡಿವಂತೆ ಸರಪಣಿ । ಗಳ ಪಿಡಿದರು ದೃಢವಾಗಿ ॥ ೧೨೨ ॥
ಸದರದೊಳಗೆ ತೆಗೆದನು ಮೊದಲೊಮ್ಮೆ ಮ । ತ್ತದರಿಂದ ನಸುಹೆಚ್ಚಿ ತೆಗೆದಾ ॥
ಅದಕೆ ವೆಗ್ಗಳಿಸಿ ನಾಲ್ವತ್ತೆಂಟುಗಾವುದ । ಗದಗದಿಸಿತು ರಾಜಕಟಕಾ ॥ ೧೨೩ ॥
ತೂಗಿತೊನೆದು ಮತ್ತೆಗುಂಕಿಸಿ ತೆಗೆದನು । ಲಾಗಿಸುವೆತ್ತ ಬೀರ್ವಂತೆ ॥
ಮೂಗಡಿಯಾಗಿ ಬಿದ್ದಿತು ಸೇನೆ ಸಾಷ್ಟಾಂಗ । ವಾಗಿ ವಂದಿಸುವಂತೆ ತನಗೆ ॥ ೧೨೪ ॥
ಮೊರಡಿಗಳಂತುರುಳಿದುವಾನೆ ತೇಜಿಗ । ಳುರುಳುತಿದ್ದುವು ಗುಂಡಿನಂತೆ ॥
ಪರಿಸೆಯೊಂದೆ ಲಗ್ಗೆಯೊಳು ದೇವಗೆರಗಿದ । ಪರಿಯೊಳಿದ್ದುದು ಪರಿವಾರಾ ॥ ೧೨೫ ॥

ಸಣ್ಣಬೆರಳ ಶಕ್ತಿಯಿಂತು ಪೆಟ್ಟಿಟ್ಟನ । ಬಿಣ್ಣಿತೆಂತುಟೊ ಮುಷ್ಟಿಯೆಂತೊ ॥
ಬಣ್ಣದ ನುಡಿಯಲ್ಲ ಚಕ್ರಿಗುಂಟದ್ರಿಯ । ನಣ್ಣಿಕಲ್ಲಾಡುವಶಕ್ತಿ ॥ ೧೨೬ ॥
ನರನಾಥ ತಲೆವಾಗಿ ನಸುನಕ್ಕನಾಗ ಮಿ । ತ್ರರು ಹುಸಿಹೋಗವೆಂದರಿದು ॥
ಪರರಿಂದ ಮಾಣದೊಡೆಯು ನೀನೆ ನಿನ್ನ ನು । ಣ್ಬೆರಳ ಮಾಣಿಪುದೆಂದರೊಸೆದು ॥ ೧೨೭ ॥
ಸರಪಣಿದೆಗೆದೆಡಗೈಯಿಂದ ತನ್ನನು । ಣ್ಬೆರಳನೊತ್ತುತ ವಿನೋದಾರ್ಥಿ ॥
ಗುರುಹಂಸನಾಥಾಯ ಸ್ವಾಹಾಯೆಂದನು ಕೂಡೆ । ಸರಿತವಾಗಿದ್ದುದಾ ಬೆರಳು ॥ ೧೨೮ ॥

ಸುತರು ಭೂಭುಜರು ಪ್ರಧಾನಿಮಿತ್ರರು ನಕ್ಕು । ಹಿತದಿ ನಿವಾಳಿಯನಿಟ್ಟು ॥
ನುತಿಸಿ ನಿನ್ನಯ ಮಂತ್ರಕೆಣೆಯಿಲ್ಲವೆಂದು ಭೂ । ಪತಿಗಡ್ಡಬಿದ್ದರುಬ್ಬಿನೊಳು ॥ ೧೨೯ ॥
ಕಟಕವೆಲ್ಲವು ತಟಪಟನೆದ್ದು ಸಾಹಸ । ಘಟನೆಗೆ ಮೆಚ್ಚಿ ಭೂವರಗೆ ॥
ನಟಿಸಿ ನಿವಾಳಿಯನಿಟ್ಟೊಡನೆರಗಿತು । ಕುಟಿಲವಿಲ್ಲದ ಭಕ್ತಿಯಿಂದ ॥ ೧೩೦ ॥
ಸುರರು ಪೂಮಳೆಗರೆದರ ನೊಳಗಿತು ಮೂರು । ವರೆಕೋಟಿವಾದ್ಯ ಭೋರೆಂದು ॥
ಸುರಗಣಿಕೆಯರು ನರ್ತಿಸಿದರು ಸಾಲದೆ । ಭರತರಾಜನದೊಂದು ಭಾಗ್ಯ ॥ ೧೩೧ ॥
ಸರಸಾರ್ಥವಿದನೇಕೆ ನೆನೆಪೆ ಚಕ್ರೇಶಯೆಂ । ದುರುಮುದದೊಳು ಮಂತ್ರಿ ಕೇಳ್ವಾ ॥
ಇರುಳಿಬ್ಬರಾಡಿದ ನುಡಿಗಿಂತು ನೆನೆದೆನೆಂ । ದರಸನಾ ಸ್ಥಿತಿಯ ಪೇಳಿದನು ॥ ೧೩೨ ॥
ಒಡಗಣದೆಸೆಯೊಳಾಡಿದರೆಂದು ಚಕ್ರೇಶ । ನುಡಿಯಲಾ ಖಚರರು ಕೇಳಿ ॥
ಒಡೆಯ ನಾವರಿಯದಾಡಿದೆವೆಂದು ಮುಂದಡ್ಡ । ಗೆಡೆದರು ಪಾಲಿಪುದೆಂದು ॥ ೧೩೩ ॥
ದೆಸೆಯ ಪೇಳಿದನ್ನೈಸೆ ಹೆಸರನರಿಯನವ । ರಸು ಜೆಚ್ಚಿ ಸಾಷ್ಟಾಂಗವೆರಗೆ ॥
ಬಿಸವಂದವಟ್ಟರೆಲ್ಲರು ಭೀತಿ ಬೇಡೇಳಿ । ರೊಸಗೆಯಾಯ್ತೆಂದನಾ ಚಕ್ರಿ ॥ ೧೩೪ ॥
ಕಡೆಯ ಪಾಳೆಯದೊಳಿದ್ದವರೊಂದು ದಿನದಕೆ । ನುಡಿದಾಡೆ ಕೇಳ್ವುದ ಕಂಡು ॥
ನಡುಮನೆಕೋಣೆಬೀದಿಗಳಲ್ಲಿ ಜಾಣ್ನಾತ । ನುಡಿಯಲಂಜಿತು ರಾಜಕಟಕಾ ॥ ೧೩೫ ॥
ನಾಡುಗರಿಗೆ ಸೇನೆದೋರಿ ಗೆಲ್ವನು ಯುದ್ಧ । ಮಾಡುವರಿವಗಿದಿರುಂಟೆ ॥
ನೋಡು ಚಕ್ರಿಗೆ ಸರ್ವಬಲದಾಸೆಯೆಂದಿವ । ರಾಡಬಹುದೆಯೆಂದರೆಲ್ಲ ॥ ೧೩೬ ॥
ಅಣುಗರು ದೊರೆಗಳು ನಾವೆಲ್ಲರಾ ಸರ । ಪಣಿವಿಡಿದರೆ ಬೀಳ್ವರೆಂದು ॥
ಗಣಿಸಿ ನಿಲ್ಲಿಸಿದೊಂದು ಜಾಣ್ಮೆ ಸಾಲದೆಯೆಂದು । ಗುಣವನೀಕ್ಷಿಸಿದರಾ ಸಖರು ॥ ೧೩೭ ॥
ಕುವರರ ನಿಲಿಸಿದಾಗೆನಗಿದು ಸಟೆಯ ರೋ । ಗವೊಯೆಂಬುದಾಯ್ತೆಂದ ಮಂತ್ರಿ ॥
ಅವಧಿಯ ಮೊದಲು ನಾವೀಕ್ಷಿಸಿತಿಲ್ಲೆಂದು । ಪ್ರವರವ್ಯಂತರಿಗರಾಡಿದರು ॥ ೧೩೮ ॥

ಗಡಬಡೆ ಸಾಕು ಹೊ ಪಡೆ ನೊಂದಿತಾನೊಂದು । ನುಡಿಗಿಂತುಟಲೆದೆನೆ ಮಂತ್ರಿ ॥
ಕಡಿಕಡಿದವರಿಗಾ ಸರಪಣಿಯನೆ ಹಂಚಿ । ಕೊಡು ನೊಂದ ನೋವಾರಲೆಂದಾ ॥ ೧೩೯ ॥

ಕೆಡೆದರತ್ತಿತ್ತೆಂಬುದಲ್ಲದೊಬ್ಬರ ವ್ಯೆಗ । ಳೊಡೆದುವೆ ದಂತ ಕೊಂಕಿದುವೆ ॥
ಹುಡಿಯೇರೆ ನೆಲ ನಯ ಸುಖದೊಳಿದ್ದರು ಚಕ್ರಿ । ತೊಡಗಿದರ್ತಿಯೊಳುಂಟೆ ನೋವು ॥೧೪೦॥

ಕನಕದ ತೊಡೆಹದೊಳಾ ಸರಪಣಿಯಂತೆ । ಜನಪನಿನ್ನೊಬ್ಬ ಮಾಡುವನೆ ॥
ಕನಕದ ಸರಪಣಿಯನೆ ಕೊಡಿಸಿದನು ಕ । ಬ್ಬಿನಕೆಣೆಗಂಡು ಪಾಯ್ದಳಕೆ ॥ ೧೪೧ ॥

ಆ ಸರಪಣಿಯೊಳೊಂದೊಂದೆ ನಾಡರಸರ । ಸೇನೆಗೆ ಜನ್ಮದ ಬದುಕು ॥
ಆ ಸುಖ ತುಂಡಿಸಿ ಕೊಡಿಸಿದ ಪಡೆಗೊಂದು । ಶಾಸನೊಬ್ಬೊಬ್ಬಗೀವಂತೆ ॥ ೧೪೨ ॥

ಚಂಡಿಮಾಡಿದ ಶಿಶುಗಳಿಗೆ ಕಬ್ಬಿನದೊಂದು । ಕಂಡಿಕೆಯನು ಕೊಡುವಂತೆ ॥
ಖಂಡಿಸಿ ಸರಪಣಿಗಳ ನೊಂದ ಪಡೆಗಿಂಪು । ಗೊಂಡು ಕೊಡಿಸಿದನಾ ನೃಪತಿ ॥ ೧೪೩ ॥

ಅವಸರಕೊದಗಿ ನಿರ್ಮಿಸಿದನ್ನೆಯೆಂದು ಮಾ । ನವಪತಿ ವಿಶ್ವಕರ್ಮನಿಗೆ ॥
ದಿವಿಜರು ತೊಡುವ ಪಾಟಿಯ ತೊಡಿಗೆಯ ಕೊಟ್ಟ । ನವನೇನು ಮೆಚ್ಚಿಲ್ಲದರಸೆ ॥ ೧೪೪ ॥

ಇಟ್ಟ ನಿವಾಳಿಯ ಬಟ್ಟಗಳನು ರಾಯ । ನಿಟ್ಟಿಸಿ ಕೈವೀಸಿಬಿಡಲು ॥
ಭಟ್ಟರು ಯಾಚಕರಕ್ಕರಿಗರು ಹೊರೆ । ಗಟ್ಟಿ ಹೊತ್ತರು ಸೂರೆಯಾಗಿ ॥ ೧೪೫ ॥

ಮಣಿಸರವೆನೆ ಸೇನೆಯೊಯ್ದ ಸಾಹಸವ ಕುಂ । ದಣವ ಮೆಚ್ಚಿಸಿದುದಾರವನು ॥
ಕ್ಷಣದಲ್ಲಿ ಕೃತಿಗಟ್ಟಿ ಕವಿಗಳು ಪೇಳೆ ಮ । ನ್ನಣೆಯಿತ್ತನಾ ಸಾರ್ವಭೌಮಾ ॥ ೧೪೬ ॥

ತಣಿದುದು ಕಟಕವೆಲ್ಲವು ಕೂಡೆ ಸರ್ವರ । ಗುಣವಚನದೊಳು ಬೀಳ್ಕೊಟ್ಟ ॥
ಅಣುಗರ ಬೀಳ್ಕೊಟ್ಟ ಚಕ್ರೇಶ ಹೊಕ್ಕನಾ । ಕ್ಷಣ ತನ್ನ ರಾಜಮಂದಿರವಾ ॥ ೧೪೭ ॥

ಲಲನೆಯರರ್ತಿಯ ಹೇಳಲರಿಯೆ ಮೊಗ । ತಳತಳಿಸುತ ನಗುತೆಯ್ದಿ ॥
ಗೆಲವಿನೊಳಾರತಿಯೆತ್ತಿ ನಿವಾಳಿಯಿ । ಟ್ಟೊಲಿದೆರಗಿದರೋಪನಡಿಗೆ ॥ ೧೪೮ ॥

ಸಟೆಯ ರೋಗವೆ ನಮ್ಮ ಕಟಕವನಲೆದೆತ್ತಿ । ಪುಟನೆಗೆದೆಯೊಯೆಂದು ನಗುತ ॥
ಕಟಕಿಯೊಳಾರತಿಯೆತ್ತಿ ವಂದಿಸಿದಳಾ । ಪುಟಕುಚೆ ಪಟ್ಟದ ರಾಣಿ ॥ ೧೪೯ ॥

ಸ್ತ್ರೀಯರ ಹಿಂದಿಕ್ಕಿ ಬಂದು ಭೂಪತಿ ತನ್ನ । ತಾಯಂಘ್ರಿಗಳ ನಮಿಸಿದನು ॥
ಮಾಯದ ರೋಗದೋರಿತೆ ನನ್ನ ಮಗಗೆ ಮಾ । ಮಾಯೆಂದಳಾಕೆ ತಕ್ಕೈಸಿ ॥ ೧೫೦ ॥

ನಿನಗೆಂತು ರುಜೆ ಬರಬಾರದು ರುಜೆ ನಿನ್ನ । ನೆನೆದರ್ಗೆ ಬರಬೇಡವೆಂದು ॥
ಜನನಿ ಹರಸಿ ಮುತ್ತಿನಕ್ಷತೆಯಿಟ್ಟಳು । ಬಿನದಕೆ ಮೆಚ್ಚುತ ಮಗನ ॥ ೧೫೧ ॥

ದಿಟವಿನ್ನು ದೇವರ ಹರಕೆ ರಕ್ಷಿಪುದೆಂದು । ಚಟುಲಾಕ್ಷಿಯರುತಾಯಿವೆರಸಿ ॥
ಪಟುಚಕ್ರಿ ಭೋಜನಕೆಯ್ದಿದನಿಲ್ಲಿಗೆ । **ಕಟಕವಿನೋದದ ಸಂಧಿ** ॥ ೧೫೨ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕರುಣವರು ॥ ೧೫೩ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೫೪ ॥

ತ್ರಿಜಗವನತ್ತಿತ್ತಲಲ್ಲಾಡಿಸುವ ಶಕ್ತಿ । ನಿಜವಾದ ನಿಬಿಡಸಾಮರ್ಥ್ಯ ॥
ಅಜರಾಮರಾತ್ಮ ನನ್ನೆದೆಯೊಳಿರಾನಂದ । ಧ್ವಜನೆ ಚಿದಂಬರಪುರುಷಾ ॥ ೧೫೫ ॥

---

ಕಟಕವಿನೋದಸಂಧಿ ಸಂಪೂರ್ಣಂ

---

# ಮದನಸನ್ನಾಹಸಂಧಿ.

ನಾಮಮೋಹನಸಿದ್ಧ ರೂಪಮೋಹನಸಿದ್ಧ । ಸ್ವಾಮಿತ್ವಮೋಹನಸಿದ್ಧಾ ॥
ಕೋಮಲವಾಕ್ಯಮೋಹನಸಿದ್ಧ ಜಯ ಕಳಾ । ಗ್ರಾಮಾ ನಿರಂಜನಸಿದ್ಧಾ ॥ ೧ ॥

ಕಟಕದ ವಾರ್ತೆಯ ಕೇಳುತಿಷ್ಟಳುಕುತ । ಪಟುವಾಗಿ ಮೊದಲು ತಾ ನುಡಿದ ॥
ಘಟಿತಗರ್ವವ ನೆನೆದಾ ಕಾಮ ಕೂಡೆ ಹೋ । ರಟಿಗೆ ಮುಂಕೊಂಡನೇನೆಂಬೆ ॥ ೨ ॥

ಬೆರಳ ಶಕ್ತಿಯ ಕೇಳ್ದ ಮೇಲೆ ಬಂದಣ್ಣಗೆ । ಶಿರಬಾಗಬೇಡವೆ ಮದನಾ ॥
ಅರಿಕರ್ಮವೆರಗಲೀಯದೆ ದೀಕ್ಷೆಗೊಯ್ಯೊಂದು । ಪರಿಯಲ್ತೆ ಮೀರುವರಾರು ॥ ೩ ॥

ಧರೆಯ ಸಾಧಿಸಿ ಚಕ್ರಿ ಬರೆ ಹೋರಬೇಕಲ್ಲಿ । ಸ್ಮರಗಾಗಬೇಕು ವಿರಕ್ತಿ ॥
ವರಭೋಗವಳಿದೆಯ್ದಬೇಕತ್ತ ದೀಕ್ಷೆಗೆ । ದೊರೆಕೊಂಡ ಕರ್ಮತಂತ್ರವದು ॥ ೪ ॥

ಬಾರೆಲೆ ಗುಣವಸಂತಕ ಚಕ್ರಿ ಬಂದು ನ । ಮ್ಮೂರಿದಿರೊಳು ಬಿಟ್ಟನರಿಯ ॥
ಸೈರಿಸಬಹುದೆ ನಾನಿದ ನೋಡು ನಾನೊಬ್ಬ । ವೀರನೆ ಫಡ ಹುಸಿಯೆಂದಾ ॥ ೫ ॥

ಪರಿವಾರವೆಲ್ಲವ ಕರೆಸು ಮುಂದೀ ದಂಡ । ತೆರಳಿಸಬೇಕು ನಾನೀಗ ॥
ಅರಮನೆಯೊಳಹೊಕ್ಕು ಬಹೆನು ಪೋಗೆಂದೆದ್ದು । ಸ್ಮರನೆಯ್ದುತಿದ್ದನು ಗೃಹಕೆ ॥ ೬ ॥

ಮಿಗೆ ಸುನಂದಾದೇವಿ ಕೇಳ್ದು ಪ್ರಾಪ್ತರನಟ್ಟಿ । ಮಗನ ಕರೆಸಿದಳು ಮನೆಗೆ ॥
ದುಗುಡವ ಕಾಣಿಸದಂಗಜ ಬಂದಿಷ್ಟು । ನಗೆಮೊಗದಿಂದೆರಗಿದನು ॥ ೭ ॥

ಭುಜಬಲಿ ದೊಡ್ಡಣ್ಣನೊಡನೆ ಕಾಳಗವೆಂದು । ಗಜಬಜಿಸಿದೆ ಕಂಡ ನೀನು ॥
ಸುಜನರಾರಿದ ಮೆಚ್ಚುವರು ಸುಡು ನಿನ್ನೊಂದು । ಕುಜನಮಾರ್ಗವನೆಂದಳಾಕೆ ॥ ೮ ॥

ಭರತಣ್ಣನಂತಪ್ಪ ಹಿರಿಯಣ್ಣನೆಂಬೊಂದು । ಸಿರಿಯನದಾರು ಪಡೆವರು ॥
ಹರುಷದೊಳೆರಗಿದ್ದು ನೀ ಬಾಳಲರಿಯದೆ । ಸಿರಿಗೆಡಹೋಗೆಂದಳೊಡನೆ ॥ ೯ ॥

ತಮ್ಮನಗ್ಗಳನಾದೊಡಣ್ಣನಿಗಿದಿರಾದ । ಹೆಮ್ಮೆವಂತರ ಹಿಡಿತಂದು ॥
ಸಮ್ಮುಖಗೈಸಬೇಕಲ್ಲದಣ್ಣಗೆ ತಾನೆ । ಮುಮ್ಮೊನೆದೋರ್ಪುದು ಚದುರೆ ॥ ೧೦ ॥

ತಮ್ಮನಾದವನಣ್ಣಗೆರಬೇಕಣ್ಣಗಾ । ತಮ್ಮನೆ ಬೆರೆಯೆ ಮುನ್ನಣ್ಣಾ ॥
ತಮ್ಮತಮ್ಮಯೆಂದು ಕರೆದುದೆಲ್ಲವು ರಾಮಿ । ತಮ್ಮನ ಕರೆದಂದವಲ್ತೆ ॥ ೧೧ ॥

ಚಕ್ರಿಯಾತನು ನೀನು ಕಾಮ ನೀನಾತನ । ನಾಕ್ರಮಿಸದೆ ನಡೆದಾಗ ॥
ಶುಕ್ರಬೃಹಸ್ಪತಿಗಳು ಪೊಗಳ್ವರು ನೀನು । ವಕ್ರಿಸೆ ಜರೆವರು ನಿನ್ನಾ ॥ ೧೨ ॥

ಆವರಿವರಲ್ಲವೆಂಬುದದೇನು ನಮ್ಮ ಬಾಂ । ಧವರಿಗೂ ನವಗೂ ನೋವಹುದು ॥
ಕುವರ ನೆರೆದು ತನ್ನ ಕುಲವ ನೋಯಿಸಿದನೆಂ । ಬವಿವೇಕವಿದು ಲೇಸೆ ನಿನಗೆ ॥ ೧೩ ॥

ಅಣ್ಣನ ಕೂಡೆ ಕಾಳಗವ ಮಾಡೆಂದಾನು । ಬೆಣ್ಣೆವಾಲೂಡಿ ಸಾಕಿದೆನೆ ॥
ತಣ್ಣನೆ ಮಾಡಬೇಕೆನ್ನೆಲ್ಲರುದರಕೆ । ಹುಣ್ಣು ಮಾಳ್ಪುದು ಲೇಸೆ ಮಗನೆ ॥ ೧೪ ॥
ನೀನೊಬ್ಬನೆಂದಲ್ಲ ನಿನ್ನ ಸೋದರರೆಲ್ಲ । ರಾನತರಾಗದೋಡಿದರು ॥
ಏನ ಮಾಡಿದ ನನ್ನ ಮಗನಿವಗೆಲ್ಲರ್ಗೆ । ಹೀನವೆ ಹಿರಿಯುಗೆರಗಲು ॥ ೧೫ ॥
ಹಿರಿಯಣ್ಣ ಹೆತ್ತ ತಂದೆಯು ಸಾಟಿಯೆಂದು ಸ । ತ್ಪುರುಷರು ಭಕ್ತಿಮಾಡುವರು ॥
ಸರಿ ನಾನು ತಾನೆಂದು ದಾಯಾದ್ಯರಾಗಿ ಧೂ । ರ್ತರು ಹೋರುವರು ಜಗದೊಳಗೆ ॥ ೧೬ ॥
ಎಲ್ಲರು ತಪಸಿಗೆಯ್ದಿದರು ನೀನೊಬ್ಬ ನ । ಮ್ಮೆಲ್ಲರರ್ತಿಯ ಸಲಿಸಣ್ಣಾ ॥
ಬಲ್ಲಿತುದೋರದಿರಣ್ಣನಿಗೆರಗೆಂದು । ಗಲ್ಲವ ಪಿಡಿದಲುಗಿದಳು ॥ ೧೭ ॥
ಕದನವೆಂದರೆ ನೋವಳೆಂದು ಮಾತಿನೊಳಮ್ಮ । ನೆದೆಗೆ ಸಂತಸದೋರಿ ಪೋಪ ॥
ಗದಕ ನೆನೆದು ಯುದ್ಧವಿಲ್ಲೆಂದು ನುಡಿದನು । ಮದನಗೆ ವಂಚನೆ ಸಹಜಾ ॥ ೧೮ ॥
ಇಲ್ಲವಮ್ಮಾಜಿ ಕಾಳಗವೆಂದು ಮೊದಲಿಷ್ಟು । ಸೊಲ್ಲಿಸಿದೆನು ಕೋಪದಿಂದ ॥
ಸಲ್ಲದೆಂದೆಲ್ಲರಾಡಲು ಬಿಟ್ಟೆನಣ್ಣನ । ಮೆಲ್ಲಡಿಗೆರಗುವೆನೆಂದಾ ॥ ೧೯ ॥
ಪರರಲ್ಲವೆಂಬುದ ಮಾಡೆನು ನಾನು ದೇ । ವರಿಗತಿಚಿಂತೆಯೇಕಿದಕೆ ॥
ಶಿರಬಾಗಿ ಬಹೆನಣ್ಣಗೆಂದನು ಮಾತಿನೊ । ಳಿರಿಸಿಕೊಂಡೆದೆಯೊಳು ಕೋಪಾ ॥ ೨೦ ॥
ಸಂತಸಬಟ್ಟಾಕೆ ತಕ್ಕೈಸಿಕೊಂಡೆನ್ನ । ಕಂತು ನೀನಂತೆ ಮಾಡೆಂದು ॥
ಚಿಂತೆ ಹೋಯ್ತೆಂದು ಪರಸಿ ಕಳುಹಿದಳೆಲ್ಲ । ರಂತರಂಗವ ಕಾಂಬರಾರು ॥ ೨೧ ॥

ಪಡೆದಳಿಗೆರಗಿ ಬೀಳ್ಕೊಂಡು ತನ್ನರಮನೆ । ಗೊಡನೆ ಹೊಕ್ಕನು ಪುಷ್ಪಬಾಣಾ ॥
ಬೆಡಗಾಗಿ ಸಿಂಗರಿಸಿದನು ತನ್ನಂಗಕೆ । ಕಡೆಯ ಶೃಂಗಾರವದಲ್ತೆ ॥ ೨೨ ॥
ಖೋಡಿಯಿಲ್ಲದ ಮೋಹನಾಂಗವದಕೆ ತಕ್ಕ । ಗಾಡಿಮೋಡಿಯೊಳು ಸಿಂಗರಿಸಿ ॥
ನೋಡುವರೆಲ್ಲರ ಕಣ್ಣನಗಳ ನಲಿ । ದಾಡಿಸುತಿದ್ದನಾ ಸೊಬಗಾ ॥ ೨೩ ॥
ಸಿಂಗರವಾಗಿ ಕನ್ನಡಿಯ ನೋಳ್ಪಾಗ ತ । ನ್ನಂಗನೆಯರು ಬಂದರೆಲ್ಲ ॥
ಹೆಂಗಳುಸಹ ಪಟ್ಟದರಸಿ ಕೈಮುಗಿದಳ । ನಂಗಗಿಚ್ಛಾಮಹಾದೇವಿ ॥ ೨೪ ॥
ಆರ ಮೇಲೆಸುಗೆ ದೇವರಿಗೆ ಹೆಂಗಳ ಮೇಲೊ । ದೂರಿಸುವಾಳ್ಗಳ ಮೇಲೊ ॥
ವೀರಾಂಗಶೃಂಗಾರವಾಗಿದೆಯೆಂದು ವಿ । ಚಾರಿಸಿದಳು ಪಟ್ಟದರಸಿ ॥ ೨೫ ॥
ಹೆಂಗಳೆಲ್ಲರು ನನ್ನ ಪಕ್ಷ ಪುರುಷರೆಲ್ಲ । ರಿಂಗೋಲ ಕೇಳ್ನಿನ್ನ ಪಕ್ಷಾ ॥
ಕಂಗೆಡಿಸದಿರೆನ್ನ ಪಕ್ಷದವರನೆಂದು । ಭೃಂಗಾಕ್ಷಿ ನುಡಿದಳೊಪನೊಳು ॥ ೨೬ ॥
ಆಗಲೌ ನಲ್ಲಳೆ ನಿನ್ನ ಪಕ್ಷದ ಮೇಲೆ । ಪೂಗಣೆತೊಡುವುದಿಲ್ಲಬಲೆ ॥
ಹೋಗದೆನ್ನೊಡನೊಡ್ಡಿ ನಿಂದ ಚಕ್ರಿಯ ಪೌಜ । ತಾಗುವೆನೆಂದನಾ ಮದನಾ ॥ ೨೭ ॥

ಶ್ರೀಗುರುಹಂಸನಾಥನ ಶಕ್ತಿಯುಂಟವ । ಪೂಗೋಲಿಗಂಜುವನಲ್ಲ ॥
ಪೋಗಿ ಲೋಹಾಯುಧದಿಂದ ಸೇನೆಯನಟ್ಟಿ । ಬೇಗದಿ ಬಹೆನಿಲ್ಲಿಗೆಂದಾ ॥ ೨೮ ॥
ಹುರುಳಾದುದೀ ಕಾರ್ಯ ನೀನಿಂತು ನೆನೆದುದ । ಧರೆಯೊಳಗಾರು ಮೆಚ್ಚುವರು ॥
ಹಿರಿಯಣ್ಣನೊಡನೆ ಕಾಳಗವೆ ನೀನಿಂತು ನಿ । ಷ್ಠುರವ ತಾಳ್ವರೆಯೆಂದಳಾಕೆ ॥ ೨೯ ॥
ಸಲ್ಲದೋಪನೆ ಬಿಡು ಹಿರಿಯಣ್ಣನೊಡನಿಂತು । ಬಲ್ಲಿತುದೋರ್ಪುದು ಗುಣವೆ ॥
ಬಿಲ್ಲು ಡೊಂಕಲು ನಿನ್ನ ನಡೆ ಡೊಂಕೆ ಬೇಡೆಂದು । ನಲ್ಲಳಾಡಿದಳು ನಲ್ಮೆಯೊಳು ॥ ೩೦ ॥
ಲೋಗರ ಕೂಡೆ ಕಾಳಗ ಸಲ್ವುದಣ್ಣನೊಂ । ದಾಗಿ ಕಾಳಗವ ಮಾಡುವರೆ ॥
ಶ್ರೀಗಂಧದಲ್ಲಿ ಕೈ ಬೆಂದಂತೆ ಮಾಳ್ಪರೆ । ಪೂಗೋಲ ಬೇಡೆಂದಳೊಡನೆ ॥ ೩೧ ॥
ನನ್ನಕ್ಕನಲ್ಲಿ ನಾನಿಲ್ಲಿದ್ದು ನೀನಿಂತು । ಭಿನ್ನಭಾವವನೆಣಿಸುವರೆ ॥
ಪನ್ನೀರ್ಗೆ ಸಿರಿಗಂಪಿಗೆಡಗಟ್ಟಿ ಕಟ್ಟುವು । ದುನ್ನತದೋಜೆಯೆ ನೀರಾ ॥ ೩೨ ॥
ಒಂದು ಮನೆಯ ಹೆಣ್ಣುಗಳ ತಂದು ಸಡ್ಡುಕ । ರೆಂದು ಬಾಳ್ವವರುಂಟು ಕೂಡಿ ॥
ಇಂದು ನೀವಣ್ಣತಮ್ಮದಿರೆನಗೆಮ್ಮಕ್ಕ । ನೊಂದುಗೂಡಿಸದಗಲಿಪರೆ ॥ ೩೩ ॥
ನಮಿರಾಜವಿನಮಿರಾಜರ ಕಾಣ್ಬುದಿಲ್ಲವೆ । ಮಮತೆಯೊಳ್ಕೂಡಿ ಬಾಳ್ವುದನು ॥
ಕ್ರಮದಪ್ಪಿ ನೀವಿಂತು ನಿಮ್ಮೊಳು ಹೋರಿ ವಿ । ಕ್ರಮದೋರೆ ನಗರೆ ನಮ್ಮವರು ॥ ೩೪ ॥
ಹಿರಿಯುಮ್ಮ ಕಿರಿಯುಮ್ಮನಾತ್ಮಜರವರು ನೀ । ವೆರವೆ ಒಬ್ಬಯ್ಯನಾತ್ಮಜರು ॥
ಅರಿಗಳಂದದಿ ಹೋರಿದಾಗಿದು ಮಾರ್ಗವೆಂ । ಬರೆ ನಿಮ್ಮ ಭಾವಮೈದುನರು ॥ ೩೫ ॥
ಸಿರಿಯಲ್ಲಿ ನೀವು ದೊಡ್ಡವರಹುದೆಮ್ಮ ಸೋ । ದರರಿಷ್ಟು ಬಡವುಗಳಹುದು ॥
ಅರಸ ನಿಮ್ಮೆಮ್ಮ ತಾಯ್ತಂದೆಯ ಸಂಬಂಧ । ಸರಿಯುದರಿಂದಾಡದಿಹರೆ ॥ ೩೬ ॥
ಭಾವಾಜಿಯುತ್ತಮಗುಣವ ಕೇಳ್ವಾಗ ನಿ । ನ್ನೀ ವಿರೋಧಕೆ ತೆರವುಂಟೆ ॥
ದೇವ ಸೈರಿಪುದೆಂದು ನುಡಿದಳಿಚ್ಛಾಮಹಾ । ದೇವಿ ಸಂಪ್ರೀತಿಮಾರ್ಗವನು ॥ ೩೭ ॥
ಹೆಣ್ಣೆ ನಿನ್ನಯ ಭಾವನೊಳ್ಗುಣವೇನು ನಿ । ಮ್ಮಣ್ಣನ ನಮಿರಾಜನೆಂದು ॥
ಬಣ್ಣಿಪುದೆಲ್ಲರು ಪೇಳ್ವುದ ಕೇಳ್ದು ನೀ । ನೆಣ್ಣಿಯ ತುಪ್ಪವೆಂದೊರೆವೆ ॥ ೩೮ ॥
ರಾಜಾಗ್ರಗಣ್ಯನಲ್ಲವೆ ಮಿಕ್ಕ ಭೂಪರ । ರಾಜರೆಂದೇಕೆ ಕರೆವನು ॥
ಓಜೆಯಲ್ಲವೆ ಅಂತುಟಾಗಿ ನನ್ನಣ್ಣನ । ರಾಜನೆಂದನು ಕಂಡ ಮತ್ತೆ ॥ ೩೯ ॥
ನನ್ನಣ್ಣನೊಬ್ಬನಲ್ಲದೆ ರಾಜ ಬಾರೆಂದು । ಮುನ್ನ ಕರೆಸಿಕೊಂಡರಾರು ॥
ತನ್ನ ಕೈತುಂಬಿ ತಕ್ಕೈಸಿ ಗದ್ದುಗೆತೋರಿ । ಮನ್ನಿಸಿದಾ ತೇಜ ಕಿರಿದೆ ॥ ೪೦ ॥
ಸರಸದೊಳೊಂದುಪಂತಿಯ ತೃಪ್ತಿಯಲ್ಲಿ ಸ । ತ್ಕರಿಸಿದ ಗಡ ಮತ್ತೆ ತನ್ನ ॥
ಹಿರಿಯತ್ತೆಗೆದ್ದು ಕೈಮುಗಿದ ಗಡದರಿಂದ । ಪಿರಿದಾದ ತೇಜವಿನ್ನುಂಟೆ ॥ ೪೧ ॥

ಆತನ ಮಾವನ ಮಕ್ಕಳಿಂಬೊಂದು ವಿ । ಖ್ಯಾತಿಯೆ ಸಾಕು ನಮ್ಮವರ್ಗೆ ॥
ಭ್ರಾತನ ಕಂಡು ನೀನೆಮಗರ್ತಿಮಾಡೆಂದು । ಪ್ರೀತಿಯ ನುಡಿದಳಾ ನಿಪುಣೆ ॥ ೪೨ ॥

ಅಕ್ಕಾಜಿ ನೀ ನಿಲ್ಲು ನಾನೊಮ್ಮೆ ಮನದೊಳಿ । ದ್ದಕ್ಕರನಾಡುವೆನೆಂದು ॥
ಚಿಕ್ಕಹರೆಯದ ಚಿತ್ರಾವತಿ ತಾನೆಡೆ । ಹೊಕ್ಕಾಗ ನುಡಿದಳಿಂತೆಂದು ॥ ೪೩ ॥

ಸುಖಿಯಲ್ತೆ ದೇವ ನೀನೆಲ್ಲರ್ಗೆ ಜಗದೊಳು । ಸುಖವನೆ ಸಂಧಿಸೆಯಲ್ತೆ ॥
ಸುಖಿಗಳಗ್ರಣಿಯಲ್ತೆ ನಿಮ್ಮಣ್ಣನಾತಗೆ । ಸುಖವು ಖದೋರೆಂದಳಾಕೆ ॥ ೪೪ ॥

ಎತ್ತ ನೀನಣ್ಣನೊಡನೆ ಕಾದಿದಾಗ ತೊಂ । ಭತ್ತಾರುಸಾವಿರಹೆಣ್ಣ ॥
ಚಿತ್ತ ನೋಯದೆ ನಮಗೆಂಟುಸಾವಿರಕಳ । ಲೊತ್ತದಿಹುದೆ ನನೆವಿಲ್ಲಾ ॥ ೪೫ ॥

ಇಲ್ಲಿಗಲ್ಲಿಗೆ ನೇರವಾಗಿರ್ದರವರೊಮ್ಮೆ । ಯಿಲ್ಲಿಗೆಯ್ದುವರೊಮ್ಮೆ ನಾವು ॥
ಅಲ್ಲಿಗೆಯ್ದುವೆವೆರವಿಲ್ಲದೆ ಕೂಡಿ ಬಾ । ಳ್ವಲ್ಲಾಸಕೆಡಿಪರೆ ರಮಣಾ ॥ ೪೬ ॥

ಹೆರರ ಮನೆಗೆ ಹೋಗಬಾರದು ನಿಮ್ಮಣ್ಣ । ನುರುವಮಂದಿರಕೆಯ್ದಿ ನಾವು ॥
ತುರುಗಿದ ಪೆಂಗಳೊಳರ್ತಿಸಲಾಗದೆ । ಸೆರೆಯಾಳ್ವೆಯ ನಮ್ಮ ನೀನು ॥ ೪೭ ॥

ತೊಡಕು ಸಲ್ಲದು ಹಿರಿಯನೊಳು ನಮ್ಮರ್ತಿಯ । ನಡಸದಿರಲ್ಲಲ್ಲಿ ನೀನು ॥
ಎಡೆಮುಳ್ಳನೆಳೆಯ ಬೇಡೆಮಗದು ಸಲಲೆಂದು । ನುಡಿದಳು ಕೈಮುಗಿದಾಕೆ ॥ ೪೮ ॥

ಸಾಕು ಚಿತ್ರಾವತಿ ನಿಲ್ಲಕ್ಕ ಕೋಪವು । ದ್ರೇಕಿಸುತಿದೆ ನನಗೀಗ ॥
ಈ ಕರ್ತನೊಡನೊಮ್ಮೆ ನುಡಿದು ನೋಡುವೆನೆಂದು । ವಾಕುಗೊಟ್ಟಳು ರತಿದೇವಿ ॥ ೪೯ ॥

ಚತುರೆ ಚಾಪಲನೇತ್ರೆ ನಿಶ್ಚಲಮತಿ ನೀರೆ । ಪತಿಭಕ್ತೆ ಧೀರೆ ಶೃಂಗಾರೆ ॥
ರತಿಕಲಾಕುಶಲೆ ರಟ್ಟಡಿಕಾತಿ ನುಡಿದಳು । ರತಿದೇವಿ ರಮಣನೊಳಾಗ ॥ ೫೦ ॥

ಆಕೆಯಿಚ್ಛಾದೇವಿಯನುಜೆ ಪಃಶೀನಪ । ತಾಕನ ಮನವೆಚ್ಚಿನಬಲೆ ॥
ತೂಕಗಾಣದೆ ನುಡಿದಳು ಮೋಹರಸದ ರ । ತ್ನಾಕರ ತುಳುಕಿದಂದದೊಳು ॥ ೫೧ ॥

ಅಲ್ಲವೆ ತನ್ನ ಸಾಮರ್ಥ್ಯ ತನ್ನವರ ಮೋ । ಲಲ್ಲದಿನ್ನೆಲ್ಲಿ ಮೆರೆವುದು ॥
ಬಿಲ್ಲಂಬ ಹಿಡಿದೊಂದು ಬಲ್ಮೆಯ ನಿನ್ನಣ್ಣ । ನಲ್ಲಿ ತೋರುವುದೊಳ್ಳಿತಾಯ್ತು ॥ ೫೨ ॥

ಭಾವಾಜಿಯರ ಹೆಣ್ಣುಗಳಿಗೆಮಗೆಲ್ಲರ್ಗೆ । ನೋವುದೋರುವೆನೆಂಬ ನಿನ್ನ ॥
ಕಾವನೆಂಬರದೇಕೆ ಕೊಲ್ವನೆನ್ನದೆ ಭ್ರಾಂತ । ಜೀವರು ನರಸುರೋರಗರು ॥ ೫೩ ॥

ಒಬ್ಬರ ಮನಸಿಗು ಸಿಹಿಯಿಲ್ಲವೀ ನಡೆ । ಕಬ್ಬುವೊಕ್ಕೈಯೊಳಗಿಹುದು ॥
ಕಬ್ಬಿನ ಬಿಲ್ಲೊ ಕಾಕಬ್ಬಿನ ಬಿಲ್ಲೊ ಸಾ । ಹೆಬ್ಬಿದಿರಿನ ಕೊಂಕುಬಿಲ್ಲೊ ॥ ೫೪ ॥

ಮೆಲ್ಲೆದೆಯುಳಿದು ತಮ್ಮಣ್ಣನಿಗಿದಿರಹ । ಕಲ್ಲೆದೆಯೋಪನಂಬುಗಳು ॥
ಮಲ್ಲಿಗೆಗೋಲ್ಗಳೊ ಮರದ ಮಿಂಟೆಯೊ ಪೇಳು । ಫುಲ್ಲಂಬೊ ಲೋಹದಂಬುಗಳೊ ॥ ೫೫ ॥

ಮರುಗದಿಹಳೆ ಸುಭದ್ರಾದೇವಿ ನಮಗಿಲ್ಲಿ । ಕರಿಗಂದುದೋರದೆ ಕದನಾ ॥
ಅರಿದರಿಂದಚ್ಛಮೋಹಿಗಳ ನೋಯಿಪ ಸುಖ । ಮುರುಕ ಹೋಗೆಂದಳಾ ಪ್ರಮದೆ ॥ ೫೬ ॥
ನಡೆಯಬಾರದ ನಡೆಗೆಳಸಿದೆ ನೀನೀಗ । ನುಡಿಯಬಾರದ ನುಡಿದೋರ್ಪೆ ॥
ಕಡೆಗಾಲವಿದು ನೀನು ಕೆಡುವೆ ಆಕೊ ಹುಲ್ಲ । ಹಿಡಿದು ಸಾರಿದೆನೆಂದಳೊಡನೆ ॥ ೫೭ ॥
ಬಾಯ ಮುಚ್ಚೆಲೆ ಧೂರ್ತೆ ಸ್ವಾಮಿಯ ನೀನಿಂತು । ನೋಯಿಸುವರೆಯೆಂದಳಕ್ಕಾ ॥
ನ್ಯಾಯತಪ್ಪಿದ ಮೇಲೆ ಮುಖದಿಚ್ಛೆಯೆಂಬಭಿ । ಪ್ರಾಯವೆಯೆಂದಳಾ ತಂಗಿ ॥ ೫೮ ॥

ಉಳಿದ ಹೆಂಗಳು ಯುದ್ಧ ಬೇಡೆಂದು ನುಡಿದರಾ । ಹಲಬರ ನುಡಿಗೇಳಿ ಮದನಾ ॥
ಬಲುಹಲ್ತೆ ಚಕ್ರಿಯ ಪುಣ್ಯವೆಂದೆಣಿಸುತ । ತಲೆದೂಗುತಿರ್ದ ಮೋನದೊಳು ॥ ೫೯ ॥
ನುಡಿಯೊಳಿವರನು ಚಾಳಿಸಿ ಪೋಪೆನೆಂದು ಕ । ನ್ನಡಿಯ ನಿಲ್ಲಿಸಿ ಕೂಡೆ ಮದನಾ ॥
ನುಡಿದುದುತ್ತಮವಾಯ್ತು ನಿಮ್ಮೆಲ್ಲರರ್ತಿಯ । ಕೆಡಿಸೆನೌ ಸುಖಮೋರ್ಪೆನೆಂದಾ ॥ ೬೦ ॥
ಕೋಪವಿರ್ದುದು ಮೊದಲೆನಗೆ ನಿಮ್ಮೆಲ್ಲರಾ । ಲಾಪವ ಕೇಳ್ದು ತಂಪಾಯ್ತು ॥
ಕೂಪತನದೊಳಣ್ಣಗೆರಗಿ ಬಂದಪೆನೆಂದ । ನಾ ಪೆಂಗಳುಲ್ಲಾಸವೇರೆ ॥ ೬೧ ॥
ರತಿ ನೀನು ಲೇಸನಾಡಿದೆ ನನಗದು ಮಹಾ । ಹಿತವಾದುದೆನಲಾಕೆ ಕೂಡೆ ॥
ಹಿತವೆಂದು ನೀನಲ್ಲದಾರ್ಬಲ್ಲರೆಂದಾತ್ಮ । ಪತಿಯ ಕಾಲ್ಗೆರಗಿದಳೊಸೆದು ॥ ೬೨ ॥
ಸೇಸೆಯಿಟ್ಟರು ಸರ್ವರಾಣಿಯರೊಡನೆ ನಿ । ವಾಸದಿಂದೆದ್ದನಾ ಮಾರಾ ॥
ಸಾಸಿವೆಗುಡಿದವೊಲಾಯ್ತು ಪೆಣ್ಣುಗಳೆದೆ । ಪೂಸರ ತಿರುಗಲರಿಯನು ॥ ೬೩ ॥

ಬಂದು ತನ್ನರಮನೆಯಿದಿರಲ್ಲಿ ನೆರೆದಿಹ । ಮಂದಿಯ ನೋಡುತಂಗಜನು ॥
ವಂದಿಗಳ್ಬಾಂಗು ಭಲಾ ಜೀವುರೆನಲು ಮಾ । ಕಂದನೆಂಬಾನೆಯೇರಿದನು ॥ ೬೪ ॥
ಬಿಳಿಯ ಸತ್ತಿಗೆಯೆತ್ತಿತೊಡನೆ ಸೀಗುರಿಯೆಡ । ಬಲದೊಳೊಪ್ಪಿದುವು ಮನ್ಮಥಗೆ ॥
ಮೊಳಗಿತು ವಾದ್ಯ ಚಾಮರವನಿಕ್ಕಿದರೆತ್ತಿ । ಘಳಯಿಗೆ ನಡೆದುವು ಮುಂದೆ ॥ ೬೫ ॥
ಲೋಕದ ಶೃಂಗಾರ ರೂಪವೆತ್ತಂತೆ ತ । ನ್ನಾಕಾರ ಮೋಹಿಸೆ ಮದನಾ ॥
ಮಾಕಂದಗಜವ ಮುಂದಕೆ ನಡೆಸಿದನು ಜ । ನಾಕೀರ್ಣ ಜಯ ಜಯಯೆನಲು ॥ ೬೬ ॥
ಮದಿಲೇರಿ ಮಾಳಿಗೆಯೇರಿ ಮಾಡಗಳೇರಿ । ಸುದತಿಯರೇರಿ ಗೋಪುರವಾ ॥
ಮದನನ ಚೆಲ್ವ ನೋಡಿದರಿಂದೆ ನೋಡಲಿ । ನ್ನಿದೆ ಕಡೆ ಮುಂದೆ ಕಂಡಪರೆ ॥ ೬೭ ॥
ಎಲ್ಲರ ನೋಡುವರೆಂದೆಂದು ಕಂಡಂತೆ । ಸಲ್ಲೀಲೆಯಹುದಿಲ್ಲ ತನಗೆ ॥
ತಳ್ಳಂಕವಹುದೆದೆ ಮರುಕವೆ ತೋರ್ಪುದ । ದಲ್ಲವೆ ಮುಂದಣ ಚಿಹ್ನಾ ॥ ೬೮ ॥
ಬಲದಲ್ಲಿ ಗೌಳಿ ನುಡಿದುವಾಗ ವಾಯಸ । ಬಲದಿಂದ ಹಾರಿದುವೆಡಕೆ ॥
ಘಲಘಲನೊಕ್ಕಾಯ್ತು ತಿರುಗಲರಿಯನಿನ್ನು । ಪೊಳಲಿಗೀ ಕಾಮನೆಂಬಂತೆ ॥ ೬೯ ॥

ಪೂಗೋಲನವನೋರೆಮಾಡಿಯೆತ್ತರೆ ಸಖ । ರಾಗಾಗ ಕೀರಿ ತೋರಿದರು ॥
ಕಾಗೆ ಹಾರವೆ ಮಝು ಹಸುಬಪಲ್ಲಿಗಳ ಬಾ । ಯ್ಕೊಗ ಮುಚ್ಚುವಿರೆ ಸಾಕೆಂದಾ ॥ ೭೦ ॥
ಮುಂದೊಬ್ಬರಾವುತ ತನ್ನಂಗಕಿಕ್ಕಿದ । ಹೊಂದೊಡಿಗೆಯ ತೆಗೆದಿತ್ತಾ ॥
ಚಿಂದಿಯ ತೆಗೆದು ಜಿಗುಳೊಗಂಟನಿಕ್ಕಿದ । ಮುಂದಹ ತಪವ ತೋರ್ಪಂತೆ ॥ ೭೧ ॥
ಆದ ಕಂಡು ಮಂತ್ರಿ ಮರುಗಿ ಸಾರಿ ನಾಳೆ ನಾ । ಡಿದು ಗಮಿಸುವೆ ಸ್ವಾಮಿಯೆಂದಾ ॥
ಇದು ಮಹಾಲಗ್ನವೈ ಸುಮ್ಮನೆ ಬಾರೆಂದು । ಮದಮುಖದೊಡೆಯನೆಯ್ದಿದನು ॥ ೭೨ ॥
ವಾದಕಪಾಠಕರುಲುಹಿಂದ ಗೀತಸಂ । ಪಾದಕರಾಲಾಪದಿಂದ ॥
ಪೌದನಪುರದ ಬಾಗಿಲ ಕಳೆದರು ತಮ್ಮ । ಮೇದಿನೀಪದದಾಂಟಿದವೊಲು ॥ ೭೩ ॥

ಗುಣವಸಂತಕನಾಗ ಮುಂದೆ ಪಾಯ್ದಳವ ಸಂ । ದಣಿ ಮಿಗೆ ತೋರಿ ಕೈಮುಗಿದಾ ॥
ರಣರಂಗವಿಕ್ರಮನಾ ಕಾಮ ಮತ್ತವಾ । ರಣದ ಮೇಲಿದ್ದು ನೋಡಿದನು ॥ ೭೪ ॥
ಸೆಳೆಗೊಂಬು ದಂತ ಪೆಗ್ಗೊಂಬು ಸುಂಡಿಲು ಕರ್ಣ । ತಳಿರು ಸುರಿವ ಸೊನೆ ಮದವು ॥
ಅಳಿಗಳೆರಗಿ ಝೇಂಕರಿಸುತಿಹ ಗಜಘಟೆ । ಸುಳಿದುವು ಮಾಮರದಂತೆ ॥ ೭೫ ॥
ಗೀಕೆಂಬ ಗಾಲಿ ಕೋಗಿಲ ದನಿ ತಳಿರು ಪ । ತಾಕೆ ತುಂಬಿದ ಪುಷ್ಪ ಬಾಣಾ ॥
ನೂಕಿ ರಥಗಳೊಡ್ಡು ನಡೆದುವು ಚರಿಸುವ । ಶೋಕೆಯ ಮರಗಳೆಂಬಂತೆ ॥ ೭೬ ॥
ಸಲೆ ಮೊಗರಂಬ ಮೋರೆಯ ಕೆಂಪು ಸಂಜೋಗ । ನಳಿನಳಿಸುವ ಪಕ್ಷವಾಗೆ ॥
ನೆಲದಲ್ಲಿ ನಿಲ್ಲದೆ ಹಾರುತೆಯ್ದಿದುವಾಗ । ಗಿಳಿಯಂತೆ ಸಾಲುತೇಜಿಗಳು ॥ ೭೭ ॥
ಪಕ್ಕಗಳಂತಿರೆ ಹರಿಗೆ ಕೂರಾಯುಧ । ಚೊಕ್ಕಾಗಿ ಹಳಚುತೋಲೈಸಿ ॥
ಜಕ್ಕವಕ್ಕಿಗಳಂತೆ ಹರಿಗೆಯ ಭಟರು ಕಾ । ಲಿಕ್ಕುತಿರ್ದರು ವಿಲಾಸದಲಿ ॥ ೭೮ ॥
ಎರಳೆಯಂದದಿ ಸಬಳಿಗರು ಬತ್ತಳಿಕೆಯಾಂ । ತುರೆ ನವಿಲಂತೆ ಬಿಲ್ಲವರು ॥
ಅರಸಂಚೆಯಂತರಸುಗಳು ಮಾನಸಿಕೆವೆ । ತ್ತಿರೆ ನೋಡಿದನು ಪುಷ್ಪಬಾಣಾ ॥ ೭೯ ॥

ಚತುರಂಗಬಲ ಪೊರಗುಂಟು ಮನ್ಮಥಗೊಲ್ದ । ಮತವೆಂಬುದೆಲ್ಲ ಪೆಣ್ಬಳಗಾ ॥
ರತಿರಾಗಕುಶಲದ ಗಣಿಕೆಯರೆಲ್ಲರಾ । ಯತವಾಗಿ ಸಾರ್ದರೇನೆಂಬೆ ॥ ೮೦ ॥
ಕಾಲ ಕುಪ್ಪಸ ಕಸೆ ಮೊಲೆಗಟ್ಟು ಜಡೆ ರತ್ನ । ಕೀಲಣೆಗೆಲಸದೊಡ್ಯಾಣಾ ॥
ಹೀಲಿಯ ಹರಿಗೆ ಹೂವಿನ ಕೋಲ್ಗಳಿರೆ ಬಂದ । ರೋಲೈಸುತಾನೆಯ ಮೇಲೆ ॥ ೮೧ ॥
ಪಾದರಿ ತಾವರೆ ಬಿಟ್ಟದಾವರೆಗಳಿಂ । ಬಾದಚ್ಚ ಪರಿಗೆ ಕೆಲರಿಗೆ ॥
ಕೇದಗೆಯೆಸಳ ಕಠಾರಿವಿಡಿದು ಬಂದ । ರಾದರ ಮಿಗೆ ತೇರನೇರಿ ॥ ೮೨ ॥
ಮುತ್ತಿನ ಹರಿಗೆ ಕುಂದಾಣಪರಿಗೆ ಮಣಿ । ಗೆತ್ತಿದ ರನ್ನದ ಪರಿಗೆ ॥
ಮುತ್ತಿನ ಕೋಲು ಪೊಂಗೋಲು ಪೂಗೋಲಾಂತು । ಮತ್ತಯೌವನೆಯರೆಯ್ದಿದರು ॥ ೮೩ ॥

ಬಲವನೀಕ್ಷಿಸಿ ಮೆಚ್ಚಿ ಮನ್ಮಥ ಕರೆದಾಗ । ದಳಪತಿಗಿತ್ತನು ಮೆಚ್ಚಾ ॥
ಗೆಲವೇರಿ ನಡೆಯಲ್ಕೆ ಕಟಕವೆಂದನು ಘುಳು । ಘುಳಿಸುತ ನಡೆದುದಾ ಸೇನೆ ॥ ೮೪ ॥

ಸದೆದುವು ಭೇರಿ ತಂಬಟವೆತ್ತಿ ಕಾಳೆ ಚೀ । ರಿದುವು ಡಬ್ಬೆಂದುವು ಪೆಟಲು ॥
ಮದವೆದ್ದು ಸೇನೆ ಘೋಯೆಂದಾಲ್ಬು ನಡೆಯೆ ಕೇ । ಳಿದುದತ್ತ ಚಕ್ರಿಯ ಕಟಕ ॥ ೮೫ ॥

ನೆಗಳ ಟಕ್ಕೆಯ ವಿಮಾನ ಟಕ್ಕೆಯ ಮೇಲೆದ್ದು । ಗಗನವ ತುಡುಕುತೆಯ್ದಿದುವು ॥
ನೆಗೆವುತ ಹರಿವುತ ಬೊಬ್ಬಿರಿವುತ ಸಾಗಿ । ತಗಲದೊಳಂಗಜಸೇನೆ ॥ ೮೬ ॥

ಸ್ಮರ ಪಿಡಿದಿಕ್ಷುಚಾಪದ ಸರಿ ಚಾಪಕೆ । ಭರದೊಳೇರಿಸಿ ತುಂಬಿವೆದೆಯಾ ॥
ಬಿರಿಮುಗುಳಂಬುವಿಡಿದು ಚಪಳೆಯರು ಹ । ತ್ತಿರೆ ಬಂದರಾನೆಯನೇರಿ ॥ ೮೭ ॥

ಪಾರಿವಾಳಂಬೊಲು ಭಟರುಲಿಯಲು ಮುಂದ । ಮಾರುತಮುಲಯಮಾರುತರು ॥
ಹಾರುತ ಮುಂದೆಯ್ದೆ ನೋಡುತ ಶೃಂಗಾರ । ಹಾರ ಬಂದನು ವಿಡಾಯದೊಳು ॥ ೮೮ ॥

ಚಿತ್ತ ಪರಾಕವಧಾನವೆಂದೊಡನೆ ಕೈ । ಯೆತ್ತಿ ಸೂಚಿಸೆ ಕಳಕಂಠಾ ॥
ಮತ್ತಕೋಕಿಳನು ಹೋ ಹೋಯೆಂದು ಮುಂದೆಯ್ದೆ । ಚಿತ್ತಜ ನೋಡುತೆಯ್ದಿದನು ॥ ೮೯ ॥

ಹತ್ತುವರುಷದ ಮಹಾಬಲರಾಜನೆಂ । ಬುತ್ತುಂಗಗುಣದ ಕುಮಾರಾ ॥
ಮತ್ತೊಂದು ಸಹಕಾರನೆಂಬಾನೆಯೇರಿ ಬೆ । ನ್ನೊತ್ತಿನೊಳ್ಬರೆ ಕಾಮ ನಡೆದಾ ॥ ೯೦ ॥

ಆ ತರಳನ ಕಿರಿಯನು ರತ್ನಬಲಿರಾಜ । ಚೂತಾಂಕನೆಂಬಾನೆಯೇರಿ ॥
ಭ್ರಾತನ ಹಿಂದೆಯ್ದುತಿರ್ದನು ಸ್ಮರನ ವಿ । ಭೂತಿಯನೇನ ಬಣ್ಣಿಪೆನು ॥ ೯೧ ॥

ಬಾಲೆಯರೆತ್ತ ಬಾಲಕರೆತ್ತ ಸಂಗ್ರಾಮ । ಕೇಳಿಯೆತ್ತಲರಂಬ ತನಗೆ ॥
ಮೂಲೋಕವಿದಿರಿಲ್ಲವೆಂದು ಕಂಡಿಹನು ಬಾ । ಹ್ಯಾಳಾಪವಲ್ಲದು ಸತ್ಯಾ ॥ ೯೨ ॥

ಪೊಡವಿ ಘೋರಿಡೆ ತನ್ನ ಪಡೆಗೂಡಿ ಚಕ್ರಿಯ । ಪಡೆಯನು ನೋಡಲೆಯ್ತಂದು ॥
ಕಡಲಿದಿರೊಳು ನಿಲ್ವ ಕೆರೆಯಂತೆ ನಿಂದನು । ಕುಡುವಿಲ್ಲ ಕಟಕದಿದಿರೊಳು ॥ ೯೩ ॥

ಲೋಲನೇತ್ರೆಯರೆಂಟುಚಾಮರಗಳನಿಕ್ಕೆ । ವೀಳೆಯಗೊಳುತ ಮನ್ಮಥನು ॥
ಸಾಳಂಗರಾಗವ ಕೇಳುತ ಚಕ್ರಿಯ । ಪಾಳೆಯವನು ನೋಡುತಿರ್ದಾ ॥ ೯೪ ॥

ಮುಡಿಯ ಬಾಸಿಗಗಂಪಿಗೆಳೆದುಂಬಿಯಾಡೆ ಬೆ । ಳ್ಗೊಡೆ ಮೇಲೆ ಮೆರೆಯೆ ಭಾವಜನು ॥
ಅಡಕಿಟ್ಟ ಬೆಳುಗೊಡೆ ಹೀಲಿಗೊಡೆಯ ನೆಳ । ಲಡಿಯೊಳಿರ್ದನೊಯೆನಲೆಸೆದಾ ॥ ೯೫ ॥

ಅಲರಂಬ ದಾಳಿಗೆಯ್ತಂದನೆಂದಾ ಚಕ್ರ । ಧರನ ಪಾಳೆಯವೆಲ್ಲ ಮುಸಗಿ ॥
ಮುರಿಮುರಿದೀಕ್ಷಿಸುತಿದ್ದುದು ಮದನನ್ನೈ । ಸಿರಿಯಿದೆಯೆಂದರ್ತಿವಡುತ ॥ ೯೬ ॥

ಮೂವತ್ತೆರಡು ಚಾಮರ ಗಡಣಿಸೆ ಹೊರ । ಚಾವಡಿಯೊಳಗಿರ್ದ ಚಕ್ರಿ ॥
ಹೂವಿಲ್ಲ ಬಂದುದ ಕೇಳ್ದು ಪರಾಕುಗೈ । ದೋವಿ ಗಾನವ ಕೇಳುತಿರ್ದಾ ॥ ೯೭ ॥

ಕಾದಲೆಯ್ತಂದನು ಕಿರಿಯಯ್ಯ ನಮ್ಮ ಕಂ । ಡಾದರು ತಿಳಿಯನೆಯೆಂದು ॥
ಸೋದರರೊಡಗೂಡಿಕೊಂಡಿದಿರ್ಗೆಯ್ದಿದ । ನಾದರದಿಂದರ್ಕಕೀರ್ತಿ ॥ ೯೮ ॥
ತಾತನಿಗುಸುರದೆ ತಾವೆ ಯೋಚಿಸಿ ಮುಂದೆ । ಮಾತಾಡಿ ಪ್ರಣಯಚಂದ್ರಮಗೆ ॥
ದೂತರನಟ್ಟಿ ಕೈವಿಡಿದು ಕಾಣ್ಕೆಯ ಚಿಕ್ಕ । ತಾತನ ಕಾಣಲೆಯ್ದಿದರು ॥ ೯೯ ॥
ಕುಂದದ ಚಂದ್ರರಂದದಿ ಬಹ ಸುತರ ಮಾ । ಕಂದದ ಮೇಲಿದಿರ್ಗ ಕಂಡು ॥
ಕಂದರ್ಪನಿವರಾರು ಚೆಲ್ವರೈಯೆನೆ ನಿನ್ನ । ಕಂದಂದಿರೆಂದನಾ ಮಂತ್ರಿ ॥ ೧೦೦ ॥
ಹೊಕ್ಕರ್ಕಕೀರ್ತಿ ಮುಂತಾದ ಕುಮಾರರು । ತಕ್ಕ ಕಾಣ್ಕೆಗಳ ಕೈವಿಡಿದು ॥
ಚಿಕ್ಕಯ್ಯನಡಿಗಳ ಕಾಣಲೆಯ್ದಿದರವರ । ಕ್ಕರ ಪರಿಭಾವಿಸೆಂದಾ ॥ ೧೦೧ ॥
ಬರಬೇಡ ಹೋಗಹೇಳಿೊ ತಮ್ಮ ಪಿತ ನನ । ಗರಸು ತಾವಣುಗರೆ ನನಗೆ ॥
ಅರರೆ ತಾವಾರ ಚಾಳಿಸಬಂದರೆಂದನಾ । ಸ್ಮರನೆನಲಿದ್ದುದೊ ಕಮರ್ಗ ॥ ೧೦೨ ॥
ನಿಲ್ಲದೆ ಪರಿತಂದು ಕಳಕಂಠನಿದು ವೇಳೆ । ಯಲ್ಲೆಂದರೆಂದು ಕೈಮುಗಿದಾ ॥
ಕಲ್ಲ ತಾಗಿದ ಮಿಂಟೆಯಂತವರ್ತಿರುಗಿದ । ರೆಲ್ಲರ ಮನಕೆ ನೋವಾಗೆ ॥ ೧೦೩ ॥

ಅಯ್ಯಯ್ಯೊ ಅಣ್ಣಾಜಿಯರು ಬರೆ ಪೋಗಲೆಂ । ದಯ್ಯ ಬಾರಿಸಿದನೆಯೆಂದು ॥
ಒಯ್ಯನಾನೆಯನಿಳಿದಾ ಮಹಾಬಲರಾಜ । ಮೆಯ್ಯ ತೋರದೆ ಪೋದ ನೊಂದು ॥ ೧೦೪ ॥
ಮುಂದೀತ ನನ್ನ ರಕ್ಷಿಸಲರಿಯನು ದೊಡ್ಡ । ತಂದೆಯೆ ಪಾಲಿಪನೆಂದು ॥
ಇಂದೆ ಕೊಂಡೊಯ್ವುದೊ ವಿಧಿಯೆನಲವನಕ್ಕ । ರಿಂದ ಪೋದನು ಚಕ್ರಿಯೆಡೆಗೆ ॥ ೧೦೫ ॥
ಕಾಮನ ಸುತನತ್ತಿ ಲಾವಣ್ಯಸೂಸುತ । ಭೂಮೀಶನೆಡೆಗೆಯ್ದುವಾಗ ॥
ಶ್ರೀಮಹಾಬಲರಾಜ ನಿನ್ನ ತಮ್ಮನ ಸೂನು । ಸ್ವಾಮಿಯೆಂದನು ದಕ್ಷಿಣಾಂಕಾ ॥ ೧೦೬ ॥
ಸಾರಿ ಕಾಣಿಕೆಯಿಕ್ಕಿ ಪಜ್ಜೆಗೆರಗಿದ ಕು । ಮಾರನ ತೆಗೆದಪ್ಪಿಕೊಂಡು ॥
ತೋರದೊಡೆಯೊಳಿಟ್ಟುಕೊಂಡನಾ ನೃಪನಂತೆ । ಸಾರಹೃದಯರೊಬ್ಬರುಂಟೆ ॥ ೧೦೭ ॥
ಮೊಗವೇಕೆ ಬಾಡಿತು ಗೂಢದೊಳೆಯ್ತಂದ । ಬಗೆಯೇನು ನಿನಗೊಬ್ಬರೊಡನೆ ॥
ಜಗಳವಾದುದೊ ಹೇಳು ಹೇಳಣ್ಣಯೆಂದಪ್ಪಿ । ಮಗನನಾ ಚಕ್ರಿ ಕೇಳಿದನು ॥ ೧೦೮ ॥
ದೇವರ ಸುತರು ಚಿಕ್ಕಯ್ಯನೊತ್ತಿಗೆ ಸಾರ । ಲೀ ವೇಳೆ ಬೇಡವೆಂದಟ್ಟಿ ॥
ನೋವ ತಾಳ್ದೀತನಿಂತೆಯ್ತಂದನೆಂದರು । ಸೇವಕರಾ ಚಕ್ರಿಯೊಡನೆ ॥ ೧೦೯ ॥
ಹಂಸನಾಥನೆ ಬಲ್ಲ ಮದನನ ಮನದ ವಿ । ಧ್ವಂಸಭಾವನೆ ನಿಂದುದಕಟ ॥
ನಾಂ ಸೇರದರೆ ನನ್ನ ಸುತರು ವೈರಿಗಳೆ ಕ । ರ್ಮಾಂಶನ ನಡೆ ಸುಡಲೆಂದಾ ॥ ೧೧೦ ॥
ಕರೆಕರೆ ಬೇಗರ್ಕಕೀರ್ತಿಯನೆಂದನಾ । ತರುಣ ಬಂದೊಡನೆ ಕೈಮುಗಿಯೆ ॥
ಹರಿದಾಡಿ ಬಳಲಿದೆ ಮಗನೆ ಪಿತೃದ್ರೋಹ । ತಿರುಗಿಸಿದುದೆ ನಿನ್ನನೆಂದಾ ॥ ೧೧೧ ॥

ಜವ ಮುನಿದರು ಜಯಿಸುವ ಶಕ್ತಿ ನನಗುಂಟು । ನಿವಗೆಲ್ಲರ್ಗೇಕಿಷ್ಟು ಚಿಂತೆ ॥
ಸವಿವಿಲ್ಲನೆಂದರೆ ಸರಸನೆಂದೆಯ್ದಿದೆ । ಸವಿಯಾಯ್ತು ಹೋಗು ಹೋಗೆಂದಾ ॥ ೧೧೨ ॥
ತಲೆಗುಸಿದವ ಸುಮ್ಮನಿರ್ದನಾ ನೃಪ ಮಹಾ । ಬಲಕುಮಾರನ ಮೊಗನೋಡಿ ॥
ಹಲವುನೋವನು ನಿನ್ನ ಕಂಡು ಮರೆವೆನಿನ್ನು । ಕಲುಷವಿಲ್ಲಿಲ್ಲೆನಗೆಂದಾ ॥ ೧೧೩ ॥
ಕಾಲವಶದಿ ನಿನ್ನ ತಮ್ಮನೊಡ್ಡಿದನಿನ್ನು । ಲೀಲೆಯಿಂದೆರಗುವನದಕೆ ॥
ಬಾಲನೆಯ್ತಂದು ಕಂಡುದೆ ಸಾಕ್ಷಿಯೆಂದು ನೃ । ಪಾಲಗೆ ನುಡಿದರಿದ್ದವರು ॥ ೧೧೪ ॥
ತಂದೆಯ ನುಡಿಗೊಪ್ಪದೀ ಕುಮಾರಕ ಜಾರಿ । ಬಂದ ವಿವೇಕಕಿನ್ನೆಣೆಯೆ ॥
ಇಂದಿಷ್ಟು ಬುದ್ಧಿ ಜವ್ವನವಾದರಿನ್ನೆಂತೊ । ಯೆಂದು ಸರ್ವರು ಪೊಗಳಿದರು ॥ ೧೧೫ ॥
ಒಡ್ಡಿದಂಕವ ನಾನು ಗೆಲ್ವೆ ನೀನನ್ನಕ । ದೊಡ್ಡಣ್ಣನೊಡನಿರೆಂದವಗೆ ॥
ಎಡ್ಡಮನ್ನಣೆಯನಿತ್ತರ್ಕಕೀರ್ತಿಯ ತೋರ । ಲಡ್ಡ ಬಂದವ ಕರೆಕೊಂಡಾ ॥ ೧೧೬ ॥
ಮದಗಜವೇರಿ ಮನ್ಮಥನಿರ್ದ ಸಭೆಯೊಳ । ಗ್ಗದ ಚಕ್ರಿಯಿರ್ದನಿನ್ನವರ ॥
ಕದನ ಕರ್ಕಶದೋರಿ ಮೃದುವಪ್ಪುದಿಲ್ಲಿಗೆ । **ಮದನಸನ್ನಾಹದ ಸಂಧಿ** ॥ ೧೧೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೧೮ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೧೯ ॥
ಅಘಟಿನ ಕರ್ಮವ ಮೃದುಭಾವದಿಂ ಗೆಲ್ವ । ಅಧಿಕಚಾತುರ್ಯ ಸುವೀರ್ಯಾ ॥
ಬುಧಜನಾರ್ಚಿತ ನನ್ನ ಮನದೊಳಿರಮೃತವಾ । ರಿಧಿಯೆ ಚಿದಂಬರಪುರುಷಾ ॥ ೧೨೦ ॥

ಮದನಸನ್ನಾಹಸಂಧಿ ಸಂಪೂರ್ಣಂ

# ರಾಜೇಂದ್ರಗುಣವಾಕ್ಯಸಂಧಿ.

ಒಡಲು ಬೇರಾತ್ಮ ಬೇರೆಂಬ ತತ್ತ್ವಾರ್ಥವ । ನುಡಿನುಡಿದೆಲ್ಲರ ಮನದ ॥
ಜಡವ ಜಾರಿಸುವ ಜಗನ್ನಾಥ ಜಾಣ್ಮೆಯ । ನುಡಿಸು ನಿರಂಜನಸಿದ್ಧಾ ॥ ೧ ॥

ಭರತೇಶಭುಜಬಲಿರಾಜರ ಮಂತ್ರಿಮಿ । ತ್ರರು ನಡುನೆಲದೊಳೊಗ್ಗಾಗಿ ॥
ದೊರೆಗಳಿಬ್ಬರ ಕದನಕೆ ಮುಂದೆ ಯೋಚಿಸಿ । ದರು ಮೃದುಕಲೆಯನೇನೆಂಬೆ ॥ ೨ ॥

ಆರು ಬೇಡೆಂದರು ಬಿಡದಾಯ್ತು ಕಾಯ್ವೇರಿ । ಮಾರನೆಯ್ತಂದಿದ್ದ ಮೇಲೆ ॥
ಹೋರಾಟವಲ್ಲದೆ ಸಂತವಿನ್ನಾಗದೆಂ । ದಾರಯ್ದರವರು ತಮ್ಮೊಳಗೆ ॥ ೩ ॥

ಹೋಗಲಿನ್ನೇಗೈಯಬಹುದು ಚಕ್ರೇಶನೀ । ಪೂಗೋಲನಿದಿರೆ ಸಂಗರಕೆ ॥
ತಾಗಿದಲ್ಲದೆ ಬಾಗರುಗ್ರರೆಂದುಭಯನಿ । ಯೋಗಿಮಿತ್ರರು ಯೋಚಿಸಿದರು ॥ ೪ ॥

ಸೆಣಸಬಹುದು ಮಿಕ್ಕರೊಡನೆ ಚಿತ್ತದನಿರೀ । ಕ್ಷಣನ ಸಾಹಸಿಯ ಚಕ್ರಿಯನು ॥
ಕೆಣಕಿ ಗೆಲ್ವನೆ ಕಾಮ ಬಲ್ಲೆವಂತಿರಲಿ ಮುಂ । ದಣ ಕಾರ್ಯವೇನೆಂದರೊಡನೆ ॥ ೫ ॥

ಕುಸುಮಾಸ್ತ್ರದಿಂದ ಕಾಳಗವೊ ಮನ್ಮಥನು ಕೂ । ರಸಿವಿಡಿವನೊಯೆಂದರವರು ॥
ಕುಸುಮಾಸ್ತ್ರಗಳ ಹಂಸನಿಂ ಗೆಲ್ವನೆಂದು ಕೂ । ರಸಿಗೆಳಸಿದನೆಂದರವರು ॥ ೬ ॥

ಎಂದರಿಬ್ಬರು ವಜ್ರದೇಹಿಗಳಿವರಲ್ಪ । ದಿಂದ ನೋಯರು ಕಾದುವಾಗ ॥
ಮುಂದರವೆರಡೊತ್ತಿ ಮಲೆ ಚೂರ್ಣವಾದಂತೆ । ಮುಂದಿ ನುಗ್ಗಹುವೆಂದರವರು ॥ ೭ ॥

ಸರ್ವಬಲವ ಕೊಲ್ಲಬೇಡ ಕೂರಸಿವಿಡಿ । ದೊರ್ವರು ಕಾದಬೇಡಿನ್ನು ॥
ಇರ್ವರ ಧರ್ಮಯುದ್ಧಕೆ ಕೇಳ್ವವೆಂದೆಯ್ದಿ । ಸಾರ್ವಭೌಮನ ಕೇಳ್ದರೊಡನೆ ॥ ೮ ॥

ಅರಸ ಬಿನ್ನಹ ಪುಷ್ಪಶರವಲ್ಲ ಲೋಹಾಸ್ತ್ರ । ಧುರಕೊಡ್ಡಿದನು ಯುವರಾಜಾ ॥
ಪುರದೊಳವೊಗದಿನ್ನು ಕಟಕವೆಲ್ಲವು ಯಮ । ಪುರವನೆಯ್ದುವುದೆಂದರವರು ॥ ೯ ॥

ಅಲಘುವಿಕ್ರಮರು ನೀವಿಬ್ಬರಿದಿರ್ಚಿ ಕೂ । ರಲಗುವಿಡಿದು ಕಾದುವಾಗ ॥
ಪ್ರಳಯಕಾಲವೆ ಬಂದಿತಲ್ಲದೆ ಕಟಕಕೆ । ನ್ನುಳಿಗಾಲವಿಲ್ಲ ಚಕ್ರೇಶಾ ॥ ೧೦ ॥

ಕುಲಿಶದೇಹಿಗಳು ನೀವಿಬ್ಬರಿನ್ನಂಕದ । ತಳದಲ್ಲಿ ಕಾಲಿಕ್ಕುವಾಗ ॥
ಬಳೆಗಾರವಸರದೊಳೆರಡಾನೆಹೊಕ್ಕು ಹೋ । ಕುಳಿಸಿದಂತಹುದೆಂದರವರು ॥ ೧೧ ॥

ಇದಕೆ ನೀವೇನ ಕಂಡಿರಿ ಪೇಳಿರೆಂದರಂ । ಜದೆ ನುಡಿವೆನೆ ಸ್ವಾಮಿಯೆನಲು ॥
ಎದೆಹಾರುಬೇಡವ್ವೈ ಪೇಳಿರೆಂದನು ಧರ್ಮ । ಕದನಕೊಪ್ಪೆಂದರಾ ಹಿತರು ॥ ೧೨ ॥

ದೃಷ್ಟಿಯುದ್ಧವ ಜಲಯುದ್ಧವ ಮಲ್ಲರ । ಮುಷ್ಟಿಯುದ್ಧವನಿಬ್ಬರೆಸಗಿ ॥
ಅಷ್ಟರ ಮೇಲೊಂದ ತೊಡಕಲಾಗದು ಸರ್ವ । ರಿಷ್ಟವಿದೆಂದರು ಹಿತರು ॥ ೧೩ ॥

ಅಂತಿಂತುಟೆಂದೆನ್ನ ಕೇಳಬೇಡರಲಂಬ । ನೆಂತೊಪ್ಪಿದಂತೆ ಕೇಳುವೆನು ॥
ಚಿಂತಿಸಿಕೊಳ್ಳಿರೈ ಹೋಗಿರೆಂದನು ಮಹಾ । ಸಂತಸಬಡುತ ಸಾಗಿದರು ॥ ೧೪ ॥

ಮದನನ ಕಂಡು ಕೈಮುಗಿದು ಬಿನ್ನವಿಪ್ಪೊಡೆ । ಮ್ಮೆದೆ ಬೆಚ್ಚುತಿದೆಯೆಂದರವರು ॥
ಕದನವುಂಟಾದರೆ ಭೀತಿ ಬೇಡುಸುರಿರೈ । ಮೊದಲಂತೆ ಹೇಳಬೇಡೆಂದಾ ॥ ೧೫ ॥
ಕಾಳಗವುಂಟು ಖಡ್ಗದ ಯುದ್ಧ ಬೇಡ ಕೇ । ಳ್ಕೀಲಾದ ಮೃದುಲಯುದ್ಧವನು ॥
ತೋಳ ಬಲ್ಮೆಯೊಳೆ ನೀವಿಬ್ಬರು ಮಾಳ್ಪುದೆಂ । ದಾ ಲೇಸುಗಾರರಾಡಿದರು ॥ ೧೬ ॥
ಇದಿರ ಪಾರ್‍ಶ್ವಳ ಹೆಚ್ಚು ನನ್ನ ಪಾರ್‍ಶ್ವಳ ಕಿರಿ । ದಿದಕೆಂತುಟೆನುತಿದ್ದೆ ನಾನು ॥
ಆದರಲ್ಲಿ ನೀವಿಂತು ಪೇಳ್ವುದೆನ್ನಯ ಪುಣ್ಯ । ಸದರವಾಯ್ತುಸುರಿ ಮುಂದೆಂದಾ ॥ ೧೭ ॥
ಎವೆಯಿಕ್ಕದೊಬ್ಬರೊಬ್ಬರ ನೋಡಬೇಕು ಕ । ಣ್ಣೆವೆಯಿಕ್ಕಿದಾಗದು ಸೋಲಾ ॥
ಬವರವನಷ್ಟರೊಳ್ಬಿಡಬೇಕು ಬಿಡದಿರ್ದ । ರವಧರಿಸಿನ್ನೊಂದುಮಾತಾ ॥ ೧೮ ॥
ಮೊಗೆದು ಹಸ್ತಗಳಿಂದ ಜಲವನೊಬ್ಬೊಬ್ಬರು । ಮೊಗಕೆ ಚೆಲ್ಲುವುದು ಚೆಲ್ಲುತಿರೆ ॥
ಮೊಗವಡ್ಡದೆಗೆದಾಗ ಸೋಲವಲ್ಲಿಯು ಯುದ್ಧ । ಮುಗಿಯುದರಾಲಿಸಿನ್ನೊಂದಾ ॥ ೧೯ ॥
ಮಲ್ಲಯುದ್ಧವ ಮಾಳ್ಪುದದರೊಳೊಬ್ಬನನೆತ್ತಿ । ದಲ್ಲಿ ಸುಮ್ಮನೆ ನಿಲಬೇಕು ॥
ಅಲ್ಲಿಂದ ಮುಂದೊಂದು ಕಾಳಗಗೀಳಗ । ಸಲ್ಲದೊಪ್ಪೆನಲೊಪ್ಪಿತೆಂದಾ ॥ ೨೦ ॥
ಅರಲಂಬಿನಿಂದ ಲೋಕವ ಜಯಿಸುವನು ನಿ । ಷ್ಠುರಖಡ್ಗವಿಡಿವಸೆಂಬಾಗ ॥
ಧರೆ ಮೆಚ್ಚಿದೆಂದು ನಾವೀ ಮೃದುಯುದ್ಧವ । ಸ್ಮರಿಸಿದೆವೆಂದರಾಪ್ತಿಗರು ॥ ೨೧ ॥
ಬಿಲ್ಲಂಬು ಮೃದು ನೀನು ಮೃದು ನಿನ್ನ ಪಡೆ ಮೃದು । ಕಲ್ಲಂತೆ ಕಠಿನವೇಕಿಲ್ಲಿ ॥
ಮೆಲ್ಲಿತಾದಂಕವ ನೆನೆದೆವು ನಿನ್ನರ್ತಿ । ಗಲ್ಲವೆಂಬೆವೆಯೆಂದರೊಡನೆ ॥ ೨೨ ॥
ಬಲ್ಲೆವೈ ನನ್ನವರೆಂದು ಕಾಳಗಕೆ ತ । ಳ್ವಿಲ್ಲದೇಳಿಸಿ ಹೋಗಿರೆಂದಾ ॥
ನಿಲ್ಲದೆಯ್ತಂದವರಾ ಶೌರ್ಯದನುವನು । ಸೊಲ್ಲಿಸಿವರು ಚಕ್ರಧರಗೆ ॥ ೨೩ ॥
ಮೃದುಯುದ್ಧಮೂರಲ್ಲದಿನ್ನೊಂದನೆಸಗೆನೆಂ । ಬುದಕಭಯುವ ಪಾಲಿಸೆಂದು ॥
ಮೊದಲು ಚಕ್ರಿಯೊಳು ನಂಬುಗೆಗೊಂಡು ಪರಿದೆಯ್ದಿ । ಮದನನೊಳ್ಕೊಂಡರು ಮತ್ತೆ ॥ ೨೪ ॥
ಸೋಲವಂಗಜಗಾದರರಸಗೆರಗಲಿ ನೃ । ಪಾಲನ ಕಾರ್ಯ ಹಿಂಚಿದರೆ ॥
ಕಾಲಿಗೆರಗದೆ ಕಂದರ್ಪ ತನ್ನೂರ್ಗೆಯ್ದಿ । ಬಾಳಲೆಂದಾಡಿ ತಿದ್ದಿದರು ॥ ೨೫ ॥

ಸಂಗರ ದೊರೆಗಳಿಬ್ಬರಿಗಲ್ಲದುಳಿದ ಷ । ಡಂಗವಾಹಿನಿಗಿಲ್ಲವೆಂದು ॥
ಡಂಗುರ ಸಾರಿತು ಕಟಕದೊಳ್ಮದನನ । ಣ್ಣಂಗೊಡ್ಡಿನಿಲೆ ಮೇರುವಂತೆ ॥ ೨೬ ॥
ತೆರತೆರವಾಗಿ ನಿಂದರು ವ್ಯಂತರಾಂಕರಂ । ಬರಚರರಾಕಾಶದಲ್ಲಿ ॥
ನರರು ತುರುಗಿ ತುಂಬಿ ನಿಂದಿರ್ದರಾ ವಸುಂ । ಧರೆ ತೆರಪೆಯ್ದದೆಂಬಂತೆ ॥ ೨೭ ॥

ಕಾವನ ನೃಪರು ಚಕ್ರಿಯ ದೊರೆಗಳು ರೂಪ । ಜೀವಿಯರಖಿಲಭೂಸುರರು ॥
ತೀವಿದ ಕವಿಗಮಕಿಗಳು ಭಟರು ಸುತ್ತ । ಕಾವುತ ನಿಂದರೊತ್ತಿನೊಳು ॥ ೨೮ ॥
ಸನ್ನೆಯ ಭೇರಿಕಾರರು ನಡುನೆಲದಲ್ಲಿ । ಸನ್ನದ್ಧರಾಗಿ ನೆರೆದರು ॥
ಇನ್ನು ಚಿತ್ತೈಸಲೆ ಸ್ಮರವೀರಯೆಂದರು । ಸನ್ನಿಧಿಗೆಯ್ದಿಯುತ್ತಮರು ॥ ೨೯ ॥
ಆನೆ ಕುದುರೆ ಮೊದಲಾದ ಸಂಪತ್ತು ಸಾ । ಕಾನು ದೀಕ್ಷೆಗೆ ಪೋಪೆನೆಂದು ॥
ಆ ನೆಲತುಂಬಿದ ಪಡೆಗರಿಪುವೊಲೇರಿ । ದಾನೆಯಿಂದಿಳಿದನಾ ಮದನಾ ॥ ೩೦ ॥
ಗರ್ವಗಿರಿಯನಿಳಿವಂತಾನೆಯಿಂದಿಳಿ । ದುರ್ವಿಯೊಳಲ್ಪದೂರವನು ॥
ಕರ್ವುವಿಲ್ಲನು ಮಧ್ಯದೊಳು ನಿಂದನಾ ಪಸು । ರ್ಪರ್ವತ ನಿಂದುದೆಂಬಂತೆ ॥ ೩೧ ॥
ತೊಲಗಿಸಿ ಛತ್ರ ಚಾಮರ ಮೊದಲಾದುವ । ಹಲವುಭೂಷಣವಸ್ತ್ರದೆಗೆದು ॥
ಕೆಲವುಭೂಷಣ ದಟ್ಟಿ ಕುಲಾಯಿಯುಳವಟ್ಟು । ಕಳದಲ್ಲಿ ನಿಂದನಾ ಕಾಮಾ ॥ ೩೨ ॥
ಅಚ್ಚಕೆಂಪಿನ ದಟ್ಟಿ ಚಲ್ಲಣ ಕುಲ್ಲಾಯಿ । ಪಚ್ಚೆವಣ್ಣದ ಮೆಯ್ಗೆ ಮೆರೆಯೆ ॥
ಹಚ್ಚಡ ಮರೆಯಿಲ್ಲದಂಗವ ಪಡೆ ನೋಡಿ । ಮೆಚ್ಚಿ ಸ್ವೈವೆರಗಾದುದಾಗ ॥ ೩೩ ॥
ಕಾಸೆವೆರಸಿ ಕಳದಲಿ ನಿಂದವೊಂದು ವಿ । ಲಾಸಕೆ ರಂಗದೊಳ್ನಿಂದ ॥
ದೇಸಿಗಾರಿಕೆಯ ಸುಪಾತ್ರ ಮೋಹಿಸುವಂತೆ । ಪೂಸರ ನಿಂದ ಮೋಹಿಸುತ ॥ ೩೪ ॥
ಕಣ್ಣಿಟ್ಟು ಸೋತು ನೋಡುವ ಮೋಹಿಜನಗಳ । ಕಣ್ಣುಗಳವನ ದೇಹದೊಳು ॥
ಪಣ್ಣ ಪಣ್ಣೆಯೊಳೆಡೆಯಾಡೆ ಮನ್ಮಥನೊ ಮ್ಯೆ । ಗಣ್ಣನೊಯೆನಲೊಪ್ಪುತಿರ್ದಾ ॥ ೩೫ ॥
ಹೆಣ್ಣುಗಂಡಿನ ಕಂಗಳವನಲ್ಲಿ ನಿಂದುವು । ಕಣ್ಣಿಯೊಳೆರಳೆ ಬಿದ್ದಂತೆ ॥
ಅಣ್ಣಗೊಡ್ಡಿದುದೊಂದು ಕೊರತೆಯುಲ್ಲದೆ ಮಿಕ್ಕ । ಬಣ್ಣದೊಳವಗುಂಟೆ ಕೊರತೆ ॥ ೩೬ ॥

ಮೀನಾಂಕನನುವಾಗಿ ನಿಂದ ಮುಂದಣ ಕಾರ್ಯ । ವೇನೆಂದರಾ ಚಕ್ರಿಯೊಡನೆ ॥
ನಾನೆ ಬಂದೆಲ್ಲವ ಪೇಳ್ವೆನ್ನೆಯೆಂದಿಪ್ಪ । ಮೋನವ ತಾಳ್ದು ಚಿಂತಿಸಿದಾ ॥ ೩೭ ॥
ಕಟ್ಟಲೇತಕೆ ಧರ್ಮಯುದ್ಧವ ಮೊದಲೆ ಕೈ । ಗಟ್ಟಿ ಚಿಕ್ಕಮ್ಮನ ಬಳಿಗೆ ॥
ಕೊಟ್ಟುಕಳುಹುವೆನೆಂದೆಣಿಸಿ ಭಂಗವ ನೊಡ । ಹುಟ್ಟಿದಗೆಳಸಹೇಸಿದನು ॥ ೩೮ ॥
ಪಡೆಯರಿಕೆಯೊಳು ಭಂಗಿಸಿ ಕಳುಹಿದ ಮೇಲೆ । ಕುಡುವಿಲ್ಲ ಮನೆಯೊಳು ನಿಂದು ॥
ಒಡಲ ಹೊರೆವನೆ ದೀಕ್ಷೆಗೆ ಪೋಪನೆಂದಂಜಿ । ಪೊಡವಿಪ ತೊರೆದನಂತದನು ॥ ೩೯ ॥
ಮೃದುಯುದ್ಧದೊಳು ಭಂಗಗೈದೆನಾದರೆ ನಾಚಿ । ಸದನವ ತೊರೆವನಾ ಮಾರಾ ॥
ಇದಕಾವ ಯುಕ್ತಿಯೆಂದೆದೆಯಲ್ಲಿ ನೆನೆದನು । ಮೊದಲ ಸೋದರರಾಟಕಂಜಿ ॥ ೪೦ ॥
ಬಲುಹ ತೋರ್ಪೊಡೆ ನನಗನ್ಯರೊಡ್ಡಿದುದಿಲ್ಲ । ಕಲಹಕೆನ್ನನುಜನೊಡ್ಡಿದನು ॥
ಕೊಲಬಾರದಹಿತರ ಗೆಲಬಾರದೆಂಬುದು । ತಲೆದೋರಿತೆಂದು ಚಿಂತಿಸಿದಾ ॥ ೪೧ ॥

ಸಾಹಸಪರರ ನೋಯಿಸಬೇಕು ಸ್ವಕುಟುಂಬ । ದ್ರೋಹವ ಮಾಳ್ಪುದು ಗುಣವೆ ॥
ಬಾಹುಬಲಿಯ ಮೂರ್ಖತನಕೇನ ಮಾಳ್ಪೆನೆಂ । ದಾ ಹಿರಿಯಣ್ಣ ಚಿಂತಿಸಿದಾ ॥ ೪೨ ॥
ಶ್ರೀಹಂಸನಾಥ ನೀನೆ ಬಲ್ಲೆಯಿದಕೆ ತ । ಕ್ಕೂಹೆಯಾವುದು ಸ್ವಾಮಿಯೆಂದಾ ॥
ರೂಹಿಸಿತೊಂದು ದಿವ್ಯೋಪಾಯ ಗುರುವಿನ । ಮಾಹಾತ್ಮ್ಯೆಯೆಂದುರೆ ನಕ್ಕಾ ॥ ೪೩ ॥

ಹಿಡಿಯೊ ಪಲ್ಲಕ್ಕಿಯನೆಂದರಾಗಳೆ ತಂದು । ಹಿಡಿದರೇರಿದನು ಚಕ್ರೇಶಾ ॥
ಬಡಿದರೀರಾರುಭೇರಿಯನಹೊ ದಿಗ್ಭಿತ್ತಿ । ಯೊಡೆದವೊಲಾಯ್ತೆಯ್ದುತಿರ್ದಾ ॥ ೪೪ ॥
ಪೊದೆದ ದುಕೂಲ ಚಿತ್ರಾಂಗಿ ಚಿಮ್ಮುರಿ ತೊಡ । ವದಿರ್ವ ಚಾಮರ ಛತ್ರವೆಸೆಯೆ ॥
ಮದುವೆಗೆ ಪೋಪಂತೆ ಪೋಗುತಿರ್ದನು ನೋಡು । ಕದನಕೆ ಭರತರಾಜೇಂದ್ರಾ ॥ ೪೫ ॥
ಕಾಸೆವೆರಸಿ ಕಾಮ ನಿಂದಿರ್ದ ದೇವರು । ದಾಸೀನದಿಂದೆಯ್ದಲೇಕೆ ॥
ಮಾಸಾಳ್ಗಳಾಯತವಾಗಿ ಚಿತ್ತೈಸೆಂದ । ರಾ ಸಮಯದಿ ಪ್ರಾಣಸಖರು ॥ ೪೬ ॥
ಶಕ್ತಿಯುಂಟಾದರು ಯುಕ್ತಿ ಬೇಕದರಿಂದ । ಮುಕ್ತಾದ್ಯಾಭರಣ ಚಿಮ್ಮುರಿಯಾ ॥
ರಿಕ್ತವ ಮಾಡಿ ಚಲ್ಲಣದಟ್ಟಿ ಕುಲ್ಲಾಯಿ । ವ್ಯಕ್ತಿಯಿಂ ನಡೆಯೆಂದರವರು ॥ ೪೭ ॥
ಇಲಿಯ ಪಿಡಿವರೊಂದು ಹುಲಿಯ ಹಿಡಿವ ಜೋಕೆ । ಯುಳವಟ್ಟು ಹಿಡಿಯೆಂಬುದುಂಟು ॥
ಕಲಹಕೆ ಗಮಿಸುತ ವೇಸವೇಕೆಂದಾಗ । ಸಲೆ ಪೊರ್ದಿ ನುಡಿದನಾ ಮಂತ್ರಿ ॥ ೪೮ ॥
ನೀವು ಪೇಳ್ವುದು ಬುದ್ಧಿಯಹುದಾವರೆನ್ನ ಚಿ । ದ್ಭಾವದೊಳೊಂದಾಯ್ತು ಬುದ್ಧಿ ॥
ಆವ ಚಿಂತೆಯು ಬೇಡ ಬನ್ನಿರೈ ಸದರದಿ । ಹೂವಿನಂಬನ ಗೆಲ್ವೆನೆಂದಾ ॥ ೪೯ ॥
ದಕ್ಷಿಣನಾಗರವಿಟವಿದೂಷಕರೆಲ್ಲ । ರೀಕ್ಷಿಸಿರೈ ಮಂತ್ರಿ ನೋಡೈ ॥
ಇಕ್ಷುಚಾಪನನಿಂದು ಲೀಲೆಯಿಂ ಗೆಲುವೆನೆಂ । ದಾಕ್ಷೇಪವಿಲ್ಲದಾಡಿದನು ॥ ೫೦ ॥
ಗೆಲ್ವೆವೆಂಬುದ ಬಲ್ಲೆವಂಕಸನ್ನದ್ಧದಿ । ನಿಲ್ವುದುತ್ತಮವೆಂದೆವೊಡೆಯ ॥
ಬಲ್ವಿವೇಕಕೆ ಗುರು ನೀನೇನ ಕಂಡುದೆ । ಚೆಲ್ವೆಂದು ಪೊಗಳುತೆಯ್ದಿದರು ॥ ೫೧ ॥
ಜಗದೇಕಮಲ್ಲ ಜಾಡ್ಯೋದ್ಘಾತ ಮನುವಂಶ । ಗಗನಮಾರ್ತಾಂಡ ಉದ್ದಂಡಾ ॥
ಮುಗುಳಂಬನಗ್ರಜ ಜತನ ಪರಾಕೆನೆ । ದಿಗಿದಿಗಿನೆಯ್ತರುತಿರ್ದಾ ॥ ೫೨ ॥
ವಿಕ್ರಾಂತರೊಡೆಯ ವಿಶ್ವಂಭರಾಭೂಷಣ । ಚಕ್ರೇಶ ಚಲದಂಕಮಲ್ಲ ॥
ಚಕ್ರವಾಕಧ್ವಜನಣ್ಣ ಭಾಹೊಯೆನೆ । ವಕ್ರವಿಲ್ಲದೆ ಬರುತಿರ್ದಾ ॥ ೫೩ ॥

ಭೂರಮನೆಯ್ತರುತಿಹುದು ನೂರಿನ್ನೂರು । ಮಾರೆನೆ ಕಂಡನಾ ಮಾರಾ ॥
ಧೀರಮಾನಸನಾಗಿ ನಿಂದು ಮತ್ತೊಂದ ವಿ । ಚಾರಿಸಿ ನುಡಿದನಪ್ಸರೊಳು ॥ ೫೪ ॥
ಸನ್ನೆಯ ಹೊಯ್ದಾಗಳರಸನ ಮೊಗನೋಳ್ಪೆ । ನನ್ನೆಗವೊಲೆದಿರ್ಪೆನೆಂದು ॥
ಸನ್ನಿಧಿಯವರಿಗೆ ಪೇಳ್ದಡ್ಡಮೊಗವಿಕ್ಕಿ । ಗನ್ನದೊಳಿರ್ದನಾ ಮದನಾ ॥ ೫೫ ॥

ತೋಳಿಂದ ತೋಳ್ಪಿಡಿದಪ್ಪುಗೈವೋಡಿಯೊ । ಳಾಲೋಕಮುಖವಡ್ಡವಿಕ್ಕಿ ॥
ಕಾಳಗಕನುವಾಗಿ ನಿಂದನ ಕಂಡನು । ಭೂಲಲನೇಶ ಮುಂದಾಗ ॥ ೫೬ ॥

ಓರೆಯಾದುದೆ ನನ್ನ ತಮ್ಮನ ಮೊಗ ತನ್ನ । ನೇರದ ತೋಳುಡುಗಿದುವೆ ॥
ಆರು ನೆಳೆದುಕೊಂಡರೊಲ್ಲಿಯ ಮಾರನ । ಘೋರವೆಯೆಂದಿಷ್ಟು ನಕ್ಕಾ ॥ ೫೭ ॥

ಜಗದಧಿನಾಥನ ಬಸ.ರಲ್ಲಿ ಬಂದು ನಾ । ಡುಗರ ಮಧ್ಯದೊಳಿಂತು ನಿಂದು ॥
ಹಗರಣಕೆಳಸಿದನೆಯೆಂದು ಮೆಲ್ಲಮೆ । ಲ್ಲಗೆ ನೊಂದು ನುಡಿವುತೆಯ್ದಿದನು ॥ ೫೮ ॥

ಹತ್ತಿರಕೆಯ್ತಂದು ಚಾಂಗು ಭಲಾಯೆನ । ಲೆತ್ತಿದ ಶಿಬಿಕೆಯಿಂದಿಳಿದು ॥
ಹತ್ತೆಂಟುಮಾರೆನೆ ಸ್ಮರನಿದಿರೊಳು ನಿಂದ । ನುತ್ತುಂಗಚರಿತನಾ ಚಕ್ರಿ ॥ ೫೯ ॥

ಕುಂದಣದದ್ರಿ ಪಚ್ಚೆಯ ಗಿರಿಯೆರಡೊಡ್ಡಿ । ನಿಂದುವೊ ಕಳದೊಳೆಂಬಂತೆ ॥
ಸೌಂದರಾಯತದೀರ್ಘದೇಹಿಗಳಣ್ಣತ । ಮ್ಮಂದಿರೊಪ್ಪಿದರು ನೋಳ್ಪರಿಗೆ ॥ ೬೦ ॥

ಕೇರಿ ಚಕ್ರಿಯ ದೇಹವೈನೂರುಮಾರು.ದ್ದ । ತೋರಿತಂಗಜನ ಮೆಯ್ಯೆಯುದನು ॥
ಮೀರಿದಿಪ್ಪತ್ತೈದುಮಾರುದ್ದವಣ್ಣನ । ಮೀರಿ ನಡೆವುದ ಪೇಳ್ವಂತೆ ॥ ೬೧ ॥

ಕಲಿಯುಗದವರ ಕೈಗೈನೂರುಮಾರೈಸೆ । ಬಲವೆತ್ತ ಕೃತಯುಗದವರ ॥
ಅಳತೆಗೊಂದೆ ಮಾರು ಪುರುಷಪ್ರಮಾಣದ । ನಿಲುಕಡೆಯುವರ ದೇಹಗಳು ॥ ೬೨ ॥

ಚಕ್ರಿ ಮುಂತಾದ ಸರ್ವರ ಮೈಗಳುದ್ದ ಯ । ಥಾಕ್ರಮವೈನೂರುಮಾರು ॥
ನಕ್ರಕೇತನಿಗೊಬ್ಬಗಂದಿಪ್ಪತ್ತೈದುಮಾ । ರಾಕ್ರಮಿಸಿತು ಚಿತ್ರವೆನಿಸಿ ॥ ೬೩ ॥

ಸ್ಮರನ ಚೆಲ್ವಿಕೆಯ ಚಕ್ರಿಯ ಚೆಲ್ವನೆಲ್ಲರು । ಪರಿಕಿಸಿ ನೋಡಿದರಾಗ ॥
ಧರೆಗೆ ಕಾಮನೆ ಚೆಲ್ವ ಕಾಮನಿಂದಾ ಚಕ್ರ । ಧರನೆ ಚೆನ್ನಿಗನೆನಲೆಸೆದಾ ॥ ೬೪ ॥

ಎಲ್ಲಾ ಚಕ್ರಿಗಳು ಕಾಮನ ಪೋಲರೀ ಚಕ್ರಿ । ಸಲ್ಲಲಿತಾತ್ಮಭಾವಕನು ॥
ಜಲ್ಲಿಸುತಿದ್ದುದು ತನುಕಾಂತಿಯುದರಿಂದ । ಲಲ್ಲವೆ ಧ್ಯಾನಸಾಮರ್ಥ್ಯ ॥ ೬೫ ॥

ರಾಜಮೋಡಿಯೊಳು ಚಕ್ರೇಶನಿರ್ದನು ವಿಟ । ರಾಜಮೋಡಿಯೊಳಿರ್ದ ಮದನಾ ॥
ಓಜೆಯೊಳವನಿರ್ದನಂಗಜ ಮೊಗವೊಲೆ । ದೋಜೆದಪ್ಪಿರುತಿರ್ದನಲ್ತೆ ॥ ೬೬ ॥

ಒಡ್ಡುವರಾರು ಶಕ್ತಿಯೊಳು ಚೆಲ್ವಿನೊಳೆಂದು । ದೊಡ್ಡೊಡೆಯನಿಗಿಂದು ಮದನಾ ॥
ಒಡ್ಡಿದನೊಡಹುಟ್ಟಿದೊಂದು ಸೊಕ್ಕಿಂದೆಂದ । ರೆಡ್ಡ ಜಾಣರು ಮನಸಿನೊಳು ॥ ೬೭ ॥

ಭೂರಿವಾದ್ಯದ ನಾದ ನಿಂದುದು ಕದನದ । ಭೇರಿಯು ಸನ್ನೆ ಮಾತ್ರ ರಲಿ ॥
ಆರಯ್ದು ನಾಲ್ಕೆಂಟು ನುಡಿವೇಳ್ವೆ ಮೊದಲೆಂದ । ನಾ ರಾಯ ಪಲರು ಕೇಳ್ವಂತೆ ॥ ೬೮ ॥

ಓರೆಮೋರೆಯೊಳೆ ಮನ್ಮಥ ಕೇಳುತಿರಲಿ ಗಂ । ಭೀರಾರ್ಥವನೆ ಪೇಳ್ವೆನೆಂದಾ ॥
ಸಾರಿದ್ದ ಸಖಮಂತ್ರಿನೃಪರದು ಲೇಸೆನೆ । ಧೀರಚಕ್ರೇಶನಿಂತೆಂದಾ ॥ ೬೯ ॥

ಮನಸಿಜ ಕೇಳಣ್ಣ ನಿನಗೆನಗಿಂದು ದು । ರ್ಮನದಿಂದ ಜಗಳವಪ್ಪುದಕೆ ॥
ಘನವೇನು ಹೇಳು ನಿಷ್ಕಾರಣ ಕದನವ । ಜನಪರಿಸಗುವರೆಯೆಂದಾ ॥ ೭೦ ॥
ನಿನ್ನೊಡವೆಯ ನಾನು ಕೊಂಡುದಿಲ್ಲಣ್ಣ ನೀ । ನೆನ್ನೊಡವೆಯ ಕೊಂಡುದಿಲ್ಲ ॥
ಮುನ್ನಯ್ಯನಿರಿಸಿದಂದದಿ ರಾಜಯುವರಾಜ । ಸನ್ನಾಹದೊಳಗಿರ್ದೆವಲ್ತೆ ॥ ೭೧ ॥
ಆಗಲಾಗಲಿ ದೋಷವಿಲ್ಲಣ್ಣತಮ್ಮಂದಿ । ರಾಗಿಯು ನೋವಹುದದಕೆ ॥
ಹಾಗದ ತೆರಿಗೆ ಬೇಕೆಂದು ನಾ ನಿನ್ನೂರ । ಬಾಗಿಲ್ಗೆ ಭಟರನಟ್ಟಿದೆನೆ ॥ ೭೨ ॥
ನಿನ್ನೂರ್ಗೆ ನನ್ನವರೆಯ್ದಿದಿದ್ದರೆ ಮಾಣ । ಲೆನ್ನೂರ್ಗೆ ನಿನ್ನವರೆಯ್ದಿ ॥
ಅನ್ನಿಗರೆಂದು ಕಂಡುದೆ ಪ್ರಜೆ ಪರಿವಾರ । ಭಿನ್ನಾರ್ಥವೇಕಾಯ್ತು ನಿನಗೆ ॥ ೭೩ ॥
ನುಡಿಯಲ್ಲಿ ನಾ ನಿನ್ನ ಬಿಟ್ಟಾಡಿದೆನೆ ನನ್ನ । ಪಡೆಯೊಳಗೊಬ್ಬರಾಡಿದರೆ ॥
ಒಡಹುಟ್ಟಿದವನ ನೋಡುವೆನೆಂದು ಬರಹೇಳಿ । ಫಡ ಹುಸಿಯೆಂಬರೆ ಅಪ್ಪಾ ॥ ೭೪ ॥
ನಿನಗಾನು ಪಗೆಯೆ ನೀನೆನಗೆ ಪಗೆಯೆ ಹೇಳು । ಜಿನಪುತ್ರರಿದನು ನಾವಿಂದು ॥
ನೆನೆದಾಗ ಮುಂದೆ ಸಮಸ್ತರ್ಗೆ ದ್ರೋಹಶಾ । ಸನವ ಬರೆದುಕೊಟ್ಟೆವಲ್ತೆ ॥ ೭೫ ॥
ಮಾತಿಗೆ ತೊಡಗಿದ ಕದನಕಿಂದಿವನಿಗೆ । ಭೀತಿಯಾದುದೆಯೆನಬೇಡ ॥
ಪೂತು ಮಝುರೆಯೆನೆ ಕದನದೋರ್ಪನು ಕೇಳು । ಪಾತಕಕಳೆವೆನು ಮೊದಲು ॥ ೭೬ ॥
ಪರನೊಬ್ಬನೆನ್ನೊಡನಿದಿರಾದರಾಗಳೆ । ಬರಲೊಡನಟ್ಟಿ ಮೆಟ್ಟುವೆನು ॥
ಧರೆ ಮೆಚ್ಚದಣ್ಣ ಸೋದರರ ಕಾಳಗಕೆ ಮುಂ । ದೊರೆಯಬೇಕಂಕಪದ್ಧತಿಯಾ ॥ ೭೭ ॥
ನಾನಿಷ್ಟು ನಿನ್ನಿಂದ ಹಿರಿಯನಾದುದರಿಂದ । ಸೇನೆಗೆ ಬರವೇಳ್ದೆನೈಸೆ ॥
ನೀನೆನಗಗ್ರಜನಾದರೆ ನೀನಿರ್ದ । ಸ್ಥಾನಕೆಯ್ದದೆ ತಡೆದಿಹೆನೆ ॥ ೭೮ ॥
ಹಿರಿಯನಲ್ಲಿಗೆ ಕಿರಿಯನು ಬಂದು ಕಾಣ್ಬುದು । ಧರಣಿಯೊಳುಳ್ಳುದೇನಲ್ತೆ ॥
ಪರಿಭವವೇನಣ್ಣ ನಿನಗಯ್ಯನಂದಿಂತು । ನಿರವಿಸಿದೋಜೆಯೇನುಂಟೆ ॥ ೭೯ ॥
ಪಾಟಿಸಿ ಕೇಳಣ್ಣ ನಾನು ನೀನಾಡುವ । ರಾಟಕಾರರು ನಮ್ಮ ಭಟರು ॥
ನೋಟಕಾರರೆ ನೀನು ನೆನೆದ ಸಂಗ್ರಾಮ ಸ । ಘಾಟಿಕೆಯಾಯ್ತು ಕಂಜಾಸ್ತ್ರ ॥ ೮೦ ॥
ಜಗದ ಭೂಭುಜರನಾಡಿಸಿ ನಾವು ನೋಡಿ ಪೆಂ । ಪೊಗೆದಿರೆ ಪೊತ್ತುಗಳೆಯದೆ ॥
ನಗೆಗೆಡೆಯಾಗಿಂತು ನೆಗಳ್ವರೆ ದೊರೆಯೆದ್ದು । ಹಗರಣವಾಡಿದಂದದೊಳು ॥ ೮೧ ॥
ನನ್ನ ಗೆದ್ದುದರಿಂದ ನಿನಗೆ ಕೀರ್ತಿಯೆ ಹೇಳು । ನಿನ್ನ ಗೆಲ್ದೆನಗೊಂದು ಜಸವೆ ॥
ಪನ್ನಗನರಸುರಲೋಕದುತ್ತಮರು ಛಿ । ಯೆನ್ನರೆ ಯೋಚಿಸಿ ನೋಡು ॥ ೮೨ ॥
ಅದಕೇನು ನೀನಿಂತು ಕದನಕೆಯ್ದಿದೆಯೈಸೆ । ಕದನದೊಳ್ಗೆಲವೈಸೆ ಕಡೆಗೆ ॥
ಬದಗೆರಂದದಿ ಹೋರಲೇತಕೆ ಗೆಲವು ನಿ । ನ್ನದು ಸೋಲವೆನಗೆ ಹೋಗೆಂದಾ ॥ ೮೩ ॥

ದೊರೆಗಳು ಮಂತ್ರಿ ಸಖರು ಕಿವಿಮುಚ್ಚಿ ದೇ । ವರಿಗುಂಟೆ ಸೋಲವೆಂದೆನಲು ॥
ಸ್ಮರಗಾರು ಸೋಲರ್ಕೈ ಹೆಣ್ಣು ಬಿಟ್ಟಿವೆ ನಾವು । ತರಹರಗೊಳ್ಳಿರೈಯೆಂದಾ ॥ ೮೪ ॥
ನನ್ನ ತಮ್ಮನಿಗಾದ ಗೆಲವೆನ್ನ ಗೆಲವದು । ಬನ್ನವಿಲ್ಲೆನಗಿಲ್ಲ ಸೋಲ ॥
ಇನ್ನೊಬ್ಬರಿದಿರಾದರೆಡಗಾಲೊಳೊದೆವೆ ನೀ । ವೆನ್ನೊಳಗರಿಯಿರ್ಕೈಯೆಂದಾ ॥ ೮೫ ॥
ಗೆಲವೆಂಬುದೇನುಪಚಾರವಲ್ಲಣ್ಣ ತೋ । ಳ್ವಲವ ಬಲ್ಲೆನು ಸತ್ಯವಹುದು ॥
ಬಲವೆಲ್ಲ ಕೇಳ್ವಂತೆ ಪೇಳ್ವೆನು ಕೇಳೆಂದು । ಬಳಿಕ ಚಕ್ರೇಶನಿಂತೆಂದಾ ॥ ೮೬ ॥
ದೃಷ್ಟಿವಿಜಯವೆಂತು ಪಂಚವಿಂಶತಿಚಾಪ । ದಷ್ಟುದ್ದ ಹೆಚ್ಚು ನೀನೆನ್ನ ॥
ದೃಷ್ಟಿಸಬಹುದಾನು ನಿನ್ನ ನೋಳ್ಪಾಗೂರ್ಧ್ವ । ದೃಷ್ಟಿ ನೊಂದೆವೆಹೊಯ್ಯುವೆಂದಾ ॥ ೮೭ ॥
ಇನಬಿಂಬದೊಳಗಣ ಪ್ರತಿಮೆಯ ಕಾಣ್ಬ ಲೋ । ಚನಸಿಗಿಪ್ಪತ್ತೈದು ಮೂರು ॥
ಘನವೆ ತನ್ನನುಜನ ತಿಳಿಪಲಾಡಿದನೆಂದು । ನೆನೆದರು ಸಖಮಂತ್ರಿನೃಪರು ॥ ೮೮ ॥
ಕಣ್ಣ ಚುಚ್ಚುವ ಸೂರ್ಯರುಚಿಗೆ ಕುಗ್ಗದೆ ನೋಳ್ಪ । ಕಣ್ಣುಳ್ಳ ಚಕ್ರಿಗಂಗಜನ ॥
ಬಣ್ಣವಾ ಸೂರ್ಯರಶ್ಮಿಗೆ ಪೆಚ್ಚಿ ತಮ್ಮಗೊ । ಲ್ದಣ್ಣನಾಡಿದನೆಂದರೊಡನೆ ॥ ೮೯ ॥
ಜಲಯುದ್ಧದೊಳು ನಾನು ಜೆಲ್ಲೆ ನಿನ್ನೆದೆಮುಟ್ಟ । ಯುಳಿವುದು ವಾರಿ ನೀನೆನ್ನಾ ॥
ಮುಳುಗಿಸಿ ಬಿಡಬಹುದದರಿಂದ ನನಗಾಗ । ಚಳಿತಡ್ಡವೊಗವಹುದೆಂದಾ ॥ ೯೦ ॥
ಮುಗಿಲಿಗೆ ನೀರಚೆಲ್ಲುವ ಶಕ್ತಿಯುಂಟು ರೂ । ಪುಗಳ ಹಲವುತಾಳ್ದು ಸ್ಮರನಾ ॥
ಅಗುಳಿಪ ಶಕ್ತಿಯುಂಟುಪಚಾರಕೆಂದನೆಂ । ದಗಣಿತನೃಪರೆಣಿಸಿದರು ॥ ೯೧ ॥
ಮಲ್ಲಗಾಳಗವೆಂತು ಭುಜಬಲಿಯೆಂದಯ್ಯ । ನಲ್ಲವೆ ಪೆಸರಿಟ್ಟನೆಂದು ॥
ಬಲ್ಲೆನಯ್ಯನ ವಾಕ್ಯ ಹುಸಿಯದು ಭುಜಬಲ । ದಲ್ಲಿ ನೀನೆತ್ತುವೆಯೆಂದಾ ॥ ೯೨ ॥
ಭರತೇಶನೆಂದೆನಗಯ್ಯ ಪೆಸರನಿಡೆ । ಭರತಭೂಮಿಯನಾಳ್ದೆ ನಾನು ॥
ಕರೆದನು ಭುಜಬಲಿಯೆಂದಂದು ನಿನ್ನ ನೀ । ನಿರದೆನ್ನನೆತ್ತುವೆಯೆಂದಾ ॥ ೯೩ ॥
ಭುಜಬಲಿಯೆಂದರೆ ಚಕ್ರಿಯು ಗೆಲ್ವರ್ಥ । ಭಜನೆಯೆ ತನ್ನ ಸೋದರನಾ ॥
ಸುಜನಚಿಂತಾಮಣಿ ನುಡಿದನೆಂದಿದ್ದ ಭೂ । ಭುಜಮಂತ್ರಿಸಖರೆಣಿಸಿದರು ॥ ೯೪ ॥
ವೀರಸುವೀರನನಂತವೀರ್ಯನು ಬಲ । ವೋರು ಮಹಾಬಾಹುವೆಂದು ॥
ಭೂರಿತನುಜರುಂಟು ಜಿನಗವರ್ನೃಪನೊಳು । ಹೋರುವರೆಂದಿಟ್ಟ ಪೆಸರೆ ॥ ೯೫ ॥
ಕಿರುವೆರಳೊಳೆ ಮೊನ್ನೆ ಪಡೆಯ ತೂಗಿದ ಪಡಿ । ದೆರೆದನೊಂದೆ ಪೆಟ್ಟಿನಲ್ಲಿ ॥
ತರಗೆಲೆಯಂತೆ ಬೆಟ್ಟಗಳನೆತ್ತುವನಿವ । ಗರಿಯಂತೆ ನೆಗಪನೆ ಸ್ಮರನಾ ॥ ೯೬ ॥
ಕಟಕವೆಲ್ಲವು ತೂಗಿ ತೆಗೆಯೆ ಗದ್ದುಗೆಯಿಂದ । ಕಟೆ ಜಾರದಿದ್ದತಿಬಲನಾ ॥
ವಿಟವೇಷದಂಗಜನೆತ್ತಲಾಪನೆ ಬಲು । ಸಟೆಗಿಂತು ನುಡಿದನೆಮ್ಮರಸಾ ॥ ೯೭ ॥

ಲಕ್ಕಪೆಂಗಳ ತಣಿಸುವ ಶಕ್ತಿ ಚಕ್ರಿಗೆ । ತಕ್ಕೆಂಟುಸಾವಿರದಿಂದ ॥
ಮಿಕ್ಕ ಪೆಂಗಳ ತಣಿಸುವ ಶಕ್ತಿ ಸ್ಮರಗುಂಟು । ಚಿಕ್ಕಸೋದರನನುಬ್ಬಿಸಿದಾ ॥ ೯೮ ॥
ಮುತ್ತೀತ ಕೊಂಬ ಬತ್ತೀಸತುತ್ತಿನೊಳೊಂದು । ತುತ್ತ ಕೊಂಬಳು ಪಟ್ಟದರಸಿ ॥
ವೊತ್ತದ ಕಟಕವೆಲ್ಲವು ನೆರೆದದರೊಂದು । ತುತ್ತ ಕೊಂಡರಗಿಸರಲ್ತೆ ॥ ೯೯ ॥
ರಾಸಿಗೊಳಲ್ಲ ದಿವ್ಯಾಹಾರವದು ಶಕ್ತಿ । ಸೂಸುವುದದರೊಂದುತುತ್ತಾ ॥
ಪೂಸರ ದಕ್ಕಿಸಬಲ್ಲನೆ ತಮ್ಮನ । ಸಾಸಿಯೆಂದುಬ್ಬಿಸಿ ನುಡಿದಾ ॥ ೧೦೦ ॥

ಇಂತೆಂದು ಪಲಬರು ಯೋಚಿಸುತಿರೆ ನೃಪ । ನಂತು ಕೇಳ್ತಮ್ಮ ಬಾಯಾರೆ ॥
ಕುಂತು ನನ್ನದು ತೇಜ ನಿನಗೆಂದ ಮೇಲೆ ಕೋ । ಪಾಂತರವೇನಣ್ಣಯೆಂದಾ ॥ ೧೦೧ ॥
ಅನುಜಾತಗಗ್ರಜ ಸೋತೆನೆಂಬಾಗ ಕ । ರ್ರನೆ ದಶದಿಕ್ಕು ಕಂದಿದುವು ॥
ಅನಲವಿಲ್ಲದೆ ಹೊಗೆ ಸೂಸಿತು ಸೂಸದೆ । ಮನುರತ್ನ ನೊಂದಾಡುವಾಗ ॥ ೧೦೨ ॥
ಬೆದರಿತು ಕಟಕ ಹಾ ಕಷ್ಟವ ನೆನೆದೆನೆಂ । ದೆದೆಯೊಳಂಗಜ ನೊಂದುಕೊಳುತ ॥
ಮುದನಸಮ್ಮುಖವಾಗದೋರೆಯಾಗಿರೆ ಚಕ್ರಿ । ಮುದದೋರಿ ಮತ್ತಿಂತು ನುಡಿದಾ॥ ೧೦೩ ॥
ಕೇಳಣ್ಣ ಚಕ್ರವ ಬಯಸಿತಿಲ್ಲಾನು ಶ । ಸ್ತ್ರಾಲಯದೊಳು ತಾನೆ ಹುಟ್ಟಿ ॥
ಏಳಿಸಿ ನಾಡ ಸುತ್ತಿಸಿತು ನಿಮ್ಮೆಲ್ಲರ । ಆಲಿಗೆ ನೋವಾಗುವಂತೆ ॥ ೧೦೪ ॥
ಈ ಸಿರಿಯನು ನಾನು ಪುಣ್ಯದ ಫಲವೆಂದು । ದಾಸೀನದೊಳು ನೋಡುತಿಹೆನು ॥
ಆಸೆಯಿಲ್ಲೆನಗೆ ನೀನೊಪ್ಪುಗೊಳ್ಳುಂದಣ । ಭೂಸುದತೀಶ ನೀನಲ್ತೆ ॥ ೧೦೫ ॥
ಅರಸಾಗಿ ನೀನೂರೊಳಿರ್ದ ನೀನಟ್ಟಿದ । ದೊರೆಯಾಗಿ ನಾನೆಯ್ದಿ ನಿನ್ನ ॥
ಧರೆಯ ಸಾಧಿಸಿ ತಂದೆನೊಪ್ಪುಗೊಳ್ಳಿನ್ನ ಭೂ । ವರವೃಂದವಿದೆ ಕಟಕವಿದೆ ॥ ೧೦೬ ॥
ನಿನಗೆ ನಾನಣ್ಣನೆಂಬಕ್ಕರವಿಲ್ಲ ನೀ । ನನುಜನೆಂಬಕ್ಕರುಂಟಪ್ಪಾ ॥
ನನೆವಿಲ್ಲ ನಿನ್ನ ಭಾಗ್ಯವ ಕಣ್ಣುತುಂಬ ನೋ । ಳ್ಪೆನು ರಾಜಪದವಿಗಿಂತೊಪ್ಪು ॥ ೧೦೭ ॥
ಕೌಶಲಿಯೊಳು ನೀನು ಸುಖಬಾಳು ನನಗೊಂದು । ದೇಶವ ಕೊಟ್ಟು ಬೇರಿರಿಸು ॥
ಕ್ಲೇಶದ ಮಾತಲ್ಲ ಸಂತೋಷ ಪುರುಪರ । ಮೇಶನ ಕೆಂಬಜ್ಜೆಯಾಣೆ ॥ ೧೦೮ ॥
ಲೆಕ್ಕವಿಲ್ಲದ ಮಂದಿ ಬೇಡ ಸೇವಕರಿಗೆ । ನ್ಲೊಕ್ಕಲುಮಕ್ಕಳಿಗೆನಗೆ ॥
ತಕ್ಕನಿತುಂಬಳಿಗೊಟ್ಟಿರಿಸ್ಟೆ ನಾಡ । ಕಕ್ಕುಲಿತೆಗಳೆನಗಿಲ್ಲ ॥ ೧೦೯ ॥
ರಂಜನೆಗಾಡಿದ ಮಾತಲ್ಲ ನಂಬು ನಿ । ರಂಜನಸಿದ್ಧನೆ ಸಾಕ್ಷಿ ॥
ಕಂಜಾಸ್ತ್ರ ನನಗಿದರಿಂದ ಹೆಚ್ಚಿನ ಭಾಷೆ । ಜಂಜಡದಿಚ್ಛೆಗಳಿಲ್ಲ ॥ ೧೧೦ ॥

ವಿರಸವ ಬಿಡು ಬಿಡೆಂದಾ ಚಕ್ರಿ ನುಡಿಯೆ ಪೂ । ಸರನು ತಗ್ಗುತ ಮನಸಿನೊಳು ॥
ಮುರಿದ ಮೋರೆಯೊಳಿರೆ ಚಕ್ರರತ್ನವನಾಗ । ಕರೆದಿಂತು ನುಡಿದನಾ ಚಕ್ರಿ ॥ ೧೧೧ ॥

ಹೋಗು ಚಕ್ರವೆ ಭುಜಬಲಿಯನೋಲೈಸೆನೆ । ಹೋಗದೀತಗೆ ಪುಣ್ಯವುಂಟು ॥
ಪೂಗಣೆಯಗೆ ಚಕ್ರ ಬೆಸಗೆಯ್ವ ಪುಣ್ಯವಿ । ಲ್ಲಾಗಿ ನಿಂದಿತು ಮುಂದೆ ಬಂದು ॥ ೧೧೨ ॥
ಎಲೆಲೆ ಪಿಶಾಚ ಹೋಗೆಂದರೇತಕೆ ಹೋಗೆ । ಕಲಹ ನಿನ್ನಿಂದಾದುದೆನಗೆ ॥
ಜಲಜಾಸ್ತ್ರನತ್ತ ಸಾರೆಂದು ನೂಕಿದರದು । ಬಳೆ ಜಾರುವಂತೆ ಜಾರಿದುದು ॥ ೧೧೩ ॥
ಇವಗೆ ಪುಣ್ಯಕ್ಷಯವಾಯ್ತಿಲ್ಲ ಚಕ್ರ ಸಾ । ರುವ ಪುಣ್ಯ ಮನಸಿಜಗಿಲ್ಲ ॥
ಅವನೀಶ ನೂಂಕಿದ ಸರಿತದೊಳಲ್ಪದೂ । ರವ ಸಾಗಿ ನಿಂದಿತಾ ಚಕ್ರಾ ॥ ೧೧೪ ॥
ಕಳೆಗುಂದಿ ಕಾಮನ ಭುಜಸರಿತದೊಳತ್ತ । ತೊಲಗಿ ನಿಂದಿತು ಚಕ್ರರತ್ನಾ ॥
ದಳ ನಡುಗಿತು ಧೂಮಕೇತುವೆದ್ದವು ಕೂಡೆ । ನೆಲ ಗುಡುಗಿತು ಘುಡುಘುಡನೆ ॥ ೧೧೫ ॥
ಇನಬಿಂಬ ಕಂದಿ ಚಿಂಬಿಸಿಲಿಪ್ಪು ಮಾಸೆ ಮಾ । ರ್ದನಿಗೊಟ್ಟುವೆಂಟುದಿಕ್ಕುಗಳು ॥
ಘನಪುಣ್ಯಯುತನಲ್ಪಪುಣ್ಯಗೆ ಚಕ್ರವ । ತೊನೆದಟ್ಟಿ ಬೆಸಗೈದುದೆನಲು ॥ ೧೧೬ ॥
ಸತ್ಪುರುಷಗೆ ಜ್ಯೇಷ್ಠಗುಂಬಳಿಯೆಂದು ಜ । ಗತ್ಪದ ಕಿರಿಯನಿಗೆನಲು ॥
ಸತ್ಪಥ ತಪ್ಪಿ ಕಾಪಥ ಹುಟ್ಟುವಾಗ ಮು । ಹೋತ್ಪಾತ ಹುಟ್ಟದೆ ಜಗಕೆ ॥ ೧೧೭ ॥
ಸಲ್ಲದರ್ಥವ ಸಲ್ಲಿಸುವೆನೆಂದು ನೆಗಳೆ ತ । ಳ್ತಿಲ್ಲದದ್ಭುತ ಹುಟ್ಟದಿಹುದೆ ॥
ಪಲ್ಲವಾಯುಧನು ಛೀ ಛೀ ನಾನು ನೆನೆದುದು । ಹೊಲ್ಲವೆಂದೊಳಗೆ ಹೇಸಿದನು ॥ ೧೧೮ ॥
ಗರುಡಮಂತ್ರಕೆ ವಿಷವಿಳಿವಂತೆ ಭರತಭೂ । ವರನ ವಾಕ್ಯವ ಕೇಳಲಾಗಿ ॥
ಜರಿಜರಿದಂಗಜಗೆತ್ತಿದ ಕೋಪ ಪೈ । ಸರಿಸಿತು ಹೃದಯ ತಂಪಾಯ್ತು ॥ ೧೧೯ ॥
ಏರಿದ ಹೆಡೆಯಿಳಿವಂತೆ ಮುನ್ನಿನ ಗರ್ವ । ಜಾರಿತು ಮೃದುವಾಯ್ತು ಚಿತ್ತಾ ॥
ಗಾರಾಯ್ತು ಕಾರ್ಯ ನನ್ನಣ್ಣನಿಗಿದಿರಾಗಿ । ದೂರ ಹೊತ್ತೆನಲಾ ಹಾಯೆಂದಾ ॥ ೧೨೦ ॥
ಒಲೆದ ಮೋರೆಯ ತಿರುಹಿದನು ಸಮ್ಮುಖವಾಗಿ । ಕಳೆದನೊಯ್ಯನೆ ತೋಳ ತೊಡಕಾ ॥
ಅಳುಕಾದುದಣ್ಣನ ಮೊಗವ ನೋಡದೆ ನಾಚಿ । ತಲೆಗುಸಿದಿರ್ದನಾ ಮದನಾ ॥ ೧೨೧ ॥
ಬಲಗೈಯನಿಳುಹಿ ನಾಸಿಕದಗ್ರದಲ್ಲಿ ಸಂ । ಗೊಳಿಸಿ ತನ್ನೆಡಗೈಯ ಬೆರಳಾ ॥
ಬಲುಹಾಸ್ಯಗೈದೆನಲ್ಲಾ ನನ್ನ ಜ್ಯೇಷ್ಠಗೆಂ । ದೊಳಗೊಳಗವ ನೋವುತಿರ್ದಾ ॥ ೧೨೨ ॥
ಕೆಯ್ಯ ದಂಡೆಯು ಕಾಮ ಕಳೆದಾಗಲೆಲ್ಲರ । ಮೆಯ್ಯ ಕಟ್ಟಳಿದವೊಲಾಯ್ತು ॥
ಹುಯ್ಯಲಿನ್ನಿಲ್ಲ ಸಂತಸವೆಂದು ನಲಿದುದು । ತುಯ್ಯಲನುಂಡಂತೆ ಕಟಕಾ ॥ ೧೨೩ ॥
ತಂದೆಗಳಿಬ್ಬರಂಕವ ಕಾಣ್ಬ ಪಾತಕ । ಬಂದಿತೆಯೆಂದು ಚಿಂತಿಸುತ ॥
ನಿಂದಿರ್ದ ಕುವರರ ಮೊಗ ಕಾಂತಿವಡೆದುವು । ಹೊಂದಾವರೆಯರಳ್ವಂತೆ ॥ ೧೨೪ ॥
ಕಡೆಯ ಯುದ್ಧದೊಳಲ್ಲದಿವರುಕ್ಕು ನಿಲ್ಲದೆಂ । ದಿಡಿಕಿರಿದೀಕ್ಷಿಸುತಿರ್ದು ॥
ನುಡಿಯೊಳೆ ಚಕ್ರಿ ಗೆಲ್ದುದ ಕಂಡು ಪೊಗಳ್ದರು । ನುಡಿಯುದೆ ಸಖಮಂತ್ರಿನೃಪರು ॥ ೧೨೫ ॥

ಕಾವನುಗ್ರತೆಯೆತ್ತ ಶಾಂತದೊಳೆಯ್ದಿ ವಾ । ಕ್ಯಾವಲಂಬದಿ ಗೆಲ್ದುದೆತ್ತ ॥
ಆವಂಗದೊಳು ಚಕ್ರಿಗೆಣೆಯುಂಟೆಯೆಂದು ಜ । ನಾವಳಿ ಪೊಗಳ್ದುದೆದೆಯೊಳು ॥ ೧೨೬ ॥

ನುಡಿವ ಗಂಭೀರ ಬೋಧಿಪ ಬೋಧೆ ತಮ್ಮನೆಂ । ದೊಡಕುಹುಟ್ಟಿಸದೊಂದು ಪ್ರೀತಿ ॥
ತೊಡರದ ಮಾತಿಂದ ಗೆಲ್ದ ಚಾತುರ್ಯಕೆ । ಪಡೆಯೆಲ್ಲ ಮೆಚ್ಚಿ ಕೀರ್ತಿಸಿತು ॥ ೧೨೭ ॥

ಸನ್ನೆಯ ಭೇರಿಕಾರರು ತೊಲಗಿದರು ರಾ । ಜೋನ್ನತಗಿಟ್ಟರಾಸನವಾ ॥
ರನ್ನದ ಕಾವು ಮುತ್ತಿನ ಸತ್ತಿಗೆಯ ತಿಳಿ । ಜೊನ್ನದೊಳೋಲಗವಾದಾ ॥ ೧೨೮ ॥

ಒರಗುಮೂಡೆಯ ನೆಮ್ಮಿ ಕುಳಿತನು ಚಕ್ರೇಶ । ನರುಗೋಲ ನಿಲೆ ಬಿಸಿಲಲ್ಲಿ ॥
ಮರೆಸನ್ನೆಗೈದು ಸತ್ತಿಗೆವಿಡಿಸಿದನೇನು । ಮರುಕವೊ ತಮ್ಮನ ಮೇಲೆ ॥ ೧೨೯ ॥

ಆ ಸಮಯದಿ ತನ್ನ ತಮ್ಮನ ಕರೆದ ಕೈ । ವೀಸಿ ಮಹಾಬಲರಾಜಾ ॥
ಓಸರಿಸದೆ ರತ್ನಬಲರಾಜ ಬಂದನು । ಲ್ಲಾಸದಿಂದಣ್ಣನ ಬಳಿಗೆ ॥ ೧೩೦ ॥

ಕರೆತಂದು ಕಾಣ್ಕೆಯಿಕ್ಕಿಸಿ ಸ್ವಾಮಿ ನನ್ನ ಸೋ । ದರನಿವನೆಂದನಯ್ಯನೊಳು ॥
ಶಿರದ ಪಜ್ಜೆಯೊಳಿಟ್ಟ ಕಿರಿಯ ಕಂದನನೆತ್ತಿ । ಭರತೇಶ ತಕ್ಕೈಸಿಕೊಂಡಾ ॥ ೧೩೧ ॥

ಮುತ್ತಿತ್ತು ಮಂಡೆಯ ತಡವಿ ನಿಟ್ಟಿಸಿ ತನ್ನ । ಚಿತ್ತಕಾನಂದವಾಯ್ತೆಂದಾ ॥
ಮುತ್ತಿ ನೋಡಿದರೆಲ್ಲರವನ ಲಾವಣ್ಯವ । ಚಿತ್ತಜನಾತ್ಮಜನಲ್ತೆ ॥ ೧೩೨ ॥

ತರಳಗೊಲ್ದುಡುಗೊರೆಯಿತ್ತು ಮತ್ತೆಲ್ಲವ । ವಿರಚಿಪೆನನ್ನೆಗ ನೀನು ॥
ನೆರೆದ ಸೋದರರೊಡನಿಹುದೆಂದು ಬೀಳ್ಕೊಟ್ಟ । ಪರಿಕಿಸುತಿರ್ದನಂಗಜನಾ ॥ ೧೩೩ ॥

ನಾಸಿಕಾಗ್ರದೊಳಿಟ್ಟ ಬೆರಳಿಂದ ತನ್ನ ದು । ರ್ವಾಸನಾಚರಿತವ ನೆನೆದು ॥
ಹೇಸುವ ತಲೆಗೊಡಹುವನಾಗ ಮನಸಿಜ । ನಾಸನ್ನಮೋಕ್ಷುಕನಲ್ತೆ ॥ ೧೩೪ ॥

ಪಾಪಿ ನಾನೆನ್ನಣ್ಣಗಿದಿರಾಗಿ ಕುಲಕೆ ಲೋ । ಕಾಪವಾದವ ತಂದೆನಕಟಾ ॥
ಕೋಪವರ್ಗಗಳಾರ ಕೆಡಿಸವೆಂದಾ ಪುಷ್ಪ । ಚಾಪ ತನ್ನೊಳು ಮರುಗಿದನು ॥ ೧೩೫ ॥

ಅಗ್ರಜ ಪಗೆಯೆ ಹಾಹಾ ನೋಡು ಕಷ್ಟ ಕ । ರ್ಮಗ್ರಹ ಕಾಡಿತು ನನ್ನಾ ॥
ಉಗ್ರಭಾವದೊಳೊಡ್ಡಿ ನಿಂದೆನ್ನದೊಂದು ದು । ರಾಗ್ರಹವನು ಸುಡಲೆಂದಾ ॥ ೧೩೬ ॥

ದಿವ್ಯಾತ್ಮತತ್ತ್ವಾನುಭವಿಯು ನೋಡೆನ್ನ ಭ್ರಾ । ತೃವ್ಯನ ಭ್ರಾತೃವ್ಯನೆಂಬ ॥
ಭಾವ್ಯವಾಯ್ತೆನಗೆ ಹಾಹಾ ಕಷ್ಟವೆಂದು ಮ । ನೋವ್ಯಥೆವಟ್ಟನಾ ಮದನಾ ॥ ೧೩೭ ॥

ಸನ್ಮತವಲ್ಲದ ಕಾರ್ಯವ ನೆಗಳ್ಚಿನ್ನ । ನುನ್ಮತ್ತನೆನ್ನದೆ ಪಿತನು ॥
ಮನ್ಮಥನೆಂದೇಕೆ ಕರೆದನೆಂದೆದೆಯೊಳು । ದ್ಯನ್ಮೋಕ್ಷಗಾಮಿ ಚಿಂತಿಸಿದಾ ॥ ೧೩೮ ॥

ಪೃಥುಕಷಾಯವನಾಂತೆನದು ತಾನೆ ಮನ್ಮನೋ । ವ್ಯಥೆಯಾಯ್ತು ನನ್ನ ನಾನೀಗ ॥
ಮಥನಿಸಲಾಗಿ ಮನ್ಮಥನೆನಬಹುದೆಂದು । ಶಿಥಿಲಪತಾಕ ಚಿಂತಿಸಿದಾ ॥ ೧೩೯ ॥

ಸೆಣಸುವೆನೆಂದೊತ್ತಿ ಬಹುದೆತ್ತ ಯುದ್ಧಕೆ । ರಣರಂಗದೊಳು ನಿಲ್ವುದೆತ್ತ ॥
ಗುಣವಚನದಿ ಶಾಂತನಹುದೆತ್ತ ಕರ್ಮಕೆ । ಕ್ಷಣಕೊಂದು ಪರಿಣಾಮವಲ್ತೆ ॥ ೧೪೦ ॥
ಸಖಮಂತ್ರಿಗಳು ಪೇಳೆ ಕೇಳ್ದಿನೆ ಜನನಿ ಸ । ಮ್ಮುಖದೋರಿದೋಜೆಗೊಪ್ಪಿದೆನೆ ॥
ನಿಖಿಳರಾಣಿಯರಾಡೆ ಚಾಳ್ಗೈಸಿ ಬಂದ ದು । ರ್ಮುಖನಲಾ ಜಿನಜಿನಯೆಂದಾ ॥ ೧೪೧ ॥
ಅದು ಹೋಗಲೆನ್ನಣ್ಣನಾತ್ಮಜರೆನ್ನ ಕಾ । ಲ್ವಿದಕೆಂದು ಬರೆ ಕಂಡು ಹೃದಯಾ ॥
ಮೃದುವಾಯ್ತೆ ಕಲ್ಲ ಮಾನಸನಲ್ಲದಾನೊಬ್ಬ । ಮದನನೆ ಜಿನಜಿನಯೆಂದಾ ॥ ೧೪೨ ॥
ನೀತಿವೇಳ್ವಗ ನಿನ್ನಣ್ಣ ನಿನ್ನಣ್ಣನೆಂ । ದೋತೆಲ್ಲರೊರೆವಾಗ ನಾನು ॥
ಆತನೀತನು ಚಕ್ರಿಯೆಂದೆನಗ್ರಜನೆಂಬ । ಮಾತನಾಡಿದೆನೆ ಹಾಯೆಂದಾ ॥ ೧೪೩ ॥
ಲೋಕದ ಮುಂದಣ್ಣ ಸೋಲವೆಂದನು ನೂಕು । ತಾಕಾಯ್ತು ಚಕ್ರಕೆನ್ನಿಂದ ॥
ತೂಕವೆ ನನಗಿದು ಲಘುತೆಯೆಂದಾತ್ಮನಿ । ರಾಕರಣೆಯ ಮಾಡಿಕೊಂಡಾ ॥ ೧೪೪ ॥
ಅಪಕೀರ್ತಿಯಾಯ್ತಿದು ಮನೆಯಲ್ಲಿ ಹೋಗದು । ತಪಸಿಂದ ತೊಳೆಯಬೇಕೆಂದು ॥
ಜಪಿಸಿದನಂಗಜನದು ಮೋಹಕರ್ಮದೊಂ । ದುಪಶಮದನುಭವವಲ್ತೆ ॥ ೧೪೫ ॥
ಕಲ್ಲಂತೆ ನಾನಣ್ಣಗಿದಿರಾಗಿ ಮುಂದೆರ । ವಿಲ್ಲದೆ ಹೊಕ್ಕು ಬಾಳ್ವಾಗ ॥
ಸೊಲ್ಲಿಸರಷ್ಟೆ ಮನ್ಮಥ ಕಷ್ಟನೆಂದೆದೆ । ಯಲ್ಲಿ ಯೋಚಿಸರೆ ಭೂಭುಜರು ॥ ೧೪೬ ॥
ಅಣ್ಣಗೆ ಮಲೆತನು ಮೊನೆಯಿಂದಲೆರಗುವ । ನೆಣ್ಣೆ ತಾಗಿದ ಬಿದಿರಂತೆ ॥
ಬಣ್ಣಗಾರನು ಕಾಮನೆನ್ನರೆ ಸಭೆಯಲ್ಲಿ । ಕಣ್ಣಿಟ್ಟು ಕಂಡ ಭೂಮಿಪರು ॥ ೧೪೭ ॥
ದೀಕ್ಷೆಗೆಯ್ದುವುದೆ ಲೇಸೆಂದೆದೆಯೊಳು ನೆನೆ । ದಿಕ್ಷುಕೋದಂಡನಣ್ಣನನು ॥
ಈಕ್ಷಿಸದೆಡಬಲದತ್ತ ನೋಡಿದನು ಶಾಂ । ತಾಕ್ಷಿಯೊಳೊಮ್ಮೆ ಪಾಯ್ದಳವಾ ॥ ೧೪೮ ॥
ಆಕಾಶಭೂಮಿತುಂಬಿದ್ದ ದಳವ ನೋಡ । ಲಾ ಕಾಮಗೊಡನೆ ಕೈಮುಗಿಯೆ ॥
ಏಕೆ ಕೈಮುಗಿದಪರೆನಗೆಂದು ನಾಣ್ಚಿ ಮ । ತ್ತೀ ಕಡೆಗೊಲೆದು ನೋಡುವನು ॥ ೧೪೯ ॥
ವಿಜಯಾರ್ಧದೇವನು ಹಿಮವಂತಸುರನು ದಿ । ಗ್ಗಜಗಳಂತೆತ್ತಿ ಕೈಮುಗಿಯೆ ॥
ಭುಜಬಲಿರಾಜ ಸಿಗ್ಗಾಗಿ ಮತ್ತವರನು । ತ್ಯಜಿಸಿ ಬೇರೊಲೆದು ನೋಡುವನು ॥ ೧೫೦ ॥
ವರತನು ಮಾಗಧೇಂದ್ರನು ನಾಟ್ಯಮಾಲೇಂದ್ರ । ನುರುಪ್ರಭಾಸೇಂದ್ರ ಮುಂತಾದ ॥
ಸುರವಿಭುಗಳು ಕಂಡು ಕೈಮುಗಿಯಲು ಪುಷ್ಪ । ಶರ ನಾಣ್ಚೆಯುತ್ತಿತ್ತ ನೋಳ್ಪಾ ॥ ೧೫೧ ॥
ಇರ್ವರು ದೊರೆಗಳು ಮಂತ್ರಿಮಿತ್ರರು ತಮ್ಮ । ಸರ್ವಭೂಭುಜರು ನಂದನರು ॥
ಕರ್ವಿಲ್ಲಗೊಡನೆ ಕೈಮುಗಿಯೆ ದೊಡ್ಡಪಕೀರ್ತಿ । ಪರ್ವಿತಾಹಾಯೆಂದು ನೋವಾ ॥ ೧೫೨ ॥
ಪೌಜ ನೋಳ್ಪುದ ಬಿಟ್ಟು ತಲೆವಾಗಿ ಮದನನ । ಣ್ಣಾಜಿಗಿನ್ನೆನ್ನ ಕಾರ್ಯವನು ॥
ಮಾಜದಾಡುವೆನೆಂದು ನೆನೆದಿರ್ದನಿಲ್ಲಿಗೆ । ರಾಜೇಂದ್ರಗುಣವಾಕ್ಯಸಂಧಿ ॥ ೧೫೩ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೫೪ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೫೫ ॥

ನುಡಿಯಿಂದ ನೋಟದಿಂದಾಟದಿಂದಘದ ಪೆ । ರ್ವಡೆಯ ತೊತ್ತಳದುಳಿದಭವಾ ॥
ಬಿಡದೆ ನನ್ನಂತರಂಗದೊಳಿರು ಕಾಂತಿಕಾ । ಲಿಡುತ ಚಿದಂಬರಪುರುಷಾ ॥ ೧೫೬ ॥

ರಾಜೇಂದ್ರಗುಣವಾಕ್ಯಸಂಧಿ ಸಂಪೂರ್ಣಂ

# ಚಿತ್ತಜನಿರ್ವೇಗಸಂಧಿ.

---

ಕರ್ಮ ಚೇಷ್ಟಿಸಿದಂತೆ ಚರಿಸುವರನು ಕೋಪ । ಕೂರ್ಮೆಯಿಲ್ಲದೆ ನೋಡುತಿರ್ಪ ॥
ನಿರ್ಮಳಾನಂದ ಸನ್ಮತಿದೋರು ಗುರುವೆ ನಿ । ಷ್ಕರ್ಮ ನಿರಂಜನಸಿದ್ಧಾ ॥ ೧ ॥

ಭಂಗಿಸಿದರೆ ದೀಕ್ಷೆಗೆಯ್ದುವನೆಂದು ತ । ಮ್ಮಂಗೊಳ್ಪ ನುಡಿದು ಚಕ್ರೇಶಾ ॥
ಮಂಗಲಗೈದ ಯುದ್ಧವ ಕೆಲರರಿಯದ । ಮಂಗಲಗೈವರೆಂತೆನಲು ॥ ೨ ॥

ಜಲದೃಷ್ಟಿಮುಷ್ಟಿಯುದ್ಧದಿ ಚಕ್ರಿ ತಮ್ಮಗೆ । ಗೆಲದೋರಿ ನುಡಿದರಂತದನು ॥
ಕೆಲರು ಕಾದಿಯೆ ಗೆಲ್ದನೆಂಬರು ಚಕ್ರಿಯ । ಗೆಲಸಮರ್ಥನೆ ಪುಷ್ಪಬಾಣಾ ॥ ೩ ॥

ಜಗವ ಮೋಹಿಪ ಶಕ್ತಿಯಲ್ಲದೆ ಚಕ್ರಿಯ । ನೆಗಪ ಸಾಹಸವುಂಟೆ ಸ್ಮರಗೆ ॥
ಹಗಲಂತೆ ಬೆಳುದಿಂಗಳಿಹುದೆನೆ ಸೂರ್ಯರ । ಶ್ಮಿಗಳ ನೂಂಕುವ ಶಕ್ತಿಯುಂಟೆ ॥ ೪ ॥

ಕಾಮದೇವರ್ಕಳ ಶಕ್ತಿಯೆಂಬುದು ಸಾರ್ವ । ಭೌಮರ ಶಕ್ತಿಗಗ್ಗಳವೆ ॥
ಕಾಮದೊಳೂಟದೊಳದ್ರಿಸೇನೆಯನಾಳ್ವ । ನೇಮದೊಳರಿವುದಂತಿರಲಿ ॥ ೫ ॥

ಚಕ್ರಿ ಸರ್ವರ ಮುಂದೆ ಸೋಲವೆಂದನು ತನ್ನ । ಚಕ್ರಕೆ ನೂಕುತಾಕಾಯ್ತು ॥
ವಕ್ರಿಯಲ್ಲದ ತಮ್ಮ ವಕ್ರಿಯಾದನು ಕಾಲ । ಚಕ್ರದೊಳಾದ ದೋಷವದು ॥ ೬ ॥

ರಂಗುಗೆಟ್ಟಾ ಚಕ್ರ ತೊಲಗಿ ನಿಂದುದೆ ಚಕ್ರ । ಭಂಗವಂತದನು ಕೆಲಬರು ॥
ಅಂಗಜಗದು ಬೆಸಗೈದುದೆಂದತಿರಸ । ಭಂಗವ ಮಾಡಿ ನುಡಿವರು ॥ ೭ ॥

ಅರ್ಧಚಕ್ರಿಯ ಚಕ್ರ ವೈರಿಗೆ ಬೆಸಗೈದು । ಅರ್ಧ ಚಕ್ರಿಯನೆ ಖಂಡಿಪುದು ॥
ವರ್ಧಿಪ ಸಕಲಚಕ್ರಿಯ ಚಕ್ರ ಸೋಲ್ವುದೆ । ಸ್ಪರ್ಧಿಸಿದಿದಿರ ಭೂಪತಿಗೆ ॥ ೮ ॥

ಮೃದುಯುದ್ಧ ಮೂರಕೊಪ್ಪಿದ ಮೇಲೆ ಮೀರಿ ಚ । ಕ್ರದೊಳಿಡುವನೆ ಭರತೇಶಾ ॥
ಮದನನ ಪ್ರಾಣಕೆ ಮುನಿವನೆ ಪಾಪಿಗ । ಳಿದ ನುಡಿದಾಡಿ ಕೆಡುವರು ॥ ೯ ॥

ರಣಭಂಗವಾಗಬಾರದು ತಮ್ಮಗೆಂದು ಸ । ದ್ಗುಣವಚನದಿ ಜಯಿಸಿದನು ॥
ಕ್ಷಣಕೆ ಮುಕ್ತಿಯ ಕೊಂಬ ಮೃದುಹೃದಯಗೆ ಕ್ರೂರ । ಗುಣವುಂಟೆ ಸಾಕದಂತಿರಲಿ ॥ ೧೦ ॥

ನೋವುತಿರ್ದುದು ಚಿತ್ತ ಮನ್ಮಥ ತಲೆಯೆತ್ತಿ । ಭೂವರಾಗ್ರಣಿಯ ನೋಡಿದನು ॥
ದೇವರು ಕ್ಷಮಿಸುವುದೆನ್ನದು ತಪ್ಪೆಂದು । ಭಾವಶುದ್ಧದೊಳು ಕೈಮುಗಿದಾ ॥ ೧೧ ॥

ತಪ್ಪಿಲ್ಲವಣ್ಣಾ ನಿನ್ನಯ ನಡೆಯೆಲ್ಲವು । ಒಪ್ಪವೆನ್ನೆದೆಗೆ ಸಂತೋಷಾ ॥
ಒಪ್ಪಚ್ಚಿ ನೋವೆನಗಿಲ್ಲವೆಂದೊರೆದನಾ । ಛಪ್ಪನ್ನದೇಶದೊಡೆಯನು ॥ ೧೨ ॥

ದೂಷಣವನು ತೊಡಗಿದೆ ನಾನು ದೇವರು । ಭೂಷಣಗೈದಿರಿ ನನ್ನ ॥
ದೋಷವೆನ್ನನೆ ಪುದಿದಲೆವುದು ಪರಮಸಂ । ತೋಷ ದೇವರಿಗಹುದೆಂದಾ ॥ ೧೩ ॥

ಅಂತಾಡದಿರು ನೀನು ಬೇರೆ ನಾ ಬೇರೆಯೇ । ನಿಂತು ನೋವರೆ ಕಬ್ಬುವಿಲ್ಲಾ ॥
ಕುಂತೆಂಬುದೆನಗಿಲ್ಲ ನಿನಗಿಲ್ಲ ನೀನಿಂತು । ಚಿಂತೆಗೊಳ್ಳದಿರೆಂದನಣ್ಣಾ ॥ ೧೪ ॥
ನನಗಾವ ಚಿಂತೆಯಿಲ್ಲೆನ್ನ ಬಿನ್ನಹವನೊಂ । ದನೆ ಪಾಲಿಪುದು ದೇವರೆಂದಾ ॥
ಅನುಜ ಪೇಳೇನೆಂದ ದೀಕ್ಷೆಗೆ ಪೋಪೆನೊ । ಪ್ಪೆನುತ ಕೈಮುಗಿದನಂಗಜನು ॥ ೧೫ ॥
ಭೋಂಕನೆದ್ದನು ಚಕ್ರಿ ಗಳಗಳನೆಯ್ತಂದು । ಪಂಕಜಾಯುಧ ದೀಕ್ಷೆಗೀಗ ॥
ಮುಂಕೊಂಡು ಪೋಪೆನೆಂಬುದ ಮರೆಯೆಂದು ತ । ಳ್ಕಂಕದಿ ತಕ್ಕೈಸಿಕೊಂಡಾ ॥ ೧೬ ॥
ದೀಕ್ಷೆಗೆಯ್ದಲದೇಕೆ ಭಂಗವೇನಾಯ್ತು ಕ । ಟಾಕ್ಷಿಸಿ ನುಡಿದೆನೆ ನಿನ್ನಾ ॥
ಮೋಕ್ಷಕಾರ್ಯವ ಮುಂದೆ ಯೋಚಿಸಿಕೊಂಬವಿಂ । ದೀ ಕ್ಷೋಭೆ ಬೇಡಪ್ಪಯೆಂದಾ ॥ ೧೭ ॥
ಭಂಗವಿಲ್ಲೆನಗೆ ದೇವರಿಗೊಡ್ಡಿ ನಿಂದಾಜಿ । ರಂಗದಿ ಲಘುತೆದೋರಿದೆನು ॥
ಭಂಗುರಕರ್ಮತಂತ್ರದಿ ನೊಂದೆನೆನ್ನಂತ । ರಂಗ ಹೇಸಿತು ಪೋಪೆನೆಂದಾ ॥ ೧೮ ॥
ನನ್ನ ಸೋದರನೆನಗೊಡ್ಡಿ ನಿಂದರೆ ದೊಡ್ಡ । ಬನ್ನವೆ ನನಗೊಂದು ಲೀಲೆ ॥
ಸನ್ನೆಯ ಭೇರಿ ಸುಮ್ಮನೆ ಹೊಯ್ದರದು ತಾನೆ । ಬನ್ನ ಮುಚ್ಚಿದ ಕುರುಹೆಂದಾ ॥ ೧೯ ॥
ಶುಷ್ಕಚರ್ಮದ ಭೇರಿ ಸುಮ್ಮನೆಯಿದ್ದರೇನು । ನಿಷ್ಕರುಣದಿ ನಾನು ನೆಗಳ್ದ ॥
ದುಷ್ಕರಾಚರಣೆಯ ಲೋಕದ ಮುಖಭೇರಿ । ಕಿಷ್ಕಿಂದವೆನೆ ಪೇಳ್ವುದೆಂದಾ ॥ ೨೦ ॥
ಕಡುಲಘುವಾಕ್ಯ ದೇವರ ಜಿಹ್ವೆಯಿಂದಲಿ । ನುಡಿಸಿದೆ ಕಳೆಗುಂದಿ ಚಕ್ರಾ ॥
ಕಡೆಸಾರ್ದದೆನ್ನಿಂದ ಭಂಗಕಿಂತಿದೆ ಕಟ್ಟ । ಕಡೆಯುಲ್ತೆ ಸಾಕು ಸಾಕೆಂದಾ ॥ ೨೧ ॥
ದರ್ಪಕ ನೀನೇನ ಮಾಡಿದೈ ಹುಂಡಾವ । ಸರ್ಪಿಣಿದೋಷದೊಳೆನಗೆ ॥
ತೋರ್ಪುದೀ ಭಂಗವೆಂದೊರೆದನಯ್ಯನು ನೀನು । ಬೇರ್ಪಟ್ಟು ನೆನೆಯದಿರೆಂದಾ ॥ ೨೨ ॥
ಕಾಲದೋಷದೊಳಾದರೆನ್ನಿಂದ ಪ್ರಕಟವಾ । ದೀ ಲೋಕವಾರ್ತೆ ಜಾರುವುದೆ ॥
ಕೈಲಾಸಗಿರಿಗೈಯ್ದಬೇಕೆನ್ನ ಬಿನ್ನಹ । ಕಾಲಸ್ಯಮಾಡದೊಪ್ಪೆಂದಾ ॥ ೨೩ ॥
ಆಡದಿರಾ ಮಾತನೆನ್ನ ಮನಸಿಗರ್ತಿ । ಮಾಡಿ ಮತ್ತೆಯ್ದು ನೀನೆಂದು ॥
ಕೂಡೊಮ್ಮೆ ತಕ್ಕೈಸಿ ಗಡ್ಡವ ಪಿಡಿದೊತ್ತಿ । ಬೇಡಿಕೊಂಡನು ಚಕ್ರಧರನು ॥ ೨೪ ॥
ಎಂದಿರ್ದ ದೀಕ್ಷೆಯ ತಾಳ್ದು ನಾನಪವರ್ಗ । ಮಂದಿರದೊಳು ನಿಲ್ವೆನೈಸೆ ॥
ತಂದೆಯ ಬಳಿಗಿಂದೆ ಪೋಪೆನೊಪ್ಪಣ್ಣಾಜಿ । ಯೆಂದನಾ ಕುಸುಮಕೋದಂಡಾ ॥ ೨೫ ॥
ಹರಿದುದು ಸಂಸಾರಸುಖದಾಸೆ ನಿಮ್ಮೊಲ್ಲ । ರೆರಕದ ಮಮತೆ ಜಾರಿದುದು ॥
ಮುರಿದ ಚಿತ್ತವನಿನ್ನು ಮೊನೆಮಾಡಬಹುದೆ ಬಾ । ಯ್ದೆರೆದು ಹೋಗೆಂದುಸುರೆಂದಾ ॥ ೨೬ ॥
ಅಣ್ಣನಿಗಿದಿರೊಡ್ಡಿ ನಿಂದ ದೇಹವ ಮಸಿ । ಮಣ್ಣ ಮಾಳ್ಪೆನು ತಪಕೊಡ್ಡಿ ॥
ಉಣ್ಣದುರಿವ ಕರ್ಮಗಳ ಸುಟ್ಟು ಮೋಕ್ಷಕೆ । ಪೊಣ್ಣನೆಯ್ದುವೆನು ನೋಡೆಂದಾ ॥ ೨೭ ॥

ಶಕ್ತಿಯೆಂಬುದು ದಿನದಿನಕೆ ಹೆಚ್ಚುವುದೆ ವಿ । ರಕ್ತಿ ಬೇಕೆಂದಾಗ ಬಹುದೆ ॥
ಮುಕ್ತಿಗೆ ತಕ್ಕ ಸಾಧನ ಕೂಡಿತಿದು ಮಹಾ । ಯುಕ್ತಿಯಲ್ಲವೆ ಕಳುಹೆಂದಾ ॥ ೨೮ ॥
ಬೇಡವಪ್ಪ ನೀನು ನಾನು ಕೆಲವು ದಿನ । ಕೂಡಿರ್ದು ಮತ್ತೆ ದೀಕ್ಷೆಯನು ॥
ಜೋಡಿಪ ನಿನ್ನ ನಾ ನಂಬಿದ್ದೆನೆನ್ನನೀ । ಡಾಡಿ ಹೋಹುದು ಲೇಸೆಯೆಂದಾ ॥ ೨೯ ॥
ಮುನ್ನೆದ್ದವರಿರುವರು ತೊಂಭತ್ತ್ತವೊವರು । ನಿನ್ನೆ ಹೋದರು ನೀನು ಹೋಗೆ ॥
ಭಿನ್ನಗಾಗದೆಯೆನ್ನ ಭಾಗ್ಯ ಬೇಡಣ್ಣ ನೀ । ನೆನ್ನ ನುಡಿಯ ಮನ್ನಿಸೆಂದಾ ॥ ೩೦ ॥
ಆರಿದ್ದು ದೇವರಿಗೇನ ಮಾಳ್ಪರು ಸುಕು । ಮಾರರು ನೆರೆದಿರ್ಪರಲ್ತೆ ॥
ಶ್ರೀರಮ್ಯವಲ್ಲದೆ ಭಿನ್ನಗಾಗದು ದೀಕ್ಷೆ । ಗೋರಂತೆ ಕಳುಹೆನ್ನನೆಂದಾ ॥ ೩೧ ॥
ಪುರುನಾಥನಾಣೆ ದೇವರ ಪಾದದಾಣೆ ಶ್ರೀ । ಗುರುಹಂಸನಾಥನೆ ಸಾಕ್ಷಿ ॥
ಇರೆನು ದೀಕ್ಷೆಗೆ ನನ್ನ ಕಳುಹಚಿತ್ತೈಸೆಂದು । ಚರಣಾಬ್ಜದೊಳು ಮಂಡೆಯಿಟ್ಟಾ ॥ ೩೨ ॥
ಕಂಬನಿ ಗುಳಗುಳನೊಕ್ಕವೇಳೇಳಣ್ಣ । ನೀಂ ಬಯಸಿದುದಾಗಲೆಂದಾ ॥
ಇಂಬಿನೊಳೆದ್ದಾಗಲೆಂದೊಡಂಬಟ್ಟು ಪಾ । ದಾಂಬುಜಕೆತ್ತ ಹೆಮ್ಮಗನಾ ॥ ೩೩ ॥
ಅಳುತಿರ್ದನಣ್ಣನು ನಗುತ ಕೈಮುಗಿದವ । ಕಳಭ ಸಂಕಲೆಬಿಟ್ಟು ವನಕೆ ॥
ತಳರ್ವಂತೆ ಸಂಗವ ತೊರೆದೆಯ್ದುತಿರ್ದನು । ದಳವೆಲ್ಲ ಬೆರಗಾಗಿ ನೋಡೆ ॥ ೩೪ ॥

ಅಕಟ ಕಷ್ಟವನೊಂದನೇನೆಂಬೆ ಕುಟಿಲನಾ । ಯಕಶಠನಾಯಕನವರು ॥
ಮಕರಾಂಕ ಮೊದಲು ತಮ್ಮೊಡೆಯನಿಗೊಡ್ಡಿದಾ । ಟಕೆ ನೋವ ತಾಳ್ದಿದ್ದರೊಳಗೆ ॥ ೩೫ ॥
ಇಬ್ಬರು ನಮಗೆ ಸ್ವಾಮಿಗಳೆಂದು ಸಖರೆಲ್ಲ । ರೊಬ್ಬುದ್ಧಿಯಾಗಿ ನೋಡುವರು ॥
ಇಬ್ಬರಿಗಿವರಿಗೆ ಚಕ್ರಿಯೊಳತಿಭಕ್ತಿ । ಹಬ್ಬಿಹುದೊಪ್ಪರನ್ಯರನು ॥ ೩೬ ॥
ಒಡೆಯನಿಗನುಕೂಲವಾದರೀ ಸ್ಮರನು ನ । ಮ್ಮೊಡೆಯನು ವಿಮಾರಿದಾಗಿವನು ॥
ಒಡೆಯನೆಯೆಂದಲ್ಪದೂರವ ಹೋಗಿ ಬೆಂ । ಗಡೆಯೊಳಿಂತೆಂದರು ನಿಂದು ॥ ೩೭ ॥
ಸಿರಿಯ ಹೋಗಾಡಿ ಹೋಹರಸ ಕೇಳ್ನೀನೆಮ್ಮ । ಭರತಚಕ್ರೇಶ್ವರಗೆರಗಿ ॥
ಇರದಾದೆ ಹೋಗು ಹೋಗಿನ್ನು ಭಿಕ್ಷೆಗೆ ನೀನು । ತಿರಿವೊಡಾತನ ನಾಡೆ ಬೇಕು ॥ ೩೮ ॥
ಒರಗುವರುಂಬರೆ ತಪಸುಗ್ರೈವರೆ ರಾಜ । ರೆರೆಯನ ನಾಡಲ್ಲದಿನ್ನು ॥
ಹೊರಗೆ ಕಾಣ್ಬೆಯ ಹೋಗುಹೋಗೊಳಗರಿಯದ । ಹೊರಜಾಣರರಸ ಕೇಳ್ವಿರಸಾ ॥ ೩೯ ॥
*ತಣ್ಣನಟ್ಟುಂಡಿಕ್ಕಿ ಸುಖದಿ ಬಾಳದೆ ತಿರಿ । ದುಣ್ಣಬೇಕಾದುದು ನಿನಗೆ ॥
ಅಣ್ಣಗೊಡ್ಡಿದ ಕರ್ಮಫಲವನೀ ಭವದೊಳೆ । ಉಣ್ಣಣ್ಣ ಬಿಜಯಮಾಡಾಯ್ತು ॥ ೪೦ ॥

*ಕಣ್ಣನಣ್ಣನ ಮುಂದೆ.

ಬೇಡಿಕೊಂಡಾರೋಗಣೆಯ ಮಾಡು ಹುಲ್ಲುಳ್ಳ । ಕಾಡಿನೊಳ್ಪವಡಿಸು ನೃಪತಿ ॥
ಪಾಡಾಯ್ತು ಬಿಜಯಮಾಡೆಂದು ಕೈಹೊಯಿಹೊಯಿ । ದಾಡಿ ನಗುತ ತಿರುಗಿದರು ॥ ೪೧ ॥

ಜಪಶಾಂತಿಯೊಳು ಹೋಗುತಿರ್ದನಾ ನುಡಿಗಿಷ್ಟು । ಕುಪಿತದಿ ತಿರುಗಿ ನೋಡಿದನು ॥
ತಪಸಿಗೆಯ್ವುವಗೆ ಸೈರಣೆ ಮುಖ್ಯವೆಂದು ನಿ । ರ್ಲಪಿತದಿ ನಡೆದನಾ ಮದನಾ ॥ ೪೨ ॥

ಸ್ಮರನ ಮಿತ್ರರು ಮಂತ್ರಿದಳಪತಿಗಳು ದೀಕ್ಷೆ । ಗಿರದೆಯ್ದಲೆಳಸಿ ಕಾಲ್ಗೆರಗೆ ॥
ಭರತೇಶ ತಡೆದನು ನಿಲ್ಲರವರು ತಮ್ಮ । ದೊರೆಯ ಬಿಟ್ಟಿಹರೆ ಆಪ್ತಿಗರು ॥ ೪೩ ॥

ಅಳಲಾಯ್ತು ಚಿಕ್ಕಮ್ಮಗಾರಿಸಬೇಕಿಷ್ಟು । ತಳುವಾಗಿ ನೀವೆಯ್ದಿರೆಂದು ॥
ದಳಪತಿಸಚಿವರ ತಡೆದುಕೊಂಡೆಣ್ಬರು । ಕೆಳೆಯರ ಬೀಳ್ಕೊಟ್ಟನೊಡನೆ ॥ ೪೪ ॥

ಅರಸನಂಘ್ರಿಗೆ ತಮ್ಮ ಸುತರ ತಂದೆರಗಿಸಿ । ಎರಡೆ ವಿಮಾನವ ಕೊಂಡು ॥
ಹರುಷದಿ ಸಖರೆಯ್ದೆ ಸ್ಮರನ ಕಂಡೇರು ದೇ । ವರು ವಿಮಾನವರೆಂದರೊಸೆದು ॥ ೪೫ ॥

ಬೇಡೆಂದು ಸಖರ ನಿಲ್ಲಿಸಿದನು ನಿಲ್ಲರು । ಜೋಡುವಿಮಾನವೇಕಿನ್ನು ॥
ಕೂಡೆಲ್ಲರೊಂದೆ ವಿಮಾನದೊಳ್ಪೋಪವೆಂ । ದಾಡಿದನಾ ಪುಷ್ಪಬಾಣಾ ॥ ೪೬ ॥

ಗಿರಿಮುಟ್ಟ ದೇವರ ರಾಜತೇಜವೆ ತಪ್ಪ । ದಿರಲಿ ನಾವೊಂದರೊಳ್ಪಹೆವು ॥
ಸ್ಮರವೀರ ನೀನೊಂದನೇರೆನಲಡರ್ದನಂ । ಬರಪಥವಿಡಿದು ಸಾಗಿದರು ॥ ೪೭ ॥

ಜೋಲಿಯಿಲ್ಲದೆ ಬಂದು ಜಿನನ ಕಂಡಾತ್ಮಸ । ಖಾಳಿವೆರಸಿ ಯೋಗಿರೂಪಾ ॥
ತಾಳಿದನಂಗಜ*ನೆಂಬೆನು ಕೊಸರುವ । ವೇಳೆಯಲ್ಲಿರಲತ್ತಲಿತ್ತ ॥ ೪೮ ॥

ಮಂದಿಯು ಕಳುಹಿ ಕಣ್ಣೀರಿಕ್ಕುವಂಗಜ । ನಂದನರುಗಳ ಕೈವಿಡಿದು ॥
ಕಂದಿದ ಮೊಗ ಕಣ್ಣೊಳೊಗುವ ಕಂಬನಿಯಿಂದ । ಮಂದಿರವೊಕ್ಕನಾ ಚಕ್ರಿ ॥ ೪೯ ॥

ಪೂಗೋಲ ದೀಕ್ಷೆಗೆಯ್ದಿದನೆಂಬ ನುಡಿ ಕಿವಿ । ದಾಗೆ ಯಶಸ್ವತೀದೇವಿ ॥
ತೂಗುಮಂಚದೊಳಿರ್ದು ಮೂರ್ಛೆಹೋದಳು ಮೂರ್ಛೆ । ಯಾಗದೆ ಪೆತ್ತ ತಾಯ್ಗಳಿಗೆ ॥ ೫೦ ॥

ಶೈತ್ಯೋಪಚಾರದಿಂದೆಬ್ಬಿಸಿದರು ಕೂಡೆ । ದೈತ್ಯನಂತೆದ್ದುದು ಶೋಕಾ ॥
†ಚೈತ್ಯಬಿಂಬವ ನೀಗಿದಾರ್ಯನೊಲ್ಲೋವಳು । ಪೈತ್ಯವೆದ್ದಂತೆ ನೋಡುವಳು ॥ ೫೧ ॥

ಚಿಕ್ಕಣ್ಣ ದೀಕ್ಷೆಗೆಯ್ದಿದನೆ ಹಾಹಾ ನನ್ನ । ಚಿಕ್ಕಾನೆ ಮದವೆದ್ದು ಹೋಯ್ತೆ ॥
ಹೊಕ್ಕಡ್ಡಗಟ್ಟಿ ತಡೆವರಿಲ್ಲದಾದರೆ । ಅಕ್ಕಟಯೆಂದಳಲಿದಳು ॥ ೫೨ ॥

ಗೋಳಿಡುತಿರ್ದುದಂತಃಪುರವೆಲ್ಲವು । ಕೇಳುತ ಬಂದು ಚಕ್ರೇಶಾ ॥
ಬಾಲಕರಿಬ್ಬರ ತಾಯ ಕಾಲ್ಗೆರಗಿಸಿ । ಬೇಳುವೆ ತಾಗಿದಂತಿರ್ದಾ ॥ ೫೩ ॥

---

* ನೆಂಬ ಸುದ್ದಿಯ ಕೇಳಿ । ಹೇಳಿದರವರತ್ತಲಿತ್ತ ।

† ಚೈತ್ಯಬಾಲಕರನಿಬ್ಬರ ತಾಯಿಗೆರಗಿಸಿ । ಕೌತುಕದೊಳು ಪುರುಗಿದನು ॥

ಇರುಳಾದುದಷ್ಟುಕಾಯಿರುಳಿಲ್ಲ ಶೋಕಜಾ । ಗರವಿದ್ದರುದಯವಾಯ್ತೊಡನೆ ॥
ಇರುಳೆ ಝುಂಝಾನಿಲನೆಂಬ ನಂಬುಗೆವಂತ । ಸ್ಮರಪುರಕೆಯ್ದಿ ಹೇಳಿದನು ॥ ೫೪ ॥

ಕೇಳಲೊಡನೆ ಸುನಂದಾದೇವಿ ಮೂರ್ಛೆಯ । ತಾಳಿದಳರಸಿಯರೆದೆಗೆ ॥
ಬಾಳ ಬೀಸಿದ ತೆರನಾಯ್ತು ಹಾಯೆಂದು ಮೂ । ರ್ಛಾಲಂಬವಡೆದೊರಗಿದರು ॥ ೫೫ ॥

ಎಚ್ಚತ್ತು ಜನನಿ ಏನೇನು ಝುಂಝಾನಿಲ । ಪಚ್ಚೆವಿಲ್ಲಣ್ಣನೇನಾದಾ ॥
ಹುಚ್ಚುಗೊಂಡಂತೆಮ್ಮ ಬಿಸುಟು ಹೋದನೆ ದೀಕ್ಷೆ । ವೆಚ್ಚಾಯ್ತೆ ಹೋಗೆಂದಳಳುತ ॥ ೫೬ ॥

ಸಂದೇಹ ಬೇಡ ಸಾಗಿದನಯ್ಯನೆಡೆಗೆಮ್ಮ । ಮುಂದಿ ಮಿತ್ರರುಗೂಡಿ ತಪಕೆ ॥
ಮಂದಿಯೆಲ್ಲವು ಕಟಕದೊಳಿದೆ ನಾನೋಡಿ । ಬಂದೆ ಸೂಚಿಪೊಡಿಲ್ಲಿಗೆಂದಾ ॥ ೫೭ ॥

ಕಾಣ್ಬೆನೆಂದೆಯ್ದಿದನಣ್ಣನ ದೀಕ್ಷೆಗೆ । ಪೂಣ್ಬ ವಿರಕ್ತಿಯೆಂತಾಯ್ತೆ ॥
ಜಾಣ್ಬಡೆ ನುಡಿವನಲ್ಲರಸಣ್ಣ ಹೇಳೆಂದು । ಗೋಣ್ಬಾತು ಕೇಳಿದಳಳುತ ॥ ೫೮ ॥

ಇಲ್ಲಿ ದೇವರ ಮುಂದೆ ಕಾಣ್ಬೆನೆಂದಾಡಿದ । ನಲ್ಲಿ ಕಾಳಗವೆ ಬೇಕೆಂದಾ ॥
ಮಲ್ಲಾಕ್ಷಿ ಜಲಯುದ್ಧಗಳ ಕಾರ್ಯಹಿತವರು । ಮೆಲ್ಲಿತನನುಗೊಳಿಸಿದರು ॥ ೫೯ ॥

ಆ ಯುದ್ಧದೊಳು ಚಕ್ರಿ ಹೋರಿತಿಲ್ಲೆಯ್ತೆಂದು । ಕಾಯಜ ನಿನ್ನದೆ ಗೆಲವು ॥
ದಾಯಗೆಟ್ಟಿನ್ನದೆ ಸೋಲವೆಂದನು ತನ್ನ । ಬಾಯಾರೆ ಕಟಕ ಕೇಳ್ವಂತೆ ॥ ೬೦ ॥

ಧರೆಯ ನೀನಾಳೆಂದ ತನಗೊಂದು ನಾಡ ಕೊ । ಟ್ಟರಿಸೆಂದ ಚಕ್ರ ಹೋಗದಿರೆ ॥
ಕರವಿಡಿದನುಜಗೆ ನೂಕಿ ಕೊಟ್ಟನು ನಾಣ್ಚಿ । ಸ್ಮರ ದೀಕ್ಷೆಗೆಯ್ದಿದನೆಂದಾ ॥ ೬೧ ॥

ಮತ್ತೆ ಮೂರ್ಛೆಗೆ ಸಲ್ಪಳೆಚ್ಚರುವಳು ಬಟ್ಟ । ಮುತ್ತಿನಂತಿಳಿಯೆ ಕಣ್ಣೀರು ॥
ಚಿತ್ತಜ ನನ್ನ ಕೊಂದೈ ಕಂದ ಹಾಹಾ ಗು । ಣೋತ್ತಮಯೆಂದಳಲಿದಳು ॥ ೬೨ ॥

ಮಕ್ಕಳ ನೆನೆಯದೆ ಸೆಂಡಿರ ನೋಡದೆ । ಲೆಕ್ಕಕೆ ತಾರದೆ ನನ್ನಾ ॥
ಚಿಕ್ಕ ಪ್ರಾಯದೊಳಿಂತು ದೀಕ್ಷೆಗೆ ಲಂಘಿಸ । ತಕ್ಕುದೆ ನಿನಗೆ ಕಂದರ್ಪಾ ॥ ೬೩ ॥

ಹಿರಿಯಣ್ಣಗೊಡ್ಡಿ ನಿಲ್ಲೆಂದು ವಿರಕ್ತಿ ಸಂ । ಗರದಲ್ಲಿ ನಿನಗಾಗಲೆಂದು ॥
ಹರೆಯದೊಳ್ತಪಸುದಾಳೆಂದಾನು ಮರೆದೊಮ್ಮೆ । ಹರಸಿತಿಲ್ಲಿಂತಾಯ್ತೆ ಮಗನೆ ॥ ೬೪ ॥

ಜನವ ಮೋಹಿಪ ನಿನ್ನ ಸಿರಿಯೆತ್ತ ನೀನೆತ್ತ । ಮುನಿವೇಷವಡೆವುದಿದೆತ್ತ ॥
ಕನಸ ಕಂಡಂತಾಯ್ತೆ ನಿನ್ನ ಸಂಪದವೆಂದು । ಜನನಿ ಮರುಗಿದಳಂಗಜನ ॥ ೬೫ ॥

ಪರವಶ ತಿಳಿದೆದ್ದು ಸ್ಮರನ ರಾಣಿಯರೈದೆ । ಜರಿವುತ ಮಳಲೇರಿಯಂತೆ ॥
ಸುರಿವ ಕಂಬನಿಯಿಂದ ಹಲುಬಿದರೊಡನೆ ನ । ಲ್ಲರನಗಲ್ದಾರು ಸೈರಿಪರು ॥ ೬೬ ॥

ಮೋಕ್ಷಕೆಯ್ದಿದ ನುಡಿಯಾದರೆ ಹರಣವ । ನಾ ಕ್ಷಣದೊಳೆ ಬಿಸುಡುವರು ॥
ದೀಕ್ಷೆಯೊಳಿಹನೆನೆ ಬಯಲಾಸೆಯಿಂದೊಮ್ಮೆ । ಈಕ್ಷಿಪೆವೆನುತ ನಡೆದರು ॥ ೬೭ ॥

ಕಂಬೆಳಗೆಳೆಮಿಂಚು ದನಿ ಗುಡುಗಳಿದ ತು । ರುಂಬು ಕಾರ್ಮುಗಿಲಾಗೆ ಸುರಿವ ॥
ಕಂಬನಿ ಮಳೆಯಾಯ್ತು ಬಂದ ಝುಂಝೂನಿಲ । ನೆಂಬವನಿಷ್ಟನಾಗಿಸನೆ ॥ ೬೮ ॥

ನಲ್ಲ ಹಾ ಹಾ ನಮ್ಮ ಬಿಟ್ಟುಹೋದ್ಯೆ ಕಬ್ಬು । ವಿಲ್ಲ ಹಾ ಹಾ ನಮ್ಮ ತೊರೆದ್ಯೆ ॥
ಕೊಲ್ಲದೆ ಕೊಂದೆ ನೀನೆಮ್ಮನೆಂದಬಲೆಯ । ರೆಲ್ಲರು ಹಳವಳಿಸಿದರು ॥ ೬೯ ॥

ಅಂಗನೆಯರ ಕೂಟ ಸಾಕಾಯ್ತೆ ನಿನಗೆ ಮು । ಕ್ತ್ಯಂಗನೆಯಾಟ ಬೇಕಾಯ್ತೆ ॥
ಸಂಗರವೆಂಬೊಂದು ನೆವದೋರಿ ವಿಧಿ ನಿನ್ನ । ಮುಂಗಡೆಗೊಯ್ದುದೆ ನೀರಾ ॥ ೭೦ ॥

ದರ್ಪವ ನಿನ್ನೆದೆಗೆಸಗಿದ ಹುಂಡಾವ । ಸರ್ಪಿಣಿ ಸರ್ಪಿಣಿಯಲ್ತೆ ॥
ಕೂರ್ಪರ ಕೊಂದೆ ನೀ ಪುಷ್ಪಬಾಣನೊ ಉಗ್ರ । ಸರ್ಪಬಾಣನೊ ಸವಿವಿಲ್ಲಾ ॥ ೭೧ ॥

ತನುವೆರಡಸುವೊಂದೆಯೆಂಬಂತೆ ನಿನ್ನ ಮಾ । ನಿನಿಯರೆದೆಗೆ ಸೋಲದೋರಿ ॥
ನೆನೆಯದೆ ಹೋದರೆ ನಿಲ್ವೆವೆ ನಿನ್ನ ಬೆ । ನ್ನನೆ ಬಪ್ಪೆವಿನ್ನೇತರಾಸೆ ॥ ೭೨ ॥

ಅರಗಿಳಿಗಳಿರ ಬಾಣಾಂಕಿಗಳಿರ ಸಾಕಿ । ದೆರಳೆಗಳಿರ ಹಂಸೆಗಳಿರಾ ॥
ಅರಲಂಬ ಪೋದ ಬಟ್ಟೆಗೆ ಪೋಪೆವಿನ್ನೆಮ್ಮ । ಸ್ಮರಿಸದೆ ಸುಖವಿರಿ ನೀವು ॥ ೭೩ ॥

ಸೋಗೆನವಿಲೆ ನವಿಲುಯ್ಯಾಲೆ ಮಾಡವೆ । ತೂಗುಮಂಚವೆ ಸೆಜ್ಜೆವನೆಯೆ ॥
ಭೋಗ ಸಾಕಾಯ್ತು ಯೋಗಕೆ ಪೋಪೆವಿನ್ನು ಹಾ । ಲೋಗರಾದೆವು ನಾವು ನಿಮಗೆ ॥ ೭೪ ॥

ಲತೆಯೆ ನಂದನವೆ ತಂಗೊಳನೆ ತಾವರೆಯೆ ಮಾ । ರುತನೆ ಮತ್ತಾಳಿ ಕೇಳೆಮ್ಮ ॥
ಪತಿ ಪೋದ ದೆಸೆಗೆ ಪೋಪೆವು ಸುಖವಿಹುದೆಂದು । ಸತಿಯರೆದ್ದರು ಗೃಹದಿಂದ ॥ ೭೫ ॥

ಬಂದು ತಮ್ಮತ್ತೆಯ ಕಂಡು ಕಾಲ್ಗೆರಗಿ ನ । ಮ್ಮೊಂದಾಗಿ ಮುನಿದು ನಿಮ್ಮಣುಗಾ ॥
ಮುಂದಕೆಯ್ದಿದನು ನಾವೆಯ್ದಿ ತಿಳುಪಿ ಕರೆ । ತಂದಪೆವೆಂದರುಬ್ಬೆಯೊಳು ॥ ೭೬ ॥

ಒಸೆದಣ್ಣಗೆರಗಿ ಬಂದಪೆನೆಂದು ನಮ್ಮ ಚಾ । ಳಿಸಿ ಪೋದ ನಿಮ್ಮ ಕುಮಾರಾ ॥
ಹುಸಿಕಗೆ ದೀಕ್ಷೆ ಸಲ್ವುದೆಯೆಂದು ಮಾವಾಜಿ । ಗುಸುರ್ವೆವು ಕಳುಹೆಂದರೆಮ್ಮಾ ॥ ೭೭ ॥

ಉಂಡೆವುಟ್ಟೆವು ತೊಟ್ಟೆವಾನಂದವೆಲ್ಲವ । ಕಂಡೆವತ್ತ್ಯಾಜಿಯಿನ್ನೆಮ್ಮ ।
ಗಂಡನೆಯ್ದಿದ ದೀಕ್ಷೆಗೆಯ್ದಬೇಕನುಮತ । ಗೊಂಡೆಮ್ಮ ಕಳುಹೆಂದರವರು ॥ ೭೮ ॥

ನೇತ್ರಚಿತ್ತಕೆ ಲೀಲೆದೋರ್ಪ ದೇಹಕೆ ನಿಮ್ಮ । ಪುತ್ರ ಕೊಕ್ಕರಿಸಿದನೆಮ್ಮ ॥
ಗಾತ್ರವ ತಪಕೊಡ್ಡಿ ದಂಡಿಸದಿರೆ ಜಾತಿ । ಕ್ಷತ್ರಿಯಾತ್ಮಜೆಯರೆ ನಾವು ॥ ೭೯ ॥

ಕಳುಹೆಮ್ಮ ತಳುವೇಕೆ ಪತಿ ಹೋಗಿ ಸತಿಯರು । ನಿಳಯದೊಳಿಹುದೊಂದು ಬದುಕೆ ॥
ಬೆಳುವೆಟ್ಟದೊಳು ಬ್ರಾಹ್ಮಿ ಸೌಂದರಿಯರ ಪಕ್ಕ । ದೊಳು ತೆರಪಾಯ್ತೆಂದರೆಮಗೆ ॥ ೮೦ ॥

ನಾನು ಬಪ್ಪೆನು ದೀಕ್ಷೆಗೆಲೆ ಹೆಣ್ಣುಗಳಿರಾ ಮ । ತ್ತೇನಿಲ್ಲಿ ಬಯಲಾಸೆಯೆನಗೆ ॥
ಮಾನಿತಾರ್ಥವ ಭರತಣ್ಣಗಕ್ಕನಿಗೆ ಸಂ । ಧಾನಿಸಬೇಕೆಂದಳಾಕೆ ॥ ೮೧ ॥

ತಡವುಂಟು ನನಗದರಿಂದ ನೀವೆಯ್ದಿರೆಂ । ದೊಡಬಟ್ಟು ಮತ್ತವರವರ ॥
ಒಡಹುಟ್ಟಿದವರು ಕೆಲಬರು ನಂಬುಗೆವಂತ । ರೊಡಗೂಡಿ ಬೀಳ್ಕೊಟ್ಟಳಾಕೆ ॥ ೮೨ ॥

ಸೊಸೆಯರ ಕಳುಹಿಸುವಾಗ ಸುಬಲರಾಜ । ವೆಸರಿನ ಮೂರುವರುಷದ ॥
ಹಸುಳೆ ಬಂದಯ್ಯನ ತೋರು ತೋರೆಂದು ಪೀ । ಡಿಸಿತು ಮನ್ಮಥನ ಮಾತೆಯನು ॥ ೮೩ ॥

ಇದ್ದಾಗ ತೊಡೆಯ ಮೇಲಿಟ್ಟುಕೊಂಡಂಗಜ । ಮುದ್ದಾಡುತಿಪ್ಪನಾ ಶಿಶುವಾ ॥
ಗುದ್ದುವುದಜ್ಜಿಯ ಬಿದ್ದಳುವುದು ಕಾಡು । ತಿದ್ದುದು ಪಿತನ ತೋರೆಂದು ॥ ೮೪ ॥

ಪಿತನೆಂದು ಚಕ್ರದಣ್ಣನ ತೋರ್ಪುದಕ್ಕಗಿಂ । ಗಿತದೊಳೊಪ್ಪಿಸಿ ಬಹುದೆಂದು ॥
ಹಿತವರ್ಗೆ ಸೂಚಿಸಿ ಹೊರಳಿ ಚಂಡಿಯ ಮಾಳ್ಪ । ಸುತಗಿಂತು ನುಡಿದಳಾ ಜನನಿ ॥ ೮೫ ॥

ಏಳಣ್ಣ ಸುಬಲಿ ನಿನ್ನಯ್ಯನನಿವರೆಮ್ಮ । ಪಾಳೆಯದೊಳು ತೋರ್ಪರೆಂದು ॥
ಬಾಲನ ನಂಬಿಸಿ ಕಳುಹಿದಳಳುತ ವಿ । ಶಾಲವಿಮಾನದೊಳಿಟ್ಟು ॥ ೮೬ ॥

ತಂದರವರು ಕಟಕಕೆ ಬೇಗ ನಡುವಣ । ಸಂದ ಚಾವಡಿಗೆಯ್ದಿ ನೃಪನಾ ॥
ಸಂದಿಸಲಾ ಕುವರನ ಕಾಣುತೊಡನೆ ದ । ಳ್ಳೆಂದುಕ್ಕಿತಳಲು ಭೂವರಗೆ ॥ ೮೭ ॥

ಅಯ್ಯನೆಲ್ಲಿದ್ದನೆಂದದು ಕೇಳ್ವುದಳುತ ನಿ । ನ್ನಯ್ಯನೆಂದರಸ ತೋರುವರು ॥
ಒಯ್ಯನಾ ಶಿಶು ನೋಡಿ ನನ್ನಯ್ಯನಲ್ಲೆಂದು । ಕೆಯ್ಯಾಡಿ ಮುಂಡೆಯಾಡಿಪುದು ॥ ೮೮ ॥

ತೋರು ನನ್ನಯ್ಯನನೆಂದಳುವುದು ಮತ್ತು । ತೋರುವರಾ ಚಕ್ರಧರನಾ ॥
ಮೋರೆಯ ನಿಟ್ಟಿಸಿಯಳುವುದಲ್ಲೆಂದಳ । ಲೇರುವುದದ ಕಂಡು ನೃಪಗೆ ॥ ೮೯ ॥

ನಮ್ಮಯ್ಯನಹುದೆನುತಾ ಮಹಾಬಲರಾಜ । ತಮ್ಮಗೆ ಪೇಳ್ವನಂತದಕೆ ॥
ಸುಮ್ಮನೀಕ್ಷಿಸಿಯಿವ ನಮ್ಮಯ್ಯನಲ್ಲೆಂದು । ಉಮ್ಮಳಿಸುವುದೋರೆಮೊಗದಿ ॥ ೯೦ ॥

ಇವನಯ್ಯನಲ್ಲ ನನ್ನಯ್ಯನಿಂತೆಂದು ತೋ । ರುವುದಿದ್ದ ಪಚ್ಚೆಕುಪ್ಪಸವಾ ॥
ಇವನಿಂತುಟೆಂದು ಕೈಲುಳಿದೋರ್ಪುದದಕೆ ಮೆ । ಚ್ಚುವ ನಗುವನು ಸಾರ್ವಭೌಮಾ ॥ ೯೧ ॥

ಇತ್ತ ಬಾ ಸುಬಲಿ ನಿನ್ನಯ್ಯನ ತೋರ್ಪೆನೆಂ । ದೆತ್ತಿಕೊಂಡನು ಭರತೇಶಾ ॥
ಎತ್ತ ಹೋದುದೊ ಶೋಕ ಸುಮ್ಮನಾದುದು ಶಿಶು । ಸುತ್ತಲಿದ್ದರು ಬೆರಗಾಗೆ ॥ ೯೨ ॥

ವಶ್ಯಮೋಹನವೆಂಬ ಅವನ ಕೈ ಸೋಂಕಲು । ವಶ್ಯದೊಳಿಹುದದು ಸಹಜಾ ॥
ವೈಶ್ಯರಂಗಡಿಯ ಬೊಂಬೆಯೊಲು ನೋಡುತ ಸುಪ್ರ । ಕಾಶದೊಳಿದ್ದುದಾ ಹಸುಳೆ ॥ ೯೩ ॥

ಭಂಗಗಾಣಿಸಲೊಲ್ಲದವನಾಗಿ ರಾಯನಾ । ಲಿಂಗಿಸಿ ಪೇಳ್ದರು ಮಾರಿ ॥
ಅಂಗಜ ಹೋದನಲ್ಲದೆ ಮಿಕ್ಕರವನ ಸೋಂ । ಕಿಂಗೆ ಸೋತಿರದವರಾರು ॥ ೯೪ ॥

ಸುಬಲಿ ನಿನ್ನಯ್ಯ ನಮ್ಮೆಲ್ಲರ ಹರ್ಷವ । ಪ್ರಬಲಗೆಡಿಸಿ ಹೋದ ಕಂಡಾ ॥
ಅಬಲ ನೀನಳದಿರೆಂದನು ತಬ್ಬಿತಡಹುತ । ಚುಬುಕವ ಪಿಡಿದಲುಗಿದನು ॥ ೯೫ ॥

ಈ ಪಾಟಿಯಣುಗರ ಬೀಸಾಡಿ ತಪಸಿಗೆ । ಪೋಪರೆಂತೆಳಸಿತೊ ಚಿತ್ತಾ ॥
ಪಾಪಿಯ ಬಸುರಬಂದಿರಿ ಮಕ್ಕಳಿರಯೆಂದು । ಕೋಪದಿ ನುಡಿದನಾ ರಾಯಾ ॥ ೯೬ ॥
ಲಲನೆಯರಾ ಶಿಶು ಬಂದುದ ಕೇಳ್ದು ಹೆಂ । ಗಳನಟ್ಟಿದರು ತಹುದೆಂದು ॥
ಒಳಗೆ ನಿಮ್ಮಜ್ಞಿಯಿದ್ದಪಳಣ್ಣ ಹೋಗೆಂದು । ಕಳುಹಿದನಾ ಮನುಜೇಂದ್ರಾ ॥ ೯೭ ॥

ಏನೆಂಬೆ ಮಾರನ ಸತಿಯರಷ್ಟರೊಳು ವಿ । ಮಾನವನೇರಿ ದೂರದೊಳು ॥
ಬಾನೆಡೆಯೊಳು ಪೋಗುತಿರೆ ಕಂಡು ಚಕ್ರಿಯು । ಸೇನೆಯೆಲ್ಲವು ಮರುಗಿದುದು ॥ ೯೮ ॥
ರಾಣಿಯರೆಲ್ಲರಂಗಣದಲ್ಲಿ ನೆರೆದಾಗ । ಗೋಣೆತ್ತಿ ನೋಡಿ ಗೋಳಿಡಲು ॥
ಕ್ಷೋಣೀಶ ಕಣ್ಣ ನೀರೊಳೆ ನೋಡುತಿರ್ದನು । ಘ್ರಾಣದ ಮೇಲಿಟ್ಟು ಬೆರಳಾ ॥ ೯೯ ॥
ಅನಿತರೊಳೊಬ್ಬ ನಂಬುಗೆವಂತ ಮದನನಂ । ಗನೆಯರು ನೃಪನ ಪೆಂಡಿರಿಗೆ ॥
ವಿನಯದಿ ಕಳುಹಿದೋಲೆಯ ಪಿಡಿದರಸಗೊ । ಯ್ಯನೆ ಮಣಿದೊಳಗೆಯ್ದುತಿರ್ದಾ ॥ ೧೦೦ ॥
ಓಲೆಗಾಣುತ ಬಳಸಿದ್ದರ ಕಳುಹಿ ಭೂ । ಪಾಲಕ ಗೃಹದೊಳಹೊಕ್ಕಾ ॥
ಬಾಲೆಯರೆಲ್ಲರ ನಡುವೊಬ್ಬರಾಣಿ ಬಂ । ದೋಲೆಯೋದಿದಳೇನನೆಂಬೆ ॥ ೧೦೧ ॥
ಬಾಲೆಯೋದುವಳು ಬಾಯ್ಬಿಟ್ಟೋದುವೋದೆಂದು । ಕೇಳಬೇಕೋದೆಂಬರೆಲ್ಲ ॥
ಭೂಲಲನೇಶನೋದೋದೆಂದು ಪೇಳೆ ಮ । ತ್ತಾ ಲಲಿತಾಂಗಿಯೋದಿದಳು ॥ ೧೦೨ ॥

ಶ್ರೀಸುಭದ್ರಾದೇವಿ ಮೊದಲಾದ ನೃಪರಾಣಿ । ವಾಸಕೆ ಮಣಿದಂತರಂಗಾ ॥
ಮಾಸದಿಚ್ಛಾದೇವಿ ಮೊದಲಾದ ಸತಿಯರು । ಲ್ಲಾಸದಿಂ ಪೇಳ್ವಾತ್ಮಕಾರ್ಯಾ ॥ ೧೦೩ ॥
ಮನೆವಾಳು ಸಾಕಾಯ್ತು ಮುನಿವಾಳು ಬೇಕಾಯ್ತು । ನನೆವಿಲ್ಲ ನಡೆದತ್ತ ನಾವು ॥
ಅನುಕೂಲವಡೆದೆಯ್ದುತಿಪ್ಪೆವು ನೀವಾರು । ಮನಃಕ್ಷತಗೊಳಲಾಗದಿದಕೆ ॥ ೧೦೪ ॥
ಭಾವಾಜಿಯಿಂದ ವಿರಸವಾಯಿತಿಲ್ಲೆಮ್ಮ । ದೇವಗಿಂತಿದ್ದುದು ಪ್ರಾಪ್ತಿ ॥
ನಾವಿನ್ನು ಬ್ರಾಹ್ಮಿಸೌಂದರಿಯರ ಸಾರಿ ತ । ಪೋವನಕ್ರೀಡೆಯಾಡುವೆವು ॥ ೧೦೫ ॥
ನಮ್ಮಂತೆ ನೀವರೆಭೋಗಿಗಳಾಗದೆ । ನಿಮ್ಮೊಪನೊಳು ಚಿರಬಾಳ್ದು ॥
ನೆಮ್ಮಿ ಮುಪ್ಪಿನೊಳಾತ್ಮಸಿದ್ಧಿಯ ಮಾಳ್ಪುದಿ । ದೆಮ್ಮ ಪರಕೆ ನಿಮಗಕ್ಕಾ ॥ ೧೦೬ ॥
ಧರೆ ಸುಖಬಾಳಲಿ ಭೋಗರಾಜ್ಯವೆ ನಿಮ । ಗಿರಲಿ ತಪೋರಾಜ್ಯ ನಮಗೆ ॥
ದೊರೆಕೊಂಡಿತದರನುಭವವ ನೋಡುವೆವಾಗಿ । ಪರಮೇಶ ತೇ ನಮಃ ಸ್ವಾಹಾ ॥ ೧೦೭ ॥

ಎಂದೋಧ್ಥಿ ಮುಗಿದೆಲ್ಲ ಮೊರೆಯಿಡುತಿರ್ದರ । ಲ್ಲಿಂದೆಯ್ದಿ ನಡುವಣೋಲಗದ ॥
ಮಂದಿರದೊಳು ರಾಯ ಮರುಗುತ ಕುಳಿತ ಮ । ತ್ತೊಂದು ನೋವಾದುದೇನೆಂಬೆ ॥ ೧೦೮ ॥
ತೊಂಭತ್ತಮೂವರು ದೀಕ್ಷೆಗೆಯ್ದಿದ ವಾರ್ತೆ । ಸಂಭವಿಸಿತು ಚಕ್ರಿಯಿಂದ ॥
ಸಂಭವವಾಯ್ತಾಗ ಜನನಿಗೆ ಶೋಕಾಗ್ನಿ । ಜೃಂಭಿಸಿತೊರಲಿದರೆಲ್ಲ ॥ ೧೦೯ ॥

ಪುರವ ಹೊಕ್ಕಾಗಲ್ಲದವನ್ನಾಗೀ ವಾರ್ತೆಯು । ಹರಹಬೇಡೆಂದ ಚಕ್ರೇಶಾ ॥
ನಿರವಿಸೆ ತಡೆದಿರ್ದು ತನ್ನ ತಾನದು ಪೊಣ್ಕೆ । ತರವುನೆಯೊಳು ಶೋಕ ವುಸಗೆ ॥ ೧೧೦ ॥
ಶೋಕನಾದವ ಕೇಳಿ ಭರತೇಶ ಮನದಲ್ಲಿ । ವ್ಯಾಕುಲಬಟ್ಟು ಕೂಡೆನಗೆ ॥
ಏಕೆ ಬಂದಿತು ಚಕ್ರವೀ ರಾಜ್ಯಪದವಿ ಮ । ಹಾಕಷ್ಟ ಹಾ ಹಾ ಸುಡೆಂದಾ ॥ ೧೧೧ ॥
ಫಲವಾವುದೈಸಿರಿ ಬಂದರೆ ತನ್ನಾಳ್ಳ । ಬಳಗೆ ಸಂತಸವಮಾಡಬೇಡಾ ॥
ಕುಲವ ಗೋಳಿಡಿಸುವ ಸಿರಿಯು ಸುಡೆಂದು ಭೂ । ತಳಪತಿ ನೊಂಬ ತನ್ನೊಳಗೆ ॥ ೧೧೨ ॥
ಪಲರ ನೋಯಿಪ ದೊರೆತನದಿಂದ ಪಸರದ । ಪಲರ ಬಾಳುವೆ ಲೇಸು ಮತ್ತೆ ॥
ಕಲಕದ ಚಿತ್ತದಿಂದಾತ್ಮನ ನೋಡುತ । ಮಲೆಯೊಳಿಹುದೆ ಸುಖವೆಂದಾ ॥ ೧೧೩ ॥
ಅರ್ಕಕೀರ್ತಿಗೆ ರಾಜ್ಯವಿರಲೆಂದು ಮಂತ್ರಿಗೆ । ತೋರ್ಕೆಗೊಟ್ಟೈಯ್ದಲೊ ತಪಕೆ ॥
ಮರ್ಕಟವೈರಾಗ್ಯವೆಂಬುದು ಜಗವೆಂದು । ಬೇರ್ಕೆಗೈದೊಳಗೆ ಚಿಂತಿಸುವಾ ॥ ೧೧೪ ॥
ಸುತ್ತಣ ನಾಡ ಸಾಧಿಸಿ ತಂದು ನಿಜಪುರ । ದೊತ್ತಿನೊಳ್ಬಿಸುಟು ಪೋಪಾಗ ॥
ಪಿತ್ತವೆದ್ದಿತೊ ರಾಯುಗೆಂಬುದು ಜಗವೆಂದು । ಚಿತ್ತದೊಳೆಣಿಸಿ ಸ್ಥೈರಿಪನು ॥ ೧೧೫ ॥
ಸೋದರರೆಲ್ಲರು ನನ್ನಿಂದ ತಪಸಿಗೆ । ಹೋದರೆ ನಾನೀಗ ತಪಕೆ ॥
ಹೋದಪನೆನೆ ಮಕ್ಕಳಾಟಕೆಯೆಂದು ನಿ । ವೇದಿಸುವನು ತನ್ನ ತಾನೆ ॥ ೧೧೬ ॥
ಸಿರಿಯೆಷ್ಟು ಹೆಚ್ಚಿ ತಷ್ಟಳಬಹುದೆಂಬುದು । ದೊರೆಕೊಂಡುದತಿಚಿಂತೆಯಾಯ್ತು ॥
ಉರಿಯೇಳುತಿದೆಯೆದೆಯಿದಕಿನ್ನು ಶಾಂತಿಮಾ । ಳ್ಪರೆ ತಂತ್ರವೇನೆಂದು ನೆನೆದಾ ॥ ೧೧೭ ॥
ಆವಾವ ದುಃಖ ಬಂದರು ಹಂಸನಾಥನ । ಭಾವನೆ ಬರಿಗೈವುದೆಂದು ॥
ನೋವನೊತ್ತರಿಸಿ ಕಣ್ಮುಚ್ಚಿ ತನ್ನಾತ್ಮನ । ಭೂವರನೀಕ್ಷಿಸುತಿರ್ದಾ ॥ ೧೧೮ ॥
ಮಣ್ಣಲ್ಲಿ ಪೂಳ್ದ ಛಾಯಾಪ್ರತಿಮೆಯುವೊಲು । ಕಣ್ಣಿಗಾಗಾತ್ಮ ತೋರುವನು ॥
ತಣ್ಣಗಹುದು ತನಗೊಡನೆಂಟುಕರ್ಮದ । ಮಣ್ಣುದಿರ್ವುದು ಗಲಗಲನೆ ॥ ೧೧೯ ॥
ಪ್ರಭೆ ತಳತಳಿಸುತಲಿರೆ ಸುಖವಹುದಾಗ । ಪ್ರಭವಿಸುತಿಹುದು ಸುಜ್ಞಾನಾ ॥
ಅಭಿಘಾತಜ್ವರದಂತೆ ದುಷ್ಕರ್ಮ ಕುಣಿದಾಡಿ । ಕ್ಷುಭಿಸಿ ಬೀಳ್ವುದು ಕಂಡ ಕಡೆಗೆ ॥ ೧೨೦ ॥
ಗುರುಹಂಸನಾಥನೆ ಬಲ್ಲನಾ ನೃಪನ ಚಿ । ತ್ಪರಿಣತಿಯನು ಮುನ್ನ ಕವಿದ ॥
ಉರುಚಿಂತೆಯೆತ್ತ ಹೋದುದೊ ಹತ್ತುಸಾವಿರ । ವರುಷದ ಯೋಗಿಯಂತಿರ್ದಾ ॥ ೧೨೧ ॥
ಅಣುಗರ ಜನನಿಯ ಪೆಂಡಿರ ಪಡೆಯ ಧಾ । ರಿಣಿಯು ತನ್ನೊಡಲನು ಮರೆದಾ ॥
ಅಣುಮಾತ್ರವಾದರು ಪರಚಿಂತೆಯಿಲ್ಲದಾ । ಗುಣರತ್ನನಿದ್ದನಾತ್ಮನೊಳು ॥ ೧೨೨ ॥
ಏನ ಸಾಧಿಸಿದನೊ ನೆನೆದಾಗ ಪರಮಾತ್ಮ । ಧ್ಯಾನ ಪ್ರತ್ಯಕ್ಷವಾಗುತಿದೆ ॥
ಆ ನೃಪ ಮನೆಯೊಳಿದ್ದರು ಕಾಲಕರ್ಮಸಂ । ತಾನದ ಮಿಂಡನೇನಲ್ತೆ ॥ ೧೨೩ ॥

ಅಳುತ ಕರೆವುತ ತನ್ನರಮನೆಯುವರೆಲ್ಲ । ಮುಳುಗಿದ್ದರಧಿಕಶೋಕದೊಳು ॥
ಒಲೆಯುದಲ್ಲಾಡದೆ ಪರಮಾತ್ಮಸುಖದಲ್ಲಿ । ಮುಳುಗಿರ್ದನಾ ರಾಜಯೋಗಿ ॥ ೧೨೪ ॥
ತೋರುವುದಡಿಗಡಿಗೊಪ್ಪಚ್ಚಿ ವ್ಯಾಕುಲ । ಜಾರಿಹೋಹುದು ಧ್ಯಾನದಿಂದ ॥
ಏರುವ ಶೋಕಕಳುಕಿಯೋಳದಿದ್ದನು । ಮೂರುದಿವಸ ಧ್ಯಾನದಲ್ಲಿ ॥ ೧೨೫ ॥
ಬಂದೆಲ್ಲರೀಗಾ ಕಣ್ದೆರೆದೊಲೆದೇಳ್ವ । ನೆಂದು ನೋಳ್ಪರು ಮನೆಯುವರು ॥
ಮಂದಿ ಹೊರಗೆ ಕೇಳಿ ಹೋಗುತಿರ್ದುದು ರಾಯ । ಮಂದರಶೈಲದಂತಿರ್ದಾ ॥ ೧೨೬ ॥
ಕೆಲರುಪವಾಸವ ಕೆಲರೇಕಭುಕ್ತವ । ಕೆಲರು ಫಲಾಹಾರವಿಡಿದು ॥
ಒಳಗೆ ಹೆಂಗಳು ಹೊರಗಖಿಲವಾಹಿನಿಯಿರೆ । ಕಳೆದುದಿಂತುಟು ಮೂರುದಿವಸಾ ॥ ೧೨೭ ॥
ಸ್ವದಳವೆರಸಿ ಚಕ್ರಿ ತಪವಿದ್ದ ಸಾಮರ್ಥ್ಯ । ತ್ರಿದಶಲೋಕವ ನಡುಗಿಸಿತು ॥
ಅದ ಕೇಳಿ ಮರುಗಿ ಮಗನ ಕಾಣ್ಬೆನೆಂದು ಬೇ । ಗದೊಳೆದ್ದಳಾ ಚಿಕ್ಕತಾಯಿ ॥ ೧೨೮ ॥
ತಾನು ಪುರದೊಳು ಮೂರುಪವಾಸವಿರ್ದು ವಿ । ಮಾನವನೇರಿಯೆಯ್ತಂದು ॥
ಸೇನೆಯು ಹೊಕ್ಕರಮನೆಗೆಯ್ದಿ ನಡುವಣಾ । ಸ್ಥಾನದಿ ಕಂಡಳಾ ಮಗನಾ ॥ ೧೨೯ ॥
ಕಿರಿಯಮ್ಮನೆಯ್ತಂದಳೆನೆ ಹಂಸನಾಥಗ । ಕ್ಕರು ವಿಂಗೆ ನಮಿಸಿ ಕಣ್ದೆರೆದು ॥
ಒರೆವ ಕಂಬನಿಗೂಡಿ ದಿಗಿಲನೆದ್ದಡಿಗಳಿ । ಗೆರಗಿದನಾ ಸಾರ್ವಭೌಮಾ ॥ ೧೩೦ ॥
ದೋಃಷಿಯೊತ್ತಿಗೆ ದೇವರೆಯ್ಪಲೇಕೆಂದಂಫ್ರಿ । ವೇಷವ ಪಿಡಿದತ್ತೊಡೆತ್ತಿ ॥
ಭಾಷೆದೋರದಿರಂತುಟೆಂದಪ್ಪಿದಳು ತನ್ನ । ಭೀಷಣಾಶ್ರುಗಳು ಸೂಸುತಿರೆ ॥ ೧೩೧ ॥
ನಿನಗುಂಟೆ ದೋಷ ನೀನೇನ ಮಾಡಿದೆ ನಿನ । ಗಿನಿತುಬ್ಬೆಗೆಯ್ದಾತ ಪೋದಾ ॥
ಘನಮೂರ್ಖರಿಗೆ ದೋಷವೆಂದಾಕೆ ಮಗನ ಕಂ । ಬನಿಯನೊತ್ತಿದಳು ಕೈಮುಟ್ಟಿ ॥ ೧೩೨ ॥
ಜನನಿಯರಿಗೆ ಬೇಗೆದೋರಿದೆ ನನ್ನ ನಾ । ದುನಿಯರು ತಪಸಿಗೆಯ್ದುವುದಾ ॥
ಕನಸಲ್ಲ ಕಣ್ಣಾರೆ ಕಂಡೆನು ದೋಷಿಯು । ಶ್ಲಿನಲೇತಕಮ್ಮಾಜಿಯೆಂದಾ ॥ ೧೩೩ ॥
ಅವರ ಪೂರ್ವಪ್ರಾಪ್ತಿಯವರ ಕೊಂಡೊಯ್ದುದು । ನವಗಿಷ್ಟು ನೋವಾಯ್ತು ಮೊದಲು ॥
ದಿವಸಮೂರರ ಮೇಲೆ ತಂಪಾಯ್ತು ಮಗನೆ ಶೋ । ಕವ ಮರೆಯೆಂದಳಾ ಜನನಿ ॥ ೧೩೪ ॥
ಹೇಳಿದೆನಂಕ ಬೇಡೆಂದಿಲ್ಲವೆಂದೆನ್ನ । ಚಾಳಿಸಿ ಬಂದನಾ ಮದನಾ ॥
ಕೇಳಿದೆ ನೀನೊಪ್ಪುಗೈದುದನೆಲ್ಲವ । ಕೇಳದೆಯ್ದಿದನ್ನೈಸೆ ಕ್ಷಮಿಸು ॥ ೧೩೫ ॥
ಹಾದಿಯು ಮಾರಿ ಬಂದವರು ತಾವೆ ನಾಣ್ಚಿ । ಹೋದರು ನಿನಗೇನು ಕೊರತೆ ॥
ಈ ದೇಹದಂಡಣೆ ಮಾಳ್ಪರೆಯೆಂದು ಸಂ । ಪಾದಿಸಿದಳು ತಾಯಿ ಮಗನಾ ॥ ೧೩೬ ॥
ಚಿಂತೆಯು ಮುಪ್ಪು ಸಂತೋಷ ಜವ್ವನವೆಂಬ । ಸಂತಾನವಾಕ್ಯವುಂಟಣ್ಣಾ ॥
ಚಿಂತಿಸಬೇಡ ನನ್ನಾಣೆಯೆಂದಣುಗನ । ಸಂತಾಪವಾರೆ ನುಡಿದಳು ॥ ೧೩೭ ॥

ಎಲ್ಲರೆಯ್ದಿದರೇನು ನೀನೊಬ್ಬನುಳ್ಳರೆ । ಮ್ಮೆಲ್ಲರಿಗಾನಂದವಹುದು ॥
ಬಲ್ಲೆ ನೀನದರಿಂದ ಕ್ಷಮಿಸೆಂದು ಗಲ್ಲವ । ನಲ್ಲಾಡಿ ತಲೆದಡವಿದಳು ॥ ೧೩೮ ॥

ಹಸನಾಯ್ತು ಭೂವರನೆದೆಯೊಗ ಕುವರರ । ವಿಸರವೆರಗಿದುದಂಬಿಕೆಗೆ ॥
ಸೊಸೆಯುರಳುತ ಬಂದು ನಮಿಸಲಾ ಸೊಸೆಯುರ । *ಹಸನಾಗಿ ಹರಸಿದಳಾಗ ॥ ೧೩೯ ॥

ಚಿಕ್ಕಮ್ಮಗಾ ರಾಯ ಕೈಲಾಗುಗೊಟ್ಟೊಳ । ಹೊಕ್ಕು ದೊಡ್ಡಮ್ಮನ ಕಂಡಾ ॥
ಅಕ್ಕತಂಗಿಯುರಿಷ್ಟು ನೊಂದು ಮತ್ತಾ ನೋವ । ನಿಕ್ಕಿ ಸೈರಣೆವೆತ್ತರೊಡನೆ ॥ ೧೪೦ ॥

ಜಳಕದೇವಾರ್ಚನೆಗೈದು ಮತ್ತೆಲ್ಲರು । ಜ್ವಲದಿ ಪಾರಣೆಯ ಮಾಡಿದರು ॥
ಬಲವೆಲ್ಲ ಪಾರಣೆಮಾಡಿತು ಸರ್ವರು । ಮ್ಮಳ ಹೋಯ್ತು ಕೂಡೆ ತಂಪಾಯ್ತು ॥ ೧೪೧ ॥

ಇತ್ತಲೀಕಟಕ ಶಾಂತಿಯೊಳಿದ್ದುದಾ ಪೆಂಗ । ಳತ್ತಲಾದೀಶನ ಕಂಡು ॥
ಉತ್ತಮದೀಕ್ಷೆಯು ತಾಳ್ದರೆಂಬಲ್ಲಿಗೆ । **ಚಿತ್ತಜನಿರ್ವೇಗಸಂಧಿ** ॥ ೧೪೨ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೪೩ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೪೪ ॥

ಮೇರುವನೇರಿ ಮೇದಿನಿಯ ನೋಳ್ಪಂತೆ ಧ್ಯಾ । ನಾರೂಢನಾಗಿ ಲೋಕವನು ॥
ಆರಯ್ವುತೆನ್ನಂತರಂಗದೊಳಿರು †ಸುಖ । ಧೀರಾ ಚಿದಂಬರಪುರುಷಾ ॥ ೧೪೫ ॥

---

*ಕುಶಲೆ ಹರಸಿದಳೋಜೆಯೊಳು (ಸೊಸೆಯುರು ಬಂದರೆಗಿದರು.)

† ಸುಖಪೂರ

ಚಿತ್ತಜನಿರ್ವೇಗಸಂಧಿ ಸಂಪೂರ್ಣಂ

# ನಗರೀಪ್ರವೇಶಸಂಧಿ.

ವಿಖ್ಯಾತಮಹಿಮ ವಿಶ್ವಾರಾಧ್ಯ ವಿಮಲಪು । ಣ್ಯಾಖ್ಯಾನ ಬೋಧನಿಧಾನಾ ॥
ಸೌಖ್ಯಾಂಗಾ ಮತಿದೋರು ಸದ್ಗುಣ ಶಿವಗಣ । ಮುಖ್ಯಾ ನಿರಂಜನಸಿದ್ಧಾ ॥ ೧ ॥

ಕಿರಿಯುಮ್ಮ ದೀಕ್ಷೆಗೆಯ್ವುವೆನೆನೆ ಭರತೇಶ । ನರುಗೋಲನಾತ್ಮಜರಿನ್ನು ॥
ನೆರೆವನ್ನ ದೀಕ್ಷೆಗೆಳಸಲಾಗದೆಂದು ಕಾ । ಲ್ಗೆರಗಿ ನಿಲ್ಲಿಸಿದನಾ ಚಕ್ರಿ ॥ ೨ ॥

ಕಾವನೆ ಮಗ ನಾನು ಮಗನಲ್ತೆ ನಾನಿಷ್ಟು । ಸೇವೆಯ ಮಾಳ್ಪೆನಂತದನು ॥
ದೇವರು ಕೈಕೊಂಡು ಮತ್ತೆ ಚಿತ್ತೈಪುದೆಂ । ದಾ ವಿಭು ತಡೆದನಂಬಿಕೆಯಾ ॥ ೩ ॥

ಒಲಿದು ನೋಡಿದನು ಪೆಂಡಿರನವರದನರಿ । ದಲಸದತ್ತ್ಯವ್ಮಾಜಿ ತಪಕೆ ॥
ತಳರಲಾಗದು ತಳ್ವುದೆಂದು ಸಾಷ್ಟಾಂಗಸ । ಲ್ಲಲಿತದೊಳೆರಗಿದರೊಡನೆ ॥ ೪ ॥

ನಿನ್ನ ನುಡಿಯ ಮೀರುವೆನೆ ನಿನ್ನ ಸತಿಯರ । ಸನ್ನೆಯೊಳೆರಗಿಸಲೇಕೆ ॥
ಭಿನ್ನೋಪಚಾರ ಬೇಡಿಹೆನೇಳಿರೇಳಿರೌ । ಚೆನ್ನೆಯರೆನಲೆದ್ದರವರು ॥ ೫ ॥

ಅಕ್ಕತಂಗಿಯರು ನೀವೊಡನಿರ್ಪುದದರಿಂದ । ಲಕ್ಕಪೆಂಗಳು ನಾನು ನಿಮಗೆ ॥
ತಕ್ಕ ಸೇವೆಯ ಮಾಡಲವಧರಿಸುವುದೆಂದ । ನಕ್ಕರಿನ್ನೆಂತೊ ತಾಯ್ಗಳೊಳು ॥ ೬ ॥

ಸ್ಮರನ ಸಂಪದ ಸ್ಮರನಣುಗರಿಗಿರಲಲ್ಲಿ । ಗಿರಿಸುವ ತಕ್ಕ ಮಾನಿಸರಾ ॥
ತರಳರುವೆರಸಿ ಸಾಕೇತಪುರಕೆ ನಾವು । ತೆರಳುವವೆಂದನು ನೃಪತಿ ॥ ೭ ॥

ಒಡಬಟ್ಟೆಳಂಬಿಕೆ ನೃಪ ಕೂಡೆ ಕಡೆಯ ಚಾ । ವಡಿಗೆಯ್ದಿ ಪ್ರಣಯಚಂದ್ರಮನಾ ॥
ತಡೆಯದೆ ಗುಣವಸಂತಕನ ಕರೆಸಿಕೊಂಡು । ನುಡಿದನಾ ಸ್ಥಿತಿಯನೆಲ್ಲವನು ॥ ೮ ॥

ಅವರದಕಾನಂದಬಟ್ಟರಾವಿನ್ನು ಪೋ । ಪೆವು ದೀಕ್ಷೆಗೆಂದರಂತದಕೆ ॥
ಕುವರರು ನೆರೆವನ್ನ ಸೈರಿಸಬೇಕೆಂದು । ಸುವಿನಯದಿಂದ ತಡೆದನು ॥ ೯ ॥

ಮಿನಾಂಕಗಿಷ್ಟು ದಿವಸ ಸೇವೆಗೈದಿರಿ । ನಾನೇನು ಕಷ್ಟನೆ ನಿಮಗೆ ॥
ಈ ನೋವಿನೊಳು ಬೇಡ ನೀವು ನಾವೊಂದಾಗಿ । ಜೈನದೀಕ್ಷೆಯ ತಾಳ್ವೆವೆಂದಾ ॥ ೧೦ ॥

ಭುಜಬಲಿಯಿಂದ ಹೆಚ್ಚಾಗಿ ಮನ್ನಿಪೆನೆನ್ನ । ನಿಜವನಿಷ್ಟಾರಯ್ವುದೆಂದು ॥
ಭುಜದೊಳಿಬ್ಬರ ತಲೆಗಳನಪ್ಪಲಂಘ್ರಿವಾ । ರಿಜಕೆರಗಿದರವರೊಪ್ಪಿ ॥ ೧೧ ॥

ಪರಿವಾರ ಪ್ರಜೆಗಾಸೆಯಪ್ಪಂತೆ ಪೌದನ । ಪುರದಲ್ಲಿ ನೀವಿಹುದೆಂದು ॥
ಭರತೇಶ ಹೇಳಲಾ ದಳಪತಿಸಚಿವರು । ಬೆರಗರಿದಿಂತುಸುರಿದರು ॥ ೧೨ ॥

ದೊರೆಯಿಲ್ಲದಾವಿಪ್ಪುದೋಜೆಯೆ ಮದನನ । ಪಿರಿಯ ಪುತ್ರಗೆ ಪಟ್ಟಗಟ್ಟಿ ॥
ಸಿರಿಗೂಡಿ ಕಳುಹೆನೆ ಕೆಳೆಯರು ಬುದ್ಧಿಸಾ । ಗರನದು ಲೇಸೆಂದರೊಡನೆ ॥ ೧೩ ॥

ಕರೆದು ಮಹಾಬಲರಾಜಗೆ ಪೌದನ । ಪುರದ ಪಟ್ಟವ ಕಟ್ಟಿ ಕೊಡೆ ॥
ವರಮಂತ್ರಿ ದಳಪತಿ ಬಲಕುಡತೊಡಲಿತ್ತು । ದೊರೆ ಪೊಕ್ಕನೊಡನರಮನೆಯಾ ॥ ೧೪ ॥

ಚಿಕ್ಕಮ್ಮಗಾ ಕಾರ್ಯವನು ಪೇಳಲಾ ಸ್ಥಿತಿ । ಚೊಕ್ಕವೆಂದೊಪ್ಪಿದಳಾಕೆ ॥
ಮಕ್ಕಳು ಮೂವರಿಗುಡಲಿತ್ತು ತೊಡಲಿತ್ತು । ತಕ್ಕೈಸಿಕೊಂಡಿಂತು ನುಡಿದಾ ॥ ೧೫ ॥

ಅಮ್ಮಾಜಿಯಾರೈಕೆಗಿದ್ದಪಳಣ್ಣ ನಾ । ನೊಮ್ಮೊಮ್ಮೆ ಹಿತವರನಟ್ಟಿ ॥
ನಿಮ್ಮನಾರೈಕೆಮಾಡವೆನು ನಿಮ್ಮೂರಲ್ಲಿ । ಸುಮ್ಮಾನದೊಳಗಿಹುದೆಂದಾ ॥ ೧೬ ॥

ನಂಬುಗೆವಂತರ್ಗೆ ತಾಯ ಸೇವಕಿಯರಿ । ಗಿಂಬಿನೊಳುಡತೊಡಲಿತ್ತು ॥
ಅಂಬಿಕೆಗೆರಗಿ ಪಲ್ಲಕ್ಕಿಯೊಳ್ಬೀಳ್ಕೊಟ್ಟ । ನಂಬುಜಾಸ್ತ್ರನ ಸೇನೆವೆರಸಿ ॥ ೧೭ ॥

ತಡೆಯದಂಗಜಮಿತ್ರಸುತರಿಗುರ್ವಿಯ ಸ್ಥಿರ । ಪಡಿಸಿತ್ತು ಮನ್ನಣೆಯಿತ್ತು ॥
ಅಡಿಗಡಿಗಾರಯ್ವೆ ನಾನೆಂದು ಮಂಡೆಯ । ತಡವಿ ಬೀಳ್ಕೊಟ್ಟನಾ ಸುಮುಖಾ ॥ ೧೮ ॥

ಅಂಗಜಸುತರತ್ತಲೆಯ್ದಿದರಿತ್ತ ಷ । ಡಂಗಭೇರಿಗಳು ಸೂಳೈಸೆ ॥
ಸಂಗರಮಲ್ಲನೆದ್ದನು ತನ್ನ ಪುರಕೆ ಷ । ಡಂಗವಾಹಿನಿಯ ಲಗ್ಗೆಯೊಳು ॥ ೧೯ ॥

ಸಿಕ್ಕೆಲ್ಲ ತೀರ್ದುದಿನ್ನೆಮ್ಮ ಪಟ್ಟಣ ಸಮಾ । ಪಕ್ಕೆ ತೋರಿತು ಕಾಣ್ಬೆವೆಂದು ॥
ನಕ್ಕಾಡಿ ಕೈಹೊಯ್ದು ಸರಸವಾಡುತ ಕಾಲ । ನಿಕ್ಕುತಿದ್ದುದು ರಾಜಕಟಕಾ ॥ ೨೦ ॥

ಬರುತ ಹತ್ತೆಂಟುಗಾವುದವೆಯ್ದೆ ಜಿನಗೃಹ । ಕರುಮಾಡಗೋಪುರಾದಿಗಳು ॥
ಗಿರಿಯಂತೆ ಸಿಂಗರಿಸಿರೆ ಕೂಡೆ ಸಾಕೇತ । ಪುರ ಕಾಣಲಾಯ್ತು ಪಾಯ್ವಳಕೆ ॥ ೨೧ ॥

ಪಟ್ಟಣ ಮುಟ್ಟಲಾಯ್ತೆನೆ ಭರತೇಶನು । ಪಟ್ಟದಾನೆಯನಡರಿದನು ॥
ಪುಟ್ಟಪುಟ್ಟಾನೆಯನೇರಿ ಕುಮಾರರೊ । ಗ್ಗಟ್ಟಾಗಿ ಬಂದರರ್ತಿಯೊಳು ॥ ೨೨ ॥

ನೆಲ ಬಿರಿವಂತೆ ನಾನಾವಾದ್ಯ ವೊಳಗೆ ಮಾ । ರ್ಬಲ ಕಲಕಲಗುಟ್ಟಿ ನಡೆಯೆ ॥
ಬೆಳುಗೊಡೆ ಚಮರ ಟಕ್ಕೆಯುಗಳ ಚಿಹ್ನದಿ । ತಳರುತಿರ್ದನು ಸಾರ್ವಭೌಮಾ ॥ ೨೩ ॥

ಸಾಕೇತಪುರದ ಮಹಾಪ್ರಜೆಗೂಡಿ ಪ । ತಾಕೆ ಪಲ್ಲವ ಛತ್ರಗೂಡಿ ॥
ಮಾಕಾಳನಾಯಕನಿದಿರ್ವಂದು ಕಂಡಾಗ । ಭೂಕಾಂತನಿದಿರೊಳಿಂತೆಂದಾ ॥ ೨೪ ॥

ಪುರವ ಬಿಟ್ಟಿರುವತ್ತುಸಾವಿರವರುಷವು । ಪುರಜನಗಳು ನಾವು ನಿನ್ನಾ ॥
ಸ್ಮರಿಸಿದ ತಪಸಿಂದು ಸಿದ್ಧಿಯಾಯ್ತೆನೆ ರಾಯ । ಕರುಣದಿ ನೋಡಿಷ್ಟು ನಕ್ಕಾ ॥ ೨೫ ॥

ದೇವರೊತ್ತಿನೊಳಿರ್ದ ಸೇನೆಗೆ ದಂಡಾದ । ನೋವಿಲ್ಲ ದೇವರನಗಲಿ ॥
ನಾವು ಧಾವತಿಬಟ್ಟೆವೆಂದರು ಪ್ರಜೆಗಳು । ಭೂವರ ನಗುತ ನೋಡಿದನು ॥ ೨೬ ॥

ಮಾಕಾಳಗಾ ಪ್ರಜೆಗಳಿಗಿಂಪ ನುಡಿದು ಪ । ತಾಕಿನಿವೆರಸಿ ಚಕ್ರೇಶಾ ॥
ಶ್ರೀಕಾಂತೆ ನೆಲಸಿಪ್ಪ ಪೊತ್ತಿನೊಳ್ಪುರದ ಮ । ಹಾಕೋಟೆಯೊಳವೊಕ್ಕನೊಸೆದು ॥ ೨೭ ॥
ಅಂತಃಪುರವರಮನೆಗಾಗಿ ಸಾಗಿತು । ಸಂತಾನಗೂಡಿ ರಾಜೇಂದ್ರಾ ॥
ಕಂತುಹರನ ವಾಸಕೆಯ್ತುರುತಿರ್ದನ । ನಂತವಿಲಾಸದೇಳ್ಗೆಯೊಳು ॥ ೨೮ ॥
ಕೇರಿಕೇರಿಯೊಳು ಕಿಷ್ಕಿಂದವಾಗಿರೆ ಮಂದಿ । ತೇರಾನೆ ತೇಜಿಯಿಟ್ಟಣಿಸಿ ॥
ತಾರಗೆವಟ್ಟೆಯೊಳ್ಖಚರವ್ಯಂತರರೆಯ್ದೆ । ಭೂರಾಮನೆಯ್ತುರುತಿರ್ದಾ ॥ ೨೯ ॥

ಅಲ್ಲಲ್ಲಿ ಪುರಜನಪುರಸತಿಯರು ರಾಜ । ಮಲ್ಲ ಬೀದಿಯೊಳೆಯ್ದುವಾಗ ॥
ಇಲ್ಲದ ಬಡವಗೆ ಬಲುರಾಜ್ಯ ಬಂದಂತೆ । ಸಲ್ಲೀಲೆವೆತ್ತು ನೋಡಿದರು ॥ ೩೦ ॥
ಒಡೆಯ ದಂಡೆಯ್ದಿದಂದಿಂದ ದೊಡ್ಡೊಡವೆಯ । ಕೆಡಿಸಿದಂತಿದ್ದೆವಿಂದೆಮಗೆ ॥
ಸಿಡಿದು ಹೋದೊಡವೆ ಸಾರಿದವೊಲಾಯ್ತೆಂದರು । ನಡೆನೋಡಿ ಪುರಸುದತಿಯರು ॥ ೩೧ ॥
ಕರೆದೊವ್ಮೆ ನುಡಿಯಿಸಬೇಡ ನಮ್ಮವರ್ಗಿನ್ನು । ಸಿರಿಗೊಡಬೇಡ ನಮ್ಮರಸು ॥
ಪುರದೊಳಿದ್ದರೆ ಸಾಕು ಸಕಲಸಂಪದವೆಂದು । ಪುರಲಲನೆಯರಾಡುತಿಹರು ॥ ೩೨ ॥
ಕಂಡರೆ ಸಾಕೊಳ್ಪನುಟ್ಟಂತೆ ತೊಟ್ಟಂತೆ । ಉಂಡಂತೆ ಹರುಷದೋರುತಿದೆ ॥
ಖಂಡಿಸುತಿದೆ ಪಾಪವೆಂದು ಚಕ್ರೇಶನ । ಕೊಂಡಾಡುತಿರ್ದರರ್ತಿಯೊಳು ॥ ೩೩ ॥
ಪುರಜನವಿದ್ದು ಭೂವರನಿಲ್ಲದಂದು ಪಾ । ಳ್ಸುರಿವುತಿದ್ದುದು ನಮ್ಮ ನಗರಾ ॥
ಪರನಾರೀಸೋದರನೆಯ್ತರಲಿಂದು ಸಿಂ । ಗರವಾದುದೆಂದರಲ್ಲಲ್ಲಿ ॥ ೩೪ ॥
ಸಿರಿಯಿಲ್ಲದಂಬುಜ ಪುರುಷನಿಲ್ಲದ ನೀರೆ । ಗುರುವಿಲ್ಲದುತ್ತಮತೀರ್ಥಾ ॥
ದೊರೆ ಹೊರತಾದ ಪಟ್ಟಣ ಮೆರೆವುದೆಯೆಂದು । ಸ್ಮರಿಸುತಿರ್ದರು ತವತವಗೆ ॥ ೩೫ ॥
ಅಂದು ನಮ್ಮೊಡೆಯನೊಂದಾನೆಯೊಳ್ಪೋದ ನೋ । ಡಿಂದು ಕುಮಾರರಾನೆಗಳ ॥
ಸಂದಣಿಯೊಳು ಬಂದದೊಂದು ಭಾಗ್ಯವೆಯೆಂದು । ಮಂದಿ ನೋಡಿತು ನಲವೇರಿ ॥ ೩೬ ॥
ಬಂದನೊ ಧರೆಯೊಳುಳ್ಳಧಿಕವನಾಯ್ದಾಯ್ದು । ತಂದನೊ ರಾಯರ ದೇವಾ ॥
ಇಂದಯೋಧ್ಯಾಪುರದೈಸಿರಿ ದ್ವಿಗುಣವಾ । ಯ್ತೆಂದುಲಿದುದು ಜನಸ್ತೋಮಾ ॥ ೩೭ ॥

ಎಡಬಲದೊಳು ಮಾಡಮುದಿಲಲ್ಲಿ ಜಗಲಿಯೊ । ಳಿಡಿಕಿರಿದವರರ್ತಿವಟ್ಟು ॥
ತಡೆಯದೋಲಗವೆಂದು ಕೈಯೆತ್ತಿ ಮುಗಿಯೆ ಕ । ಣ್ಣಿಡುತೆಯ್ದುತಿರ್ದನೋಜೆಯೊಳು ॥ ೩೮ ॥
ಒಡೆಯನು ದಂಡೆಯ್ದಿದಂದಿಂದ ಕರಕರೆ । ಹಿಡಿದು ಮೈ ಬಡವಾಯ್ತು ಪ್ರಜೆಗೆ ॥
ಪೊಡವಿಯ ಸಲಹಿ ಪಟ್ಟಣವ ನೋಯಿಪುದಿದು । ನಡೆಯೆಯೆಂದರು ಕೆಲರಲ್ಲಿ ॥ ೩೯ ॥
ಸಿರಬಾಗಿದವರಿಗೆ ಸಿರಿಗೊಡಬಹುದು ಸಿಂ । ಗರದ ಮೋಡಿಯ ಸುಜಾಣ್ಮೆಯನು ॥
ಧರೆಗೆಲ್ಲ ವೆಚ್ಚವನಿಕ್ಕಿ ಬಹರೆ ಹುಚ್ಚು । ದೊರೆಯೆ ಹೋಗೆಂದಾ ಮತ್ತೊಬ್ಬಾ ॥ ೪೦ ॥

ಧರೆಯ ಸಾಧಿಸುವರೆ ನೀನೆಯ್ದಲೇಕೆ ಮ । ತ್ಪುರದಲ್ಲಿ ಸುಖವಿರ್ದು ನಿನ್ನ ॥
ಚರರನಟ್ಟಲು ಸಾಧ್ಯಮಾಡಿ ತರರೆ ನಾಡ । ತಿರುಗಲೇಕೆಂದ ಮತ್ತೊಬ್ಬ ॥ ೪೧ ॥

ಭರತೇಶನಾಣೆ ಬಾರೆಂದರೆ ಬಾರದ । ದೊರೆಯಾರು ನೀನೆಯ್ದಲೇಕೆ ॥
ಪರಿವಾರಬೇಕೆ ಒಬ್ಬೊಬ್ಬ ಬಂಟರೆ ಗೆಲ್ವು । ತರಲರಿಯರೆಯೆಂದನೊಬ್ಬ ॥ ೪೨ ॥

ಆಳು ಬೇಡಂಬು ಬೇಡೆನ್ನನಟ್ಟಿದರೆ ಭೂ । ಪಾಲಕರಿಗೆ ನಿನ್ನ ಹೆಸರಾ ॥
ಹೇಳಿಯೆಲ್ಲರ ಹಿಡಿತರುತಿರ್ದೆನೆಂದೊಬ್ಬ । ತೂಳವೆದ್ದಂತಾಡುತಿರ್ದಾ ॥ ೪೩ ॥

ಎಲ್ಲೆಲ್ಲಿ ತಿರುಗಿದೈ ಸ್ವಾಮಿ ನೀ ಸುಖದೊಳೂ । ರಲ್ಲಿದ್ದು ನನ್ನನಟ್ಟಿದರೆ ॥
ಎಲ್ಲರ ಹೊರೆಗಟ್ಟಿ ತರುತಿರ್ದೆನೆಂದೊಬ್ಬ । ಹುಲ್ಲ ಮಾರುವನುಬ್ಬಿ ನುಡಿದಾ ॥ ೪೪ ॥

ನೋಡೆನ್ನನಟ್ಟಿದರೆಲ್ಲರ ಸಡುಗುಡ । ನಾಡಿದಂತೊಯ್ತುತಹೆನೆನುತ ॥
ಓಡುಗಚ್ಚುತ್ತಿತ್ತ ಕೈಯೆತ್ತಿ ಹರಿದು ಮುಂ । ದೋಡಿದನೊಬ್ಬನುಬ್ಬೆಯೊಳು ॥ ೪೫ ॥

ನುಡಿವ ಪ್ರಜೆಯ ನುಡಿಗೇಳುತ ನೋಡುತ । ಸಡಗರಕೆದೆಯುಬ್ಬಿ ನಗುತ ॥
ಅಡಿಗಡಿಗವರಿಗಲ್ಲಲ್ಲಿ ಮನ್ನಣೆಗಳ । ಕೊಡಿಸುತೆಯ್ತಂದನಾ ಸುಮುಖಾ ॥ ೪೬ ॥

ತನತನಗುಬ್ಬಿ ಪೂವಿಡುವ ಕೈಮುಗಿವ ಕೀ । ರ್ತನೆಗೈವ ಜನವ ನಿಟ್ಟಿಸುತ ॥
ಕನಕತೋರಣ ರತ್ನತೋರಣಾವಳಿಯನಾ । ಮನುಜೇಶ ನೋಡುತೆಯ್ತಂದಾ ॥ ೪೭ ॥

ದೂರದೊಳಾನೆಯನಿಳಿದಾದಿಜಿನನ ಕು । ಮಾರರುವೆರಸೆಯ್ದಿ ಕಂಡಾ ।
ಸಾರವಸ್ತುವ ಕಾಣ್ಕೆಯಿಕ್ಕಿ ವಂದಿಸಿ ಕೂಡೆ । ಭೂರಿಯೋಗಿಗಳಿಗೆರಗಿದಾ ॥ ೪೮ ॥

ಪರಕೆಯ ಕೊಂಡು ಸೇಸೆಯನಾಂತು ದೇವಗೆ । ಕರಮುಗಿದಣುಗರುಗೂಡಿ ॥
ತಿರುಗಿ ಬಂದಾನೆಯನೇರಿ ಚಕ್ರೇಶ ತ । ನ್ನರಮನೆಗಾಗಿ ನಡೆದನು ॥ ೪೯ ॥

ಅಂಗಡಿಬೀದಿಯ ಶೋಭೆಯ ಕುರುಜುಮಾ । ಡಂಗಳ ಸಾಲುಗೋಪುರದ ॥
ಸಿಂಗರಗಳ ನೋಡುತೆಯ್ತಂದನೆಲ್ಲರ । ಕಂಗಳ ಮನವ ಮೋಹಿಸುತ ॥ ೫೦ ॥

ರಾಜಗೃಹದ ಮುಂದೆ ನಿಂದು ಸರ್ವರನು ವಿ । ಭ್ರಾಜಿತವಿನಯದಿ ಕಳುಹಿ ॥
ರಾಜಶಿರೋಮಣಿ ಜಯಜಯ ಚಾಂಗೆನ । ಲೋಜೆಯಿಂದಿಳಿದನಾನೆಯನು ॥ ೫೧ ॥

ತನುಜರುವೆರಸೊಳವೊಕ್ಕು ರಾಣಿಯರು ಚೆ । ಲ್ವಿನೊಳು ನೀರಾಜನವೆಸಗೆ ॥
ಜನಪ ನೋಡುತ ಹಂಸನಾಥನ ನೆನೆದರ । ಮನೆವೊಕ್ಕನಧಿಕಲೀಲೆಯೊಳು ॥ ೫೨ ॥

ತಾವರೆ ತುಂಬಿದ ಕೊಳಗಳಂತರಮನೆ । ಭಾವೆಯರಿಂದ ತುಂಬಿದುವು ॥
ದೇವ ನೆಲಸಿದ ದೇಗುಲದಂತೆ ಮೆರೆದುದು । ಭೂವರನರಮನೆಯಾಗಾ ॥ ೫೩ ॥

ಮದುವೆಯ ಮನೆಯಂತೆ ಪುರದಲ್ಲಿ ಸಂದಣಿ । ಕೆದರಿದುದೆಲ್ಲಿ ನೋಡಿದರು ॥
ಅದನೇನ ಪೇಳ್ವೆ ಷಟ್ಖಂಡದ ಸಿರಿಯೆಲ್ಲ । ಪುದುಗಿದ್ದುದೊಂದೆ ತಾಣದೊಳು ॥ ೫೪ ॥

ಹತ್ತೆಂಟುದಿವಸದ ಮೇಲೊಂದು ಪಗಲು ಸಂ । ಪತ್ತಿನೊಳೋಲಗವಾಗಿ ॥
ಚಿತ್ತದೊಳೊಂದನಾಲೋಚಿಸಿ ನುಡಿದನು । ದಾತ್ತರ ದೇವನೇನೆಂಬೆ ॥ ೫೫ ॥

ಮುನ್ನಿರ್ದ ಯುವರಾಜ ತಪಸಿಗೆ ಸಾಗಿದ । ನಿನ್ನಿಲ್ಲಿ ಯುವರಾಜಪದಕೆ ॥
ಸನ್ನುತನಾರೆಂದು ಸಭೆಯೊಳಿದ್ದವರ ಪ್ರ । ಸನ್ನವಾಕ್ಯದೊಳು ಕೇಳಿದನು ॥ ೫೬ ॥

ಅರಲಂಬನೆಯ್ದಿದರೇನರ್ಕಕೀರ್ತಿಭೂ । ವರನಿನ್ನು ಯುವರಾಜಪದವಾ ॥
ಧರಿಸತಕ್ಕವನೆಂದು ಬಿನ್ನವಿಸಿದರಾಗ । ದೊರೆಗಳೆಲ್ಲರು ಚಕ್ರಧರಗೆ ॥ ೫೭ ॥

ನೀತಿನಿಷ್ಠಾತ್ಮ ನಿನ್ನಂತೆ ವಿವೇಕಿ ಧ । ರಾತಳಾಲಂಕಾರನಲ್ತೆ ॥
ಈತನೆ ತಕ್ಕವನೆಂದು ಪ್ರಧಾನಸಂ । ಪ್ರೀತಿಸಹಾಯರಾಡಿದರು ॥ ೫೮ ॥

ತಾ ನೆನೆದುದ ತಾನೆ ಉಪಚಾರಕೆಲ್ಲರ । ಭೂನಾಥ ಕೇಳಿ ಮತ್ತದಕೆ ॥
ಆನಂದಬಟ್ಟು ಸುಲಗ್ನದೊಳದರ ವಿ । ಧಾನವೃತ್ತಿಯನೆಸಗಿದನು ॥ ೫೯ ॥

ನಗರಿ ಸಿಂಗರವಾಯ್ತು ಜಿನಪೂಜೆಯಾಯ್ತು ವಾ । ದ್ಯಗಳು ಘೂರ್ಣಿಸೆ ಚಕ್ರಿ ತನ್ನ ॥
ಮಗನಿಗೆ ಯುವರಾಜಪಟ್ಟಗಟ್ಟಿದನೊಲ್ದು । ಜಗವೆಲ್ಲ ಪುರೆಯಿಟ್ಟು ಪೊಗಳೆ ॥ ೬೦ ॥

ತನ್ನಿಂದ ಮುಂದೀತ ಧರೆಗರಸೆಂಬುದ । ಕನ್ನಡಿಪಂತೆ ಚಕ್ರೇಶಾ ॥
ತನ್ನ ಕೊರಳ ತೋರಹಾರವ ತೆಗೆದಿಕ್ಕಿ । ಮನ್ನಿಸಿದನು ನಿಜಸುತನಾ ॥ ೬೧ ॥

ಪರಸುವನಪ್ಪುವ ತೂಪಿರಿವನು ನಗು । ತರಸ ನೋಡುವನೊಲೆದೊಲೆದು ॥
ಶಿರದಡಹುವನು ತನ್ನಗ್ರಕುಮಾರನ । ಸಿರಿಗರ್ತಿವಡುವನಾ ತಂದೆ ॥ ೬೨ ॥

ಪುಟ್ಟಿಗದ್ದುಗೆಯಲ್ಲಿ ಮಗನ ಕುಳ್ಳಿರಿಸಿ ತಾ । ನಿಟ್ಟ ವೀರಾಕ್ಷತೆಗಳನು ॥
ಪಟ್ಟಸಿಂಹಾಸನದಲ್ಲಿ ಕುಳಿತನರ್ತಿ ವಟ್ಟೆಲ್ಲ ಜಯಜಯಯೆನಲು ॥ ೬೩ ॥

ಅಧಿರಾಜನಯ್ಯನು ಯುವರಾಜ ಮಗನದ । ರಧಿಕಸಂತೋಷವಿನ್ನೆಂತೊ ॥
ಸುಧೆಯುಂಡ ಸುರರಂತೆ ನಲಿದು ಸರ್ವರು ಗುಣಾಂ । ಬುಧಿಗೆ ಕಾಣಿಕೆಯನಿಕ್ಕಿದರು ॥ ೬೪ ॥

ಅಯ್ಯಗೆ ಕಾಣ್ಕೆಯಿಟ್ಟೆರಗಿದಂತಣ್ಣ ನಿ । ಗೊಯ್ಯನೆ ಕಾಣ್ಕೆಯನಿಕ್ಕಿ ॥
ಮೆಯ್ಯೆಲ್ಲ ಪುಳಕ ತುಂಬಿರೆ ಸುಕುಮಾರರು । ಮೆಯ್ಯಿಕ್ಕಿದರು ಭಕ್ತಿಯೆಂತೊ ॥ ೬೫ ॥

ಜನಕಗೆರಗಿದಂತೆ ಸಾಷ್ಟಾಂಗದೆರಕವೇ । ಕೆನಗೆಂದನಣ್ಣನಂತದಕೆ ॥
ತನುಜ ತಪ್ಪಿಲ್ಲೊಪ್ಪು ನನ್ನ ಸೋದರರ ವ । ರ್ತನೆ ಬೇಕೆ ನಿನಗೆಂದನಯ್ಯಾ ॥ ೬೬ ॥

ತ್ರೈಜಗನ್ನಿಧಿಹಿಮಗಿರಿ ಮುಟ್ಟಲಿಹ ಸರ್ವ । ರಾಜರು ಕಾಣ್ಕೆಯಿಟ್ಟೆರಗೆ ॥
ಪೂಜಿತವೆನಲರ್ಕಕೀರ್ತಿರಾಜನ ಯುವ । ರಾಜಪಟ್ಟೋತ್ಸವವಾಯ್ತು ॥ ೬೭ ॥

ಪಿತನ ಪಜ್ಜೆಗೆ ಮಂಡೆಯಿಟ್ಟು ಭೂಸುರರ ಭೂ। ಪತಿಗಳ ಸಖಮಂತ್ರಿಬುಧರಾ ॥
ಹಿತವರ ಮನ್ನಿಸಿ ನಿಜಗೃಹಕೆಯ್ದಿದ । ಜತನ ಜೀಯೆನೆ ಯುವರಾಜಾ ॥ ೬೮ ॥

ಕೂಡೆ ನಾಕೆಂಟುದಿವಸ ಪೋಗಲುರೆ ದಂಡು । ಮಾಡಿದ ನೃಪರ ತಂತವನ್ನು ॥
ನಾಡಿಗೆ ಕಳುಹಚಿತ್ತೈಸೆಂದು ಬಿನ್ನಹ । ಮಾಡಿದನಾ ಸಚಿವೇಂದ್ರಾ ॥ ೧೯ ॥

ಅಂತಹುದೆಂದು ಸಂತಸಬಟ್ಟು ಭೂಪಾಲ । ಸಂತತಿಗಾ ಚಕ್ರಧರನು ॥
ಮುಂತಿದ್ದ ಕಾಮವೃಷ್ಟಿಗೆ ಪೇಳ್ದು ಹರುಷವ । ಪ್ಪಂತು ಮಜ್ಜನವ ಮಾಡಿಸಿದಾ ॥ ೨೦ ॥

ಸುರರ ಸುಧಾನ್ನಕೆ ಸರಿಯೆನಿಸುವ ಪರಿ । ಪರಿಯ ದಿವ್ಯಾನ್ನಪಾನದೊಳು ॥
ಅರಮನೆಗೊಯ್ದುವುತಣವ ಮಾಡಿಸಿದನೆ । ಲ್ಲರಿಗೆ ಸಂಪ್ರೀತಿಮಾರ್ಗದೊಳು ॥ ೨೧ ॥

ಹೆಣ್ಣಕೊಟ್ಟವರನುದಿನದೊಳಗುಂಡುಟ್ಟು । ತಣ್ಣನಿಹರು ಮಿಕ್ಕಿನವರ್ಗೆ ॥
ಅಣ್ಣೆವಾಲೌತಣಮಾಡಿ ವ್ಯಂತರಿಗರ । ನುಣ್ಣದೂಟದಿ ತಣಿಪಿದನು ॥ ೨೨ ॥

ತೃಪ್ತಿವಡೆದ ಮೇಲೆ ಪರಿಮಳ ವಸ್ತ್ರವ । ದೀಪ್ತರತ್ನಾಭರಣಗಳಾ ॥
ಗುಪ್ತವಲ್ಲದೆ ಸಾಲುಹೊರೆಯಾಗಿ ಕೊಟ್ಟನು । ಪ್ರಾಪ್ತರೆಲ್ಲರು ತಣಿವಂತೆ ॥ ೨೩ ॥

ಆನೆಕುದುರೆಯ ಪಲ್ಲಕ್ಕಿಯ ರಥವ ವಿ । ಮಾನವ ಮರುತಮಾವುಗಳಾ ॥
ಧೇನುಗಳನು ಹಿಂಡುಹಿಂಡಾಗಿ ಕೊಟ್ಟು ಸ । ಮ್ಮಾನಿಸಿದನು ತರವರಿದು ॥ ೨೪ ॥

ವೀಳೆಯಗೊಟ್ಟು ಬಳಿಕ ಸರ್ವನೃಪರ ವಿ । ಶಾಲದೃಷ್ಟಿಗಳಿಂದ ನೋಡಿ ॥
ಲಾಲಿತವಿನಯವ ನುಡಿದನಾ ಚಕ್ರಿ ತ । ನ್ನಾಳುಗಳೆನ್ನದೇನೆಂಬೆ ॥ ೨೫ ॥

ಕೇಳಿರೈ ಹಿತರು ನೀವೆಲ್ಲರೆನ್ನೊಡನಿಷ್ಟು । ಕಾಲ ಪ್ರಯಾಸದಾಳಿದಿರಿ ॥
ಓಲೈಸಿಯೆನ್ನರ್ತಿಯೆಲ್ಲವ ಸಲಿಸಿ ನ । ನ್ನಾಲಯಮುಟ್ಟಲೆಯ್ದಿದಿರಿ ॥ ೨೬ ॥

ಎಲ್ಲರು ನೀವು ನಾಡರಸುಗಳಹುದು ನ । ನ್ನಲ್ಲಿಷ್ಟು ಮಮಕಾರ ನಿಮಗೆ ॥
ಅಲ್ಲದೊಡೇಕೆ ನನ್ನೊಡನೆ ಸುತ್ತುವಿರದ । ಬಲ್ಲೆನೈ ಕೇಳಿ ಮಿತ್ರರಿರಾ ॥ ೨೭ ॥

ಕೆಲರು ಪೆಣ್ಣಿತ್ತಿರಿ ಕೆಲರಾನೆ ಕುದುರೆ ಪೊಂ । ಗಳ ಝಲ್ಲಿ ವಸ್ತುವನಿತ್ತು ॥
ಒಲವುದೋರಿದಿರೇಕೆ ನಿಮ್ಮಯ ಕ್ಷತ್ರಿಯ । ಕುಲವೆಂಬ ಪಕ್ಷದೊಳಿಮಗೆ ॥ ೨೮ ॥

ಪುಣ್ಯವೊಂದಧಿಕವಲ್ಲದೆ ನಿಮಗೆಮಗೆ ವ । ರೇಣ್ಯಕ್ಷತ್ರಿಯವಂಶದಲ್ಲಿ ॥
ಗಣ್ಯನಿರ್ಗಣ್ಯವೆಂದುಂಟೆ ನೀವೆಲ್ಲಗ್ರ । ಗಣ್ಯಬಂಧುಗಳಲ್ತೆ ನನಗೆ ॥ ೨೯ ॥

ವ್ಯಂತರಿಗರು ನನ್ನ ಮೇಲಣ ಮಮತೆಯಿಂ । ದಂತಿಂತುಟೆನ್ನನೋಲೈಸಿ ॥
ಸಂತಸದೋರಿದರವರು ನನ್ನಯ ಬಂಧು । ಸಂತತಿಯಲ್ತೆ ಬೇರೇನು ॥ ೩೦ ॥

ಬಳಲಿದಿರಿನ್ನು ನಿಮ್ಮೂರ್ಗೆಯ್ದಿ ಸಂತಸ । ದೊಳಗಿರಿ ನಾನೊಮ್ಮೆ ನಿಮಗೆ ॥
ಬಳಿಯಟ್ಟಿದಾಗ ಬಪ್ಪುದು ನಿಮ್ಮ ಮನಸೊಮ್ಮೆ । ಯೆಳಸಿದಾಗೆಯ್ತಹುದೆಂದಾ ॥ ೩೧ ॥

ಬಂಧುತ್ವದೋರಿ ಚಕ್ರೇಶ ನುಡಿಯೆ ಮನ । ದಂಧಕಾರವ ನೂಂಕಿ ಸುಖದ ॥
ಸಿಂಧುವಿನೊಳು ನೃಪರೋಲಾಡಿ ಭಕ್ತಿಪ್ರ । ಬಂಧದೋರಿಂತು ನುಡಿದರು ॥ ೩೨ ॥

ದೇವ ನಿನ್ನೋಲಗವೆಂಬುದು ಪರಮಲೀ । ಲಾವಾಸವಾಗಿರ್ದುದೆಮಗೆ ॥
ಆವ ಪ್ರಯಾಸವಿಲ್ಲಿನ್ನೆರ್ಗೆ ಹೋದಾಗ । ನೋವಹುದೆಮಗೆ ಚಕ್ರೇಶಾ ॥ ೮೩ ॥
ನಾವೊಂದು ವಸ್ತುವ ನಿನಗೀವ ದಕ್ಷರೆ । ದೇವಡಿಗನು ದೇವಗೊಂದು ॥
ಪೂವನರ್ಪಿಸಲದು ದೇವಡಿಗನ ಹಂಗೊ । ದೇವನ ಮಹಿಮೆಯೊ ಸ್ವಾಮಿ ॥ ೮೪ ॥
ಭಂಡಾರಿ ನಿನಗೊಂದು ವಸ್ತುವ ಸಮಯುವ । ಕಂಡಿತ್ತು ಮೆಚ್ಚುಗೊಂಬಂತೆ ॥
ಮಂಡಲಾಗ್ರಣಿ ನಿನ್ನ ವಸ್ತುವ ನಿನಗಿತ್ತು । ಕೊಂಡೆವಿನ್ನಧಿಕಸಂಪದವಾ ॥ ೮೫ ॥
ಕರಡುಮುತ್ತೆಲ್ಲ ಕಟ್ಟಾಣಿಯು ಕುಲವೆ ದೇ । ವರಿಗಾವು ಕುಲದಲ್ಲಿ ಸರಿಯೆ ॥
ಕರುಣವೆಗ್ಗಳ ನಮ್ಮ ಮೇಲದರಿಂದಿಂತು । ನಿರವಿಸಿದ್ಯೆ ಸಾರ್ವಭೌಮಾ ॥ ೮೬ ॥
ಪರಮಾತ್ಮವೇದಿ ನಿನ್ನಯ ಪಾದಸೇವೆ ಧ । ನ್ಯರಿಗಲ್ಲದೆಲ್ಲರ್ಗೆ ಬಹುದೆ ॥
ನರಲೋಕದೊಳಗಿರ್ದು ಸುರಲೋಕದೊಳಗಿರ್ದ । ಪರಿಯಾಯ್ತು ನವಗಿಷ್ಟು ಕಾಲಾ ॥ ೮೭ ॥
ನಿಚ್ಚಮದುವೆ ನಿಚ್ಚಮನ್ನಣೆ ಸಮ್ಮಾನ । ನಿಚ್ಚ ಬಿನದವಾದುದ್ಯೆಸೆ ॥
ಎಚ್ಚರಿದೊಬ್ಬರ ಕೊಂದು ನೊಂದಾಡಿದ । ರಚ್ಚೆಯಾದುದೆ ನಿನ್ನ ಸೇವೆ ॥ ೮೮ ॥
ಪೋಪರೆ ಕಾಲೇಳದೆಮಗೆ ಹೋಗೆಂದ ನಿ । ರೂಪವ ಮಿರಿರಬಹುದೆ ॥
ಪೋಪೆವು ಕೂಡೆ ಬಂದಪೆವೆಂದು ಸಾಷ್ಟಾಂಗ । ರೂಪದಿ ಮಣಿದೆದ್ದರೆಲ್ಲ ॥ ೮೯ ॥

ಕರಗಳ ಮುಗಿದವರೇಳೆ ಸುಕಂಠನೆಂ । ಬುರುವಜ್ರಕಂಠನೆಂದೆಂಬ ॥
ಪಿರಿಯ ಕಟ್ಟಿಗೆಕಾರರಾಗ ಚಕ್ರಿಯ ಮುಂದೆ । ಸ್ವರದೋರುತಿರ್ದರೇನೆಂಬೆ ॥ ೯೦ ॥
ಮುಂದೆ ವೀರಾಗ್ರಣಿ ವ್ಯಂತರಾಗ್ರಣಿಗಳು । ನಿಂದರಿಬ್ಬರು ನಡುಸುತ್ತೆ ॥
ಅಂದವರನುಮತದಿಂದವರೆಯ್ದಲಿಂ । ತೆಂದರಿಬ್ಬರು ವೇತ್ರಧರರು ॥ ೯೧ ॥
ಇಕ್ಷುಚಾಪಾಗ್ರಜ ವಿಶ್ವಭೂರಮಣ ಬೋ । ಧೇಕ್ಷಣ ಚಿತ್ತಾವಧಾನ ॥
ದಕ್ಷಿಣಾಬ್ಧಿಯ ವರತನು ಸುರಕೀರ್ತಿಯ । ಸಾಕ್ಷಿಕನಾಗಿ ಚಿತ್ತೈಸು ॥ ೯೨ ॥
ಕಡಲ ನಗುವ ಕಡುಗಂಭೀರ ಎಸೆವ ನಾ । ಡೊಡೆಯರ ದೇವ ಪರಾಕು ॥
ಪಡುವಣಾಬ್ಧಿಯ ಪ್ರಭಾಸೇಂದ್ರನ ನೋಡು ಬೆಂ । ಗಡೆಯೊಳು ಪ್ರತಿಭಾಸವೆರಸಿ ॥ ೯೩ ॥
ವಿಜಯಲಕ್ಷ್ಮಿಯ ನಲ್ಲ ಬಲ್ಲಿದರೊಡೆಯ ಕೇ । ಳ್ವಿಜಯಾರ್ಧದಗ್ರದೊಳಿರ್ಪ ॥
ವಿಜಯಾರ್ಧದೇವನ ಚಿತ್ತೈಸು ಸ್ವಾಮಿ ಹೋ । ಸುಜನೇಂದು ಕಂಡನ್ನೆ ತೊಲಗು ॥ ೯೪ ॥
ಸಮವಸರಣನಾಥನಾತ್ಮಜ ಲಾಲಿಸು । ಹಿಮಗಿರಿಯಗ್ರದೊಳೆಸೆವ ॥
ಹಿಮವಂತದೇವನ ಚಿತ್ತೈಸು ಸ್ವಾಮಿ ಹೋ । ಸುಮನದಿಂ ಕಂಡನ್ನೆ ಸಾಗು ॥ ೯೫ ॥
ಕಾಲಕಮಾರ್ರಣ್ಯದಾವಾಗ್ನಿ ಹಂಸತ । ತ್ತ್ವಾವಲಂಬ ತ್ರಿಭುವನರತ್ನಾ ॥
ಆಲೋಕಿಸೊಲಿದು ತಮಿಸ್ರಗುಹೆಯ ಕೃತ । ಮಾಲಧರನ ಚಕ್ರನಾಥಾ ॥ ೯೬ ॥

ಖಂಡೆಯುದೊಂದು ಪ್ರತಾಪದಿಂದೊತ್ತಿ ಷ । ಟ್ಖಂಡವನಾಳ್ದ ವಿಕ್ರಾಂತಾ ॥
ಖಂಡಪ್ರಪಾತಗುಹೆಯ ನಾಟ್ಯಮಾಲನ । ಮಂಡೆಯೊಲೆದು ನೋಡು ನೃಪತಿ ॥ ೯೭ ॥

ಉತ್ತರಭಾಗೆಯ ಪಡುವಣ ಖಂಡದ । ಮೊತ್ತದ ನೃಪರೊಡಗೂಡಿ ॥
ಬಿತ್ತರದಿಂದೆಯ್ತುತಿಹ ಕಲಿರಾಜನ । ಚಿತ್ತಯಿಸೆಲೆ ಸಾರ್ವಭೌಮಾ ॥ ೯೮ ॥

ಅಲ್ಲಿಯ ಮೂಡಣ ಖಂಡದ ಭೂಭುಜ । ರೆಲ್ಲರುಗೂಡಿ ಗಾಡಿಯೊಳು ॥
ಮೆಲ್ಲನೆಯ್ತುವ ಕಾಮರಾಜನ ನೋಡೆಲೆ । ಗೆಲ್ಲಕಾರರ ಶಿರೋಮಣಿಯೆ ॥ ೯೯ ॥

ಆ ನಡುವಣ ಖಂಡದೊಳಗುಳ್ಳ ನೃಪರ್ವಿ । ತಾನವೆರಸಿ ಪೋಗುತಿರ್ಪ ॥
ಮಾನಿಚಿಲಾತರಾಜನ ಮಾಧವೇಂದ್ರನ । ಸಾನುರಾಗದಿ ನೋಡು ಚಕ್ರಿ ॥ ೧೦೦ ॥

ದಕ್ಷಿಣಭಾಗೆಯ ಪಶ್ಚಿಮಖಂಡದ । ದಕ್ಷಭೂಪರುಗೂಡಿ ಪೋಪ ॥
ಅಕ್ಷೀಣ್ಣಗುಣನನುದ್ದಂಡರಾಜನನೊಲಿ । ದೀಕ್ಷಿಸು ರಾಜಾಧಿರಾಜಾ ॥ ೧೦೧ ॥

ಆ ಪೂರ್ವಖಂಡದ ನೃಪರ ಸಂದಣಿಗೂಡಿ । ಪೋಪ ವೇತಂಡರಾಜನನು ॥
ಕೂಪತನದೊಳೊಲ್ದು ನೋಡೆಲೆ ಮನುಕುಲ । ದೀಪ ಮೋಹನಪುಷ್ಪಚಾಪಾ ॥ ೧೦೨ ॥

ಊಣೆಯುವೆಂಬುದೊಂದಣುಮಾತ್ರ ಹೊಗದೆ ಪ್ರ । ವೀಣರು ತಲೆದೂಗಲೆಸೆವ ॥
ಜಾಣರ ದೇವ ಚಿತ್ತೈಸೊಲಿದುತ್ತರ । ಶ್ರೇಣಿಯ ಖಚರನಾಯಕರಾ ॥ ೧೦೩ ॥

ಅಂಕಕೊಡ್ಡುವ ರಾಯದಲ್ಲಣ ವೈರಿಭ । ಯಂಕರ ರಿಪುರಾಯಮಥನಾ ॥
ತೆಂಕಣ ಶ್ರೇಣಿಯ ಖಚರವಲ್ಲಭರ ನಿ । ಶ್ಯಂಕರ ದೇವ ಚಿತ್ತೈಸು ॥ ೧೦೪ ॥

ಆಗಲದಾರ್ಯಾಖಂಡದೊಳಗುಳ್ಳ ನೃಪರೊಳು । ತಿಗುಳಾಣ್ಯದರಸನ ನೋಡು ॥
ಮಗಧರಾಜನ ನೋಡು ಮಾಳವೇಂದ್ರನ ನೋಡು । ಮೊಗನೋಡು ಕಾಶ್ಮೀರಪತಿಯಾ ॥ ೧೦೫ ॥

ಲಾಟಮಹಾಲಾಟನೃಪರನೀಕ್ಷಿಸು ಚಿತ್ರ । ಕೂಟದ ದೊರೆಯ ಚಿತ್ತೈಸು ॥
ಭೋಟಮಹಾಭೋಟಪತಿಗಳ ಕಳುಹು ಕ । ರ್ಣಾಟರಾಜನ ಪರಾಂಬರಿಸು ॥ ೧೦೬ ॥

ಚೀನಮಹಾಚೀನವಿಭುಗಳು ತೆರಳಿ ಕಾ । ಶೀನರಪತಿ ಮೆಲ್ಲನೆಯ್ದು ॥
ಪೀನಸಿಂಹಳಪತಿ ಸಾಗು ಬಂಗಾಳದ । ಭೂನಾಥ ನಿನ್ಮಾರ್ಗೆ ಹೋಗು ॥ ೧೦೭ ॥

ತುರುಕಾಣ್ಯದರಸ ಬಾ ತೆಲುಗಾಣ್ಯದಧಿಪ ಬಾ । ಕರಹಾಟರಾಜ ಬಾ ಬಾರೈ ॥
ಹುರುಮುಂಜಿಯೊಡೆಯ ಬಾವೊಡ್ಡಿಯ ರಾಜ ಬಾ । ಭರತೇಶ ಜಯಯೆಂದು ಸಾಗು ॥ ೧೦೮ ॥

ಅಂಗದೇಶಾಧೀಶ ಪಲ್ಲವರಾಜ ಕ । ಳಿಂಗೇಂದ್ರ ಕಾಂಭೋಜನೃಪತಿ ॥
ವಂಗಾಢ್ಯ ಹಮ್ಮಿರನೃಪ ಸಿಂಧುನೃಪತಿ ದೇ । ವಂಗೆ ಕೈಮುಗಿದೊಯ್ಯನೆಯ್ದಿ ॥ ೧೦೯ ॥

ಗೌಳದೇಶಾಢ್ಯ ಬಾ ಕೊಂಕಣ ಬಾ ಮಲೆ । ಯಾಳ ಬಾ ತುಳುವರರಸ ಬಾ ॥
ಚೋಳ ಬಾ ಮಲಹ ಬಾ ಹವ್ವ ಬಾ ಕುಂತಳ । ಪಾಲಕ ಬಾ ಕಳುಹಿಸಿಕೊ ॥ ೧೧೦ ॥

ಗುರ್ಜರಭೂಪ ನೇಪಾಳೇಂದ್ರ ಪಾಂಚಾಲ । ದೂರ್ಜಿತಸೌರಾಷ್ಟ್ರರಾಜಾ ॥
ನಿರ್ಜರಬರ್ಬರಪತಿ ನಡೆಯೆಂದು ವಿ । ಸರ್ಜಿಸಿದರು ಸರ್ವನೃಪರಾ ॥ ೧೧೧ ॥
ಅರಮನೆಯೌತಣದೊಳು ತಣಿದರು ಮತ್ತೆ । ಪಿರಿದುಮನ್ನಣೆಯಿತ್ತು ತಣಿಸಿ ॥
ಭರತೇಶ ನುಡಿದ ಸದ್ವಿನಯವ ಪೊಗಳುತ । ಪರಿದರೆಲ್ಲರು ಕಂಡ ಕಡೆಗೆ ॥ ೧೧೨ ॥
ದೂರದ ನೃಪರೆಯ್ದಲುರಸುಮಕ್ಕಳಿಗೆ ನಾ । ಡೂರಾನೆತೇಜಿಮುಂತಾದ ॥
ಭೂರಿಸಂಪದವಿತ್ತು ವಿನಯವ ನುಡಿದು ಮ । ತ್ತಾ ರಾಯ ಮನೆಗೆ ಬೀಳ್ಕೊಟ್ಟಾ ॥ ೧೧೩ ॥
ರಾವುತರಿಗೆ ರಥಿಕರಿಗೆ ಮಾವತರಿಗೆ । ಸೇವಕರಿಗೆ ಸಾಣಿಗಳಿಗೆ ॥
ಜೀವಿತಗಳ ಹೆಚ್ಚುಮಾಡಿ ಮನ್ನಣೆಯಿತ್ತ । ಧಾವತಿಬಟ್ಟರೆಂದರಿದು ॥ ೧೧೪ ॥
ಭರತಪಾಠಕರಿಗೆ ನಂಬುಗೆವಂತರ್ಗೆ । ಕರಣಿಕರಿಗೆ ಬೋವುಗಳಿಗೆ ॥
ಪೊರೆಯ ಸೇವಕವೇತ್ರಧರರಿಗೆ ಮಾಕಾಳ । ಗಿರದಿತ್ತನಧಿಕಸಂಪದವಾ ॥ ೧೧೫ ॥
ಗಣಬದ್ಧಗೃಹಪತಿವಿಶ್ವಕರ್ಮರ ಕವಿ । ಗಣಗಾನಭಟ್ಟವಾದಕರಾ ॥
ಗಣಿಕೆಯರ್ಮೊದಲಾದ ಸರ್ವರನುಚಿತದಿ । ತಣಿಸಿದನಾ ಮಹೋದಾರಾ ॥ ೧೧೬ ॥

ಗಲಭೆ ಹಿಂಗಿದ ಮೇಲೆ ಮಾಗಧಧ್ರುವಗತಿ । ಗಳಿಗಚ್ಚತೊಡವಿತ್ತು ಮತ್ತೆ ॥
ತಲೆಯ ತಕ್ಕೈಸಿ ಬೀಳ್ಕೊಡಲವರಂಘ್ರಿಗೆ । ತಲೆಯಿಟ್ಟು ಹೋದರರ್ತಿಯೊಳು ॥ ೧೧೭ ॥
ಕೂಡೆ ಮೇಘೇಶ್ವರವಿಜಯಜಯಂತರ್ಗೆ । ನಾಡೂರುಗಳ ಹೆಚ್ಚನಿತ್ತು ॥
ಪಾಡಿಂದ ತಲೆಯ ತಕ್ಕೈಸಲೆರಗಿ ನಲಿ । ದಾಡುತೆಯ್ದಿದರು ತಮ್ಮಾರ್ಗೆ ॥ ೧೧೮ ॥
ಕೆಳೆಯರ್ಗೆ ಬುದ್ಧಿಸಾಗರನರಿಕೆಯೊಳು ಭೂ । ತಳವ ಹೆಚ್ಚಿಸಿಕೊಟ್ಟು ಮತ್ತೆ ॥
ಒಲಿದುಡುಗೊರೆಯಿತ್ತು ಕಳುಹಲೆರಗಿ ತಮ್ಮ । ನಿಳಯಕೆಯ್ದಿದರವರೊಸೆದು ॥ ೧೧೯ ॥
ಆವುದು ನಿನಗಿಚ್ಛೆ ಮಂತ್ರಿಯೆಂದನು ನಿನ್ನ । ಸೇವೆಯೊಂದೆನಗಿಚ್ಛೆಯೆಂದಾ ॥
ಭೂವಳಯವನೊಪ್ಪಿಸಿದ್ದನವನಿಗಿನ್ನು । ಭಾವಿಸಿ ಬೇರೀವುದೇನು ॥ ೧೨೦ ॥
ಮಂಗಲಕುಡುಗೊರೆಯಿತ್ತು ಬೀಳ್ಕೊಡಲೊಡೆ । ಯಂಗವನೆರಗಿ ಸಾಗಿದನು ॥
ಶೃಂಗಾರಹಾರನೆದ್ದನು ನವರತ್ನತ । ರಂಗಸಿಂಹಾಸನದಿಂದ ॥ ೧೨೧ ॥

ಜನನಿಯ ಮನೆಗೆಯ್ದಿ ಕಾರ್ಯವೆಲ್ಲವನು ಸೂ । ಚನೆಗೈದು ನಮಿಸಿ ಬೀಳ್ಕೊಂಡು ॥
ನೆನೆವುತ ಹಂಸನಾಥನ ರಾಯ ತನ್ನರ । ಮನೆಯ ಹೊಕ್ಕನು ವಿಲಾಸದೊಳು ॥ ೧೨೨ ॥
ಅರಸಿಯರೆಲ್ಲರ ಬಳಸಿನೊಳಗೆ ಪಟ್ಟ । ದರಸಿ ಸೋಂಕಿರಲೊಲ್ದು ಕುಳಿತು ॥
ಧರಣಿಯ ಸಂತವಿಟ್ಟಂದವ ನುಡಿದು ಸಿಂ । ಗರದೊಳಿದ್ದನು ಭರತೇಶಾ ॥ ೧೨೩ ॥
ಹುಟ್ಟಿದುದಿಲ್ಲಿ ನೀನುರೆ ಬೆಳೆದುದು ಬೆಳ್ಳಿ । ವೆಟ್ಟದೊಳಬಲೆ ಮತ್ತೆಮ್ಮ ॥
ಪಟ್ಟಣದೊಳು ಪುಗಿಸಿತು ಪುಣ್ಯವೆಂದನು । ಪಟ್ಟದರಸಿಯೊಳಾ ನೃಪತಿ ॥ ೧೨೪ ॥

ಅಹುದಿಲ್ಲಿ ಜನಿಸಬೇಕೆನಗೆ ದೇವರ ಪಾಣಿ । ಗ್ರಹಣವುತ್ತರಖಂಡದಲ್ಲಿ ॥
ವಹಿಸಬೇಕೆಂದುದಾದೇಶವಂತದ ವಿಚಾರ । ಬಹುದೆಯೆಂದಳು ಪಟ್ಟದರಸಿ ॥ ೧೨೫ ॥

ನನ್ನ ಸೋದರಿಯರೆಲ್ಲರನೊಲ್ದು ದೇವರು । ಮುನ್ನ ಕೈವಿಡಿದು ಮತ್ತೆನ್ನಾ ॥
ಮನ್ನಿಪ ಪ್ರಾಪ್ತಿಯಿಂತೆಸಗಿತೆಂದೊರೆದಳಾ । ಚೆನ್ನೆ ರಾಯನಿಗೆಲೆಗೊಡುತ ॥ ೧೨೬ ॥

ಅಕ್ಕ ಕೇಳಂತಲ್ಲ ನೀ ಕೂರ್ತ ಸ್ವಾಮಿಯೆ । ಣ್ದೆಕ್ಕ ಸಾಧಿಸಲೆದ್ದು ನವಗೆ ॥
ಚೊಕ್ಕನಾನಂದದೋರುವುದಿದ್ದಿತೆಂದರು । ಠಕ್ಕಿಲ್ಲದೆಲ್ಲಾ ರಾಣಿಯರು ॥ ೧೨೭ ॥

ಸ್ವಾಮಿಯು ನೀನಿಲ್ಲಿ ಜನಿಸಿ ನಿಮ್ಮಯ ಜನ್ಮ । ಭೂಮಿಯ ಪುರಕೆ ಕೂಡೆವಮ್ಮಾ ॥
ಪ್ರೇಮದಿ ಕರೆಕೊಂಡಿರೆಂದು ರಾಣಿಯರೆಲ್ಲ । ರಾಮೋದವೆತ್ತು ನುಡಿದರು ॥ ೧೨೮ ॥

ಈ ಪುರವೇನು ನಿಮ್ಮಾ ಪುರವೇನು ಭೋ । ಗೋಪಭೋಗದೊಳೆರವಳಿದು ॥
ವ್ಯಾಪಿಸಬಲ್ಲವರ್ಗೆಲ್ಲಿಯು ಸಮವೆಂದು । ಭೂಪನಾಡಿದನು ಪೆಂಡಿರಿಗೆ ॥ ೧೨೯ ॥

ವರುಷದ ಮೇಲಯ್ಯನೊತ್ತಿಗೆಯ್ದುವನದು । ವರಯೋಗವಿಜಯದ ಮೊದಲು ॥
ತೆರಳದಂತರಮನೆಯಿಂದಾಗ ಸಾಕೇತ । ಪುರದೊಳಿರ್ದರು ಸುಖಾಂಗದೊಳು ॥ ೧೩೦ ॥

ದುಗುಡವಿಲ್ಲದೆ ದೀರ್ಘರಾಜ್ಯವ ಸಾಧಿಸಿ । ಮಗುಳ್ದಯೋಧ್ಯೆಯ ಹೊಕ್ಕ ನೃಪತಿ ॥
ಅಗಣಿತನೃಪರ ಕಳುಹಿ ಸುಖವಿರಲಿದು । **ನಗರೀಪ್ರವೇಶದ ಸಂಧಿ** ॥ ೧೩೧ ॥

ಹಿಮಶೈಲ ಕಡೆ ಮೂರುಸಾಗರ ಕಡೆಯೆನೆ । ನಿಮಿರ್ದ ನೆಲನ ಸಾಧ್ಯಮಾಡಿ ॥
ಪ್ರಮುದಿತಚಕ್ರಿಯಿದ್ದೆಡೆಗೆ **ದಿಗ್ವಿಜಯವೆಂ** । ಬಮಳ**ದ್ವಿತೀಯಕಲ್ಯಾಣಾ** ॥ ೧೩೨ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೩೩ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೩೪ ॥

ಧ್ಯಾನಚಕ್ರದಿ ಕರ್ಮಗಳನರೆಯಟ್ಟಿ ಸು । ಜ್ಞಾನಸಾಮ್ರಾಜ್ಯವನಾಳ್ವ ॥
ಶ್ರೀನಾಥ ನನ್ನಂತರಂಗದೊಳಿರು ಸುಖ । ಸ್ಥಾನಾ ಚಿದಂಬರಪುರುಷಾ ॥ ೧೩೫ ॥

ನಗರೀಪ್ರವೇಶಸಂಧಿ ಸಂಪೂರ್ಣಂ

## ॥ ದ್ವಿತೀಯಕಲ್ಯಾಣಂ ಸಮಾಪ್ತಂ ॥